# ಕೋಲಾರ ಜಿಲ್ಲೆಯ ಐತಿಹ್ಯಗಳು : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ. ಮಹಾಪ್ರಬಂಧ)


ಸಂಶೋಧಕರು

ಶ್ರೀಮತಿ ಲಕ್ಷ್ಮೀದೇವಿ.ಎಲ್





ಮಾರ್ಗದರ್ಶಕರು

ಡಾ. ಮಂಜುನಾಥ ಬೇವಿನಕಟ್ಟಿ

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ





ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

೨೦೦೬

# ಕೋಲಾರ ಜಿಲ್ಲೆಯ ಐತಿಹ್ಯಗಳು : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ. ಮಹಾಪ್ರಬಂಧ)

ಸಂಶೋಧಕರು

**ಶ್ರೀಮತಿ ಲಕ್ಷ್ಮೀದೇವಿ .ಎಲ್**



ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ



ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೬

# ಸಂಶೋಧಕರ ಪ್ರಮಾಣಪತ್ರ

"ಕೋಲಾರ ಜಿಲ್ಲೆಯ ಐತಿಹ್ಯಗಳು : ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಡಾ.ಮಂಜುನಾಥ ಬೇವಿನಕಟ್ಟಿಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನಾ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಯಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೨೯.೮.೨೦೦೬

ಲಕ್ಷ್ಮೀದೇವಿ .ಎಲ್
ಸಂಶೋಧನಾ ವಿದ್ಯಾರ್ಥಿನಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಮಾರ್ಗದರ್ಶಕರ ಪ್ರಮಾಣಪತ್ರ

ಶ್ರೀಮತಿ ಲಕ್ಷ್ಮೀದೇವಿ .ಎಲ್ ಇವರು "ಕೋಲಾರ ಜಿಲ್ಲೆಯ ಐತಿಹ್ಯಗಳು : ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಸಂಶೋಧನಾ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಇವರು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೨೮.೮.೨೦೦೬

ಡಾ. ಮಂಜುನಾಥ ಬೇವಿನಕಟ್ಟಿ
ಮಾರ್ಗದರ್ಶಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

## ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಂಸ್ಕೃತಿಯ ಶಿಸ್ತು-ಜ್ಞಾನಗಳು ಮೌಖಿಕ ಪರಂಪರೆಯಲ್ಲಿ ಬೆರೆತು ಬೆಳೆಯುವುದು ಎಲ್ಲ ಕಾಲಘಟ್ಟಗಳಲ್ಲಿ ಸತ್ಯ ಹಾಗೂ ಸತ್ವ. ಇಂದು ಮನುಷ್ಯನಿಗೆ ಶಿಕ್ಷಣ ಅಕ್ಷರಕಲಿಕೆ ವಿದ್ಯಾಭ್ಯಾಸ ಉದ್ಯೋಗವೆಂಬ ಲಿಖಿತ ಪರಂಪರೆಯ ವಿನ್ಯಾಸ ಒದಗಿದಾಗಲೂ ಎಲ್ಲಕ್ಕೂ ಲಿಖಿತವಾಗಿ ದಾಖಲಿಸುವುದು ಅಸಾಧ್ಯದ ಮಾತು. ಇಂದಿನ ಅಸ್ತಿತ್ವಕ್ಕೆ ಮುಂದಿನ ಭವಿಷ್ಯ ಎದುರಾಗಬಹುದು. ಆದರೆ ಹಿಂದಿನ 'ಭೂತ' ತಳಹದಿಯಾಗಿರುತ್ತದೆ. ಅಂದಂದಿನ ಅಸ್ಥಿತ್ವಕ್ಕೆ ಹಿಂದಣ ಪರಂಪರೆ ಭದ್ರಬುನಾದಿಯಾಗಿರುತ್ತದೆ. ಜೈವಿಕತೆಯೊಂದಿಗೆ ನಿರಂತರವಾದ ಅನುಭವಗಳು ನೆನಪುಗಳು ಪಾರಂಪರಿಕವಾಗಿ ಮುಂದುವರೆಯುತ್ತವೆ. ಜ್ಞಾನದ ಎಲ್ಲ ನೆಲೆಗಳನ್ನು ಬರಹದಲ್ಲಿ ದಾಖಲಿಸಲು ಆಗುವುದಿಲ್ಲ. ಪಾರಂಪರಿಕ ಸ್ಮರಣೆಯಿಂದ ಮನುಷ್ಯನ ಸಂಸ್ಕೃತಿ ಸಮಾಜ ಇತಿಹಾಸ ಸಾಹಿತ್ಯ ಕಲೆ ಇತ್ಯಾದಿಗಳನ್ನು ವೃದ್ಧಿಸಿಕೊಳ್ಳಬಹುದು.

ಜಗತ್ತಿನ ಜೀವಜಾಲದಲ್ಲಿ ಮನುಷ್ಯನಿಗೆ ಉನ್ನತ ಸ್ಥಾನವಿದೆ. ಮನುಷ್ಯ ಹುಟ್ಟಿನಿಂದ ಸಾವಿನವರೆಗೆ ನಿರ್ದಿಷ್ಟ ಸಮಾಜದಲ್ಲಿ ಬದುಕಬೇಕಾಗುತ್ತದೆ. ನನ್ನವರು - ತನ್ನವರು ಬೇರೆಯವರೆಂಬ ಸಮೂಹಗಳೊಂದಿಗೆ ಸಮನ್ವಯ ಸೆಣಸಾಟ ಹೋರಾಟಗಳನ್ನು ಮಾಡಬೇಕಾಗುತ್ತದೆ. ತನಗೆ ತನ್ನ ಸಮಾಜಕ್ಕೆ ಸಂಸ್ಕೃತಿ ಮತ್ತು ಇತಿಹಾಸಗಳಿರುತ್ತವೆ. ಇವುಗಳಿಗೊಂದು ಪರಂಪರೆ ಇರುತ್ತದೆ. ಪರಂಪರೆಯೆಂಬುದು ಆಯಾ ಪ್ರದೇಶದ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಇದು ಸಮಾಜ ಪ್ರದೇಶ ಸಂಸ್ಕೃತಿಗಳಿಗೆ ಅನುಗುಣವಾಗಿ ಭಿನ್ನವೂ ವಿಶಿಷ್ಟವೂ ಆಗಿರುತ್ತದೆ. ಯಾವುದೋ ಸಂಸ್ಕೃತಿಗೆ ಅಲ್ಲಲ್ಲಿನ ಭೌಗೋಳಿಕ ಅಂಶಗಳು ಬುನಾದಿಯಾಗಿರುತ್ತವೆ. ನದಿಕಣಿವೆಗಳ ಸಂಸ್ಕೃತಿಗೂ ಮರುಳುಗಾಡಿನ ಸಂಸ್ಕೃತಿಗೂ ವ್ಯತ್ಯಾಸಗಳಿರುತ್ತವೆ. ಹಾಗೆಯೇ ಬಯಲುಸೀಮೆ - ಮಲೆನಾಡು - ಕರಾವಳಿ ಪ್ರದೇಶಗಳಲ್ಲಿ ಭಿನ್ನ ನೆಲೆಗಳಿರುತ್ತವೆ. ಇಂಥದ್ದೊಂದು ಸಂಸ್ಕೃತಿಯ ವಿವಿಧ ನೆಲೆಗಳು ಹೇಗೆ ಒಂದು ಪ್ರಾಂತ್ಯಕ್ಕೆ ಬದ್ಧವಾಗುತ್ತವೆ, ವಿಶಿಷ್ಟವೆನಿಸುತ್ತವೆ, ಭಿನ್ನವಾಗುತ್ತವೆ ಎಂಬುದನ್ನು ಇಂಥ ಅಧ್ಯಯನದಿಂದ ಸಾಧಿಸಬಹುದು.

ವಾಸ್ತವವಾಗಿ ಕೋಲಾರ ಜಿಲ್ಲೆ ಬಹುಮುಖಿ ಸಂಸ್ಕೃತಿಗಳುಳ್ಳದ್ದು. ಕರ್ನಾಟಕ ಸಂಸ್ಕೃತಿಯ ಭಾಗವಾಗಿ ಬೆಳೆದು ಬರುತ್ತಿರುವ ಇಲ್ಲಿನ ಜನಪದ ತೆಲುಗು, ತಮಿಳು, ಉರ್ದು ಭಾಷೆಗಳ ಸತ್ವವನ್ನು ತನ್ನ ಭಾಗವಾಗಿಸಿಕೊಂಡಿದೆ. ಈ ಪ್ರದೇಶವನ್ನಾಳಿದ ರಾಜವಂಶಗಳು ಆಯಾ ಸಂಸ್ಕೃತಿಗಳ ಪ್ರತೀಕಗಳನ್ನು

ಇಲ್ಲಿ ನೆಲೆಯೂರಿಸಿದ್ದಾರೆ. ಜಿಲ್ಲೆಯ ಸಮುದಾಯಗಳು ಕಾಲಘಟ್ಟಗಳಿಗೆ ಅನುಗುಣವಾಗಿ ಎಂಥೆಂಥ ಬದುಕನ್ನು ಕಟ್ಟಿಕೊಂಡರು ಎಂಬುದನ್ನು ಜಿಲ್ಲೆಯ ಐತಿಹ್ಯಗಳಿಂದ ತಿಳಿಯುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

ಭಾಷಿಕ ವಲಯದಲ್ಲಿ ಕರ್ನಾಟಕದ ಭಾಗವಾಗಿರುವ ಕೋಲಾರ ಜಿಲ್ಲೆ ಕನ್ನಡ ಭಾಷೆಯನ್ನು ಆಡಳಿತ ಭಾಷೆಯಾಗಿ ಒಪ್ಪಿಕೊಂಡಿದ್ದರೂ ಆಂಧ್ರ-ಕರ್ನಾಟಕದ ಗಡಿಭಾಗವಾಗಿರುವುದರಿಂದ ಬಹುಪಾಲು ಜನರ ಮಾತೃಭಾಷೆ ಹಾಗೂ ಜೀವನ ವಿಧಾನ ತೆಲುಗುಮಯವಾಗಿದೆ. ಇಲ್ಲಿನ ಬುಡಕಟ್ಟುಗಳು, ಜನಸಮುದಾಯಗಳು ತಮ್ಮ ಮೂಲವನ್ನು ಆಂಧ್ರದ ಮೂಲವೆಂದು ಗುರುತಿಸಿಕೊಳ್ಳುತ್ತಾರೆ. ಬಟ್ಟು ಕರ್ನಾಟಕದ ಮತ್ಯಾವುದೋ ಭಾಗದಿಂದ ಇಲ್ಲಿಗೆ ಬಂದು ನೆಲೆಸಿರುವ ಸಾಧ್ಯತೆಗಳು ಬೆರಳೆಣಿಕೆಯಷ್ಟು ಮಾತ್ರ. ಉಳಿದಂತೆ ಕೆಲವು ಭಾಗಗಳಲ್ಲಿ ತಮಿಳು ಪ್ರಭಾವ ದಟ್ಟವಾಗಿದೆ. ಈ ಹಿನ್ನೆಲೆಯಲ್ಲಿ ಇಲ್ಲಿನ ದ್ವಿಭಾಷಿಕ ಅಥವಾ ತ್ರಿಭಾಷಿಕ ಸತ್ವವುಳ್ಳ ಐತಿಹ್ಯಗಳು ಕೊಡುವ ಆಯಾಮಗಳನ್ನು ಪತ್ತೆ ಹಚ್ಚುವ ಉದ್ದೇಶವೂ ಇದೆ. "ಸಂಶೋಧನೆಯ ಉದ್ದೇಶವೆಂದರೆ, ಮರೆತು ಹೋದದ್ದನ್ನು ನೆನಪಿಗೆ ತಂದುಕೊಡುವುದು. ಅಡಗಿದ್ದನ್ನು ಬಯಲಿಗೆ ತರುವುದು. ನಮ್ಮ ಇತಿಹಾಸದಲ್ಲಿ ನಡೆದು ಹೋದ ಸಂಗತಿಗಳೆಷ್ಟೋ ಇವೆ. ಯಾವುದೇ ಪ್ರಕ್ರಿಯೆಯ ಪರಿಣಾಮ ಏನಾಗುತ್ತದೋ ಗೊತ್ತಿಲ್ಲ. ಪರಿಣಾಮ ಗೊತ್ತಾದರೆ ಪ್ರಕ್ರಿಯೆ ಮರೆತುಹೋದ ಎಳೆಗಳನ್ನು ಜೋಡಿಸಬೇಕಾಗುತ್ತದೆ" ಎಂಬ ಮಾತಿನಂತೆ ಚರಿತ್ರೆ-ಸಂಸ್ಕೃತಿಗಳಲ್ಲಿ ಮರೆತು ಹೋಗುತ್ತಿರುವ ಜನಪದ ಅಂಶಗಳನ್ನು ಐತಿಹ್ಯಗಳೆಂಬ ಮೌಖಿಕ ಚರಿತ್ರೆಯ ಆಕರಗಳಿಂದ ಪುನಃ ಕಟ್ಟಿಕೊಡುವ ಉದ್ದೇಶ ಸಂಶೋಧನೆಯದ್ದಾಗಿರುತ್ತದೆ.

ಕರ್ನಾಟಕದ ಇಪ್ಪತ್ತೇಳು ಜಿಲ್ಲೆಗಳಲ್ಲಿ ಕೋಲಾರ ಜಿಲ್ಲೆಯ ಅಸ್ತಿತ್ವವು ವಿಶೇಷವಾದುದು. ಬಯಲುಸೀಮೆಯ ಪರಿಸರ, ಬೀಳುವ ಮಳೆ ಅತ್ಯಲ್ಪ ಹಾಗೂ ಅರೆಕಾಲಿಕ ಕಾಡು ಕಡಿಮೆ. ಕೆರೆಗಳು ಹೆಚ್ಚು ಹಳ್ಳ - ತೊರೆ - ನದಿಗಳು ಹೇರಳವಾಗಿದ್ದರೂ ಮಳೆಗಾಲದಲ್ಲಿ ಮಾತ್ರ ತುಂಬಿ ಹರಿದು ಬೇಸಿಗೆಗೆ ಬತ್ತಿ ಹೋಗುವ ಕಾಲವೊಂದಿತ್ತು. ಆದರೀಗ ನದಿಕಣಿವೆಗಳ ಮರುಳಿನ ಸಾಗಾಣಿಕೆಯಿಂದ ಹರಿವ ನೀರು ಆಳಕ್ಕಿಳಿಯದೆ ಬತ್ತಿ ಅಂತರ್‌ಜಲದ ಮಟ್ಟ ಕುಸಿಯತೊಡಗಿದೆ. ಕಾಡಿನ ನಾಶವೂ ನಾಡಿಗೆ ಶಾಪವಾಗಿದೆ. ಇಂಥ ಭೌಗೋಳಿಕ ಪರಿಸರದ ಜನಜೀವನ ವೃತ್ತಿ ಕಸುಬುಗಳನ್ನೊಳಗೊಂಡ ಸಮುದಾಯಗಳ ಸಂಸ್ಕೃತಿಯನ್ನು ಐತಿಹ್ಯಗಳ ಮೂಲಕ ಸಂಶೋಧಿಸಬೇಕಾಗಿದೆ. ಹನ್ನೊಂದು ತಾಲ್ಲೂಕುಗಳನ್ನೊಳಗೊಂಡ ಈ ಜಿಲ್ಲೆಯ ಉತ್ತರಕ್ಕೆ ಆಂಧ್ರದ ಅನಂತಪುರ ಜಿಲ್ಲೆ, ದಕ್ಷಿಣಕ್ಕೆ (ಮದ್ರಾಸ್) ಚೆನ್ನೈ, ಉತ್ತರ ಅರ್ಕಾಟ್ ಹಾಗೂ ಸೇಲಂ ಜಿಲ್ಲೆಗಳು ಪೂರ್ವಕ್ಕೆ ಚಿತ್ತೂರು (ಆಂಧ್ರ) ಜಿಲ್ಲೆ; ಪಶ್ಚಿಮಕ್ಕೆ ಬೆಂಗಳೂರು ಮತ್ತು ತುಮಕೂರು ಜಿಲ್ಲೆಗಳು ಆವರಿಸಿವೆ. ಈ ಹಿನ್ನೆಲೆಯಲ್ಲಿ ಆಂಧ್ರ ಮತ್ತು ತಮಿಳುನಾಡುಗಳ ಸಾಂಸ್ಕೃತಿಕ

ಭಾಷಿಕ ಪ್ರಭಾವದೊಂದಿಗೆ ಕನ್ನಡದ ದಟ್ಟವಾದ ವ್ಯಾಪಕತೆ ಒಟ್ಟಾರೆ ಜಿಲ್ಲೆಯ ಸಂಸ್ಕೃತಿಯನ್ನು ಹೇಗೆ ರೂಪಿಸಿದೆಯೆಂಬುದನ್ನು ಹುಡುಕುವ ಪ್ರಯತ್ನ ಇದಾಗಿದೆ.

ಜಿಲ್ಲೆಯಲ್ಲಿ ಅಕ್ಷರಸ್ಥರು-ಅನಕ್ಷರಸ್ಥರು ಎಂಬ ಎರಡು ವರ್ಗಗಳಿದ್ದರೂ ಒಟ್ಟಾರೆ ಪರಂಪರೆಯು ಮೌಖಿಕ ಜ್ಞಾನದ ಸತ್ವದಿಂದ ಕೂಡಿದೆ. ಈ ಪ್ರದೇಶದ ಚರಿತ್ರೆಯಾಗಲಿ ಸಂಸ್ಕೃತಿಯಾಗಲಿ ಲಿಖಿತ ರೂಪದಲ್ಲಿ ಹೊರಬಂದಿರುವುದು ಅತಿ ಕಡಿಮೆ. ಅಲ್ಲದೆ, ಕೋಲಾರ ಜಿಲ್ಲೆಯ ಮೌಖಿಕ ಪರಂಪರೆಯ ಮಜಲುಗಳನ್ನು ಪರಿಚಯಿಸಿಕೊಳ್ಳಲು ಹೊರಟರೆ, ಇಲ್ಲಿ ಯಾವುದು ಶಿಷ್ಟ, ಯಾವುದು ಜನಪದವೆಂದು ಗೆರೆಯೆಳೆಯುವುದು ಕಷ್ಟವಾಗುತ್ತದೆ. ಇಂಥ ಸೂಕ್ಷ್ಮತೆಗಳನ್ನು ಐತಿಹ್ಯಗಳ ಅಧ್ಯಯನದ ಮೂಲಕ ಬೆಳಕಿಗೆ ತರುವ ಗುರಿ ಈ ಪ್ರಬಂಧದ್ದು. ಕಂಠಸ್ಥಪರಂಪರೆಯ ಜೀವನಾಡಿಯಾಗಿರುವ ಜಾನಪದದ ಶಿಸ್ತುಗಳಲ್ಲಿ ಜನಪದ ಸಾಹಿತ್ಯದ ಪ್ರಕಾರವಾಗಿರುವ ಇಲ್ಲಿನ ಐತಿಹ್ಯಗಳ ಅಧ್ಯಯನದ ಮೂಲಕ ಜಿಲ್ಲೆಯ ಹಲವು ಜನಪದಗಳ ಒಟ್ಟಾರೆ ಸಾಂಸ್ಕೃತಿಕ ಸ್ವರೂಪ ಹಾಗೂ ಇಂಥ ಸಂಸ್ಕೃತಿಯಲ್ಲಿರುವ ವಿಭಿನ್ನತೆಗಳು ಹಾಗೂ ವಿಶಿಷ್ಟತೆಗಳನ್ನು ಈ ಪ್ರಬಂಧದಲ್ಲಿ ಗುರುತಿಸುವ ಯತ್ನವಿದೆ. ಜಿಲ್ಲೆಯ ಐತಿಹ್ಯಗಳನ್ನು ಸಂಗ್ರಹಿಸಿ ಅಧ್ಯಯನ ಮಾಡುವುದರಿಂದ ಜನಜೀವನದಲ್ಲಿ ಅಡಗಿರುವ ಮೌಖಿಕ ಇತಿಹಾಸದ ಸ್ವರೂಪ, ಸಾಂಸ್ಕೃತಿಕ ಪರಂಪರೆಗಳ ಮೌಲ್ಯ, ಧಾರ್ಮಿಕ ಆಚರಣೆಗಳ ಮಹತ್ವ ಹಾಗೂ ಸಾಮಾಜಿಕ ಸ್ಥಿತಿಗತಿಗಳು ಮತ್ತು ನಂಬಿಕೆಗಳ ಹಿನ್ನೆಲೆಗಳನ್ನು ಹುಡುಕುವ ಉದ್ದೇಶವಿದೆ. ಇವೆಲ್ಲವುಗಳ ಹಿನ್ನೆಲೆಯಲ್ಲಿ ಜಿಲ್ಲೆಯ ಜಾನಪದ ಸ್ವರೂಪವನ್ನು ಕಟ್ಟಿಕೊಡುವ ಪ್ರಯತ್ನವಿದೆ. ಜಿಲ್ಲೆಯ ಐತಿಹ್ಯಗಳ ಸ್ವರೂಪ: ಸತ್ವ: ನಿರ್ಮಾಣ ಹಾಗೂ ಅದರ ಹಿಂದೆ ಅಡಗಿರುವ ಮನೋಧರ್ಮಗಳು ಹೀಗೆ ಜಿಲ್ಲೆಯ ಜನಪದವನ್ನು ಕಟ್ಟಿಕೊಡುವ ವೈಖರಿಯನ್ನು ತಿಳಿಸಲಾಗುತ್ತದೆ. ಐತಿಹ್ಯಗಳು ಕಟ್ಟಿಕೊಡುವ ಮೌಖಿಕಚರಿತ್ರೆ ಲಿಖಿತಚರಿತ್ರೆಯನ್ನು ತೌಲನಿಕವಾಗಿ ನೋಡಲಾಗಿದೆ. ಸಮಕಾಲೀನ ಸಂದರ್ಭ ಹಾಗೂ ಐತಿಹ್ಯಗಳ ಮಹತ್ವ ಮತ್ತು ಹೊಸ ಐತಿಹ್ಯಗಳ ವಿಶೇಷತೆಗಳ ಹುಡುಕಾಟವಿದೆ.

ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ ಅಧ್ಯಯನಗಳು ನಡೆದಿರುವುದು ಕೆಲಮಟ್ಟಿಗೆ ಕಡಿಮೆ ಎಂದೇ ಹೇಳಬೇಕು. ಕಾರಣ ಜಿಲ್ಲೆಯ ಪರಿಸರದಲ್ಲಿ ಪರಿಪರಿಯ ವೈವಿಧ್ಯತೆಗಳು ಸಂಶೋಧಕರ ಅಧ್ಯಯನದ ವ್ಯಾಪ್ತಿಗೆ ಎಟುಕದಷ್ಟು ವಿಸ್ತಾರವಾಗಿರುತ್ತವೆ. ಜಿಲ್ಲೆಯ ಯಾವುದೇ ತಾಲ್ಲೂಕನ್ನು ಗಮನಿಸಿದರೂ ಅರ್ಧ ಭಾಗ ಕರ್ನಾಟಕದ ಜಿಲ್ಲೆಯೊಂದರ ಪ್ರಭಾವಕ್ಕೆ ಒಳಪಟ್ಟಿರುತ್ತದೆ. ಉಳಿದ ಅರ್ಧ ಆಂಧ್ರಪ್ರದೇಶದ ಇಲ್ಲವೇ ತಮಿಳುನಾಡಿನ ಜಿಲ್ಲೆಗಳಿಗೆ ಸ್ಪಂದಿಸುತ್ತಿರುತ್ತದೆ. ಆದ್ದರಿಂದ ಜಿಲ್ಲೆಯಲ್ಲಿ ಕನ್ನಡ-ತೆಲುಗು-ತಮಿಳಿನ ಭಾಷಿಕ ಮತ್ತು ಸಾಂಸ್ಕೃತಿಕ ಆಯಾಮಗಳು ಮೇಲ್ಮೆಯನ್ನು ಸಾಧಿಸಿವೆ. ಪ್ರಸ್ತುತ ಜಿಲ್ಲೆಯನ್ನು ಕುರಿತಂತೆ ಕೆಲವು ಅಧ್ಯಯನಗಳು ನಡೆದಿವೆ. ವಿ. ಗೋಪಾಲಕೃಷ್ಣ ಅವರು ೧೯೭೮ ರಲ್ಲಿ 'ಸ್ಥಳನಾಮಗಳ ಅಧ್ಯಯನ' ಎಂಬ ಕೃತಿಯಲ್ಲಿ ಜಿಲ್ಲೆಯ ಸ್ಥಳನಾಮಗಳ ಕುರಿತು ಭಾಷಿಕ ನೆಲೆಯಲ್ಲಿ ಸಂಶೋಧನೆಯನ್ನು

ನಡೆಸಿದ್ದಾರೆ. ಕೈವಾರದ ತಾತಯ್ಯನವರ ಕೃತಿಗಳ ಬಗ್ಗೆ ಪಿಎಚ್.ಡಿ ಅಧ್ಯಯನ ನಡೆಸಿದ್ದಾರೆ. ದ್ವಾರಕಾನಾಥ್ ಕನ್ನಡ ವಿಶ್ವವಿದ್ಯಾಲಯದಲ್ಲಿ ಡಿ.ಲಿಟ್ ಅಧ್ಯಯನ ನಡೆಸಿದ್ದರೆ ಕೈವಾರ ತಾತಯ್ಯನವರ ಸಾಹಿತ್ಯವನ್ನು ಕುರಿತು ಸಂಶೋಧನೆ ಇದಾಗಿದೆ. ಅಲ್ಲದೆ ಜಿ.ಎಂ. ವೆಂಕಟೇಶ್‌ರವರು ಕೋಲಾರ ಜಿಲ್ಲೆಯ ಲೇಖನಶಾಸ್ತ್ರಕ್ಕೆ ಸಂಬಂಧಿಸಿದಂತೆ ಎಂ.ಫಿಲ್. ಪ್ರಬಂಧವನ್ನು ಸಲ್ಲಿಸಿದ್ದಾರೆ. ವಿ.ಗೋಪಾಲಕೃಷ್ಣ ಅವರು ಕೋಲಾರ ಜಿಲ್ಲೆಯ ಸ್ಥಳನಾಮಗಳ ಭಾಷಿಕ ಸಾಮಾಜಿಕ ಅಧ್ಯಯನವೆಂಬ ಪಿಎಚ್.ಡಿ ಸಂಶೋಧನೆಯನ್ನು (೧೯೮೭) ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದರಲ್ಲಿ ಸಾಮಾಜಿಕ ಅಂಶಗಳನ್ನು ಭಾಷಿಕ ಹಿನ್ನೆಲೆಯಿಂದ ಅಧ್ಯಯನ ಮಾಡಿದ್ದಾರೆ. ಸ್ಥಳನಾಮಗಳ ಮೂಲಕ ಪ್ರತಿಫಲಿಸುವ ಸಾಮಾಜಿಕ ಸಂರಚನೆಯನ್ನು, ಭಾಷಿಕ ಪರಿಸರದಲ್ಲಿ ಸ್ಥಳನಾಮಗಳು ಬೀರುವ ಪ್ರಭಾವವು ಸಂಸ್ಕೃತಿಯ ಆಯಾಮಗಳನ್ನು ಹೇಗೆ ರೂಪಿಸುತ್ತದೆಯೆಂಬುದನ್ನು ವಿಶ್ಲೇಷಿಸಿದ್ದಾರೆ. ಇದೇ ವಿಶ್ವವಿದ್ಯಾಲಯದ ತೆಲುಗು ವಿಭಾಗದಲ್ಲಿ ಮೋಹನ್ ಅವರು ಕೋಲಾರ ಜಿಲ್ಲೆಯ ಗಾದೆಗಳ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಕುವೆಂಪು ವಿ.ವಿ.ದಲ್ಲಿ ರಂಗಾರೆಡ್ಡಿ ಕೋಡಿರಾಂಪುರ ಅವರು ಕೋಲಾರ ಜಿಲ್ಲೆಯ ಜನಪದ ಕಲೆಗಳ ಕುರಿತು ಪಿಎಚ್.ಡಿ ಸಂಶೋಧನೆಯನ್ನು ಮಾಡಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಉಪಸಂಸ್ಕೃತಿ ಮಾಲೆಯಲ್ಲಿ ನಡೆದ ಅಧ್ಯಯನಗಳಲ್ಲಿ ಸಿಂದ್ ಮಾದಿಗರ ಸಂಸ್ಕೃತಿ, ಮಾಸ್ಕಿಕರ ಸಂಸ್ಕೃತಿ ಮುಂತಾದ ಕೆಲವು ಅಧ್ಯಯನಗಳಿಗೆ ಕೋಲಾರ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯ ನಡೆದಿದೆ.

ಜಿಲ್ಲೆಯ ಶಾಸನಗಳನ್ನು ಕುರಿತಂತೆ ಡಾ.ಚಿದಾನಂದಮೂರ್ತಿ, ಡಾ.ಶೇಷಶಾಸ್ತ್ರಿಯವರು ಕರ್ನಾಟಕದ ಶಾಸನಗಳ ಸಮೀಕ್ಷೆಗೆ ಪೂರಕವಾಗಿ ವಿವರಗಳನ್ನು ನೀಡಿದ್ದಾರೆ. ಇವರಿಬ್ಬರೂ ರೈಸ್ ಸಂಪಾದಿಸಿರುವ 'ಎಫಿಗ್ರಾಫಿಕ ಕರ್ನಾಟಕ' ಸಂಪುಟ ೧೦ರ ಆಧಾರದ ಮೇಲೆ ಜಿಲ್ಲೆಯ ಶಾಸನಗಳನ್ನು ಸಮೀಕ್ಷಿಸಿದ್ದಾರೆ. ಆದರೆ, ಶೇಷಶಾಸ್ತ್ರಿಯವರು ಜಿಲ್ಲೆಯ ವೀರಗಲ್ಲುಗಳು ಹಾಗೂ ತೆಲುಗು ಶಾಸನಗಳ ಬಗ್ಗೆ ವಿಶೇಷವಾದ ವಿವೇಚನೆ ನಡೆಸಿದ್ದಾರೆ. ಜನಪದ ಕಥೆ, ಗೀತೆ, ಒಗಟು ಇತ್ಯಾದಿ ಸಾಹಿತ್ಯ ಪ್ರಕಾರಗಳಿಗೆ ಸಂಬಂಧಿಸಿದಂತೆ ಜಿಲ್ಲೆಯಲ್ಲಿ ಅಲ್ಲೊಂದು ಇಲ್ಲೊಂದು ಪೂರಕ ಸಂಗ್ರಹಗಳಾಗಿವೆ. ಮಾಸ್ತಿ, ಕ.ರಾ.ಕೃ.ರಂಥವರು ಕರ್ನಾಟಕದ ಜನಪದ ವೃತ್ತಿಗಾಯಕರು ಲಾವಣಿಕಾರರನ್ನು ಕುರಿತು ವಿವರಿಸುವಾಗ ಕೋಲಾರ ಜಿಲ್ಲೆಯಲ್ಲಿ ಸಂಗ್ರಹಿಸಿದ ಖಂಡಕಾವ್ಯ ಅಥವಾ ಲಾವಣಿಯನ್ನು ಪಾಠಾಂತರಗಳಿಗಾಗಿ ನೀಡಿದ್ದಾರೆ. ಉಳಿದಂತೆ ಗಂಭೀರ ಅಧ್ಯಯನ-ಸಂಶೋಧನೆಗಳು ನಡೆದಿರುವಂತೆ ಕಂಡುಬರುವುದಿಲ್ಲ. ಯಾವುದಾದರೂ ಸಾಹಿತ್ಯ ಸಮ್ಮೇಳನಗಳು ಜಿಲ್ಲೆಯಲ್ಲಿ ನಡೆದ ಸಂದರ್ಭಗಳಲ್ಲಿ ಇಲ್ಲಿನ ಸಂಸ್ಕೃತಿಗೆ ಸಂಬಂಧಿಸಿದಂತೆ ಲೇಖನಗಳು ಮೂಡಿಬಂದಿದ್ದು ಅವು ಸ್ಮರಣ ಸಂಚಿಕೆಗಳಲ್ಲಿ ಉಳಿದುಕೊಂಡಿವೆ. ಜಿಲ್ಲೆಯ ಶಾಸನಗಳು: ದೇವಾಲಯಗಳು, ರಾಜವಂಶಗಳು: ಪಾಳೆಯಗಾರರು ಇತ್ಯಾದಿಗಳ ಹಿನ್ನೆಲೆಯಲ್ಲಿ ಧರ್ಮ-ಸಂಸ್ಕೃತಿ-ಚರಿತ್ರೆಗಳ ಕುರಿತು ಬೆಳಕು ಚೆಲ್ಲುವ ಐತಿಹ್ಯಗಳು ಲೇಖನಗಳಲ್ಲಿ ಮೂಡಿವೆ.

ಜಿಲ್ಲೆಯ ಭೌಗೋಳಿಕತೆ ಹಾಗೂ ಪುರಾತತ್ವದ ಅಧ್ಯಯನಗಳು ಹೀಗಿವೆ : ೧೮೭೩ ರಲ್ಲಿ ಆರ್.ಎ. ಕೋಲ್ ಎಂಬ ಸಂಶೋಧಕನು ಶಿಲಾಯುಗಕ್ಕೆ ಸಂಬಂಧಿಸಿದ ಜಿಲ್ಲೆಯ ಭೂಪ್ರದೇಶದ ಅಧ್ಯಯನವನ್ನು ನಡೆಸಿದ್ದಾನೆ. ಇವನು ಕೋಲಾರ, ಶ್ರೀನಿವಾಸಪುರ, ಬಂಗಾರಪೇಟೆ, ಚಿಂತಾಮಣಿ, ಗುಡಿಬಂಡೆ ಮತ್ತಿತರ ತಾಲ್ಲೂಕಿನ ಪ್ರದೇಶಗಳಲ್ಲಿ ಸಂಶೋಧನೆಯನ್ನು ನಡೆಸಿ, 'ಇಂಡಿಯನ್ ಆಂಟಿಕ್ವೇರಿ' ಎಂಬ ನಿಯತಕಾಲಿಕೆಯಲ್ಲಿ ಪ್ರಕಟಿಸಿದ್ದಾನೆ.[೨] ೧೯೧೪ ರಲ್ಲಿ ಕೋಕ್ ಎಂಬ ಸಂಶೋಧಕನು ಗರುಡನಹಳ್ಳಿ ಪ್ರದೇಶದಲ್ಲಿ ಕೆಲವು ಕಲ್ಲಿನ ಗೋರಿಗಳನ್ನು ಸಂಶೋಧಿಸಿದ್ದಾನೆ. ೧೯೪೩ ಮತ್ತು ೧೯[illegible] ರಲ್ಲಿ ಎಂ. ಶೇಷಾದ್ರಿಯವರು ೨ ಕೊಂಗರಾಜನಹಳ್ಳಿ ಬೆಟ್ಟದಪುರ ಹಾಗೂ ಸೀತೆಗುಡ್ಡದಲ್ಲಿ ಹಲವಾರು ಕಲ್ಗೋರಿಗಳನ್ನು ಶೋಧಿಸಿದ್ದಾರೆ. ೧೯೭೦ರಲ್ಲಿ ಕೇಂದ್ರ ಸರ್ಕಾರದ ಪುರಾತತ್ತ್ವ ಇಲಾಖೆಯು ಜಿಲ್ಲೆಯಾದ್ಯಂತ ಅನ್ವೇಷಣೆಯನ್ನು ನಡೆಸಿ ಸು.೧೨೦ ಬೃಹತ್ ಶಿಲಾಯುಗದ ನೆಲೆಗಳನ್ನು ಕಂಡುಹಿಡಿದಿದ್ದಾರೆ. ಬಿ.ನರಸಿಂಹಯ್ಯನವರು ೧೯೮೩ ರಿಂದ ೧೯೮೭ ರವರೆಗೆ ಕೋಲಾರ ಪ್ರದೇಶದಲ್ಲಿ ಶೋಧ ನಡೆಸಿ ಇಲ್ಲಿನ ನೂತನ ಶಿಲಾಯುಗದ ನೆಲೆಗಳನ್ನು ಪತ್ತೆಹಚ್ಚಿದ್ದಾರೆ.

ಆರ್.ಆರ್.ದಿವಾಕರ್, ಕೆ.ಬಿ.ಶಿವತಾರಕ ಮುಂತಾದವರು ಜಿಲ್ಲೆಯ ಪಾಲಾರ್, ಪೆನ್ನಾರ್ ನದಿ ಪಾತ್ರಗಳಲ್ಲಿ ಹಳೆಯ ಶಿಲಾಯುಗದ ಕುರುಹುಗಳಿರಬಹುದು ಎಂದಿದ್ದಾರೆ. ಅಲ್ಲದೆ, ನೂತನ ಶಿಲಾಯುಗಕ್ಕೆ ಸಂಬಂಧಿಸಿದ ಕುರುಹುಗಳನ್ನು, ಅವಶೇಷಗಳನ್ನೂ ಪತ್ತೆಹಚ್ಚಿದ್ದಾರೆ. ಅಲ್ಲದೆ, ಸೂಕ್ಷ್ಮ ಶಿಲಾಯುಗ ಅಥವಾ ಲೋಹಯುಗದಲ್ಲಿ ಆದಿಮಾನವನ ಸಂಸ್ಕೃತಿ ನಾಗರಿಕತೆಯತ್ತ ಸಾಗಿರುವುದನ್ನು ಪತ್ತೆಹಚ್ಚಿದ್ದಾರೆ.[೩] ಜಿಲ್ಲೆಯ ಶಿಲಾಯುಗದ ಚರಿತ್ರೆಗೆ ಪೂರಕವಾಗಿ ಕೆಲವು ಸ್ಥಳೈತಿಹ್ಯಗಳು ಸ್ಥಳಪುರಾಣಗಳು ಒತ್ತುಕೊಡುತ್ತವೆ. ಕೋಲಾರ, ಕೈವಾರ, ಕುರುಡುಮಲೈ, ವಿದುರಾಶ್ವತ್ಥ ಮುಂತಾದ ಸ್ಥಳಗಳನ್ನು ಕುರಿತ ಪಾಂಡವರ ಐತಿಹ್ಯಗಳು ಕುತೂಹಲಕಾರಿಯಾಗಿದೆ. ಕೋಲಾರಕ್ಕೆ ಸಂಬಂಧಿಸಿದ ಐತಿಹ್ಯಗಳಲ್ಲಿ ಕಂಡುಬರುವ ಕಾರ್ತವೀರ್ಯ, ಜಮದಗ್ನಿ, ಪರಶುರಾಮ, ರೇಣುಕೆಯರ ಪುರಾಣ ಹಾಗೂ ಜನಪದ ಘಟನೆಗಳು. ಚೋಳ ಅರಸರ ಆಡಳಿತದ ಐತಿಹಾಸಿಕ ಸಂಗತಿಗಳು ಜನಪದ ನಿಲುವುಗಳು ಎಲ್ಲವೂ ಸಂಸ್ಕೃತಿಯ ಬೆಳವಣಿಗೆಯು ನಾಗರಿಕತೆಯತ್ತ ಚಲಿಸಿದ್ದನ್ನು ರಾಜಕೀಯ ಆಯಾಮಗಳನ್ನು ಪಡೆದುದ್ದನ್ನು ಹೇಳುತ್ತವೆ.

ಮೇಲ್ಕಂಡ ಅಧ್ಯಯನಗಳನ್ನು ಪರಾಮರ್ಶಿಸಿ ನನ್ನ ಅಧ್ಯಯನಕ್ಕೆ ಪೂರಕವಾಗುವಂಥ ವಿವರಗಳನ್ನು ಆಕರ-ಪರಿಕರಗಳನ್ನಾಗಿ ಸ್ವೀಕರಿಸಿದ್ದೇನೆ. ಕ್ಷೇತ್ರಕಾರ್ಯದಲ್ಲಿ ಲಭ್ಯವಾಗುವ ಐತಿಹ್ಯ ಮಾಹಿತಿಗಳನ್ನು ಗದ್ಯ-ಪದ್ಯ ರೂಪಗಳೆರಡರಲ್ಲಿ ಯಾವ ಮಾದರಿಯಲ್ಲಿ ದೊರೆತರೂ ಸಂಗ್ರಹಿಸಿ, ಸಂಶೋಧನೆಯ ಅಧ್ಯಯನಕ್ಕೆ ಬಳಸಿಕೊಂಡಿರುತ್ತೇನೆ. ಅಲ್ಲದೆ ಲಭ್ಯವಾದ ಮಾದರಿಯನ್ನು ಅನುಬಂಧದಲ್ಲಿ ನೀಡಿರುತ್ತೇನೆ. ಪದ್ಯ ಪ್ರಕಾರಗಳಲ್ಲಿ ದೊರೆಯುವ ಐತಿಹ್ಯಗಳನ್ನು ಧ್ವನಿಮುದ್ರಣ ಮಾಡಿಕೊಂಡು ಉಳಿದ ಗದ್ಯ

ಪ್ರಕಾರದ ಐತಿಹ್ಯಗಳ ವಿವರಣೆಯನ್ನು ಬರೆದುಕೊಂಡಿರುತ್ತೇನೆ. ಪಕ್ಕ ವಿವರಣೆ ಸಾಮಾನ್ಯವಾದರೂ ತಾಲ್ಲೂಕುವಾರು ವಿಂಗಡಿಸಿದ್ದೇನೆ.

**ಸಂಶೋಧನೆಗಾಗಿ ಅನುಸರಿಸುವ ಕ್ರಮಗಳು**

ಪ್ರಸ್ತುತ ಐತಿಹ್ಯಗಳ ಅಧ್ಯಯನವನ್ನು ಪ್ರಾಯೋಗಿಕವಾಗಿ ಆರಂಭಿಸಿದ್ದೇನೆ. ಅಂದರೆ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಐತಿಹ್ಯಗಳನ್ನು ಸಂಗ್ರಹಿಸಿದ್ದೇನೆ. ಜಿಲ್ಲೆಯಾದ್ಯಂತ ಕ್ಷೇತ್ರಕಾರ್ಯ ಕೈಗೊಳ್ಳುವುದು ವೈಯಕ್ತಿಕ ಹಂತದ ಸಂಶೋಧನೆ ಹಾಗೂ ಕಾಲದ ಮಿತಿಯಿಂದ ಸಾಧ್ಯವಾಗಲಿಲ್ಲವಾದ್ದರಿಂದ ಜಿಲ್ಲೆಯ ಗಡಿಭಾಗಗಳಲ್ಲಿ ಹೆಚ್ಚಾಗಿ ಕ್ಷೇತ್ರಕಾರ್ಯವನ್ನು ಮಾಡಿರುತ್ತೇನೆ. ಇದು ಆಂಧ್ರಪ್ರದೇಶ ಮತ್ತು ಕರ್ನಾಟಕದ ಗಡಿಯಾದ್ದರಿಂದ ದ್ವಿಭಾಷಿಕ-ಸಾಂಸ್ಕೃತಿಕ ನೋಟಗಳು ಲಭಿಸಲು ಪೂರಕವಾಗಿದೆ. ಸ್ಥಳೀಯ ಸಂಸ್ಕೃತಿಯ ಪ್ರತಿಬಿಂಬಗಳಾದ ಐತಿಹ್ಯಗಳ ಸಂಗ್ರಹ - ಅಧ್ಯಯನ ನಮ್ಮಲ್ಲಿ ಆಗಿಯೇ ಇಲ್ಲ. ಕೋಲಾರ, ಬಾಗೇಪಲ್ಲಿ, ಚಿಕ್ಕಬಳ್ಳಾಪುರ, ಚಿಂತಾಮಣಿ, ಗೌರಿಬಿದನೂರು, ಗುಡಿಬಂಡೆ ತಾಲ್ಲೂಕುಗಳಲ್ಲಿನ ಕ್ಷೇತ್ರಕಾರ್ಯ ಮೇಲ್ಕಂಡ ಆಶಯಗಳಿಗೆ ಅನುಗುಣವಾಗಿದೆ. ಉಳಿದ ತಾಲ್ಲೂಕುಗಳಲ್ಲಿ ದಟ್ಟವಾದ ಕ್ಷೇತ್ರಕಾರ್ಯ ಮಾಡಲಾಗಿಲ್ಲ. ಜಿಲ್ಲೆಯ ಕೆಲವು ಭಾಗಗಳಲ್ಲಿ ತಮಿಳಿನ ಪ್ರಭಾವವಿರುವುದನ್ನು ಆಚರಣೆಗಳ ಹಿನ್ನೆಲೆಯಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದೇನೆ. ತೆಲುಗು ಭಾಷೆಯ ಬರವಣಿಗೆಯ ಸಾಮಾನ್ಯ ಜ್ಞಾನವಿರುವ ನನಗೆ, ತಮಿಳು ಕೂಲಂಕುಷ ಕಲಿತಿಲ್ಲವಾದ್ದರಿಂದ ಅರ್ಥವಾಗದ ಭಾಷೆಯಾಗಿದೆ. ಆ ಭಾಷೆಯ ಸತ್ವವನ್ನು ಗುರುತಿಸಲು ಕನ್ನಡದ ಗ್ರಾಂಥಿಕ ಆಧಾರದಿಂದ ಮಾತ್ರ ಸಾಧ್ಯವಾಗಿದೆ. ಇದು ಅಧ್ಯಯನ ಮಿತಿಯೂ ಹೌದು. ಜನಪದ ವಲಯ ಹಾಗೂ ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಐತಿಹ್ಯವನ್ನು ಕುರಿತ ಅಧ್ಯಯನಗಳನ್ನು ಗಮನಿಸಿ ಮೌಲಿಕ ಅಂಶಗಳನ್ನು ಪೂರಕ ಟಿಪ್ಪಣಿಗಳಾಗಿ ಬಳಸಿಕೊಂಡಿರುತ್ತೇನೆ. ಜಿಲ್ಲೆಯನ್ನು ಕುರಿತ ಅಧ್ಯಯನಗಳು ಹಾಗೂ ಐತಿಹ್ಯಗಳನ್ನು ಕುರಿತ ಅಧ್ಯಯನಗಳೆರಡನ್ನೂ ಗಮನಿಸಿರುತ್ತೇನೆ.

**ಐತಿಹ್ಯದ ಅರ್ಥ-ನಿರೂಪಣೆ-ಸ್ವರೂಪ ಮತ್ತು ವರ್ಗೀಕರಣ**

ಪ್ರಾಚೀನ ಕಾಲದ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ, ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತ ತಲೆಮಾರುಗಳ ಮೂಲಕ ಹರಿದು ಬರುವಾಗ ಬಹುಶಃ ಐತಿಹ್ಯ ರೂಪುಗೊಂಡಿರಬೇಕೆಂದು ತೋರುತ್ತದೆ. ಅಂದರೆ ಐತಿಹ್ಯಗಳು ವ್ಯಕ್ತಿಗಳ, ಸ್ಥಳಗಳ ಅಥವಾ ಘಟನೆಗಳ ವಾಸ್ತವ ಅಥವಾ ತೋರಿಕೆಯ ನಂಬಿಕೆಗಳನ್ನೊಳಗೊಂಡ ಕಥನಗಳು. ಇವು ನಡೆದ ಘಟನೆಗಳ ಪಳೆಯುಳಿಕೆ ಎನ್ನಬಹುದು. ಐತಿಹ್ಯ ಪದವನ್ನು 'LEGEND' ಎಂಬುದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. 'LEGEND' ಎಂಬುದು Leganda ಎಂಬ ಮಧ್ಯಕಾಲೀನ ಲ್ಯಾಟಿನ್ ಭಾಷೆಯ

ಪದ. ಅದಕ್ಕೆ ಓದತಕ್ಕದ್ದು (Things to read) ಎಂಬ ಅರ್ಥವಿದೆ. (Odhams Dictionary:629) ಫ್ರೆಂಚ್ ಭಾಷೆಯಲ್ಲಿಯೂ ಇದೇ ಅರ್ಥ ಉಳಿದು ಬೆಳೆದುಕೊಂಡು ಬಂದಿದೆ. ಐತಿಹ್ಯಕ್ಕೆ ಜರ್ಮನ್ ಭಾಷೆಯಲ್ಲಿ 'ಸಾಗೆ' (Sagen) ಎಂದು ಕರೆಯುವರು. ಐತಿಹ್ಯ ಎಂಬುದು 'ಇತಿ', 'ಇತಿಹ', ಎನ್ನುವ ಸಂಸ್ಕೃತ ರೂಪದಿಂದ ನಿಷ್ಪನ್ನವಾಗಿದೆ. ಈ ಸಂಸ್ಕೃತಿ ರೂಪಗಳಿಗೆ ಹೇಗೆ, ಹೀಗಿತ್ತು, ಹೀಗೆ ನಡೆದದ್ದು ಇತ್ಯಾದಿ ಅರ್ಥಗಳಿವೆ. ಅಂದರೆ ಇಂದು ನಾವು ಯಾವುದನ್ನು 'ಐತಿಹ್ಯ' ಎನ್ನುತ್ತೇವೆಯೋ ಅದು ಒಂದು ಕಾಲದಲ್ಲಿ ನಿಜವಾಗಿ ನಡೆದ ಘಟನೆಯೊಂದರ ನಿರೂಪಣೆ ಎಂಬ ಭಾವನೆ ಅದರ ಪ್ರಸರಣದಲ್ಲಿದೆ. ಇದನ್ನು ಅರಿತುಕೊಂಡೇ ಜಾನಪದ ವಿದ್ವಾಂಸರು ಜನಪದ ಸಾಹಿತ್ಯದ ಈ ಪ್ರಕಾರವನ್ನು ಐತಿಹ್ಯ ಎಂದು ಕರೆದರು.

ಲ್ಯಾಟಿನ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಐತಿಹ್ಯಕ್ಕೆ ಇರುವ ಅರ್ಥದಿಂದಾಗಿ ಐತಿಹ್ಯಗಳು ಪ್ರಾರ್ಥನಾ ಮಂದಿರಗಳಲ್ಲಿ ಪಠನ ಮಾಡಬಹುದಾದ ವಿಷಯಗಳಾಗಿದ್ದವು. ಪಠನ ಮಾಡಬಹುದಾದ ವಿಚಾರಗಳಿಗೆ ಬೈಬಲ್ಲನ್ನು ಅಥವಾ ಸಾಧು-ಸಂತರ ಜೀವನ ಚರಿತ್ರೆಯನ್ನು ಮುಖ್ಯವಾಗಿಟ್ಟುಕೊಳ್ಳಲಾಗಿತ್ತು. ಈ ಹಿನ್ನೆಲೆಯಿಂದಾಗಿಯೇ ಮಧ್ಯಯುಗೀನ ಇಂಗ್ಲೀಷ್ ಬರೆಹಗಾರರು ಸಹ ಲೆಜೆಂಡ್ ಎಂಬ ಪದವನ್ನು ಮುಖ್ಯವಾಗಿ ಸಾಧು-ಸಂತರ ಜೀವನ ಚರಿತ್ರೆ ಎಂಬ ಅರ್ಥದಲ್ಲಿ ಬಳಸಿಕೊಂಡಿದ್ದಾರೆ. ಇಂಗ್ಲೀಷ್ ಭಾಷೆಯ ಬರಹಗಾರರ ಪ್ರಭಾವದಿಂದಾಗಿ ಇಂಗ್ಲೀಷ್ ಭಾಷೆಯ ನಿಘಂಟುಕಾರರು ಸಹ ಅದೇ ರೀತಿಯಲ್ಲಿ ವಿವರಿಸಿದ್ದಾರೆ. "A story of a Saints life. A collection of such stories. A tradition story, a body of tradition. a untrue or unhistorical story"[9] "Chronicle of the life a saint, a traditional story, usually of oral origin with thematic matirial of a imaginatively fantastic and marvellous nature. a story based marc on fancy than an fact" (ODHAMS DICTIONARY:629). "Traditional story, myth. such literature or tradition"[10]

ಇಂಗ್ಲೀಷ್-ಕನ್ನಡ ನಿಘಂಟುಗಳು ಸಹ ಆಂಗ್ಲಭಾಷಾ ನಿಘಂಟುಗಳ ರೀತಿಯಲ್ಲಿಯೇ ಅರ್ಥೈಸಿವೆ. "ಸಾಧುಸಂತರ ಜೀವನ ಕತೆ, ೧೬ನೇ ಶತಮಾನದಲ್ಲಿ ಇಂಗ್ಲೀಷ್‌ನಲ್ಲಿ ಸಂಗ್ರಹಿಸಿದ ಸಾಧುಸಂತರ ಜೀವನ ಕಥಾ ಸಂಗ್ರಹ" (ಇಂಗ್ಲೀಷ್-ಕನ್ನಡ ನಿಘಂಟು, ಮೈಸೂರು ವಿಶ್ವವಿದ್ಯಾನಿಲಯ: ೬೦೦). ಅಂದರೆ ಲೆಜೆಂಡ್ ಎಂಬುದು ಧಾರ್ಮಿಕ ರೀತಿಯ ಕಥನವೊಂದಕ್ಕೆ ಅನ್ವಯಿಸುತ್ತಿದ್ದು ಆರಾಧನಾ ಮಂದಿರಗಳಲ್ಲಿ ಪಠನಗಳಿಗಾಗಿ ಉಪಯೋಗಿಸುತ್ತಿದ್ದ ಸಾಧು-ಸಂತರ ಜೀವನ ಚರಿತ್ರೆ ಎಂದು ಕರೆದಿದ್ದಾರೆ. ಆಂಗ್ಲ ಭಾಷೆಯಲ್ಲಿಯೂ ಧಾರ್ಮಿಕ ರೀತಿಯ ಕಥನವೊಂದಕ್ಕೆ 'ಲೆಜೆಂಡ್'ನ್ನು ಅನ್ವಯಿಸಿದ್ದು ಸ್ಪಷ್ಟವಾಗುತ್ತಿದೆ. ಜಾಕಬ್ಸ್ ಡೇವರಾಗಿಸೆರರವರು ಕ್ರಿ.ಶ.೧೩ನೇ ಶತಮಾನದಲ್ಲಿ ಸಂಪಾದಿಸಿರುವ GOLDEN LEGEND

ಎಂಬ ಸಂಕಲನದಲ್ಲಿ ಸಾಧುಗಳ ಕಥೆಗಳು ಮಾತ್ರ ಇರುವುದು ಕಂಡುಬರುತ್ತದೆ. ಅಂದರೆ ಮಹಾಪುರುಷರ ಜೀವನ ಚರಿತ್ರೆ ಅವು ಪ್ರಧಾನವಾಗಿ ನೀತಿಬೋಧಕ ಕಥೆಗಳಾಗಿದ್ದವು. ಹಾಗಾಗಿ ಹಿಂದಿನ ಕಾಲದಲ್ಲಿ ಇತಿಹಾಸಕಥೆ, ಐತಿಹ್ಯಕಥೆ ಮತ್ತು ನೀತಿಕಥೆಗಳನ್ನು ಒಟ್ಟಾಗಿ ಸೇರಿಸಿ Legend ಎಂದು ಕರೆಯುತ್ತಿದ್ದರು. ಐತಿಹ್ಯದ ಅರ್ಥವನ್ನು ನಾವು ಚಾರಿತ್ರಿಕವಾಗಿ ಗಮನಿಸಿದಾಗ ಒಂದೇ ರೀತಿಯೂ ಉಳಿದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಜಾನಪದ ಅಧ್ಯಯನ ಬೆಳೆದುಬಂದಂತೆ ಅದರ ಅರ್ಥದಲ್ಲಿಯೂ ಸಹ ಬದಲಾವಣೆಯಾಗತೊಡಗಿತು. ಮೊದಲಿನ 'ಸಾಧುಸಂತರ ಜೀವನ ಕಥೆ'ಯೆಂಬ ಅರ್ಥವನ್ನು ಉಳಿಸಿಕೊಂಡು, ಅದು ಇನ್ನಷ್ಟು ವಿಸ್ತರಿಸುತ್ತಾ ಹೋಯಿತು. ೧೯-೨೦ನೆಯ ಶತಮಾನದಲ್ಲಿ ಐತಿಹ್ಯ ಎಂಬ ಪದವು 'ಪರಂಪರೆಯಿಂದ ಬಂದದ್ದು' ಎಂಬ ಅರ್ಥದಲ್ಲಿ ಬಳಕೆಯಾಗತೊಡಗಿತು. ಕನ್ನಡ ನಿಘಂಟುಗಳಲ್ಲಿ ಈ ಅರ್ಥಗಳನ್ನು ನಾವು ಕಾಣಬಹುದು.

ಐತಿಹ್ಯ : ೧. ಪರಂಪರೆಯಿಂದ ಬಂದಿರುವುದು. (ಕನ್ನಡ - ಕನ್ನಡ ನಿಘಂಟು, ೧೯೭೦:೧೧೩೭)

೨. ಇತಿಹಾಸಕ್ಕೆ ಸಂಬಂಧಿಸಿದ ಚರಿತ್ರೆ. (ಸಿರಿಗನ್ನಡ ಅರ್ಥಕೋಶ, ೧೯೬೭:೭೭)

೩. Oral tradition, a legend ಎಂಬುದನ್ನು ಸಮಾನಾರ್ಥಕವಾಗಿ ಬಳಸಿದ್ದಲ್ಲದೆ ಕನ್ನಡದಲ್ಲಿ ಅದಕ್ಕೆ 'ಐತಿಹ್ಯ' ಎಂಬ ಪದವಿರುವುದನ್ನು ಗುರುತಿಸಲಾಗಿದೆ. (ಕಿಟೆಲ್ ನಿಘಂಟು ೧೮೯೪:೨೫೫)

ಇಲ್ಲಿ ಐತಿಹ್ಯ ಸಾಧುಸಂತರ ಜೀವನಕತೆಯೊಂದಿಗೆ ಮೌಖಿಕ ಪರಂಪರೆಯಲ್ಲಿ ಬಂದ ಇತರ ಅಂಶಗಳನ್ನು ಒಳಗೊಂಡಿದೆ. ಕನ್ನಡದ ಸಾಂಪ್ರದಾಯಕ ಕೃತಿಗಳಲ್ಲಿ ಸಂವಾದಿಯಾಗಿರುವ 'ಐತಿಹ್ಯ' ಪದವು ಹೆಚ್ಚು ಬಳಕೆಗೆ ಬಂದಂತೆ ಕಾಣುವುದಿಲ್ಲ. ಕ್ರಿ.ಶ.ಸು.೧೩೦೦ರದ್ದು ಎನ್ನಲಾದ 'ನಾಚಿರಾಜೀಯ' ಎಂಬ ಹಸ್ತಪ್ರತಿಯೊಂದರಲ್ಲಿ (ಕೃತಿಕರ್ತ: ನಾಚಿರಾಜ) ಪ್ರಯೋಗಗೊಂಡ "ಪ್ರಮಾಣವಿಲ್ಲದೆ ಪರಂಪರೆಯಿಂದ ಬಂದ ಮಾತ ಹೇಳುವುದು ಐತಿಹ್ಯಂ - ಇತಿಹಾಸಯುನಿಸುಗುಂ" ಎಂಬ ಹೇಳಿಕೆಯನ್ನು ಡಿ.ಎಲ್. ನರಸಿಂಹಾಚಾರ್ಯರು ಉಲ್ಲೇಖಿಸಿದ್ದಾರೆ.[೬] ಕ್ರಿ.ಶ. ಸು. ೧೫೦೦ರಲ್ಲಿ ರಚಿತವಾಗಿದೆ ಎಂದು ಊಹಿಸಲಾದ ವಿವೇಕ ಚಿಂತಾಮಣಿಯಲ್ಲಿ (ಕೃತಿಕರ್ತ : ನಿಜಗುಣ ಶಿವಯೋಗಿ) "ಈ ವಟವೃಕ್ಷದೊಳ್ ಯಕ್ಷ ನಿಪ್ಪನೆಂಬ ಲೋಕವಾರ್ತೆಯಿಂದ ಯಕ್ಷ ವಿಷಯಜ್ಞಾನವೇ ಐತಿಹ್ಯ ಪ್ರಮಾಣಮಕ್ಕುಂ" ಎಂಬ ಪ್ರಯೋಗವಿದೆ. ೨೦ನೇ ಶತಮಾನದ ಮೊದಲ ಭಾಗದಲ್ಲಿದ್ದ ಎಂ.ಎಸ್.ಪುಟ್ಟಣ್ಣನವರು 'ಈ ಪುಣ್ಯಕ್ಷೇತ್ರದಲ್ಲಿ ಒಂದು ಐತಿಹ್ಯವುಂಟು', ಎಂಬ ಪ್ರಯೋಗ ಮಾಡಿದ್ದಾರೆ. ೧೯೫೦ರಲ್ಲಿ ಹೊರಬಂದ ಹಿಂದೂದರ್ಶನ ಸಾರದಲ್ಲಿ ಐತಿಹ್ಯವನ್ನು ೧೨ ಪ್ರಮಾಣಗಳಲ್ಲಿ ಒಂದೆರಡು ಹೇಳಲಾಗಿದೆ.[೭] ಈ ಪ್ರಯೋಗಗಳಲ್ಲಿ ಐತಿಹ್ಯದ ಅರ್ಥವ್ಯಾಪ್ತಿ, ನಿಘಂಟುಗಳಲ್ಲಿರುವುದಕ್ಕಿಂತ ಸ್ವಲ್ಪಮಟ್ಟಿಗೆ ಬೇರೆಯೇ ಆಗಿರುವುದು ಕಂಡುಬರುತ್ತದೆ. ನಾಚಿರಾಜನ ಪ್ರಕಾರ ಐತಿಹ್ಯಕ್ಕೆ ಪ್ರಮಾಣ ಬೇಡ, ನಿಜಗುಣ

ಶಿವಯೋಗಿಯ ಪ್ರಕಾರ ಲೋಕವಾರ್ತೆಯೇ ಐತಿಹ್ಯಕ್ಕೆ ಪ್ರಮಾಣ. ಸುಮಾರು ೧೪-೧೫ನೆಯ ಶತಮಾನದಲ್ಲಿ ಇಂಥ ಚರ್ಚೆ ನಡೆದಿರುವುದನ್ನು ಗಮನಿಸಿದರೆ, ಇಂಗ್ಲೀಷ್‌ಗಿಂತ ಸಾಕಷ್ಟು ಮುಂಚೆಯೇ ಐತಿಹ್ಯದ ಬಗೆಗೆ ಒಂದು ಕಲ್ಪನೆ ಇಲ್ಲಿ ಮೂಡುತ್ತಿರುವುದು ಖಚಿತವಾಗುತ್ತದೆ. ಕಿವಿಯಿಂದ ಕಿವಿಗೆ ಹರಿದು ಬಂದಿರುವ ಮತ್ತೊಂದು ಜನಪ್ರಿಯವು ನಂಬುವಂತೆಯೂ ಇದ್ದಾಗ ಅದನ್ನು ಇಲ್ಲಿಯ ಜನರು 'ಐತಿಹ್ಯ'ವೆಂದು ಕರೆಯುತ್ತಿದ್ದರು. ಸತ್ಯದ ಶೋಧಕ್ಕೆ ಇದೂ ಒಂದು ಪ್ರಮಾಣವಾಗಿದೆ."

ಜವರೇಗೌಡ ದೇ. : "ನಡೆಯಿತೆಂದು ಹೇಳಲಾದ ಘಟನೆಗಳ ಸುತ್ತ ಹುಟ್ಟಿಕೊಳ್ಳುವ ಕಟ್ಟು ಕತೆಗಳೇ ಐತಿಹ್ಯಗಳಾಗಿರುತ್ತವೆ".

ಎಂ.ಜಿ. ಈಶ್ವರಪ್ಪ : "ಐತಿಹ್ಯವು ಪ್ರಸ್ತುತ ವಸ್ತು ಹೇಗೆ ಬದುಕಿದ್ದಿರಬಹುದು ಎನ್ನುವುದರ ಇತಿಹಾಸವನ್ನು ಅತಿಶಯದ ಮುಖಾಂತರ ಹೇಳುತ್ತದೆ"

ವಸಂತಕುಮಾರ್‌ತಾಳ್ತಜೆ : "ಐತಿಹ್ಯ ಇತಿಹಾಸದಿಂದ ಬಹುದೂರ ಸಾಗಿರುತ್ತದೆ. ಹಾಗೆಂದು ಅದು ಪೂರ್ತಿ ದಂತಕತೆಯೂ ಅಲ್ಲ. ಎಲ್ಲೋ ಯಾವಾಗಲೋ ಘಟಿಸಿದ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆ. ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರಿರುತ್ತದೆ. ಈ ಪ್ರಭಾವವೇ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ ಅನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಯ ವೈಭವೀಕರಣದ ಅಂಶಗಳನ್ನು ಸೇರಿಸಿಬಿಡುತ್ತಾನೆ. ಆ ಪರಿಷ್ಕೃತ ಅಂಶಗಳನ್ನು ಹರಡುತ್ತಾನೆ. ಹೀಗೆ ಒಂದು ಘಟನೆಗೆ ಅಥವಾ ಸ್ಥಳಕ್ಕೆ ಒಂದು ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ಉಂಟಾಗುತ್ತದೆ".

ಕರ್ನಾಟಕ ಕನ್ನಡ -
ವಿಷಯ ವಿಶ್ವಕೋಶ : "ನಿರ್ದಿಷ್ಟ ಸ್ಥಳವೊಂದಕ್ಕೆ ಸಂಬಂಧಪಟ್ಟಿದ್ದಾಗಿದ್ದು, ಪ್ರಾಚೀನವಾಗಿದ್ದು, ವಾಸ್ತವಿಕ ಘಟನೆಯೊಂದರ ಆಧಾರದ ಮೇಲೆ ಕಾಲ್ಪನಿಕ ಅಂಶವನ್ನು ಒಳಗೊಂಡು ಬೆಳೆದು ನಿಂತಿರುವ, ಪರಂಪರಾಗತವಾಗಿ ಜನಪದರು ನಂಬಿಕೊಂಡು ಬಂದ ಒಂದು ವಿಶೇಷ ಸಂಗತಿ".

GHOSH : Legends tell us not only what people did but why they did it? We see the ideas behind their actions

Richerd M.Dorson : Legend is a traditional oral narrative regarded as true by its teller and by many members of the society in which it circulates, but containing remarkable or supernatural elements that follow a pattern.

John Keats : "A flowery tale more sweetly than our rhyme : What leaf-fringed legend haunts about tha shape of deities or mortals or of both" (ode on a Grecian Urn)

The Encyclopedia Americana : "Lehend any non historical story supposedly transmitted by tradition from Antiquity. Originally, the term devoted a written story of the life of a saints or a collection of such stories" (Vol-17:214) "In modern usage, however the word has two principal meanings. (1) An inscription on a coin or medal especially once around the rim and (2) Any written story supposedly of ancient origin and unveridiable as History". (Vol-17:214)

New popular Encyclopedia : "A legend is miraculus which should be of religious nature are relating to some tradition of church". (Vol-III:237) The concise Oxford Dictionary of current English : "Traditional story populary regarded as historical, mythem such literature or tradition (subject of) popular but unfounded belief (s)"

ಮೇಲಿನ ನಿರೂಪಣೆಗಳನ್ನು ಗಮನಿಸಿದಾಗ ಐತಿಹ್ಯ ಮೊದಲ ನೋಟಕ್ಕೆ ಮತ್ತು ನಿರೂಪಣೆಗೆ ಗದ್ಯಕಥನ. ಅಂದರೆ ಇದು ಜನಪದ ಕಥೆ ಮತ್ತು ಪುರಾಣದ ವರ್ಗಕ್ಕೆ ಸೇರುವಂತಹದ್ದು. ಮೂಲತಃ ಇದು ಧಾರ್ಮಿಕ ಕಾರ್ಯಗಳಲ್ಲಿ ಅಥವಾ ಧಾರ್ಮಿಕ ಔತಣ ಸಂದರ್ಭದಲ್ಲಿ ಒದಗುವಂತಹ ವಿಷಯ. ಸಾಮಾನ್ಯವಾಗಿ ಅದು ಸಂತನ ಅಥವಾ ಧರ್ಮವೀರನ ಜೀವನವನ್ನು ಕುರಿತಿರುತ್ತದೆ. ಎರಡನೆಯ ಅಂಶವಾಗಿ ಐತಿಹ್ಯ ನಿಜ ಸಂಗತಿ ಮತ್ತು ಕಲ್ಪನೆಗಳ ಸಂಯೋಗ ಎಂದು ಹೇಳಲಾಗಿದೆ. ಇದು ಐತಿಹ್ಯದ ಮುಖ್ಯವಾದ ಗುಣ ಕೂಡಾ ಹೌದು. ಇಲ್ಲಿಯೇ ಐತಿಹ್ಯ ಪುರಾಣದಿಂದ ಮತ್ತು ಕಟ್ಟುಕತೆಯಿಂದ ಬೇರೆಯಾಗುವುದು ಕೂಡಾ ಎನ್ನಬಹುದು. ಐತಿಹ್ಯದ ಮೂರನೆಯ ಪ್ರಮುಖ ಗುಣವೆಂದರೆ ವ್ಯಕ್ತಿ, ಸ್ಥಳ ಅಥವಾ ಘಟನೆಯನ್ನು ಕುರಿತದ್ದು. ಈ ಗುಣವೇ ಐತಿಹ್ಯವನ್ನು ಮತ್ತಷ್ಟು ನಿರ್ದಿಷ್ಟಪಡಿಸುತ್ತದೆ. ಹಾಗೆಯೇ ಇತರ ಗದ್ಯ ಕಥನಗಳಿಂದ ನಿರ್ದಿಷ್ಟಪಡಿಸುತ್ತದೆ. ಕಥೆಗಳಲ್ಲಿ ವ್ಯಕ್ತಿಗಳಿದ್ದಾರೆ, ಆದರೆ ನಿರ್ದಿಷ್ಟ ವ್ಯಕ್ತಿಗಳಲ್ಲ. ಪುರಾಣಗಳಲ್ಲಿ ಸ್ಥಳಗಳಿವೆ, ಆದರೆ ನಿರ್ದಿಷ್ಟ ಸ್ಥಳಗಳಿಲ್ಲ. ಕಥೆಗಳಲ್ಲಿ ಘಟನೆಗಳಿವೆ, ಆದರೆ ಅವುಗಳು ಆಶಯಗಳೇ ಹೊರತು ನಿರ್ದಿಷ್ಟವಾಗಿ ಸಂಭವಿಸಿದ ಘಟನೆಗಳಲ್ಲ. ಐತಿಹ್ಯ ಮಾತ್ರ ತನ್ನ

ಸ್ಥಳದಲ್ಲಿ ಇತರೆಲ್ಲ ಮಾಧ್ಯಮಗಳಿಗಿಂತ ಭಿನ್ನವಾಗುತ್ತದೆ. ಪುರಾಣದ ರೀತಿ, ವಿವರಣಾತ್ಮಕ ಕಥೆಯ ರೀತಿ ಐತಿಹ್ಯ ಕೂಡ ವ್ಯಕ್ತಿ, ವಸ್ತು, ಘಟನೆಗಳನ್ನು ಕುರಿತು ವಿವರಿಸುತ್ತದೆ. ಆದರೆ ಈ ವಿವರ ಪುರಾಣವೂ ಅಲ್ಲ, ಜನಪದ ಕತೆಯೂ ಅಲ್ಲ. ಅಂದರೆ ಐತಿಹ್ಯದ ವಿವರಣೆ ಗುಣಾತ್ಮಕವಾಗಿಯೇ ಬೇರೆ ಇರುತ್ತದೆ.

ನಿಜವೆಂದು ನಂಬುವಂತೆ ಮಾಡುವುದು ಅಥವಾ ಹೇಳುವುದು ಐತಿಹ್ಯದ ಮುಖ್ಯ ಗುಣ. ಅದಕ್ಕೆ ದೃಶ್ಯಾತ್ಮಕವಾದಂತಹ ಗುರುತುಗಳಿವೆ. ಐತಿಹ್ಯ ನಿಜ ಅಂಥ ಹೇಳಿದ್ದು ಅನ್ನುವುದರಲ್ಲಿಯೇ ಅದು ಸಮಕಾಲೀನ ಮಾನವ ಸಂಬಂಧಿ ಅಥವಾ ಇತರ ಗದ್ಯ ಕಥನಗಳಿಗಿಂತ ಮಾನವನಿಗೆ ಹತ್ತಿರವಾದದ್ದು ಎಂದು ತಿಳಿಯಬಹುದು. ಎಲ್ಲಕ್ಕಿಂತ ಮುಖ್ಯವಾಗಿ ಸಾರ್ವಕಾಲಿಕ ಸತ್ಯವೊಂದನ್ನು ಈ ಐತಿಹ್ಯದ ಗುಣ ತಿಳಿಸುತ್ತದೆ. ಅದೇನೆಂದರೆ ಐತಿಹ್ಯ ಕಾರ್ಯಾಧಾರಿತವಾಗಿ ಏನು ಎನ್ನುವ ಸಂಗತಿ, ಅದರ ನಿರೂಪಣೆಗೆ ಮತ್ತು ನಿರ್ಣಯಕ್ಕೆ ಹೆಚ್ಚಿನ ಆಧಾರವನ್ನು ಒದಗಿಸುತ್ತದೆ. ಐತಿಹ್ಯ ಒಂದು ಸ್ಥಳ, ಒಬ್ಬ ವ್ಯಕ್ತಿ, ಒಂದು ಘಟನೆಯನ್ನು ಕುರಿತು ಹೇಳಿದ ಕಥೆ. ಆ ಕಥೆ ನಡೆದದ್ದು ಎನ್ನುವುದು ಐತಿಹ್ಯದ ಪ್ರತಿಪಾದನೆ. ಆದರೆ ಐತಿಹ್ಯ ಪ್ರಪಂಚದಲ್ಲಿ ಸಿಗುವ ಎಲ್ಲಾ ವಸ್ತುಗಳ ಬಗ್ಗೆಯೂ ಇಲ್ಲ. ಅದು ವಿಶೇಷವಾದಂತಹ ಕೆಲವು ಅಂಶಗಳಿಗೆ ಮಾತ್ರ ಸೀಮಿತ ಆಗಿವೆ. ಇದು ಏನನ್ನು ತಿಳಿಸುತ್ತದೆ: ಎಂದರೆ ಮಾನವನ ಸಾಂಸ್ಕೃತಿಕ ಜೀವನದಲ್ಲಿ ಅವನನ್ನು ಸೆರೆಹಿಡಿದ ಅಥವಾ ಸೆಳೆದ ಸಂಗತಿಗಳು ಐತಿಹ್ಯಗಳಿಗೆ ಕಾರಣ ಆಗಿವೆ. ಈ ರೀತಿ ಹೇಳುವುದು ಸಮಾಜವನ್ನು ಕುರಿತು ಆಗಿರಬಹುದು. ಪ್ರಕೃತಿಯನ್ನು ಕುರಿತು ಆಗಿರಬಹುದು. ಆಡಳಿತ ವ್ಯವಸ್ಥೆಯನ್ನು ಕುರಿತು ಆಗಿರಬಹುದು ಧಾರ್ಮಿಕವಾಗಿರಬಹುದು. ಅವು ಧಾರ್ಮಿಕವೆಂದಾಗ ಪುರಾಣವನ್ನು ಮುಂದುವರೆಸುವ ಅಥವಾ ಪುನರ್‌ಸೃಷ್ಟಿಸುವ, ಪುರಾಣದ ವಿಶಿಷ್ಟ ಗುಣಗಳನ್ನಷ್ಟೇ ಐತಿಹ್ಯ ಮಾಡುವ ಪ್ರಯತ್ನವನ್ನು ಮಾಡುತ್ತಿವೆ. ಉದಾಹರಣೆಗೆ ಸೀತೆಯ ಸೆರಗು ಮುಂತಾದವು.

ಐತಿಹಾಸಿಕವಾಗಿ ಐತಿಹ್ಯಗಳು ನೇರವಾಗಿ ಇತಿಹಾಸವನ್ನು ದಾಖಲಿಸುವ, ವಿಮರ್ಶಿಸುವ ಕೆಲಸಕ್ಕೆ ಹೋಗುವುದಿಲ್ಲ. ಇತಿಹಾಸದಲ್ಲಿ ಸೇರದ ಆದರೆ ಇತಿಹಾಸವಾಗಿರುವ ಸಂಗತಿಗಳನ್ನು ಅವು ಅವಲಂಬಿಸಿರುತ್ತವೆ. ಈ ನಿಲುವನ್ನು ಇತಿಹಾಸಕಾರರು ಅರೆ ಇತಿಹಾಸ ಅಥವಾ ಮಬ್ಬು ಇತಿಹಾಸ ಎನ್ನುತ್ತಾರೆ. ಇದು ಅವರಿಗೆ ಗಟ್ಟಿಯಾದ ಇತಿಹಾಸ ಆಗುವುದಿಲ್ಲ. ಆದರೆ ಐತಿಹ್ಯಕ್ಕೆ ಅದು ಇತಿಹಾಸ ಮತ್ತು ಮೂಲ. ಹೀಗಾಗಿ ಐತಿಹ್ಯ ಜನಪದ ಇತಿಹಾಸದ ದಾಖಲೆ ಮತ್ತು ಶಿಷ್ಟ ಇತಿಹಾಸದ ಪರಿಮಿತಿಗೆ ಒಂದು ಸವಾಲು ಎಂದು ನಾವು ಹೇಳಬಹುದು. ಐತಿಹ್ಯ ಸಂಸ್ಕೃತಿಯ ಸೃಷ್ಟಿಯಲ್ಲಿ ಪಾತ್ರವಹಿಸುವ ಒಂದು ಗುಣವನ್ನು ಸಹ ಹೊಂದಿದೆ. ಅದು ಜನಪದ ಸಂಸ್ಕೃತಿಗೆ ನಾಯಕರನ್ನು ಒದಗಿಸಬಹುದು. ಆ ನಾಯಕರು ಸಾಮಾನ್ಯ ವ್ಯಕ್ತಿಗಳಾಗಿರುವುದಿಲ್ಲ. ಅವರು ಪರಂಪರೆಯಲ್ಲಿ ಉಳಿಯುವಂಥವರಾಗಿದ್ದು, ಸಾಮಾನ್ಯ ಜನಪದರಿಗಿಂತ ವಿಶೇಷ ಶಕ್ತಿವಂತವಾಗಿದ್ದ ಅಥವಾ ಪ್ರತಿಭಾಶಾಲಿ ವ್ಯಕ್ತಿಯಾಗಿರುತ್ತಾನೆ.

ಅಂದರೆ ಕಲ್ಪನೆಯಲ್ಲ. ಏಕೆಂದರೆ ಕಲ್ಪನೆಗೂ ಕೂಡ ಒಂದು ವಸ್ತುಸ್ಥಿತಿ ಇರುತ್ತದೆ ಎಂಬುದು. ಹಾಗಾಗಿ ಕಲ್ಪನೆ ಭ್ರಮೆಯಲ್ಲ. ಅದರ ಮುಂದುವರಿಕೆ. ಈ ಗುಣ ಐತಿಹ್ಯದ ಪರಂಪರೆಯನ್ನು ಸದಾ ಜೀವಂತವಾಗಿಟ್ಟಿರುವಂತಹದ್ದು. ಆದ್ದರಿಂದಲೇ ಐತಿಹ್ಯಗಳು ಇವತ್ತಿಗೂ ಹುಟ್ಟಿಕೊಳ್ಳುತ್ತವೆ.

ಐತಿಹ್ಯದ ಗರ್ಭದೊಳಗಿರುವ `ಭೌತಿಕ ಸತ್ಯವು' ವಿಶ್ವದ ಮಾನವವರ್ಗ, ಪ್ರಾಣಿವರ್ಗ ಮತ್ತು ಸಸ್ಯವರ್ಗದ ಯಾವುದೇ ವಿಷಯಗಳನ್ನು ಕುರಿತಾಗಿರಬಹುದು. ಅಥವಾ ಈ ಮೂರರ ಹೊಕ್ಕು ಬಳಕೆಯಲ್ಲಿಯೆ ಹುಟ್ಟಬಹುದು. ಹೀಗಿರುವಾಗ ಭೌತಿಕ ಸತ್ಯದ ಅಥವಾ ಆಧಾರದ ನಿರೂಪಣೆ ವೈಜ್ಞಾನಿಕವಾಗಿದ್ದಂತೆ ಮೇಲ್ನೋಟಕ್ಕೆ ತೋಚಿದರೂ ಐತಿಹ್ಯದಲ್ಲಿ ಹಾಗಿರುವುದಿಲ್ಲ. ಅದು `ನಾಟಕೀಯ ಅತಿಮಾನುಷತೆ'ಯನ್ನು ಹೊಂದುತ್ತದೆ. ಇಲ್ಲವೆ ಅವಿಮರ್ಶಕ ತಿಳುವಳಿಕೆಯಿಂದಲೂ ಹೊಸ ರೂಪ ಪಡೆಯಬಹುದು. ಹೀಗೆ ಆದಾಗಲೂ ಐತಿಹ್ಯದ ನಿರೂಪಕ ಕೊಡುವ ಭೌತಿಕ ಆಧಾರವು ಕಣ್ಣೆದುರೇ ಇರುತ್ತದೆ. ಆ ಆಧಾರಕ್ಕೂ ನಿರೂಪಣೆಗೂ ವೈಜ್ಞಾನಿಕ ಸಂಬಂಧ ಇರುವುದಿಲ್ಲ. ಸುಸಂಬದ್ಧ ತರ್ಕ ಮಾತ್ರ ಇರುತ್ತದೆ. ಕಲ್ಲಿನಲ್ಲಿ ಒಂದೆರಡು ಗೆರೆ ಇದ್ದರೆ ಮಾತ್ರ ಅದು ಸೀತೆಯ ಸೆರಗಿನ ಗುರುತು ಎಂಬ ನಿರೂಪಣೆಯನ್ನು ಪಡೆದುಕೊಳ್ಳುತ್ತದೆ. ಐತಿಹ್ಯಗಳನ್ನು ವಾಸ್ತವತೆಯ ದೃಷ್ಟಿಯಿಂದ ಒಮ್ಮೊಮ್ಮೆ ಸಂದೇಹಿಸುತ್ತೇವೆ. ಆದರೆ ಜನ ಐತಿಹ್ಯಗಳನ್ನು ನೆಲ, ನೀರು, ಗಾಳಿಗಳಂತೆಯೇ ನಿಜ ಎಂದು ನಂಬುತ್ತಾರೆ ಮತ್ತು ಅವುಗಳನ್ನು ಒಮ್ಮೊಮ್ಮೆ ಆವೇಶಭರಿತ ಭಾಷೆಯಲ್ಲಿ ನಿರೂಪಿಸುತ್ತಾರೆ. ಸುಳ್ಳು ಎಂದು ಯಾರಾದರೂ ಪ್ರತಿವಾದಿಸಿದರೆ ಅವರಿಗೆ ಅಸಮಾಧಾನವಾಗುತ್ತದೆ. ಮನರಂಜನೆಗೆ ಐತಿಹ್ಯಗಳನ್ನು ಹೇಳುವುದಿಲ್ಲ. ಐತಿಹ್ಯ ಅನೇಕರಿಗೆ ಗೊತ್ತಿದ್ದರೂ ಅದನ್ನು ಚೆನ್ನಾಗಿ ಬಲ್ಲ ಒಂದಿಬ್ಬರು ವ್ಯಕ್ತಿಗಳು ಸರಿಯಾಗಿ ಹೇಳಬಲ್ಲರೆಂದು ಜನ ನಂಬಿದ್ದಾರೆ. ತಮಗೆ ಗೊತ್ತಿದ್ದರೂ, ತಮಗಿಂತ ಆ ನಿರ್ದಿಷ್ಟ ವ್ಯಕ್ತಿಗಳು ಅದನ್ನು ಹೇಳಲು ಅಧಿಕಾರಿಗಳು ಸಮರ್ಥರು ಎಂದು ಹೇಳುವುದು, ಆ ಕತೆಗಳು ನಿರೂಪಣೆಯ ಸಮಯದಲ್ಲಿ ವ್ಯತ್ಯಾಸವಾಗಬಾರದು ಎಂಬ ಎಚ್ಚರ ಜನರಲ್ಲಿರುವುದರ ಕುರುಹಾಗಿದೆ. ಐತಿಹ್ಯದ ಕತೆಗಳು ವ್ಯತ್ಯಾಸವಾಗಬಾರದು; ಏಕೆಂದರೆ ಅವು ನಡೆದದ್ದು `ನಿಜ'.

ತಾವು ಹೇಳಿದುದು ಹೌದೆಂಬುದಕ್ಕೆ ಕುರುಹಾಗಿ ಅದರ ನಿರೂಪಕರು ಇಂದು ಸಹ ತೋರಿಸುತ್ತಿರುವ ಕೆಲವೊಂದು ಅವಶೇಷ, ಪಳೆಯುಳಿಕೆ, ವಸ್ತು ಸ್ಥಳಗಳು ಅದು ಕೆರೆಯಾಗಿರಬಹುದು, ಕಟ್ಟೆಯಾಗಿರಬಹುದು, ಗುಡ್ಡವಾಗಿರಬಹುದು, ಹಿಂದಿನ ಕಾಲದ ವ್ಯಕ್ತಿಗಳು ಉಪಯೋಗಿಸುತ್ತಿದ್ದ ಉಡುಗೆ-ತೊಡುಗೆ, ಆಭರಣಗಳಾಗಿರಬಹುದು, ವೀರಪುರುಷರು ಬಳಸಿದ್ದ ಆಯುಧ-ಸಾಮಗ್ರಿಗಳಾಗಿರಬಹುದು. ಅಷ್ಟು ಮಾತ್ರವಲ್ಲ. ಕೆಲವೊಂದು ಸ್ಥಳನಾಮ, ಗಾದೆ, ಒಗಟು, ಪಡೆನುಡಿ-ನುಡಿಗಟ್ಟು, ನಂಬಿಕೆ, ಆಚರಣೆ ಇತ್ಯಾದಿಗಳು ನಿರ್ದಿಷ್ಟ ಘಟನೆಗಳು ಐತಿಹ್ಯಗಳಾಗಿ ಬಳಕೆಯಲ್ಲಿರುವುದುಂಟು. ಐತಿಹ್ಯಗಳು ಪ್ರಾಚೀನವಾದ

ಚಾರಿತ್ರಿಕ ಘಟನೆಗಳ ಪಳೆಯುಳಿಕೆಗಳು ಎಂಬಂತೆ ತೋರಿದರೂ ಎಲ್ಲವೂ ಹಾಗಿಲ್ಲ. ಕೆಲವು ಸ್ವಲ್ಪಮಟ್ಟಿಗೆ ಚಾರಿತ್ರಿಕ ಅಂಶವನ್ನು ಸೂಚಿಸಿದರೂ ಬಹಳಷ್ಟು ಕಾಲ್ಪನಿಕ ಅಂಶಗಳಿಂದ ಕೂಡಿದ್ದು ಆಕರ್ಷಕವಾಗಿರುತ್ತವೆ. ಕೆಲವೊಮ್ಮೆ ಇವುಗಳಲ್ಲಿ ಚಾರಿತ್ರಿಕ ಅಂಶವೆಷ್ಟು ಕಾಲ್ಪನಿಕ ಅಂಶವೆಷ್ಟು ಎಂಬುದನ್ನು ನಿರ್ಧರಿಸುವುದು ಕಷ್ಟವಾಗುತ್ತದೆ. ಸ್ವರೂಪದಲ್ಲಿ ಐತಿಹ್ಯಗಳು ತುಂಬಾ ಚಿಕ್ಕವಾಗಿದ್ದು, ಗದ್ಯಾತ್ಮಕವಾಗಿದ್ದು, ಒಂದು ಅಥವಾ ಎರಡು ಆಶಯಗಳ ವ್ಯಾಪ್ತಿಯನ್ನಷ್ಟೇ ಪಡೆದಿರುತ್ತವೆ. ವ್ಯಕ್ತಿ, ಸ್ಥಳ ಅಥವಾ ಘಟನೆಯೊಂದರ ವಿವರಣಾತ್ಮಕ ಕಥೆಗಳಾಗಿರುತ್ತವೆ. ಆದರೆ ಇವು ಸಂಪ್ರದಾಯ ಮೂಲದಿಂದ ಬಂದವುಗಳಾಗಿದ್ದು ಐತಿಹ್ಯಗಳ ವ್ಯಾಪ್ತಿಯನ್ನು ಪಡೆದಿರುತ್ತವೆ. ತಾವು ಹುಟ್ಟಿದ ನಿಸರ್ಗಕ್ಕೆ ಅಂಟಿಕೊಂಡಿರುವುದು ಐತಿಹ್ಯಗಳ ಮತ್ತೊಂದು ವಿಶಿಷ್ಟ ಲಕ್ಷಣ. (ಕನ್ನಡ ವಿಷಯ ವಿಶ್ವಕೋಶ, ೧೯೭೯: ಪು.೧೧೬) ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತ ತಲೆಮಾರುಗಳ ಮೂಲಕ ಹರಿದು ಬರುವಾಗ ಐತಿಹ್ಯ ಬಹುಶಃ ರೂಪುಗೊಂಡಿರಬಹುದು. ಅಂದರೆ ಐತಿಹ್ಯಗಳು ವ್ಯಕ್ತಿಗಳ, ಸ್ಥಳಗಳ ಅಥವಾ ಘಟನೆಗಳ ವಾಸ್ತವ ಅಥವಾ ತೋರಿಕೆಯ ನಂಬಿಕೆಗಳನ್ನೊಳಗೊಂಡ ಕಥನಗಳು. ಇವು ನಡೆದ ಘಟನೆಗಳ ಪಳೆಯುಳಿಕೆ ಎನ್ನಬಹುದು. ಹಾಗಾಗಿ ಐತಿಹ್ಯದ ವಸ್ತು ಸಮಗ್ರವಾಗಿ ಕಲ್ಪನಾತ್ಮಕವೆಂದು ಕರೆಯಬೇಕಾಗಿಲ್ಲ, ಕಲ್ಪನೆಗೆ ಆಧಾರ ಕೊಡುವ ಸತ್ಯಾಂಶಗಳೂ ಅಲ್ಲಿರುತ್ತವೆ. ಐತಿಹ್ಯಗಳು ಹುಟ್ಟಿ ಬೆಳೆದು ಬರುವುದಕ್ಕೆ ಹಲವಾರು ಕಾರಣಗಳನ್ನು ಗುರುತಿಸಬಹುದು. ಅವುಗಳೆಂದರೆ, ವಿವಿಧ ವೃತ್ತಿಗಳಿಗೆ ಸಂಬಂಧಿಸಿದ ಉಪಾಸನಾ ವಿಧಿಗಳು, ನಂಬಿಕೆ, ಸಂಪ್ರದಾಯಗಳು, ಮತ ಸಂಬಂಧವಾದ ಆಚರಣೆಗಳು ಐತಿಹ್ಯದ ಹುಟ್ಟಿಗೆ ಕಾರಣವಾಗಬಹುದು. ಕನಸುಗಳು, ಹಗಲುಗನಸುಗಳು, ಭ್ರಮೆಗಳು ಇಂಥವೇ ಮನೋವಿಕಾಸಗಳು ಐತಿಹ್ಯಗಳ ಜನನಕ್ಕೆ ಕಾರಣವಾಗುತ್ತವೆ.

ಪೌರಾಣಿಕ ವ್ಯಕ್ತಿಗಳು, ಘಟನೆಗಳಿಗೆ ಸಂಬಂಧಿಸಿದಂತೆಯೂ ಐತಿಹ್ಯಗಳು ಹುಟ್ಟಬಹುದು. ಹಾಗೆಯೇ ಐತಿಹಾಸಿಕ ವಿಷಯಕ್ಕೆ ಸಂಬಂಧಿಸಿದಂತೆಯೂ ಹೇರಳವಾಗಿ ಐತಿಹ್ಯಗಳು ಹುಟ್ಟಿಕೊಂಡಿರುವುದುಂಟು. ಪರಾಕ್ರಮಿಗಳ ಸಾಹಸವನ್ನು ಬಣ್ಣಿಸುವ, ಅವರ ತ್ಯಾಗ, ಸಾಹಸ, ಸತ್ಯಸಂಧತೆಯನ್ನು ಎತ್ತಿಹಿಡಿಯುವ ಘಟನೆಗಳನ್ನೊಳಗೊಂಡ ಐತಿಹ್ಯಗಳು ವಿಶೇಷವಾಗಿ ಕಂಡು ಬರುವುದುಂಟು. ಹಾಗೆಯೇ ಸಾಮಾಜಿಕ ವ್ಯವಸ್ಥೆಗಳು ತಾವು ಹೊಂದಿರುವ ಸತ್ಯ, ಧರ್ಮ, ನ್ಯಾಯ, ನೀತಿ, ತ್ಯಾಗ ಮೊದಲಾದ ಗುಣಗಳನ್ನು ಒಳಗೊಂಡಿರುವ ಹಾಗೂ ಕಟ್ಟಿದ ಕೆರೆ, ಕಟ್ಟೆ, ಕೋಟೆಗಳು ಸ್ಥಿರವಾಗಿ ನಿಲ್ಲಲು ತಮ್ಮನ್ನು ತಾವೇ ಬಲಿಕೊಟ್ಟುಕೊಂಡಿರುವುದಕ್ಕೆ ಸಂಬಂಧಿಸಿದಂತೆ ಐತಿಹ್ಯಗಳು ಹುಟ್ಟಿಕೊಂಡಿರುವುದುಂಟು. ಗುಪ್ತನಿಧಿಯ ಬಗೆಗೆ ಸಂಬಂಧಿಸಿದಂತೆಯೂ ಐತಿಹ್ಯಗಳಿರುವುದುಂಟು. ಸ್ಥಳನಾಮಗಳಿಗೆ ಸಂಬಂಧಿಸಿದ ಐತಿಹ್ಯಗಳು ಜಗತ್ತಿನಾದ್ಯಂತ ವ್ಯಾಪಕವಾಗಿ ಹರಡಿವೆ. ಆ ಐತಿಹ್ಯಗಳು

ಯಾತಾರ್ಥವಾಗಿರಬಹುದು ಇಲ್ಲವೆ ಕಾಲ್ಪನಿಕವಾಗಿರಬಹುದು. ಹಾಗೆಯೇ ಭೂತಾರಾಧನೆಗೆ ಸಂಬಂಧಿಸಿದಂತೆಯೂ ಐತಿಹ್ಯಗಳಿರುವುದುಂಟು. ರಾಕ್ಷಸರು, ಪ್ರೇತಗಳು, ವನದೇವತೆ, ಜಲದೇವತೆಯರಿಗೆ ಸಂಬಂಧಿಸಿದಂತೆಯೂ ಐತಿಹ್ಯಗಳಿರುವುದುಂಟು. ರಾಕ್ಷಸರು, ಪ್ರೇತಗಳು, ವನ ಮತ್ತು ಜಲದೇವತೆಯರಿಗೆ ಸಂಬಂಧಿಸಿದಂತೆ ಯುರೋಪಿನಲ್ಲಿ ಬಹಳಷ್ಟು ಐತಿಹ್ಯಗಳನ್ನು ಕಾಣಬಹುದು. ಆದರೆ ಐತಿಹ್ಯಗಳು ಹಲವಾರು ಪವಾಡ ಸದೃಶವಾದ, ಅದ್ಭುತ ಅಂಶಗಳನ್ನೇ ವಿವರಿಸಿದರೂ ವಾಸ್ತವಿಕಾಂಶದ ಬೀಜಾಂಶ ಅಲ್ಲಿ ಇದ್ದೇ ಇರುತ್ತದೆ ಎಂಬುದನ್ನು ಕಡೆಗಣಿಸುವಂತಿಲ್ಲ.

ಐತಿಹ್ಯಗಳ ವಸ್ತು, ತಂತ್ರ, ಸ್ವರೂಪ ಮತ್ತು ಶೈಲಿಗಳು ತುಂಬ ಸಂಕೀರ್ಣವಾಗಿರುವುದರಿಂದ ಅವುಗಳನ್ನು ವರ್ಗೀಕರಣ ಮಾಡುವುದು ಕಷ್ಟಕರವಾಗುತ್ತದೆ. ಆದರೂ ಪಾಶ್ಚಾತ್ಯ ದೇಶಗಳಲ್ಲಿ ಕೆಲವರಾದರೂ ಐತಿಹ್ಯಗಳನ್ನು ಅಧ್ಯಯನದ ಸೌಕರ್ಯಕ್ಕೋಸ್ಕರ ವರ್ಗೀಕರಿಸಿಕೊಂಡಿದ್ದಾರೆ. ಐತಿಹ್ಯವನ್ನು ವರ್ಗೀಕರಿಸಿದ ಪಾಶ್ಚಿಮಾತ್ಯ ಜಾನಪದತಜ್ಞರಲ್ಲಿ ರಾಲ್ಫ್ ಸ್ಟೀಲ್ ಬಾಗ್ಸ್ ಎಂಬುವರು ಪ್ರಮುಖರು. ಅವರು ಲೆಜೆಂಡನ್ನು ಮುಖ್ಯವಾಗಿ ಏಳು ವರ್ಗಗಳಲ್ಲಿ ವಿಂಗಡಿಸಿಕೊಂಡು, ಪ್ರತಿಯೊಂದರೊಳಗೂ ಮತ್ತೆ ಉಪವರ್ಗಗಳನ್ನು ಗುರುತಿಸಿಕೊಂಡಿದ್ದಾರೆ.[೧೪]

೧. **ಅತಿಮಾನುಷ ವರ್ಗ** : ದೇವದೂತರು. ದಿವ್ಯಪುರುಷರು. ಯಕ್ಷ-ಯಕ್ಷಿಣಿ. ಪಿಶಾಚಿ. ಸೈತಾನ. ರಾಕ್ಷಸ ಇತ್ಯಾದಿ.

೨. **ಮಾನವ ವರ್ಗ** : (ಅ) ಏಸು, ವರ್ಜಿನ್, ಬೈಬಲ್ಲಿನಲ್ಲಿನ ಪಾತ್ರಗಳು, ಸನ್ಯಾಸಿಗಳು, ಸಂತರು ಮೊದಲಾದ ಧಾರ್ಮಿಕ ಪುರುಷರು. (ಆ) ಚಾರ್ಲ್ ಮಾನೆ, ವರ್ಜಿಲ್. ಸಿಡ್, ಜಾನ್‌ಹೆನ್ರಿ-ಮುಂತಾದ ಲೌಕಿಕ ವೀರರು. (ಇ) ರಾಬಿನ್‌ಹುಡ್. ಜೆಸ್ಸಿಜೇಮ್ಸ್, ಕ್ಯಾಪ್ಟನ್ ಕಿಡ್-ಮೊದಲಾದ ದೇಶಭ್ರಷ್ಟ ಅಪರಾಧಿ - ಡಕಾಯಿತ - ಕಡಲುಗಳ್ಳರು. (ಈ) ಮೋಹಿನಿ, ಮಾಟಗಾತಿ (ಮಾಟಗಾರ) ಮುಂತಾದವರು. (ಉ) ದೈತ್ಯ, ನರಭಕ್ಷಕ ಮನುಷ್ಯ, ಕುಬ್ಜ-ಮೊದಲಾದ ವಿಕಾರ ರೂಪಿಗಳು. (ಊ) ಗೂನುಬೆನ್ನಿನ ವ್ಯಕ್ತಿ, ಹೆಳವ, ಕುರುಡ, ಕಿವುಡ, ಮೂಗ, ಉನ್ಮತ್ತರಂತಹ ಅಂಗವಿಕಲರು. (ಎ) ದೇಹದ ವಿವಿಧ ಅಂಗಗಳು.

೩. **ಪ್ರಾಣಿ ವರ್ಗ** : (ಅ) ಸಸ್ತನಿ (ಆ) ಪಕ್ಷಿ (ಇ) ಕ್ರಿಮಿ-ಕೀಟ (ಈ) ಮೀನು.

೪. **ಆಕಾಶ ಕಾಯಗಳು** : ಸೂರ್ಯ, ಚಂದ್ರ, ಗ್ರಹ, ತಾರೆ, ಧೂಮಕೇತು ಇತ್ಯಾದಿ.

೫. **ಪ್ರಕೃತಿದತ್ತ ವಸ್ತು-ಅಂಶಗಳು**: ಗಾಳಿ, ಹವೆ, ಬೆಂಕಿ - ಇತ್ಯಾದಿ.

೬. ಭೂಮಿ : (ಅ) ಔಜುನೆಲ, ಕಾಡು, ಪರ್ವತ, ಕಣಿವೆ, ಗುಹೆ, ದ್ವೀಪ ಮೊದಲಾದವುಗಳ ರಚನೆಯ ವೈಶಿಷ್ಟ್ಯ. (ಆ) ಖನಿಜ (ಇ) ಸಸ್ಯ (ಈ) ಮನುಷ್ಯ ಅಥವಾ ಪ್ರಾಣಿಯ ಹುಟ್ಟು ಅಥವಾ ಚಟುವಟಿಕೆ, ಕಣ್ಮರೆಯಾದ ನಗರ, ಪಾಳುಬಿದ್ದ ಮನೆ, ಸುಡುಗಾಡು, ಗುಪ್ತನಿಧಿ - ಇತ್ಯಾದಿ. (ಉ) ವ್ಯಕ್ತಿ ಅಥವಾ ಸ್ಥಳದ ಹೆಸರಿನ ವಿವರಣೆ.

೭. ನೀರು : (ಅ) ತಟಸ್ಥ ನೀರು: ೧) ಸಾಗರ-ಸಮುದ್ರಗಳಂತಹ ಬೃಹತ್ ವ್ಯಾಪ್ತಿಯುಳ್ಳವು. ೨) ಸರೋವರ ಹೊಂಡಗಳಂತಹ ಕಿರಿಯ ನೀರಿನ ನೆಲೆಗಳು. ೩) ಬಾವಿ - ಕೊಳಗಳಂತಹ ಮಾನವ ನಿರ್ಮಿತ ನೀರಿನ ನೆಲೆಗಳು.

(ಆ) ಹರಿಯುವ ನೀರು: ೧) ನದಿ, ಹೊಳೆಗಳಂತಹ ಬೃಹತ್ ಪ್ರವಾಹಗಳು. ೨) ತೊರೆ, ನೀರಿನ ಬುಗ್ಗೆಗಳಂತಹ ಸಣ್ಣ ಪ್ರವಾಹಗಳು. ೩) ಕಾಲುವೆ, ಕಾರಂಜಿಗಳಂತಹ ಮನುಷ್ಯ ನಿರ್ಮಿತ ಪ್ರವಾಹಗಳು. ಹೀಗೆ ಬಾಗ್ಸ್ ಅವರು ವರ್ಗಆಧಾರದ ಮೇಲೆ ಐತಿಹ್ಯಗಳನ್ನು ವರ್ಗೀಕರಿಸಿದ್ದಾರೆ.

**ಗ್ರೀಮ್ ಸಹೋದರರು ಐತಿಹ್ಯಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಿದ್ದಾರೆ :**

೧. ಸ್ಥಳೀಯ ಐತಿಹ್ಯಗಳು - Local Legends ೨. ವಿವರಣಾತ್ಮಕ ಐತಿಹ್ಯಗಳು - Etiological Legends ೩. ಚಾರಿತ್ರಿಕ ಐತಿಹ್ಯಗಳು - Historical Legends[೨೫]

ಈ ವರ್ಗೀಕರಣ ತುಂಬಾ ಸ್ಥೂಲವಾಗಿರುವುದು ಮೇಲ್ನೋಟಕ್ಕೆ ಕಾಣುವ ವಿಚಾರ. ಇದರಲ್ಲಿ ಮೊದಲಿನ ವರ್ಗೀಕರಣವೇನೋ ಸಮರ್ಪಕವಾಗಿದೆ. ಆದರೆ ಎರಡನೆಯದಾದ 'ವಿವರಣಾತ್ಮಕ ಐತಿಹ್ಯ'ಗಳು ಮೊದಲಿನದರಲ್ಲಿ ಇಡಿಯಾಗಿ ಸೇರಿ ಹೋಗುತ್ತದೆ. ಬಹುತೇಕ ಜನಪದ ನಿರುಕ್ತಿಗಳು ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗಿದ್ದು, ಆ ಊರಿನ ವೈಶಿಷ್ಟವನ್ನು ಸಾರುತ್ತವೆ. ಇವುಗಳನ್ನು ಹೊರತುಪಡಿಸಿದರೆ 'ಕೇವಲ ಸ್ಥಳೀಯವು' ಅನ್ನುವುದು ಉಳಿಯುವುದೇ ಇಲ್ಲ. ಮೂರನೆಯದಾಗಿ (ಚಾರಿತ್ರಿಕ ಐತಿಹ್ಯಗಳು ಮೊದಲಿನ ಎರಡು ವಿಭಜನೆಗಳಲ್ಲಿರುವ) ಚಾರಿತ್ರಿಕಾಂಶಗಳನ್ನೇ ಪ್ರಶ್ನಿಸಿಬಿಡುತ್ತದೆ. ಚರಿತ್ರೆಗೆ ನೇರವಾಗಿ ಸಂಬಂಧಿಸಿದೆ ಎನ್ನುವಾಗಲೂ ಅದು ಒಂದು ಪ್ರದೇಶಕ್ಕೆ ಬದ್ಧವಾಗಿರುತ್ತದೆ. ಈ ಕಾರಣಕ್ಕೆ ಗ್ರೀಮ್ ಸಹೋದರರ ವರ್ಗೀಕರಣವು ಸಾಕಷ್ಟು ಗೊಂದಲಕಾರಿಯಾಗಿದೆ. ಹಾಗೆ ನೋಡಿದರೆ ಎಲ್ಲಾ ಐತಿಹ್ಯಗಳನ್ನು 'ಸ್ಥಳೀಯ ಐತಿಹ್ಯ'ಗಳೆಂದೇ ಕರೆಯಬಹುದು.

ಅಂತರರಾಷ್ಟ್ರೀಯ ವಿಚಾರಸಂಕಿರಣದಲ್ಲಿ ಐತಿಹ್ಯಗಳನ್ನು ಈ ನಾಲ್ಕು ಭಾಗಗಳಾಗಿ ವರ್ಗೀಕರಿಸಿದ್ದಾರೆ.[೨೬] ಅವುಗಳೆಂದರೆ : ೧. ವಿವರಣಾತ್ಮಕ ಮತ್ತು ಅಂತಿಮಗತಿಶಾಸ್ತ್ರದ ಐತಿಹ್ಯಗಳು

(Etilogical Erchalogical Legends). ೨. ಚಾರಿತ್ರಿಕ ಐತಿಹ್ಯಗಳು ಮತ್ತು ನಾಗರಿಕತೆಯ ಚರಿತ್ರೆಗೆ ಸಂಬಂಧಿಸಿದ ಐತಿಹ್ಯಗಳು (Historical legends and legends of the history of civilzation). ೩. ಅತಿಮಾನುಷ ಶಕ್ತಿಗಳ ಅಥವಾ ಪೌರಾಣಿಕ ಐತಿಹ್ಯಗಳು (Super Natural beings and Force or Mythical legends). ೪. ಧಾರ್ಮಿಕ ಐತಿಹ್ಯಗಳು ಅಥವಾ ದೇವರುಗಳ ಮತ್ತು ನಾಯಕರುಗಳ ಪುರಾಣಗಳು (Religious legends or Myths of Gods and Heroes).

"ಈ ವಿಭಜನೆಯ ತಳದಲ್ಲಿ ಕ್ರೈಸ್ತ ತಾತ್ವಿಕತೆಯೊಂದು ಕೆಲಸ ಮಾಡಿದೆ. ಮೊದಲ ವಿಭಜನೆಯಲ್ಲಿ ಬರುವ ಅಂತಿಮಗತಿಶಾಸ್ತ್ರವು ಮಾನವ ಜೀವನದ ಅಂತಿಮಘಟ್ಟದಲ್ಲಿ ಬರುವ ಸಾವು, ತೀರ್ಪು ಮತ್ತು ಸ್ವರ್ಗನರಕಗಳಿಗೆ ಸಂಬಂಧಿಸಿದೆ. ಎರಡನೆಯ ವಿಭಜನೆಯು ಗೊಂದಲವನ್ನು ಹುಟ್ಟು ಹಾಕುತ್ತದೆ. ಚರಿತ್ರೆಯು ತನ್ನ ಪರಿಸರದ ಎಲ್ಲವನ್ನು ಒಳಗೊಂಡು ಪ್ರಬುದ್ಧವಾಗಿದೆ. ಚರಿತ್ರೆಯ ಕ್ರಿಯಾಶೀಲತೆಯ ಹಿಂದೆ ಗುರುತರ ಶಕ್ತಿಯಾದ ಆರ್ಥಿಕ ಚಟುವಟಿಕೆಗಳಿದ್ದು, ಅದು ಅಂತಿಮಗತಿಶಾಸ್ತ್ರದ ತಾತ್ತ್ವಿಕತೆಯನ್ನು ರೂಪಿಸಿದೆ. ಮೂರು ಮತ್ತು ನಾಲ್ಕನೆಯ ವಿಭಜನೆಯಲ್ಲಿ ವ್ಯತ್ಯಾಸ ಇಲ್ಲ. ಪುರಾಣ ಪುರುಷರಿಗೆ ಅತಿಮಾನುಷ ಶಕ್ತಿಗಳು ಪ್ರಾಪ್ತವಾಗುತ್ತವೆ. ಅವರೇ ದೇಶದ ಧಾರ್ಮಿಕ ಚಿಂತನೆಯ ಕೇಂದ್ರಗಳಾಗುತ್ತಾರೆ. ಸಾಮಾಜಿಕ ನಾಯಕರುಗಳು ಪುರಾಣ ಪುರುಷರ ಆಕೃತಿ ಪಡೆಯುತ್ತಾರೆ. ಏನಿದ್ದರೂ ಈ ವಿಭಜನೆ ಯುರೋಪಿನ ಚಿಂತನೆಯನ್ನು ಆಧರಿಸಿದ್ದು, ಭಾರತದಂತಹ ದೇಶಕ್ಕೆ ಅನ್ವಯವಾಗುವುದಿಲ್ಲ."

**ಅಮೇರಿಕಾದ ಜಾನಪದ ವಿದ್ವಾಂಸರು** ಅಲ್ಲಿ ಪ್ರಚಲಿತವಾಗಿರುವ ಐತಿಹ್ಯಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಿದ್ದಾರೆ : ೧. ಜನಪದ ಐತಿಹ್ಯಗಳು (Folk Legends) ೨. ಜನಪ್ರಿಯ ಐತಿಹ್ಯಗಳು (Popular legends) ೩. ಸಾಹಿತ್ಯಿಕ ಐತಿಹ್ಯಗಳು (Literary Legends).

**ರಿಚರ್ಡ್ ಡಾರಸನ್** ಐತಿಹ್ಯಗಳನ್ನು ಸ್ವಲ್ಪಮಟ್ಟಿಗೆ ವೈಜ್ಞಾನಿಕವಾಗಿ ವರ್ಗೀಕರಿಸಿದ್ದಾರೆ. ಅವರು ತಮ್ಮ ವರ್ಗೀಕರಣಕ್ಕೆ ಮೂಲ ಮಾನದಂಡವಾಗಿ ಐತಿಹ್ಯದ ವಸ್ತುವನ್ನು ಮುಖ್ಯವಾಗಿಸಿಕೊಂಡಿದ್ದಾರೆ. ವಸ್ತುವಿನ ನಿರ್ವಹಣೆಯಲ್ಲಿ ಇತರ ವಸ್ತುಗಳು ಸೇರಿಕೊಂಡರೂ ಸಹ ವಸ್ತುವು ಮುಖ್ಯವಾಗಿ ಒಬ್ಬ ವ್ಯಕ್ತಿ, ಒಂದು ಸ್ಥಳ ಅಥವಾ ಒಂದು ಘಟನೆಗೆ ಸಂಬಂಧಿಸಿರುತ್ತದೆ. ಅವುಗಳೆಂದರೆ : ೧. ವ್ಯಕ್ತಿ ಐತಿಹ್ಯಗಳು (Legend deal with persons) ೨. ಸ್ಥಳೈತಿಹ್ಯಗಳು (Legend deal with places) ೩. ಘಟನಾ ಐತಿಹ್ಯಗಳು (Legend deal with Events) - (ಈ ವರ್ಗೀಕರಣದ ಹಿನ್ನೆಲೆಯಲ್ಲಿ ಸ್ಟಿಥ್ ಥಾಂಸನರ್ ಕಲ್ಪನೆಯಿರುವುದನ್ನು ಕಾಣಬಹುದು).

**ಕನ್ನಡ ವಿಶ್ವಕೋಶದಲ್ಲಿ** ಐತಿಹ್ಯಗಳನ್ನು ಅವುಗಳು ಹೊಂದಿರುವ ವಸ್ತುವಿನ ದೃಷ್ಟಿಯಿಂದ ಹೀಗೆ ವರ್ಗೀಕರಿಸಲಾಗಿದೆ : ೧) ಸೃಷ್ಟಿ ಅಥವಾ ಜಗತ್ತಿನ ಮೂಲವನ್ನು ಕುರಿತಾದ ವಿವರಣಾತ್ಮಕ ಐತಿಹ್ಯಗಳು. ೨) ಅತಿಮಾನುಷ ವ್ಯಕ್ತಿಗಳ ಕುರಿತ ಐತಿಹ್ಯಗಳು. ೩) ಐತಿಹಾಸಿಕ ಅಥವಾ ಮಿಥ್ಯೈತಿಹಾಸಿಕ ಐತಿಹ್ಯಗಳು. (ವಿಶ್ವಕೋಶ ಸಂ.೩, ೧೯೭೧, ಪು.೨೫೭) ಅದೇ ವಿಶ್ವಕೋಶದಲ್ಲಿ ಐತಿಹ್ಯಗಳನ್ನು ಅವುಗಳ ವಿತರಣೆಯ ದೃಷ್ಟಿಯಿಂದ - ೧) ಸ್ಥಳೀಯ ಐತಿಹ್ಯಗಳು ೨) ವಲಸೆಯ ಐತಿಹ್ಯಗಳು ಎಂದು ವರ್ಗೀಕರಿಸಿ, ಸ್ಥಳೀಯ ಐತಿಹ್ಯಗಳನ್ನು ಮತ್ತೆ ಹಲವು ಭಾಗಗಳಾಗಿ ವರ್ಗೀಕರಿಸಿದ್ದಾರೆ :

೧) ಪ್ರವಾಹ ಐತಿಹ್ಯ
೨) ಬಲಿಕೊಡುವ ಐತಿಹ್ಯ
೩) ಕೌಟುಂಬಿಕ ಐತಿಹ್ಯ
೪) ಚಾರಿತ್ರಿಕ ಐತಿಹ್ಯ
೫) ನಿಕ್ಷೇಪದ ಐತಿಹ್ಯ
೬) ಗಡಿಪಾರಿಗೆ ಸಂಬಂಧಿಸಿದ ಐತಿಹ್ಯ
೭) ಜನಪದ ನಿರುಕ್ತಿಗೆ ಸಂಬಂಧಿಸಿದ ಐತಿಹ್ಯ
೮) ವಿವರಣಾತ್ಮಕ ಐತಿಹ್ಯ
೯) ಸ್ಮಾರಕ ಐತಿಹ್ಯ
೧೦) ಮತಾನುಚರಣೆಯ ಐತಿಹ್ಯ
೧೧) ಮೂಢಾಚರಣೆಯ ಐತಿಹ್ಯ
೧೨) ಸ್ವಪ್ನಾನುಭವದ ಐತಿಹ್ಯ

**ಜವರೇಗೌಡ ದೇ.** ಐತಿಹ್ಯಗಳನ್ನು ಎರಡು ಬಗೆಗಳಲ್ಲಿ ವರ್ಗೀಕರಿಸಿದ್ದಾರೆ : ೧) ಸ್ಥಳೀಯ ಅಥವಾ ಪ್ರಾದೇಶಿಕ ಐತಿಹ್ಯ ೨) ಪ್ರವಾಸೀ ಐತಿಹ್ಯ[೧೯] ಈ ವರ್ಗೀಕರಣದ ಪ್ರವಾಸಿ ಐತಿಹ್ಯವನ್ನು ಸಂಚಾರಿ ಅಥವಾ ವಲಸೆಯ ಐತಿಹ್ಯವೆಂದು ಹೆಸರಿಸಬಹುದು. ಸ್ಥಳೀಯ ಐತಿಹ್ಯಗಳು ಸ್ವರೂಪದಲ್ಲಿ ಸಣ್ಣವಿರುತ್ತವೆ. ಅವುಗಳಲ್ಲಿ ಆಶಯಗಳು ಕಡಿಮೆ. ಅವು ನಿರ್ದಿಷ್ಟ ಪ್ರದೇಶಕ್ಕೆ (ಸ್ಥಳಕ್ಕೆ) ಸೀಮಿತಗೊಂಡಿರುತ್ತವೆ. ತಮ್ಮ ಸೃಷ್ಟಿಯ ಸೀಮೆಯನ್ನು ದಾಟಿ, ಸ್ವದೇಶ-ವಿದೇಶಗಳಲ್ಲೆಲ್ಲಾ ಹಬ್ಬುವ ಐತಿಹ್ಯಗಳು ಪ್ರವಾಸಿ ಐತಿಹ್ಯಗಳಾಗುತ್ತವೆ. ಹೀಗೆ ಊರಿಂದೂರಿಗೆ ಸಂಚರಿಸುವ ಸಂದರ್ಭದಲ್ಲಿ ಇವುಗಳಲ್ಲಿಯ ಆಶಯಗಳು ಸಂಕೀರ್ಣಗೊಳ್ಳುವುದೂ, ಅದರಿಂದಾಗಿ ಗಾತ್ರ ವಿಸ್ತಾರವಾಗುವುದು ಸ್ವಾಭಾವಿಕ.

**ತಾಳ್ತಜೆ ವಸಂತಕುಮಾರ** ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳನ್ನು ಮೂರು ರೀತಿಯಿಂದ ವಿಭಜಿಸಿಕೊಂಡಿದ್ದಾರೆ. ೧) ವ್ಯಕ್ತಿ ಪ್ರಧಾನ ಐತಿಹ್ಯಗಳು ೨) ಸ್ಥಳ ಪ್ರಧಾನ ಐತಿಹ್ಯಗಳು ೩) ಘಟನಾ ಪ್ರಧಾನ ಐತಿಹ್ಯಗಳು. ಇವರು ಡಾರ್‍ಸನನ ವರ್ಗೀಕರಣವನ್ನೇ ಆಶ್ರಯಿಸಿದ್ದಾರೆ.

ಮೇಲಿನ ವರ್ಗೀಕರಣಗಳ ಮಾದರಿಗಳನ್ನು ಗಮನಿಸಿದಾಗ ಕನ್ನಡದ ಸಂದರ್ಭದಲ್ಲಿ ಸಮರ್ಪಕವಾದ ಒಂದು ವರ್ಗೀಕರಣವು ನಮಗೆ ಗೋಚರಿಸುವುದು ಕಷ್ಟಕರವೆನಿಸುತ್ತದೆ. ಆದರೂ ಸಹ ಕನ್ನಡ ವಿಶ್ವಕೋಶ ವಿತರಣೆಯ ದೃಷ್ಟಿಯಿಂದ ವರ್ಗೀಕರಿಸಿದ ವರ್ಗೀಕರಣ ನಮಗೆ ಮಾದರಿಯಾಗಬಹುದು.

೧) **ಸ್ಥಳೀಯ ಐತಿಹ್ಯಗಳು :** ಯಾವ ಐತಿಹ್ಯ ಒಂದು ನಿರ್ದಿಷ್ಟ ಭೌಗೋಳಿಕ ಪರಿಸ್ಥಿತಿಗೆ ಸೀಮಿತಗೊಂಡು ಹುಟ್ಟಿದೆಯೋ ಅಥವಾ ರೂಪುಗೊಂಡಿದೆಯೋ ಅದನ್ನು ಸ್ಥಳೀಯ ಐತಿಹ್ಯ ಎಂದು ಕರೆಯುತ್ತಾರೆ. ಇದು ಸ್ಥಳೀಯ ವಸ್ತು, ವ್ಯಕ್ತಿ ಅಥವಾ ಘಟನೆಯ ವಿಶಿಷ್ಟ ಗುಣಸ್ವಭಾವಗಳನ್ನು ವಿವರಿಸುವುದಾಗಿರುತ್ತದೆ. ಆಗ ಅದು ಒಂದು ಭೌಗೋಳಿಕ ಪರಿಸರದ ಬಗ್ಗೆಯೇ ಹೇಳಬಹುದು. ವ್ಯಕ್ತಿಯ ಹೆಸರಿನ ಬಗ್ಗೆಯೆ ಹೇಳಬಹುದು. ಸ್ಥಳೀಯ ಸಂಪ್ರದಾಯ ಅಥವಾ ಪರಂಪರೆಯನ್ನು ಕುರಿತು ಕೂಡಾ ಈ ಬಗೆಯ ಐತಿಹ್ಯಗಳು ಹೇಳುತ್ತವೆ. ಸ್ಥಳೀಯ ಐತಿಹ್ಯಗಳ ವಿಶಿಷ್ಟ ಗುಣವೆಂದರೆ : ಸ್ಥಳೀಯವಾಗಿರುವುದು, ಸ್ಥಳೀಯ ವಿವರಣೆಯನ್ನು ಬಳಸಿಕೊಳ್ಳುವುದು, ಅದೇ ವಸ್ತುವನ್ನು ಪುನರುಕ್ತಿ ಮಾಡುವುದು ಆಗಿರುತ್ತದೆ. ಇವು ಜಗತ್ತಿನಾದ್ಯಂತ ಕಂಡುಬಂದರೂ ಮತ್ತೆ ಮತ್ತೆ ಅದೇ ವಸ್ತುವಿನ ಮೇಲೆ ಪುನರುಕ್ತಿ ಹೊಂದಿದರು, ಅವು ರಚನೆ ಮತ್ತು ಸ್ವಭಾವದಲ್ಲಿ ಸ್ಥಳೀಯವೇ ಆಗಿರುತ್ತವೆ. ಸ್ಥಳೀಯ ಐತಿಹ್ಯಗಳು ವಿವರಣೆಯಲ್ಲಿ ರಮ್ಯಕತೆ, ಮನರಂಜನಾಕತೆ ಮತ್ತು ಪ್ರಾಣಿಕತೆಗಳ ಜೊತೆಗೆ ಜೈವಿಕ ಸಂಬಂಧವನ್ನು ಹೊಂದಿದೆ. ಇವು ವಿವರಣೆಯ ರಮ್ಯತೆಯಲ್ಲಿ ಒಂದಾದರೂ ಕೂಡ ವಸ್ತು ಸ್ವೀಕಾರ ಮತ್ತು ಬೆಳವಣಿಗೆಯಲ್ಲಿ ಬೇರೆ ಬೇರೆಯೇ ಆಗಿರುತ್ತವೆ. ಆದರೆ ಇವುಗಳ ಹುಟ್ಟಿಗೆ ಕಾರಣ ಹುಡುಕುವುದು ಸುಲಭ ಸಾಧ್ಯವಿಲ್ಲ. ಅಥವಾ ಒಂದು ಮೂಲವನ್ನು ಕೂಡಾ ಹೇಳಲು ಆಗುವುದಿಲ್ಲ. ಬಹುಮೂಲಗಳೇ ಇವುಗಳ ಹುಟ್ಟು ಬೆಳವಣಿಗೆಗಳನ್ನು ನಿರ್ಧರಿಸುವಂತಹ ಅಂಶಗಳಾಗಿವೆ.

ಮುಖ್ಯವಾಗಿ ಸ್ಥಳೀಯ ಐತಿಹ್ಯಗಳು ಸ್ಥಳೀಯತೆಗೆ ಬದ್ಧವಾದವು. ಈ ಸ್ಥಳೀಯ ಬದ್ಧತೆ ಅಥವಾ Local fixty ಸ್ಥಳೀಯ ಐತಿಹ್ಯಗಳ ನಿರ್ಧಾರಾತ್ಮಕ ಗುಣ ಆಗಿದೆ. ಹಾಗೆಯೇ ಸ್ಥಳೀಯ ಐತಿಹ್ಯಗಳು ವಿವರಣಾತ್ಮಕ ಕಥೆಗಳಾಗಿದ್ದರೂ ಸಂಕ್ಷಿಪ್ತವಾಗಿರುತ್ತವೆ. ಅಲೆಕ್ಸಾಂಡರ್ ಎಚ್. ಕ್ರಾಪೆ ಹೇಳುವ ಹಾಗೆ 'Local legends are brief, there motives few and forever recurring' ಇಲ್ಲಿ ಐತಿಹ್ಯ ಆಗುವ ತುಡಿತ ಸಾಮಾನ್ಯವಾಗಿ ಒಂದು ಪ್ರಾದೇಶಿಕ ಸ್ವಭಾವದ ಮೇಲೆ ಕೆಲಸ ಮಾಡುತ್ತದೆ. ಅದು ಕಲ್ಪನೆಯಲ್ಲಿ ಎಷ್ಟೇ ವಿಶಾಲವಾಗಿದ್ದರೂ, ವಸ್ತು ಗ್ರಹಿಕೆಯಲ್ಲಿ ಸ್ಥಳೀಯತೆಯನ್ನೇ ಅವಲಂಬಿಸಬೇಕು. ಪ್ರಪಂಚದ ಬಹುಭಾಗಗಳ ಸ್ಥಳೀಯ ಐತಿಹ್ಯಗಳನ್ನು ಅಧ್ಯಯನ ಮಾಡಿದ ವಿದ್ವಾಂಸರ ಪ್ರಕಾರ, ಅಂತರಾಷ್ಟ್ರೀಯವಾಗಿ ಕಂಡುಬರುವ ಈ ಐತಿಹ್ಯಗಳು ಸ್ಥಳೀಯವಾಗಿ ರೂಪುಗೊಳ್ಳುವ ವಿಶಿಷ್ಟ ಕ್ರಮ. ಇಂತಹ ಐತಿಹ್ಯಗಳನ್ನು ಸಂಗ್ರಹ ಮಾಡಿದ ಕೆಲವು ದೇಶದವರು ಹೀಗೆ ಐತಿಹ್ಯಗಳು ಮಾನವನ ಮನಸ್ಸಿನ ಸಾಮಾನ್ಯ ಬಯಕೆಗಳಲ್ಲಿ ಕಂಡು ಸ್ಥಳೀಯ ಐತಿಹ್ಯಗಳಲ್ಲಿ ಪಡಿ ಮೂಡುತ್ತವೆ ಎಂಬುದನ್ನು ತಿಳಿಸಿದ್ದಾರೆ. ಯಾವುದೇ ದೇಶದಲ್ಲಿ ವಿಚಿತ್ರ ದೃಷ್ಟಿಗೆ ಅವಗಾಹನೆಗೆ, ಅನುಭವಕ್ಕೆ ಕಾರಣವಾಗುವಂತಹ ವಸ್ತುಗಳು ಇವೆ. ಅವು ಸ್ಥಳೀಯತೆಯಲ್ಲಿ ತಮ್ಮ ಅಭಿವ್ಯಕ್ತಿಯನ್ನು ಕಂಡುಕೊಳ್ಳುವಾಗ ವಿಶಿಷ್ಟ ರೂಪವನ್ನು

ತೋರುತ್ತವೆ. ಉದಾ : ಅದ್ಭುತವಾದ ಕಲ್ಲುಬಂಡೆ, ಕೊಳ ಅಥವಾ ಕೋಟೆ, ಅರಮನೆ, ಕೆಲವು ಗುರುತಿಸಿದ ಸ್ಥಳಗಳು, ಮುಳುಗಿಹೋದ ನಗರದ ಬಗ್ಗೆಯ ಕಲ್ಪನೆ, ವಲಸೆ, ಕೆಳಜಗತ್ತಿನ ತಿಳುವಳಿಕೆ, ಗೋಪುರಗಳು, ಶಿಖರಗಳ ನಾಶ, ಗುಡ್ಡಬೆಟ್ಟಗಳ ಹುಟ್ಟು, ನಗರ-ಹಳ್ಳಿ ಇವುಗಳ ವಾಸದ ವೈಶಿಷ್ಟ್ಯ ಇತ್ಯಾದಿ ವಿಶಿಷ್ಟಾಂಶಗಳಾಗಿ ಸ್ಥಳೀಯ ಐತಿಹ್ಯದಲ್ಲಿ ಪಡಿ ಮೂಡುತ್ತವೆ.

ಸ್ಥಳೀಯ ಐತಿಹ್ಯಗಳಿಗೆ ಸ್ವಷ್ಟಾಕೃಕತೆ, ಸ್ಥಳೀಯತೆ ಮತ್ತು ವಿವರಣಾತ್ಮಕತೆ ಇವು ಮೂರು ಪ್ರಬಲವಾದ ಅಂಶಗಳಾಗಿ, ಅವಾಸ್ತವತೆಯ ಕಡೆಗೆ ಆಕರ್ಷಿತವಾಗುವುದಿಲ್ಲ. ಎಲ್ಲಾ ದೊಡ್ಡ ಕಲ್ಪನೆಗಳನ್ನು ತಮ್ಮಲ್ಲೇ ಕಲ್ಪಿಸಿಕೊಳ್ಳುತ್ತವೆ. ಇವು ಮಾನವನ ಅನುಭವಕ್ಕೆ ಸಾಖ್ಯವಾಗುವಷ್ಟರ ಮಟ್ಟಗಿನ ಕಲ್ಪನೆಯನ್ನು ಒಳಗೊಳ್ಳುತ್ತವೆ. ಕೆರೆಕುಂಟೆ, ಕೊಳ್ಳ, ಗುಡ್ಡ, ಕಾಡು, ಬೆಟ್ಟ, ಮುರಿದು ಹೋದ ಅರಮನೆ, ಪ್ರವಾಹ, ರಾಕ್ಷಸರು ಹೋರಾಡಿದಂತದ್ದು, ಕುಂತಿಬೆಟ್ಟ, ಒಡೆದ ದೊಡ್ಡ ಬಂಡೆ, ದೊಡ್ಡ ದೊಡ್ಡ ಸೌಧಗಳ ತಳಹದಿಗೆ ಸಂಬಂಧಿಸಿದ್ದು, ಮುಳುಗಿಹೋದ ಪಟ್ಟಣ, ಹಳ್ಳಿ, ನಗರ ಇವುಗಳ ಹುಟ್ಟು ಇವೆಲ್ಲಾ ಸ್ಥಳೀಯ ಐತಿಹ್ಯಗಳಲ್ಲಿ ಮೂಡುತ್ತವೆ. ಸ್ಥಳೀಯ ಐತಿಹ್ಯದ ಗುಣಗಳೆಂದರೆ, ಸಂಕ್ಷಿಪ್ತ ಮತ್ತು ವಸ್ತುಗಳು ಪರಿಮಿತವಾಗಿರುತ್ತವೆ, ಆದರೆ ಅವು ಆಗಾಗ ಪುನರುಕ್ತಿಗೊಳ್ಳುತ್ತಿರುತ್ತವೆ. ಇವುಗಳಲ್ಲಿ ಒಂದೇ ಒಂದು ಆಶಯ ಅಥವಾ ತುಂಬಾ ಕಡಿಮೆ ಆಶಯಗಳಿರುತ್ತವೆ. ಬೇರೆ ಗದ್ಯ ಕಥನಗಳಿಗೆ ಹೋಲಿಸಿದರೆ ಅಲ್ಲಿ ಘಟನೆಗಳು ಮತ್ತು ಅದಕ್ಕೆ ಪೂರಕವಾದ ಇತರ ವಿವರಗಳು ಕೂಡಾ ಇರುತ್ತವೆ. ಸ್ಥಳೀಯ ಐತಿಹ್ಯದ ಇನ್ನೊಂದು ವಿಶೇಷವೆಂದರೆ ಘಟನಾತ್ಮಕವಾಗಿಯೇ ಹುಟ್ಟಿ ಆ ಘಟನೆಯನ್ನು ವಿವರಿಸುವಂಥದ್ದಾಗಿರುತ್ತದೆ. ಅಂದರೆ ಘಟನೆ ಮತ್ತು ವಿವರ ಒಂದಕ್ಕೊಂದು ಪೂರಕವಾದಂತಹ ಸಂಗತಿಗಳಾಗಿದ್ದು ಐತಿಹ್ಯದ ಪ್ರಮಾಣಗಳು ಘಟನೆಗಳನ್ನು ಕುರಿತು ಹೇಳುವುದೇ ಐತಿಹ್ಯದ ಪರಮ ಉದ್ದೇಶವಾಗಿರುತ್ತದೆ. ಸಾಮಾನ್ಯವಾಗಿ ಘಟನೆಗಳು ಬಂದಾಗ ಕಥನ ಸಂಕೀರ್ಣಗೊಳ್ಳುವುದುಂಟು. ಹೆಚ್ಚು ಘಟನೆಗಳು ಇಲ್ಲಿ ಬರದೇ ಇರುವುದರಿಂದ ಐತಿಹ್ಯಗಳ ರಚನೆ ಸರಳವಾಗಿರುತ್ತದೆ. ಯಾವುದೇ ಸಂಕೀರ್ಣತೆಯನ್ನು ಸಾಂಕೇತಿಕತೆಯನ್ನು ತರುವುದು ಇಲ್ಲಿನ ಉದ್ದೇಶ ಆಗಿರುವುದಿಲ್ಲ.

ಸ್ಥಳೀಯ ಐತಿಹ್ಯಗಳಿಗೆ ಹುಟ್ಟುವ ಬೆಳೆಯುವ ಗುಣ ಇದೆ. ಸಮಾಜ ಅವುಗಳನ್ನು ತುಂಬಾ ಅಪೇಕ್ಷೆ ಮಾಡುತ್ತದೆ. ಅವು ಆ ಕಾರಣಕ್ಕೆ ಒತ್ತಡಗಳಾದರೂ ಕೂಡಾ ಒತ್ತಾಯಗಳಲ್ಲ. ಸರಳವಾಗಿ ಹುಟ್ಟಿಕೊಂಡು ಸರಳವಾದ ಸತ್ಯಗಳನ್ನಷ್ಟೇ ಹೇಳುವಂತಹ ಸ್ವರೂಪ ಅವುಗಳದು. ಒಂದು ಧಾರ್ಮಿಕ ಚೌಕಟ್ಟಿನೊಳಗೆ ಒಂದು ಸಂಸ್ಕೃತಿಯ ಚೌಕಟ್ಟಿನೊಳಗೆ ಇವು ಹುಟ್ಟುವಂತೆ ಆಚೆ ಕೂಡಾ ಇರಬಹುದು. ಸಂಸ್ಕೃತಿ ಮತ್ತು ಧರ್ಮದೊಳಗೆ ಹುಟ್ಟುವಂತಹ ಐತಿಹ್ಯಗಳು ನೀತಿಪ್ರಧಾನವಾಗಿರುತ್ತವೆ. ಒಂದು ಸಂಸ್ಕೃತಿಯು ಸಂಪ್ರದಾಯ, ನೀತಿ ಪದ್ಧತಿಗಳನ್ನು ಹುಟ್ಟು ಹಾಕುವಂತಹವೋ, ಹೊಗಳುವಂತಹವೋ

ಆಗಿರುತ್ತವೆ. ಭೂತ, ಪ್ರೇತ, ನಂಬಿಕೆ ಮತ್ತು ನಡವಳಿಕೆಯನ್ನು ಒಳಗೊಂಡಂತೆ ಐತಿಹ್ಯಗಳು ಇರುತ್ತವೆ. ಬಹುಮುಖ್ಯವಾದಂತಹ ಸ್ಥಳೀಯ ಐತಿಹ್ಯಗಳ ಗುಣವೆಂದರೆ ಸ್ಥಳದಲ್ಲಿ ಇರುವುದು ಮತ್ತು ಅದೇ ಸ್ವರೂಪದ ಹೊಸ ವಸ್ತುಗಳಿಗೆ ಅನ್ವಯವಾಗಿರುವುದು. ಆದರೆ ಸ್ಥಳೀಯ ಐತಿಹ್ಯಗಳು ಎಂದೆಂದೂ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಲಾರವು. ಹಾಗೆ ಸ್ಥಳದ ಮಿತಿಯಿಂದ ಹೊರತಾದ ಐತಿಹ್ಯವು ಸಂಚಾರಿ ಅಥವಾ ವಲಸೆ ಐತಿಹ್ಯವೆನಿಸುತ್ತದೆ.

**೨) ವಲಸೆ ಐತಿಹ್ಯಗಳು :** ಇವುಗಳು ಸ್ಥಳೀಯ ಐತಿಹ್ಯಗಳಿಗಿಂತ ವಿಸ್ತೃತವಾಗಿರುತ್ತವೆ, ಕಥೆಗಳಿಗಿಂತ ಸ್ವರೂಪದಲ್ಲಿ ಚಿಕ್ಕದಾಗಿರುತ್ತವೆ. ಸ್ಥಳೀಯ ಐತಿಹ್ಯಗಳಿಗಿಂತ ಹೆಚ್ಚಿನ ಆಶಯಗಳನ್ನು ಒಳಗೊಂಡಿದ್ದು, ಉದ್ದೇಶಿತ ಗುರಿಯನ್ನು ಹೊಂದಿರುತ್ತವೆ. ಇಲ್ಲಿ ಆಶಯಗಳೇ ವಲಸೆಗೆ ಮುಖ್ಯ ಕಾರಣಗಳಾಗಿರುತ್ತವೆ. ಇವು ಒಂದು ಘಟನೆಯನ್ನೊಳಗೊಂಡಿದ್ದು, ನಂತರ ಆಶಯಗಳು ಘಟನೆಗೆ ಪೂರಕವಾಗಿ ಸೇರುತ್ತವೆ. ಸ್ಥಳೀಯ ಐತಿಹ್ಯಗಳಿಗಿಂತ ವಲಸೆ ಐತಿಹ್ಯಗಳಲ್ಲಿ Variant (ವೈವಿಧ್ಯತೆ) ಇರುತ್ತದೆ. ಐತಿಹಾಸಿಕ ಘಟನೆ ಇರುವುದೇ ಈ Variantsಗೆ ಕಾರಣ. ವಲಸೆ ಐತಿಹ್ಯದ ಬಹುಮುಖ್ಯ ಗುಣವೆಂದರೆ, ವಲಸೆ ಹೋಗುವಂಥದ್ದು. ಇಲ್ಲಿ ವ್ಯಕ್ತಿಗಳು ವಲಸೆ ಹೋಗುವ ಗುಣವನ್ನು ಆಧಾರವಾಗಿಟ್ಟುಕೊಂಡು ವಲಸೆ ಐತಿಹ್ಯದ ಗುಣವನ್ನು ವಿವರಿಸುತ್ತೇವೆ. ಇಂಥ ವಲಸೆಯ ಕಲ್ಪನೆಯನ್ನು ಐತಿಹ್ಯದ ಪ್ರಕಾರಕ್ಕೆ ಅನ್ವಯಿಸಿರುವುದು ಆಶ್ಚರ್ಯದ ಸಂಗತಿ ಎನಿಸುತ್ತದೆ. ಏಕೆಂದರೆ ಜಾನಪದ ಸಾಮಗ್ರಿಗಳ ತಿಳುವಳಿಕೆಯಲ್ಲಿ ಅವು ಬಹುಮೂಲದಲ್ಲಿ ಹುಟ್ಟುತ್ತವೆ. ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುತ್ತವೆ ಎನ್ನುವ ಅಭಿಪ್ರಾಯ ಕೂಡಾ ಇದೆ. ಹೀಗೆ ಭಾಷೆ-ಸಂಸ್ಕೃತಿಯ ಗಡಿಯನ್ನು ದಾಟಿ ಜಾನಪದ ಅಂಶಗಳು ಆಯಾ ದೇಶದ ಆಯಾ ಭಾಷೆಯ ಮತ್ತು ಸಂಸ್ಕೃತಿಯ ಗುಣಗಳನ್ನು ಪಡೆದುಕೊಳ್ಳುತ್ತವೆ. ಸ್ವರೂಪದ ವಿಷಯಕ್ಕ ಬಂದಾಗ ಪ್ರಪಂಚದಾದ್ಯಂತ ಇವುಗಳ ಸ್ವರೂಪದಲ್ಲಿ ಅಂತಹ ವ್ಯತ್ಯಾಸಗಳು ಕಂಡುಬರುವುದಿಲ್ಲ. ಇಂತಹ ಜಾನಪದ ಅಂಶಗಳ ವಲಸೆಯನ್ನು ನಾವು ಅವುಗಳ ಗುಣಗಳಲ್ಲಿ ಒಂದು ಎಂದು ಹೇಳುತ್ತೇವೆ. ಆದರೆ ವಲಸೆ ಹೋಗುವುದರ ಮೂಲಕವೇ ಅಥವಾ ವಲಸೆ ಗುಣವನ್ನೇ ಆಧಾರವಾಗಿಟ್ಟುಕೊಂಡಂಥ ಐತಿಹ್ಯಗಳು ಇತರ ಐತಿಹ್ಯಗಳಿಗಿಂತ ಭಿನ್ನವಾಗಿರುತ್ತವೆ ಎನ್ನುವುದು ಐತಿಹ್ಯಗಳ ಚಿಂತನೆಗೆ ಮೀಸಲಾದ ಕಲ್ಪನೆಯಾಗಿ ಕಂಡುಬರುತ್ತದೆ.

ಐತಿಹ್ಯಗಳಿಗೆ ಮೂಲಭೂತವಾಗಿ ನಡೆದ ಘಟನೆ ಮತ್ತು ಕಲ್ಪನೆಗಳು ಸೇರಿಕೊಂಡಿರುತ್ತವೆಂಬುದು ನೈಜ ಸಂಗತಿ. ಆದ್ದರಿಂದ ಐತಿಹ್ಯವು ಸ್ಥಳೀಯತೆಯೊಂದಿಗೆ ಸೃಜನಾತ್ಮಕ ಗುಣವನ್ನು ಒಳಗೊಂಡಿರುತ್ತದೆ. ವಲಸೆ ಐತಿಹ್ಯವು ಕೂಡಾ ಇದೇ ಗುಣವನ್ನು ಹೊಂದಿರುತ್ತದೆ. ಪ್ರತ್ಯೇಕ ಚಿಂತನೆಗೆ ಅರ್ಹವಾಗುವಂತಹ ಸಂಗತಿ ಆಗಿದ್ದರೆ ಅದು ಗುಣಾತ್ಮಕವಾಗಿ ಸ್ಥಳೀಯ ಐತಿಹ್ಯಕ್ಕಿಂತ ಹೇಗೆ ಭಿನ್ನ ಎನ್ನುವುದನ್ನು

ಗಮನಿಸಿದರೆ ಈ ಮೂರು ಅಂಶಗಳು ಸ್ಪಷ್ಟವಾಗುತ್ತವೆ. ೧) ಇದು ಒಂದು ಐತಿಹ್ಯ. ಐತಿಹ್ಯದ ಮೂಲ ಗುಣಗಳನ್ನು ಆಧರಿಸಿದ್ದು. ೨) ಇದು ಸ್ಥಳೀಯ ಅಲ್ಲದ್ದು. ಒಂದು ದೇಶ ಅಥವಾ ಪ್ರದೇಶದ ಸ್ಥಳಕ್ಕೆ ಆಧಾರವಾಗದೇ ಇರುವಂತಹದ್ದು. ೩) ಇದು ವಲಸೆ ಹೋಗುವಂತಹದ್ದು. ಇದು ಏಕೆ ವಲಸೆ ಹೋಗುತ್ತದೆ. ಹಾಗೂ ವಲಸೆ ಹೋಗುವುದರ ಮೂಲಕವೇ ಹೇಗೆ ಪ್ರತ್ಯೇಕ ಆಗುತ್ತದೆ ಎಂಬುದನ್ನು ಹೇಳಲಾಗುವುದಿಲ್ಲ. ಥಿಯೋಡ್‌ರ ಬೆನ್ಫೆಯ ಭಾರತೀಯ ಮೂಲಸಿದ್ಧಾಂತದಲ್ಲಿ ಈ ಸಂಬಂಧವಾಗಿ ಕೆಲವು ಸೂಚನೆಗಳು ಲಭಿಸುತ್ತವೆ. ಭಾರತ ಮೂಲದ ಕಥೆಗಳು, ವ್ಯಾಪಾರಿಗಳು-ಯಾತ್ರಿಕರ ಮೂಲಕ ದೇಶದಾಚೆಗೂ ಪ್ರಸರಣ ಹೊಂದಿದವೋ, ಹಾಗೆಯೇ ಐತಿಹ್ಯಗಳ ವಲಸೆಯೂ ಆಗಿರಬಹುದು ಎಂಬ ಅಭಿಪ್ರಾಯವಿದೆ. ಆದರೆ ವಲಸೆ ಐತಿಹ್ಯದ ಗುಣಗಳನ್ನು ಗಮನಿಸಿದರೆ ಅದು ವ್ಯಾಪಾರಿಗಳು ಮತ್ತು ಯಾತ್ರಿಕರ ಜೊತೆಗೆ ಸುಲಭವಾಗಿ ಪ್ರಯಾಣ ಮಾಡಬಹುದಾದ ಸಂಗತಿ ಅಲ್ಲವೆನಿಸುತ್ತದೆ. ಏಕೆಂದರೆ ಇದೊಂದು ವಿಶೇಷ ಶ್ರದ್ಧೆಯ ಉತ್ಪತ್ತಿಯಾಗಿರುವುದರಿಂದ ತಾತ್ಕಾಲಿಕ ಮಾಧ್ಯಮಗಳ ಮೂಲಕ ವಲಸೆ ಹೋಗುತ್ತದೆಂದು ಹೇಳುವಲ್ಲಿ ಯೋಚಿಸಬೇಕಾಗುತ್ತದೆ. ಹಾಗೆಯೇ ಧಾರ್ಮಿಕ ಕಾರಣಗಳಿಂದಾಗಿಯೇ ಐತಿಹ್ಯವು ಪ್ರಸರಣ ಹೊಂದುತ್ತದೆಂದು ನಿಖರವಾಗಿ ಹೇಳಲು ಆಗುವುದಿಲ್ಲ.

ನಾವು ಪೌರಾಣಿಕ ಮತ್ತು ಪಾರಂಪರಿಕ ಸಂಸ್ಕೃತಿಯ ವಿಶ್ಲೇಷಣೆಗೆ ತೊಡಗಿದರೆ ಇಲ್ಲಿ ಸಣ್ಣ ಪ್ರಮಾಣದ ವಲಸೆ ಐತಿಹ್ಯಗಳು ಕಂಡುಬರುತ್ತವೆ. ಭಾರತೀಯ ಮೂಲದಲ್ಲಿ ಚಂದ್ರಹಾಸನ ಕಥೆ ಇದಕ್ಕೊಂದು ಉತ್ತಮ ಉದಾಹರಣೆ. ಇದು ಭಾರತಕ್ಕೆ ಮಾತ್ರವಲ್ಲ ಪ್ರಪಂಚದ ಬೇರೆ ಕಡೆ ಕೂಡಾ ಕಂಡುಬರುತ್ತದೆ. ಹಾಗೆಯೇ ಪಾರಂಪರಿಕ ಸಂಸ್ಕೃತಿಯಲ್ಲಿ ಇಂತಹ ಕೆಲವು ಐತಿಹ್ಯಗಳು ಬೇರೆ ಕಡೆಗೆ ಹೋಗಿರುವುದಕ್ಕೆ ದಾಖಲೆಗಳಿವೆ. ಆದರೆ ಇಂಥ ಐತಿಹ್ಯಗಳು ಕಡಿಮೆಯೆಂದೇ ಹೇಳಬಹುದು. ವಲಸೆ ಐತಿಹ್ಯದ ರೂಪ ಮತ್ತು ರೀತಿ ಒಂದು ನಿಶ್ಚಿತ ಧೋರಣೆ ಮತ್ತು ಕಾರ್ಯಕ್ಕೆ ಬದ್ಧವಾಗಿದೆ. ಆದರೆ ವಿವರಣೆಯ ಸಾಮಗ್ರಿ ಮಾತ್ರ ದೇಶ, ಭಾಷೆ ಮತ್ತು ಸಂಸ್ಕೃತಿಯನ್ನು ಅವಲಂಬಿಸಿ ಬದಲಾಗುತ್ತದೆ. ಕೆಲವೊಮ್ಮೆ ಐತಿಹ್ಯದ ಮೂಲ ಏನು, ಎಲ್ಲಿ ಎಂಬುದು ಗೊತ್ತಾಗದಂತೆ ಸ್ಥಳೀಯ ಅಂಶಗಳು ಅದನ್ನು ಆವರಿಸುತ್ತವೆ. ಇಷ್ಟಾದರೂ ಕೂಡಾ ಆ ಐತಿಹ್ಯದ ಮೂಲಗುಣವನ್ನು ಹುಡುಕಿದರೆ ಅದರ ಸಾಂಸ್ಕೃತಿಕ ನೆಲೆ ಯಾವುದೆಂಬುದನ್ನು ಗುರುತಿಸಬಹುದು. ಇದರಿಂದ ನಮಗೆ ಎರಡು ಅಂಶಗಳು ಸ್ಪಷ್ಟವಾಗುತ್ತವೆ. ಮೊದಲನೆಯದು ಎಲ್ಲಾ ಜಾನಪದ ಅಂಶಗಳ ಬೇಡಿಕೆಗಳ ಹಾಗೆ ವಲಸೆ ಐತಿಹ್ಯ ಕೂಡಾ ಒಂದು ಬೇಡಿಕೆಯಾಗಿದೆ. ಎರಡನೆಯದು ರಮ್ಯಕಥೆ ಹಾಗೂ ಕಟ್ಟುಕಥೆಗಳ ರೀತಿಯಲ್ಲಿ ಇದೊಂದು ಸಾರ್ವತ್ರಿಕ ಬೇಡಿಕೆಯಾಗಿದೆ. ಬಹಳಷ್ಟು ವಲಸೆ ಐತಿಹ್ಯಗಳು ಶಿಷ್ಟಧರ್ಮದ ಮನೋಭಾವ ಮತ್ತು ಶಿಷ್ಟೀಕರಣದ ಪ್ರವೃತ್ತಿಗೊಳಪಟ್ಟಿರುವುದು ಕಂಡುಬರುತ್ತದೆ. ಆದರೆ ಅವುಗಳ ಮೂಲಧೋರಣೆ ಜಾನಪದೀಯ ಎನ್ನುವುದರಲ್ಲಿ ಅನುಮಾನವೇ ಇಲ್ಲ.

ಪ್ರಸ್ತುತ ಅಧ್ಯಯನದಲ್ಲಿ ಕೋಲಾರ ಜಿಲ್ಲೆಯ ಐತಿಹ್ಯಗಳನ್ನು ೧. ಸ್ಥಳೈತಿಹ್ಯಗಳು ೨. ವ್ಯಕ್ತಿ ಹಾಗೂ ಸಮುದಾಯ ಐತಿಹ್ಯಗಳು ೩. ಘಟನಾ ಐತಿಹ್ಯಗಳೆಂದು ಪ್ರಧಾನವಾಗಿ ವರ್ಗೀಕರಿಸಿಕೊಳ್ಳಲಾಗಿದೆ.

## ಕರ್ನಾಟಕದಲ್ಲಿ ಐತಿಹ್ಯಗಳ ಅಧ್ಯಯನದ ಆರಂಭ

ಐತಿಹ್ಯಗಳಿಗೆ ಹೋಲಿಸಿದರೆ, ಕರ್ನಾಟಕದ ಜಾನಪದ ಅಧ್ಯಯನ ವಲಯದಲ್ಲಿ ಕಥೆ, ಗೀತೆ, ಗಾದೆ, ಒಗಟುಗಳ ಕುರಿತು ನಡೆದ ಮಾಹಿತಿ ಸಂಗ್ರಹಣೆಯಾಗಲಿ, ಅಧ್ಯಯನಗಳಾಗಲಿ ಯಥೇಚ್ಛ ಅಥವಾ ಹೇರಳವಾಗಿ ನಡೆದಿವೆ-ನಡೆಯುತ್ತಿವೆ ಎನ್ನಬಹುದು. ಕರ್ನಾಟಕದಲ್ಲಿ ಜಾನಪದ ಅಧ್ಯಯನಕ್ಕೆ ಅಡಿಗಲ್ಲು ಹಾಕಿದವರು ವಿದೇಶೀ ವಿದ್ವಾಂಸರೇ ಆಗಿದ್ದರೂ ಅವರೆಲ್ಲರ ಸಂಗ್ರಹಗಳು ಅಧ್ಯಯನಗಳು ಕಥೆ, ಗೀತೆ, ನಂಬಿಕೆ, ಗಾದೆ, ಸಂಪ್ರದಾಯ ಆಚರಣೆಗಳ ಬಗ್ಗೆ ವಿಸ್ತೃತ ರೂಪ ಪಡೆದಿವೆ. ಆದರೆ ಐತಿಹ್ಯಗಳ ಸಂಗ್ರಹ ಆನುಷಂಗಿಕವಾಗಿ ಆಚರಣೆಗಳ ಹಿನ್ನೆಲೆಯಲ್ಲಿಯೋ ಸಮುದಾಯಗಳ ಮೂಲದ ಹುಡುಕಾಟದಲ್ಲಿಯೋ ದಾಖಲಾಗಿವೆಯೇ ಹೊರತು ನೇರ ಅಥವಾ ಸ್ವತಂತ್ರ ಅಧ್ಯಯನಗಳು ಅತಿ ಕಡಿಮೆಯೆಂದೇ ಹೇಳಬೇಕು. ಜನಪದ ಸಾಹಿತ್ಯದ ಪ್ರಕಾರಗಳನ್ನು ವಕ್ತೃಗಳಿಂದ ಸಂಗ್ರಹಿಸುವಾಗ ವಕ್ತೃ ಮುಖ್ಯವಾದಷ್ಟು ಸ್ಥಳ ಮುಖ್ಯವೆನಿಸುವುದಿಲ್ಲ. ಆದರೆ ಐತಿಹ್ಯಗಳನ್ನು ನಿರೂಪಿಸುವಾಗ ನಿರೂಪಕ ಮತ್ತು ಕೇಳುಗನಿಗಿಂತ ನಿರೂಪಣೆಗೆ ಆಧಾರವಾಗುವ ಸ್ಥಳ ಮುಖ್ಯವಾಗುತ್ತದೆ. ವ್ಯಕ್ತಿ, ಘಟನೆ ಮತ್ತು ಸ್ಥಳ ಈ ಮೂರನ್ನು ಕುರಿತ ಐತಿಹ್ಯಗಳನ್ನು ನಿರೂಪಿಸುವಾಗಲೂ ಸ್ಥಳವೊಂದನ್ನು ಆಧಾರವಾಗಿ ತೋರಿಸಿ ನಿರೂಪಿಸುವುದರ ಮೂಲಕವೇ ಐತಿಹ್ಯಕ್ಕೆ ಮಹತ್ವ ದೊರೆಯುತ್ತದೆ. ಹಾಗೂ ಐತಿಹ್ಯವನ್ನು ಕೇಳಿಸಿಕೊಳ್ಳುವುದರೊಂದಿಗೆ ಅದನ್ನು ಸಾಬೀತು ಮಾಡುವ ಮೌಖಿಕ ಆಧಾರಗಳು ನಿರ್ದಿಷ್ಟ ಸ್ಥಳ, ಪ್ರದೇಶದ ವ್ಯಾಪ್ತಿಗೆ ಒಳಪಟ್ಟಿರುತ್ತವೆ. ಆದ್ದರಿಂದ ಐತಿಹ್ಯಗಳನ್ನು ದಾಖಲಿಸಿಕೊಳ್ಳುವುದು ಇತರೆ ಜನಪದ ಸಾಹಿತ್ಯ ಪ್ರಕಾರಗಳನ್ನು ದಾಖಲಿಸಿದಷ್ಟು ಸುಲಭವಾಗುವುದಿಲ್ಲ.

ಕರ್ನಾಟಕದಲ್ಲಿ ಪಾಶ್ಚಾತ್ಯ ವಿದ್ವಾಂಸರು ಆರಂಭಿಸಿದ ಜನಪದ ಸಾಹಿತ್ಯದ ಆಕರಗಳ ಸಂಗ್ರಹಣೆ ಹಾಗೂ ಜಾನಪದ ಅಧ್ಯಯನದ ವ್ಯಾಪ್ತಿಯಲ್ಲಿ ಐತಿಹ್ಯ ಮಾಹಿತಿಗಳನ್ನು ದಾಖಲಿಸಿದವರೆಂದರೆ ಕೆ. ಮೆಕೆಂಜ್. ೧೭೯೨ ರಿಂದ ೧೮೧೬ ರವರೆಗೆ ಈತ ಕೈಫಿಯತ್ತುಗಳನ್ನು ಬರೆಸಿದ. ಈ ಸಂದರ್ಭಗಳಲ್ಲಿ ಪೂರಕವಾಗಿ ಕೈಫಿಯತ್ತುಗಳಲ್ಲಿ ಶಾಸನಗಳು, ಐತಿಹಾಸಿಕ ವಿವರಗಳು, ಐತಿಹ್ಯ, ಸ್ಥಳನಾಮಗಳು, ಅರಸು ಮನೆತನಗಳು, ಭೌಗೋಳಿಕ ಪರಿಚಯ ಹೀಗೆ ಎಲ್ಲ ವಿವರಗಳನ್ನು ಒಳಗೊಂಡ ದಾಖಲೆಗಳನ್ನಾಗಿ ರೂಪಿಸಿದ. ಮತ್ತೊಬ್ಬ ವಿದ್ವಾಂಸ ಬುಕ್‌ನ್ಯಾಕ್ ಟಿಪ್ಪುವಿನ ಪತನದ ನಂತರ ಆತನ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶಗಳಲ್ಲಿ ತಾನು ಕಂಡು ಕೇಳಿದ ಮಾಹಿತಿಗಳನ್ನು ಸಂಗ್ರಹಿಸಿದ್ದಾನೆ. ಇವುಗಳಲ್ಲಿ ಕೃಷಿ, ವಾಣಿಜ್ಯ, ಕಲೆ, ಧರ್ಮ, ಆಚರಣೆಗಳು ಇತಿಹಾಸ ಮತ್ತು ಪ್ರಾಚೀನ ಪಳೆಯುಳಿಕೆಗಳ ಬಗೆಗೆ ಮಾಹಿತಿಗಳನ್ನು ದಾಖಲಿಸಿದ್ದಾನೆ. ಇಲ್ಲಿಯೂ ಆಚರಣೆಗಳು ಹಾಗೂ ಪ್ರಾಚೀನ ಪಳೆಯುಳಿಕೆಗಳಿಗೆ ಪೋಷಕವೆಂಬಂತೆ

ಐತಿಹ್ಯಗಳು ದಾಖಲಾಗಿವೆ. ಹಾಗೆಯೇ ಅಬ್ಬೆಡುಬೋಯ ಎನ್ನುವ ಇನ್ನೊಬ್ಬ ವಿದ್ವಾಂಸ ಟಿಪ್ಪು ಪತನದ ನಂತರದ ಶ್ರೀರಂಗಪಟ್ಟಣ ಹಾಗೂ ಹಾಸನದ ಶೆಟ್ಟಿಹಳ್ಳಿಗಳ ಕ್ಷೇತ್ರಕಾರ್ಯದಲ್ಲಿ ದಕ್ಷಿಣ ಭಾರತದ ಹಿಂದೂಗಳ ನಡತೆ, ಆಚಾರ, ಸಂಪ್ರದಾಯಗಳ ದಾಖಲೆಗಳನ್ನು ನೀಡುವಲ್ಲಿ ಅವುಗಳಿಗೆ ಆಧಾರವಾಗಿ ಹೇಳುವ ಐತಿಹ್ಯ ವಿವರಗಳನ್ನು ನೀಡಿದ್ದಾನೆ.

ತುಳು ಜಾನಪದ ಅಧ್ಯಯನ ಕ್ಷೇತ್ರದಲ್ಲಿ ತೊಡಗಿದ ಎಂ.ಜೆ.ವಾಲ್‌ಹೌಸ್ ೧೮೭೫, ರೆ.ಎ.ಮ್ಯಾನರ್, ಎ.ಸಿ.ಬರ್ನಲ್ ಅವರ ಸಂಗ್ರಹಗಳಲ್ಲಿ ಪಾಡ್ದನಗಳು ಭೂತಾರಾಧನೆಗಳ ಸಂಪನ್ನವಿರುವ ಸಮುದಾಯಗಳ ಸಂಬಂಧದ ಹಿನ್ನೆಲೆಯಲ್ಲಿ ಐತಿಹ್ಯಗಳು ದಾಖಲಾಗಿವೆ. ಇನ್ನೂ ಆಧುನಿಕ ಯುಗದಲ್ಲಿ ಅಂದರೆ ಸ್ವಾತಂತ್ರ್ಯಾನಂತರ ದೇಶೀಯ ವಿದ್ವಾಂಸರ ಅಧ್ಯಯನಗಳಲ್ಲೂ ಐತಿಹ್ಯಗಳ ಅಧ್ಯಯನ ಪ್ರತ್ಯೇಕವಾಗಿ ನಡೆದಂತೆ ಅಷ್ಟಾಗಿ ಕಂಡುಬರುವುದಿಲ್ಲ. ಗಮನೀಯವಾಗಿ ನಡೆದ ಅಧ್ಯಯನಗಳನ್ನು ಪ್ರತ್ಯೇಕವಾಗಿ ನಿರೂಪಿಸಿದ್ದೇನೆ. ಮತ್ತೆ ತುಳನಾಡಿನ ಸಂಸ್ಕೃತಿಗೆ ಸಂಬಂಧಿಸಿದಂತೆ ದಕ್ಷಿಣ ಕನ್ನಡ ಜಿಲ್ಲೆಯ ತುಳುವ ಸಂಸ್ಕೃತಿಯನ್ನು ಶೋಧಿಸಿದ ಡಾ.ಪೀಟರ್ ಜೆ.ಕ್ಲಾಸ್ ೧೯೮೭ರಲ್ಲಿ ಭಾರತಕ್ಕೆ ಬಂದು ತುಳು ಮೌಖಿಕ ಸಂಪ್ರದಾಯಗಳ ಅಧ್ಯಯನ ನಡೆಸಿದ ಇವರು ಕ್ಯಾಲಿಫೋರ್ನಿಯ ಸ್ಟೇಟ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು. ತುಳುನಾಡಿನ ಮೈಂದಲ, ಐತಿಹ್ಯ ಹಾಗೂ ದೈವಾವೇಷ ಮತಾಚರಣೆ, 'ಸಿರಿ ಐತಿಹ್ಯ ಹಾಗೂ ಮತಾಚರಣೆ' ಇತ್ಯಾದಿ ಸಂಶೋಧನೆಗಳ ಹಿನ್ನೆಲೆಯಾಗಿ ಐತಿಹ್ಯಗಳನ್ನು ಬೆಳಕಿಗೆ ತಂದಿದ್ದಾರೆ.

## ಜನಪದ ಸಾಹಿತ್ಯ ಪ್ರಕಾರವಾಗಿ ಐತಿಹ್ಯಗಳ ಅಧ್ಯಯನ

ಭಾರತದಲ್ಲಿ ಜಾನಪದದ ಅಧ್ಯಯನ ಇತ್ತೀಚೆಗೆ ಸಂಗ್ರಹದೊಡನೆ ಪ್ರಾರಂಭವಾಯಿತು. ಅದರಲ್ಲೂ ಜಾನಪದದ ಕೆಲವು ಅಂಶಗಳಿಗೆ ಮಾತ್ರ ಸಂಗ್ರಹ ಸೀಮಿತವಾಯಿತು. ಹಾಗಾಗಿ ಜಾನಪದದ ಸಂಪೂರ್ಣವಾದ ಅಧ್ಯಯನ ಇತ್ತೀಚೆಗೆ ಅಲ್ಲಲ್ಲಿ ನಡೆಯುತ್ತಿದೆ. ಇದುವರೆಗೂ ಜಾನಪದದಲ್ಲಿಯ ಗೀತೆ, ಕಥೆ, ಬಯಲಾಟ ಮತ್ತು ಯಕ್ಷಗಾನ ಮುಂತಾದ ಕೆಲವು ಪ್ರಕಾರಗಳನ್ನು ಬಿಟ್ಟರೆ ಉಳಿದಂತಹ ಪ್ರಕಾರಗಳು ತುಂಬಾ ಅಲಕ್ಷ್ಯಕ್ಕೊಳಪಟ್ಟಿವೆ. ಐತಿಹ್ಯದಂಥ ಜಾನಪದ ಪ್ರಕಾರದ ಅಧ್ಯಯನ ನಡೆದಿರುವುದು ಅತಿ ಕಡಿಮೆಯೆಂದು ಹೇಳಬಹುದು. ರಿಚರ್ಡ್ ಎಂ.ಡಾರ್ಸನ್, ಸ್ಮಿಥ್‌ಥಾಂಸನ್, ಬಾಗ್ಸ್, ಆರ್ನ್‌ಆಂಟಿ, ಅಲೆನ್‌ಡೆಂಡಸ್ ಮುಂತಾದ ಪಾಶ್ಚಿಮಾತ್ಯ ವಿದ್ವಾಂಸರು ತಮ್ಮ ಜಾನಪದ ಅಧ್ಯಯನಗಳಲ್ಲಿ ಲೆಜೆಂಡ್ (ಐತಿಹ್ಯ)ಗಳನ್ನು ಅಧ್ಯಯನ ಮಾಡಿದ್ದಾರೆ. ಭಾರತದಲ್ಲಿ ಐತಿಹ್ಯಗಳ ಅಧ್ಯಯನ ಆರಂಭವಾಗಿದ್ದರೂ, ಇನ್ನೂ ವ್ಯಾಪಕವಾಗಿ ನಡೆಯಬೇಕಾಗಿದೆ. ಈ ಹಿನ್ನೆಲೆಯಲ್ಲಿ ಎ.ಕೆ.ಘೋಷರವರ 'Legends from Indian History' (1985)ಯಂತಹ ಕೃತಿಗಳು ಪ್ರಸ್ತುತ ಸಂದರ್ಭಕ್ಕೆ ಉಲ್ಲೇಖನೀಯವಾಗುತ್ತವೆ.

ಕರ್ನಾಟಕದಲ್ಲಿ ಐತಿಹ್ಯಗಳ ವಿಸ್ತೃತತೆ ವಿಪುಲವಾಗಿ ಕಂಡುಬರುತ್ತವೆ. ಸಾಮಾನ್ಯವಾಗಿ ಇಲ್ಲಿನ ಒಂದೊಂದು ಸ್ಥಳಕ್ಕೆ ಒಂದೊಂದು ಘಟನೆಯ ಹಿನ್ನೆಲೆ ಇದ್ದೇ ಇರುತ್ತದೆ. ಅದು ತನ್ನ ಹಿನ್ನೆಲೆಯ ಸುರುಳಿ ಬಿಚ್ಚುತ್ತಾ ಕೇಳುಗರನ್ನು ನಡೆದಿದೆ ಎಂದು ನಂಬಲಾದ ಕಾಲಕ್ಕೆ ಕೊಂಡೊಯ್ಯುತ್ತದೆ. ಇಂತಹ ಐತಿಹ್ಯಗಳ ಬಗೆಗೆ ಇದುವರೆಗೂ ಕೆಲವು ಸಂಗ್ರಹ ಕೃತಿಗಳು ಪ್ರಕಟವಾಗಿವೆ. ಅವುಗಳೆಂದರೆ ೧೯೭೩ರಲ್ಲಿ ಶ್ರೀ ಜಿ.ವಿ.ದಾಸೇಗೌಡರ 'ಕನ್ನಡದ ಐತಿಹ್ಯಗಳು' ಎಂಬ ಸಂಗ್ರಹ. ಪ್ರಸ್ತುತ ಸಂಗ್ರಹದಲ್ಲಿ ಸಂಗ್ರಹಕರು ಮಂಡ್ಯ, ಮೈಸೂರು, ಬೆಂಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಲ್ಲಿರುವ ಹಲವು ಐತಿಹ್ಯಗಳನ್ನು ಸಂಗ್ರಹಿಸಿದ್ದಾರೆ. ಇಲ್ಲಿಯ ಐತಿಹ್ಯಗಳ ಸಂಗ್ರಹ ವೈಜ್ಞಾನಿಕವಾಗಿದೆ, ಸಂಪಾದನೆ ಶಾಸ್ತ್ರೀಯವಾಗಿ ನಡೆದುದಾಗಿದೆ. ಜೊತೆಗೆ ಸಂಗ್ರಹದ ದೀರ್ಘವಾದ ಪ್ರಸ್ತಾವನೆಯಲ್ಲಿ ಐತಿಹ್ಯಗಳೆಂದರೇನು? ಐತಿಹ್ಯದ ವಿಧಗಳು ಮುಂತಾದವುಗಳ ಬಗೆಗೆ ವಿಶ್ಲೇಷಣೆ ಕಂಡುಬರುತ್ತದೆ. ೧೯೮೮ರಲ್ಲಿ ಬೇಕಲ ರಾಮನಾಯ್ಕರು ದಕ್ಷಿಣ ಕನ್ನಡ ಜಿಲ್ಲೆಯ 'ಪುಳ್ಕೂರು ಬಾಚ'ನ ಐತಿಹ್ಯವನ್ನು ತಮ್ಮದೇ ಆದ ಶೈಲಿಯಲ್ಲಿ ಪುಸ್ತಕ ರೂಪದಲ್ಲಿ ಹೊರತಂದರು. ಅವರೇ ೧೯೮೯ರಲ್ಲಿ ಇದೇ ಮಾದರಿಯಲ್ಲಿ 'ತೆಂಕನಾಡ ಐತಿಹ್ಯಗಳು' ಎಂಬ ಹೆಸರಲ್ಲಿ ಕಾಸರಗೋಡು ಪ್ರದೇಶವೂ ಸೇರಿದಂತೆ ಜಿಲ್ಲೆಯಲ್ಲಿ ಲಭ್ಯವಿರುವ ಒಟ್ಟು ಇಪ್ಪತ್ತೆರಡು ಐತಿಹ್ಯಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ.

ಕರ್ನಾಟಕದಲ್ಲಿ ಜಾನಪದ ಅಧ್ಯಯನ ಸ್ವತಂತ್ರ ಪೂರ್ವದಿಂದಲೂ ಪ್ರಾರಂಭವಾದರೂ ಐತಿಹ್ಯಗಳದೇ ಅಧ್ಯಯನ ಪ್ರಾರಂಭವಾದುದು ತಡವಾಗಿಯೇ ಎನ್ನಬಹುದು. ಇತ್ತೀಚೆಗೆ ಐತಿಹ್ಯಗಳ ಬಗ್ಗೆ ಪಿಎಚ್.ಡಿ. ಪ್ರಬಂಧಗಳು ಕೆಲವು ಎಂ.ಫಿಲ್. ಪ್ರಬಂಧಗಳು ಬರುತ್ತಿವೆ. ಎಸ್.ಎಸ್.ಭದ್ರಾಪುರರವರು ೧೯೯೧ರಲ್ಲಿ 'ಉತ್ತರ ಕರ್ನಾಟಕದ ಜಾನಪದ ಐತಿಹ್ಯಗಳು' ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಪ್ರಬಂಧದಲ್ಲಿ ಐತಿಹ್ಯದ ಸ್ವರೂಪ, ಲಕ್ಷಣ, ವ್ಯಾಪ್ತಿ, ಪ್ರಕಾರಗಳನ್ನು ಹೇಳಿ, ಉತ್ತರ ಕರ್ನಾಟಕದಲ್ಲಿರುವ ಜಾನಪದ ಐತಿಹ್ಯಗಳನ್ನು ಸಂಗ್ರಹಿಸಿ. ವರ್ಗೀಕರಿಸಿ, ಸ್ಥಳ, ಭೂಮಿ, ನೀರು, ಮಳೆ, ಪ್ರಾಣಿ, ಜನಾಂಗ ಇತ್ಯಾದಿಗಳನ್ನು ಕುರಿತು ವಿವೇಚಿಸಲಾಗಿದೆ. ಸುಬ್ಬಣ್ಣರೈರವರು ೧೯೯೧ರಲ್ಲಿ 'ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು ಒಂದು ಅಧ್ಯಯನ' ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಮುಂಬಯಿ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ್ದಾರೆ. ಪ್ರಸ್ತುತ ಪ್ರಬಂಧದಲ್ಲಿ ಐತಿಹ್ಯ ಪದ ನಿಷ್ಪತ್ತಿ, ಅರ್ಥ ಮತ್ತು ಸ್ವರೂಪ, ವರ್ಗೀಕರಣ, ಕಥೆ, ಪುರಾಣ, ದಂತಕಥೆ, ಇತಿಹಾಸ, ಸ್ಥಳನಾಮ, ಸ್ಥಳಪುರಾಣಗಳೊಂದಿಗೆ ಐತಿಹ್ಯಗಳ ಸಂಬಂಧ, ವ್ಯಕ್ತಿ ಐತಿಹ್ಯ, ಪಾಡ್ದನ ಮತ್ತು ಐತಿಹ್ಯಗಳ ಸಂಬಂಧ, ಐತಿಹ್ಯ ಮತ್ತು ಆಧುನಿಕತೆ ಹೀಗೆ ಐತಿಹ್ಯಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನು ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳನ್ನು ಆಧಾರವಾಗಿಟ್ಟುಕೊಂಡು

ಚರ್ಚಿಸಿದ್ದಾರೆ. ವೀರಣ್ಣ ಅವರು ಎಂ.ಫಿಲ್. ಪದವಿಗಾಗಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ಕನ್ನಡ ಕವಿಗಳ ಮೇಲಿನ ಐತಿಹ್ಯಗಳು' ಎಂಬ ಸಂಶೋಧನ ಪ್ರಬಂಧದಲ್ಲಿ ಐತಿಹ್ಯಗಳನ್ನು ದಂತಕಥೆಗಳನ್ನು ಸಮೀಕರಿಸಿಕೊಂಡು ಅಧ್ಯಯನ ನಡೆಸಿದ್ದಾರೆ.

ಎಂ.ಜಿ.ಈಶ್ವರಪ್ಪ (೧೯೭೪), ದೇ.ಜವರೇಗೌಡ (೧೯೭೬) ಮತ್ತು ಎಂ.ಚಿದಾನಂದಮೂರ್ತಿ (೧೯೭೭) ಮೊದಲಾದವರು ಐತಿಹ್ಯಗಳ ಬಗೆಗೆ ಲೇಖನಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಐತಿಹ್ಯ-ಉಗಮ-ವಿಕಾಸ-ವರ್ಗೀಕರಣ ಮತ್ತು ಆಯಾಮಗಳ ಬಗೆಗೆ ವಿವರಗಳಿವೆ. ತಾಳ್ತಜೆ ವಸಂತಕುಮಾರರ 'ಸಾರಸ' (೧೯೮೫) ಕೃತಿಯಲ್ಲಿ ದಕ್ಷಿಣ ಕನ್ನಡದ ಕೆಲವು ಜಾನಪದ ಐತಿಹ್ಯಗಳ ಕುರಿತು ಪರಿಚಯಾತ್ಮಕ ಲೇಖನ ಸಮೀಕ್ಷೆ ನಡೆದಿದೆ. ೧೯೮೮ರಲ್ಲಿ ಪ್ರಕಟವಾದ 'ವಂದನೆ' (ಬಿ.ಜಿ. ಹೆಂಡಿ ಅಭಿನಂದನ ಗ್ರಂಥ: ಸಂ. ಶಶಿಕಲಾ ಮೋಳ್ದಿ) ಗ್ರಂಥದಲ್ಲಿ ಬಸವರಾಜ ಪೋಲಿಸ ಪಾಟೇಲ್‌ರವರ 'ಸ್ಥಳೀಯ ಐತಿಹ್ಯಗಳು-ಒಂದು ವಿವೇಚನೆ' ಎಂಬ ಲೇಖನ ಪ್ರಕಟವಾಗಿದೆ. ಇದರಲ್ಲಿ ಲೇಖಕರು ಗುಲಬರ್ಗಾ ಜಿಲ್ಲೆಯಲ್ಲಿ ಸಿಗುವ ಐತಿಹ್ಯಗಳನ್ನು ಉದಾಹರಣೆಯಾಗಿ ಬಳಸಿಕೊಂಡಿದ್ದಾರೆ. ೧೯೮೯ರಲ್ಲಿ ಮಂಗಳೂರಿನ 'ತುಳುಕೂಟ'ವು ಕೆ.ಚಿನ್ನಪ್ಪಗೌಡರ ಸಂಪಾದಕತ್ವದಲ್ಲಿ ಪ್ರಕಟಿಸಿದ 'ಪನಿಯಾರ' ಎಂಬ ಅಖಿಲ ಭಾರತ ತುಳು ಸಮ್ಮೇಳನದ ಸ್ಮರಣಸಂಚಿಕೆಯಲ್ಲಿ ಸುಬ್ಬಣ್ಣ ರೈ ಮತ್ತು ತಾಳ್ತಜೆ ವಸಂತಕುಮಾರರ 'ತುಳುನಾಡದ ಐತಿಹ್ಯೊಲು' ಎಂಬ ಲೇಖನವೊಂದು ಪ್ರಕಟವಾಗಿದೆ. ಪುರುಷೋತ್ತಮ ಬಿಳಿಮಲೆಯವರ 'ಕರಾವಳಿ ಜಾನಪದ' (೧೯೯೦) ಕೃತಿಯಲ್ಲಿ ಐತಿಹ್ಯ: ಸ್ವರೂಪ-ಲಕ್ಷಣ-ಪ್ರಕಾರಗಳು ಎಂಬ ಲೇಖನದಲ್ಲಿ ಪ್ರಾಂತೀಯವಾದ ಐತಿಹ್ಯಗಳ ನಿದರ್ಶನದೊಂದಿಗೆ ಐತಿಹ್ಯಗಳ ಬಗೆಗೆ ವಿವೇಚನೆ ನಡೆಸಿದ್ದಾರೆ. ಅಲ್ಲದೆ 'ಜಾನಪದ ಜಗತ್ತು', 'ರಾಶಿ'ಗಳಂತಹ ಜಾನಪದ ಕ್ಷೇತ್ರಕ್ಕೆ ಮೀಸಲಾದ ಪತ್ರಿಕೆಗಳು, ಸ್ಮರಣ ಸಂಚಿಕೆಗಳು, ತಾಲ್ಲೂಕು ಮತ್ತು ಜಿಲ್ಲಾದರ್ಶನ ಸಂಚಿಕೆಗಳಲ್ಲಿ ಐತಿಹ್ಯ ಸಂಬಂಧಿ ಲೇಖನಗಳು ಪ್ರಕಟವಾಗಿರುವುದುಂಟು.

**ಕನ್ನಡ ಐತಿಹ್ಯಗಳ ಅಧ್ಯಯನದ ಪೂರಕ ಕೃತಿಗಳು ಹೀಗಿವೆ :**

೧. ಪುರುಷೋತ್ತಮ ಬಿಳಿಮಲೆ; (ಸಂ.); ೧೯೭೭, ಜಾನಪದ ಕೈಪಿಡಿ; ಕನ್ನಡ ಪುಸ್ತಕ ಪ್ರಾಧಿಕಾರ

೨. ಪುರುಷೋತ್ತಮ ಬಿಳಿಮಲೆ; ೧೯೯೦, ಕರಾವಳಿ ಜಾನಪದ, ಮಂಗಳಗಂಗೋತ್ರಿ

೩. ಕಲ್ಬುರ್ಗಿ; ೧೯೯೪, ಕರ್ನಾಟಕದ ಕೈಫಿಯಿತ್ತುಗಳು: ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಸುಬ್ಬಣ್ಣ ರೈ; ೧೯೯೪; ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು: ಕನ್ನಡ ಸಂಸ್ಥೆ: ಮುಂಬೈ

೫. ದಾಸೇಗೌಡ ಜಿ.ವಿ.; ೧೯೭೮, ಕನ್ನಡ ಐತಿಹ್ಯಗಳು; ಮಂಡ್ಯ: ತೇಜಸ್ವಿ ಪ್ರಕಾಶನ

೬. ಜವರೇಗೌಡ ದೇ.; ೧೯೭೬, ಜಾನಪದ ಅಧ್ಯಯನ: ಮೈಸೂರು, ಡಿ.ವಿ.ಕೆ.

೭. ಕರಿಬಸಪ್ಪ; ೨೦೦೪, ಬಳ್ಳಾರಿ ಜಿಲ್ಲೆಯ ಐತಿಹ್ಯಗಳು: ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮. ಕನ್ನಡ ವಿಶ್ವಕೋಶ ಸಂ.೩, ೧೯೭೧

೯. ವಿಶ್ವಕೋಶ ಸಂ.೩, ೧೯೭೧

**ಟಿಪ್ಪಣಿಗಳು**

೧. ಚಂದ್ರಶೇಖರ ಕಂಬಾರ: ೨೦೦೪, ಪು.೩೮೯

೨. ಗೋಪಾಲ ಆರ್: ೨೦೦೪, ಪು.೧೮-೧೯

೩. ದಿವಾಕರ್ ಆರ್.ಆರ್: ೧೯೭೦, ಪು.೧೦

೪. KIRKPATRIC E.M: 1983. Pp-721

೫. Flower H.W. and F.G. (Ed): 1982. Pp-492

೬. ನರಸಿಂಹಾಚಾರ್, ೧೯೭೦, ಪು.೧೧೩೬

೭. ಶ್ರೀನಿವಾಸಾಚಾರ್ಯ; ೧೯೪೦, ಪು.೧೪೩

೮. ಪುರುಷೋತ್ತಮ ಬಿಳಿಮಲೆ: ೧೯೯೦, ಪು.೭೪

೯. ಜವರೇಗೌಡ ದೇ.: ೧೯೭೬, ಪು.೧೫೯

೧೦. ಹಿರೇಮಠ ಆರ್.ಸಿ: ೧೯೭೪, ಪು.೯೬

೧೧. ವಸಂತಕುಮಾರ ತಾಳ್ತಜೆ, ೧೯೮೫, ಪು.೧೨೧

೧೨. GHOSH A.K:.1985. (Introduction)

೧೩. Sykes J.B; 1984, Pp-574

೧೪. SDF ML: Vol-II. 1950. Pp-1139-1141

೧೫. Degh Linda; 1972. Pp-76

೧೬. ಅದೇ: ಪು.೭೭

೧೭. ಪುರುಷೋತ್ತಮ ಬಿಳಿಮಲೆ: ೧೯೯೦, ಪು.೮೧-೮೨

೧೮. Dorson M.Richard: 1972, Pp-172

೧೯. ಜವರೇಗೌಡ ದೇ.: ೧೯೭೬, ಪು.೧೫೯

ಅಧ್ಯಾಯ ೨

## ಜಾನಪದ ಸ್ವರೂಪ ಮತ್ತು ಜಾನಪದದಲ್ಲಿ ಐತಿಹ್ಯಗಳ ಮಹತ್ವ

ಪ್ರಕೃತಿಯಲ್ಲಿ ಮನುಷ್ಯ ಇತರೆ ಪ್ರಾಣಿಗಳಿಗಿಂತ ವಿಶಿಷ್ಟವೆನಿಸಿರುವುದು ಸಂಸ್ಕೃತಿಯನ್ನು ರೂಪಿಸಿ ಕೊಂಡಿರುವನೆಂಬ ಕಾರಣಕ್ಕೆ. ಆರಂಭದಿಂದಲೂ ಅಲೆಮಾರಿಯಾಗಿ ಆಹಾರ ಅನ್ವೇಷಣೆಯಲ್ಲಿ ವಲಸೆ ಹೊರಟ ಬದುಕಿಗೊಂದು ನಿರ್ದಿಷ್ಟ ನೆಲೆ-ಬೆಲೆಗಳಿರದ ಸಂದರ್ಭಗಳಲ್ಲಿ ಪ್ರಕೃತಿ ನಿಗೂಢವಾಗಿ ಕಾಣತೊಡಗಿತು. ಮೊದಲು ಪ್ರಕೃತಿಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಬೇಕು. ಹೊಂದಾಣಿಕೆ ಯಾಗಬೇಕಾದರೆ, ಅರ್ಥೈಸಿಕೊಳ್ಳಬೇಕು. ಈ ಘಟ್ಟದಿಂದ ಜಾನಪದ ಸೃಷ್ಟಿಯಾಯಿತು. ಸಸ್ಯ ಸಮೂಹ, ಪ್ರಾಣಿ ಸಮುದಾಯ, ವಸ್ತು ವಿಶೇಷಗಳೆಲ್ಲವೂ ಭಯ-ವಿಸ್ಮಯಗಳನ್ನೇ ಉಂಟು ಮಾಡಿದವು. ಪ್ರಕೃತಿಯ ಋತುಚಕ್ರದಲ್ಲಿ ಗಂಡಾಂತರಗಳಿರುವುದಾಗಿ ತಿಳಿಯಿತು. ಬೆಂಕಿ, ಚಳಿ, ಗಾಳಿ, ಬಿಸಿಲು, ಮಳೆ, ಗುಡುಗು, ಸಿಡಿಲು, ಪ್ರವಾಹ ಇತ್ಯಾದಿಗಳಿಂದ ಅಪಾಯದ ಅರಿವಾಯಿತು. ಪ್ರಾಣಿಗಳೊಂದಿಗೆ ಹೋರಾಟ ಸೆಣಸಾಟಗಳು ನಡೆದು ಕೆಲವನ್ನು ಸಾಕುವ, ಕೆಲವನ್ನು ಪಳಗಿಸುವ, ಕೆಲವನ್ನು ಕೊಲ್ಲುವ ಹೀಗೆ ಯಾವುದಾದರೊಂದನ್ನು ಮಾಡುವ ಅನಿವಾರ್ಯತೆ ಕಂಡುಬಂತು. ಭಯ ಗೌರವಗಳ ಕಾರಣದಿಂದ ಪ್ರಕೃತಿಯ ಪ್ರಾಣಿ ಸಸ್ಯವರ್ಗಗಳನ್ನು ಪೂಜಿಸುವುದರೊಂದಿಗೆ ಪಂಚಭೂತಗಳನ್ನು ಆರಾಧಿಸತೊಡಗಿದ. ತನ್ನನ್ನು ರಕ್ಷಿಸುವಂತೆ ಪ್ರಾರ್ಥಿಸತೊಡಗಿದ, ಪೂಜಿಸತೊಡಗಿದ. ಹೀಗೆ ಪ್ರಕೃತಿಯ ಸಹಜತೆಗಳು ಮನುಷ್ಯನ ಪೂಜೆಯ ನೆಲೆಗಳಾದವು. ಅವುಗಳಿಗೆ ಆಕರ, ರೂಪ, ನೆಲೆ ಮೊದಲಾದವನ್ನು ನೀಡಿದ. ಅವುಗಳಿಗೆ ಸಂಬಂಧಿಸಿದಂತೆ ಕತೆಗಳನ್ನು ಕಟ್ಟಿದ. ಅಲ್ಲಿ ನಡೆಯುವ ಘಟನೆ ಸ್ಥಳ ಸಂದರ್ಭಗಳ ಸಮನ್ವಯವನ್ನು ಮರುಸ್ಥಾಪಿಸುವ ಪ್ರಯತ್ನದಲ್ಲಿ ಐತಿಹ್ಯಗಳು ಸೃಷ್ಟಿಯಾದವು.

ಜಾನಪದವು ಸಮಾಜದ ಸಂಸ್ಕೃತಿಯ ಭಾಗ. ಸಮಾಜ ರಚನೆ ಜಾನಪದವನ್ನು ಒಳಗೊಂಡು ಆರ್ಥಿಕ, ಸಾಮಾಜಿಕ ಆಯಾಮಗಳಿಂದಲೂ ಕಟ್ಟಲ್ಪಟ್ಟಿರುತ್ತದೆ. ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳು ಸಂಸ್ಕೃತಿಯ ಸ್ವರೂಪವನ್ನು ಬದಲಾಯಿಸುತ್ತವೆ. ಇಂಥ ಸಂದರ್ಭಗಳಲ್ಲಿ ಜಾನಪದರ ಪರಿಧಿಯಲ್ಲಿ ವ್ಯಾಪಕತೆ ವಿಸ್ತಾರಗೊಳ್ಳುತ್ತದೆ. ಕಾಲಕ್ರಮೇಣ ಅಲೆಮಾರಿ ಬದುಕನ್ನು ಸ್ಥಗಿತಗೊಳಿಸಿ ಒಂದೆಡೆ ನೆಲೆಸಿ ಜೀವನವನ್ನು ಮುಂದುವರೆಸಿದ. ಪಶುಪಾಲನೆ, ವ್ಯವಸಾಯ ಮತ್ತಿತರ ವೃತ್ತಿಗಳನ್ನು ರೂಢಿಸಿಕೊಂಡ. ಕಾಡನ್ನು ಕಡಿದು ವ್ಯವಸಾಯ ಯೋಗ್ಯಭೂಮಿಯಾಗಿ; ಜನ ವಾಸಿಸುವ ಗ್ರಾಮಗಳಾಗಿ

ಪರಿವರ್ತಿಸಿಕೊಂಡ. ಆಗ ಸಮಾಜ ಸಂಸ್ಕೃತಿ ಧರ್ಮ ವ್ಯವಸ್ಥೆಗಳೆಂಬ ಪರಿಕಲ್ಪನೆಗಳನ್ನು ಕಟ್ಟಿಕೊಂಡ. ವಾಸಿಸುವ ನಿರ್ದಿಷ್ಟ ಸ್ಥಳಗಳಲ್ಲಿ ಬದುಕಿನ ವಿವಿಧ ಅನುಭವಗಳನ್ನು ಹಲವು ಘಟನೆಗಳನ್ನು ಅಲ್ಲಿಗಲ್ಲಿಗೆ ನಿರೂಪಿಸಹೊರಟ ಹಂತದಿಂದ ಐತಿಹ್ಯಗಳು ಸೃಷ್ಟಿಯಾಗತೊಡಗಿದವು. ಇವು ಪ್ರಕೃತಿಯಲ್ಲಿ ತನ್ನ ಪರಿಸರವನ್ನು ರೂಪಿಸಿಕೊಂಡಿದ್ದರ ಕುರುಹುಗಳು. ವ್ಯಕ್ತಿಗತ ಬದುಕು ಸಮಾಜ, ಸಂಸ್ಕೃತಿ ಧರ್ಮ, ಪುರಾಣಗಳನ್ನು ಕಟ್ಟಿಕೊಳ್ಳುತ್ತಿದ್ದಂತೆ ಸಂತಾನ, ಸಂಸಾರ, ಪರಸ್ಪರ ಸಂಬಂಧಗಳನ್ನು ಗುರುತಿಸಿಕೊಂಡ. ತನ್ನ ಸಂಸಾರ, ಸಂತಾನ ಮತ್ತು ಊರುಕೇರಿಗಳನ್ನು ತನ್ನ ಪ್ರಾಣಿಪಕ್ಷಿಗಳನ್ನು ರೂಢಿಸಿಕೊಂಡ. ಭೂಮಿಯನ್ನು ತನ್ನ ಹಾಗೂ ತನ್ನ ಸಮುದಾಯದ ಮೂಲಕ ತನ್ನವೆಂದು ಘೋಷಿಸಿಕೊಂಡ. ಇಂಥ ಬದುಕಿನ ಮೇಲೆ ಆರ್ಥಿಕತೆ, ರಾಜಕೀಯತೆಯ ಹಿಡಿತವಾಯಿತು. ಆಯಾ ಪ್ರದೇಶಗಳ ಆರ್ಥಿಕ ಬದುಕು ಮತ್ತು ರಾಜಕೀಯ ಪ್ರಭಾವಗಳು ಜನಪದ ಸಂಸ್ಕೃತಿಯಲ್ಲಿ ಐತಿಹ್ಯಗಳನ್ನುಂಟು ಮಾಡಿದವು.

ಪ್ರಕೃತಿಯಲ್ಲಿ ತನಗೆ ಅರ್ಥವಾಗದ್ದು, ತೊಂದರೆಯನ್ನು ಉಂಟುಮಾಡುವುದು, ಸಹಕಾರಿಯಾಗಿರುವುದು-ಎಲ್ಲ ವಿಶೇಷಗಳನ್ನು ಮನುಷ್ಯ-ದೈವಗಳು ಇಲ್ಲವೇ ದೆವ್ವಗಳೆಂದು ಪರಿಭಾವಿಸುತ್ತಾರೆ. ಒಲಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಶಕ್ತಿ ವಿಶೇಷಗಳಿಗೆ ಮೂಲವಾಗಿ ಹಲವು ಲೋಕಗಳನ್ನು ಕಟ್ಟಿಕೊಡುತ್ತಾನೆ. ಮತ್ತೆ ತನ್ನ, ತನ್ನ ಸಮೂಹದ ಅನುಭವಗಳನ್ನು ಈ ನೆಲದ ಸ್ಥಳದಲ್ಲಿಯೇ ಕಂಡುಕೊಳ್ಳಲು ಅವುಗಳೊಂದಿಗೆ ಹೋರಾಡುತ್ತಾನೆ. ಆಗ ಮೂಡುವ ಐತಿಹ್ಯಗಳು ಪುರಾಣ ಜನಿತವಾಗಿರುತ್ತವೆ. ರಾಜಕೀಯ ಒತ್ತಡಗಳಿಂದ ಕೂಡಿರುತ್ತವೆ. ಸಾಮಾಜಿಕ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುತ್ತವೆ. ಉತ್ಪಾದನೆ ಮತ್ತು ಆರ್ಥಿಕತೆಗಳ ಹಿನ್ನೆಲೆಯು ಇರುತ್ತದೆ. ಅಲ್ಲದೆ ಅದೇ ಕಾಲದಲ್ಲಿ ಮನುಷ್ಯ ತನ್ನನ್ನು ಕಾಡುವ ಯಾವುದೇ ಸಮಸ್ಯೆಗೆ ಕಂಡುಕೊಂಡ ಉತ್ತರವಾಗಿರುತ್ತದೆ ಐತಿಹ್ಯ. ಜನಪದ ಸಮೂಹಗಳು ತನ್ನ ಜ್ಞಾನವಲಯಗಳನ್ನು ಕಾಲದಿಂದ ಕಾಲಕ್ಕೆ ಪರಂಪರಾನುಗತವಾಗಿ ಬೆಳೆಸಿಕೊಂಡು ಬಂದಿರುವುದು ಮೌಖಿಕ ಸಂಪ್ರದಾಯದಲ್ಲಿವೆ ಎಂದರೆ ತಪ್ಪಾಗಲಾರದು. ಅನುಸರಿಸುವ ರೀತಿ-ನೀತಿ ಕ್ರಮಗಳು ಭೌಗೋಳಿಕವಾಗಿ ಭಿನ್ನವಿರಬಹುದು ಅಥವಾ ಕಾಲಾನುಗುಣವಾಗಿ ಪರಿವರ್ತನೆಯಾಗಬಹುದು. ಉದಾ: ಬಲಿ ಕೊಡುವ ಸಂಪ್ರದಾಯವು ನರಬಲಿ-ಪ್ರಾಣಿಬಲಿ-ಫಲಬಲಿ (ಕುಂಬಳಕಾಯಿ) ಬಲಿಯಾಗಿ ಸರಳವಾಗುತ್ತಾ ಹೋಗಬಹುದು ಅಥವಾ ಸಾಂಕೇತಿಕವಾಗಬಹುದು. ಮೊರಸು ಒಕ್ಕಲಿಗರು ತಮ್ಮ ದೈವಕ್ಕೆ ತಮ್ಮ ತಲೆಯನ್ನು ಸಿಡಿತಲೆ ಬಲಿಯಾಗಿ ಅರ್ಪಿಸುತ್ತಿದ್ದ ಸಂಪ್ರದಾಯವು ಕಾಲಾನಂತರ ಬೆರಳ ತುದಿಯನ್ನು ಕತ್ತರಿಸಿ ಅರ್ಪಿಸುವುದಾಗಿ ವಾಡಿಕೆಗೆ ಬಂತು. ಇತ್ತೀಚೆಗೆ ಬೆರಳಿಗೆ ಸುತ್ತಿದ ಹೂವನ್ನು ಕತ್ತರಿಸುತ್ತಾರೆ. ಹೀಗೆ ಜಾನಪದದ ಸ್ವರೂಪವು ವಿವಿಧ ಕಾಲಘಟ್ಟಗಳಲ್ಲಿ ಹೇಗೆ ಇದ್ದಿತು ಎಂಬುದಕ್ಕೆ ಸಂಬಂಧಿಸಿದ ಐತಿಹ್ಯಗಳಿಂದ ಸುಳಿವು ದೊರೆಯುತ್ತದೆ.

ಶಿಷ್ಟತೆಯ ಉತ್ತುಂಗದಲ್ಲಿ ವಿಜೃಂಭಿಸುವ ಸಮುದಾಯಗಳಲ್ಲಿ ಸಹ ಮೌಖಿಕ ಪರಂಪರೆಯ ಪ್ರಭಾವದಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದಲು ಸಾಧ್ಯವಿರುವುದಿಲ್ಲ. "ಯಾವುದೋ ಹಂತದಲ್ಲಿ ಜಾನಪದ ಮತ್ತು ಶಿಷ್ಟ ಇವೆರಡೂ ಪರಂಪರೆಯ ನಡುವೆ ಕಾಲದಿಂದಲೂ ಒಂದು ಬಲವಾದ ಸಂಬಂಧ ಇರುವಂತೆಯೇ ಕಾಣಿಸುತ್ತದೆ. ಶಿಷ್ಟ ಕವಿಗಳು ತಮ್ಮ ಕಾವ್ಯನಾಯಕರ ಸಂಬಂಧದ ಐತಿಹಾಸಿಕ ಸತ್ಯ ಸಂಗತಿಗಳನ್ನು ಹಿಂದೆ ಮಾಡಿ ಅವರನ್ನು ಕುರಿತಾಗಿ ಅತಿಮಾನುಷ ಸಂಗತಿ ಪವಾಡ ಕಥೆಗಳನ್ನು ಮುಂದೆ ತಂದು ಹೇಗೆ ಕಥೆ ಕಾವ್ಯ ಕಟ್ಟಿದರೋ, ಜನಪದರೂ ಹಾಗೆಯೇ ತಮ್ಮ ಕಣ್ಣ ಮುಂದೆ ಆಗಿಹೋದ ಐತಿಹಾಸಿಕ ವ್ಯಕ್ತಿಗಳನ್ನು ಕುರಿತು ಅದನ್ನೇ ಮಾಡಿದರು. ಈ ಸಂಬಂಧದಲ್ಲಿ ಜನಪದರಿಗೆ ಆಗಲಿ, ಶಿಷ್ಟರಿಗೇ ಆಗಲಿ ಕತೆ, ಕಾವ್ಯ ನಿರ್ಮಿತಿಯಲ್ಲಿ ಪ್ರಾಚೀನ ಕಾಲದಿಂದ ಬಂದ ಅವರದೇ ಆಶಯಗಳು ಸಹಾಯಕ್ಕೆ ಬಂದವು".[೧] ನಾಗರಿಕತೆ ಬೆಳೆದಂತೆಲ್ಲ ಕೈಗಾರಿಕೆಗಳು ಬೆಳೆದವು. ಎಷ್ಟೋ ಕಾಡುಗಳು ನಾಡುಗಳಾಗಿ ಗ್ರಾಮಗಳು ಪಟ್ಟಣಗಳಾಗುವ ಸಂದರ್ಭಗಳು ಬಂದವು. ಕೈಗಾರಿಕೆಗಳು ಕಟ್ಟಡಗಳು ರಸ್ತೆ ನಿರ್ಮಾಣಗಳು ಇತ್ಯಾದಿಗಳಿಂದ ಹಳೆಯ ಸ್ಥಳಗಳ ಕುರುಹುಗಳು ಬದಲಾದಂತೆ ಸಂಬಂಧಿಸಿದ ಐತಿಹ್ಯಗಳು ಮರೆಯಾಗುತ್ತವೆ. ಆಗ ಅವು ಕಥೆಗಳ ಸ್ವರೂಪ ಪಡೆದುಕೊಳ್ಳುತ್ತವೆ. ಹೊಸ ಐತಿಹ್ಯಗಳು ಕಾಲಘಟ್ಟಗಳಿಗೆ ಅನುಗುಣವಾಗಿ ಮತ್ತೆ ಸೇರಿಕೊಳ್ಳುತ್ತವೆ. ಉದಾ : ಏತ ಹೊಡೆಯುವ ಕೃಷಿ ಚಟುವಟಿಕೆಗೆ ಸಂಬಂಧಿಸಿದಂತೆ ಮೂಡಿಬಂದ ಐತಿಹ್ಯದಂತೆ ಏತದ ಬಳಕೆ ಕಾಲಾನಂತರ ಜನ ಸಮುದಾಯಗಳಿಂದ ಮರೆಯಾದಂತೆ ಐತಿಹ್ಯಗಳು ಮರೆಯಾಗುತ್ತವೆ. ಅಥವಾ ಅವುಗಳ ಸ್ವರೂಪ ಬದಲಾಗುತ್ತದೆ. ಹೇಗೆಂದರೆ, ಏತದ ಬದಲು ಪಂಪ್‌ಸೆಟ್‌ಗಳ ಮೂಲಕ ಬಾವಿಗಳಿಂದ ನೀರೆತ್ತುವ ತಾಂತ್ರಿಕತೆಗೆ ಅನುಗುಣವಾಗಿ ಐತಿಹ್ಯ ಬದಲಾಗುತ್ತದೆ. ಇನ್ನೂ ಮುಂದುವರೆದಂತೆ ಬೋರ್‌ವೆಲ್ ತಂತ್ರಜ್ಞಾನಕ್ಕೆ ಅನುಗುಣವಾಗಿಯೂ ಮಾರ್ಪಾಟುಗಳಾಗುತ್ತವೆ.

ಉತ್ಪಾದನೆಯ ಸ್ವರೂಪಕ್ಕೆ ಅನುಗುಣವಾಗಿ ಐತಿಹ್ಯ ಸೇರ್ಪಡೆ ಬೇರ್ಪಡೆಯಾಗುತ್ತ ಹೋಗುತ್ತದೆ. ಕೊಳ್ಳಿ ದೆವ್ವಗಳ ಕಲ್ಪನೆ ಮತ್ತು ಐತಿಹ್ಯಗಳನ್ನು ಗಮನಿಸಿದರೆ, ಅವು ರಾತ್ರಿಯ ವೇಳೆ ರೈತರಿಗೆ ಕಾಟ ಕೊಡುತ್ತಿದ್ದವೆಂದೂ ವಶಪಡಿಸಿಕೊಂಡವರಿಗೆ ಶರಣಾಗಿ ಏತ ಹೊಡೆದು ಹೊಲಗದ್ದೆಗಳಿಗೆ ನೀರು ಕಟ್ಟುವುದು, ಹೊಲಗದ್ದೆಗಳನ್ನು ಉಳುಮೆ ಮಾಡಿಕೊಡುವುದು ಇತ್ಯಾದಿ ಕೃಷಿಕಾರ್ಯಗಳನ್ನು ನಿರ್ವಹಿಸುತ್ತಿದ್ದವೆಂದು ಐತಿಹ್ಯಗಳಿವೆ. ನಂತರದ ಘಟ್ಟದಲ್ಲಿ ರಾತ್ರಿಯ ವೇಳೆ ಪಂಪ್‌ಸೆಟ್‌ಗಳ ಮೂಲಕ ನೀರು ಹಾಯಿಸುವ ರೈತರಿಗೂ ತೊಂದರೆ ಕೊಟ್ಟವೆಂಬ ಐತಿಹ್ಯಗಳಿವೆ. ಅದು ಹೇಗೆಂದರೆ, ಕರೆಂಟ್ ರೂಂನಲ್ಲಿ ರಾತ್ರಿ ಮಲಗಿದವರನ್ನು ಎತ್ತಿಕೊಂಡು ಹೋಗಿ ಆಳದಲ್ಲಿ ಜೋಡಿಸಿದ್ದ ಮೋಟರ್ ಬೆಲ್ಟ್‌ನ ಕೆಳಗೆ ಮಲಗಿಸುತ್ತಿದ್ದವು. ಇಲ್ಲವೇ ಬಾವಿಯ ಗರಾಂಡಗಳ ಮೇಲೆ ಮಲಗಿಸುತ್ತಿದ್ದವು. ವಶಪಡಿಸಿಕೊಂಡವರಿಗೆ ಸೇವೆ ಮಾಡುತ್ತಿದ್ದವು. ಹೀಗೆ ಜನಪದರಲ್ಲಿ ಐತಿಹ್ಯ ಬದಲಾವಣೆಗಳನ್ನು ಪಡೆಯುತ್ತದೆ.

ಅವಿಸ್ಮರಣೀಯ ಸ್ಥಳ, ಘಟನೆ, ವ್ಯಕ್ತಿ ಅಥವಾ ಕಲ್ಪನೆಯ ಭಾವಗಳು ಜನಪದರಲ್ಲಿ ಐತಿಹ್ಯಗಳ ಸೃಷ್ಟಿಗೆ ಕಾರಣವಾಗುತ್ತವೆ. ಆಯಾ ಕಾಲಘಟ್ಟಕ್ಕೆ ಅನುಗುಣವಾಗಿ ನೆಲೆಯೂರುವ ಬದಲಾಗುವ ಸಾಮಾಜಿಕ ಮೌಲ್ಯಗಳು ಧಾರ್ಮಿಕ ಒತ್ತಡಗಳು ರಾಜಕೀಯ ಶಕ್ತಿಗಳು ಪ್ರಾಕೃತಿಕ ವಿಸ್ಮಯ ರಮ್ಯತೆ ದುರಂತಗಳು ಪೂರಕವಾಗುತ್ತವೆ. ಒಂದು ಘಟನೆಯನ್ನು ಸ್ಥಳ, ವ್ಯಕ್ತಿ ಅಥವಾ ಸಮೂಹಕ್ಕೆ ಸಂಬಂಧಿಸಿದ ನಡುವಳಿಕೆಗಳಿಗೆ ಆರೋಪಿಸಿ ಹೆಣೆಯಲ್ಪಡುವ ಐತಿಹ್ಯಗಳು ನಡೆದಿವೆ ಎಂಬ ನಂಬಿಕೆಯಿಂದ ಮನಸ್ಸುಗಳಿಗೆ ಒಪ್ಪಿಗೆಯಾಗುತ್ತವೆ. ಮೌಖಿಕ ಆಧಾರಗಳು ಇಲ್ಲಿ ಮಾನ್ಯತೆ ಪಡೆದು ಸಂಪೂರ್ಣ ಸತ್ಯವೂ ಅಲ್ಲದ ಸುಳ್ಳು ಅಲ್ಲದ ವಿವರಗಳು ತಲೆಮಾರಿನಿಂದ ತಲೆಮಾರಿಗೆ ಮಾನ್ಯತೆ ಪಡೆದು ಉಳಿದುಕೊಳ್ಳುತ್ತವೆಯೆಂದರೆ ಇಲ್ಲಿ ನಂಬಿಕೆ ಮುಖ್ಯವಾಗುತ್ತದೆ. ಐತಿಹ್ಯದ ಸತ್ಯಾಂಶಕ್ಕಿಂತ ಭಿನ್ನವಾದ ಮೌಲ್ಯಗಳನ್ನು ನೆನಪಿಸಿಕೊಳ್ಳುವ ಪ್ರಕ್ರಿಯೆಯೂ ಇದಾಗಿರುತ್ತದೆ. ಉದಾ : ಸಹಗಮನಕ್ಕೆ ಸಂಬಂಧಿಸಿದ ಐತಿಹ್ಯಗಳು. ಸಹಗಮನವನ್ನು ಅನುಮೋದಿಸುತ್ತಿದ್ದ ಸಮುದಾಯಗಳಲ್ಲಿ ಸ್ತ್ರೀಯರು ಪ್ರತಿರೋಧವಿಲ್ಲದೆ ಚಿತೆಯೇರಿ ಸತಿಯರಾಗಿದ್ದಾರೆ. ಆದರೆ ಈ ಸಂಪ್ರದಾಯವಿಲ್ಲದ ಸಮೂಹಗಳಲ್ಲಿ ಯುದ್ಧ ಸಂದರ್ಭದಲ್ಲಿ ಸಹಗಮನ ಅನಿವಾರ್ಯವಾದಾಗ ಸಾಮೂಹಿಕವಾಗಿ ಬೆಂಕಿಗೆ ತಳ್ಳುವ ಸಂದರ್ಭಗಳಲ್ಲಿ ಕೆಳವರ್ಗದ ಮುತ್ತೈದೆಯರು ಊರಿಗೆ ಶಾಪ ಹಾಕಿದ ಸನ್ನಿವೇಶಗಳು ಐತಿಹ್ಯಗಳಿಂದ ತಿಳಿಯುತ್ತವೆ. ಇಂಥ ಕಡೆಗಳಲ್ಲಿ ಪ್ರಧಾನ-ಅಧೀನ ಸಂಸ್ಕೃತಿಗಳ ಸಂಘರ್ಷ - ಸಾಮರಸ್ಯಗಳ ವೈರುಧ್ಯಗಳು ಮನನಿಯವಾಗುತ್ತವೆ.

## ಐತಿಹ್ಯದ ಲಕ್ಷಣ ಮತ್ತು ಗುಣಧರ್ಮ

ಜನಪದ ಸಾಹಿತ್ಯದಲ್ಲಿ ಗದ್ಯ ಪ್ರಕಾರಗಳಲ್ಲಿ ಐತಿಹ್ಯವೂ ಒಂದು. ನಿರ್ದಿಷ್ಟ ವ್ಯಕ್ತಿ, ಸ್ಥಳ ಅಥವಾ ಘಟನೆಗಳಿಗೆ ಹಿನ್ನೆಲೆಯಾಗಿ ನಿರೂಪಿತವಾಗುವ ಕಥೆಗಳನ್ನು ಐತಿಹ್ಯವೆನ್ನುತ್ತೇವೆ. ಐತಿಹ್ಯಗಳನ್ನು ನಿಜವಾಗಿ ನಡೆದುವೆಂದೇ ನಂಬಿ ನಿರೂಪಕರು ನಿರೂಪಿಸುತ್ತಾರೆ. ಆದರೆ ಯಾವುದೇ ಲಿಖಿತ ದಾಖಲೆ ಆಧಾರ ಗಳಿರುವುದಿಲ್ಲ. ಆದ್ದರಿಂದ ಐತಿಹ್ಯಗಳು ಕಂಠಸ್ಥ ಸಂಪ್ರದಾಯದಲ್ಲಿ ಬೆಳೆಯುತ್ತ ಮೌಖಿಕವಾಗಿ ಪರಿಚಲನಗೊಳ್ಳುತ್ತವೆ. ಐತಿಹ್ಯಗಳಲ್ಲಿ ಸ್ಥಳೀಯ ಕುರುಹುಗಳು ಸಹಾಯಕವಾಗುತ್ತವೆ. ಇವುಗಳಲ್ಲಿ ಸತ್ಯಾಂಶ ಹಾಗೂ ಕಾಲ್ಪನಿಕ ಅಂಶಗಳೆರಡೂ ಬೆರೆತಿರುತ್ತವೆ. ಕಾಲ್ಪನಿಕ ಅಂಶಗಳು ಐತಿಹ್ಯಗಳಲ್ಲಿ ಆಕರ್ಷಕವಾಗಿರುತ್ತವೆ. ಐತಿಹ್ಯಕ್ಕೆ ಸಂಬಂಧಿಸಿದ ಕಲ್ಪನೆಗಳು ನಿರೂಪಣೆಯಲ್ಲಿ ಪಕ್ವಗೊಂಡಂತೆ ವಸ್ತುನಿಷ್ಠತೆಯನ್ನು ವೈಭವೀಕರಿಸುತ್ತವೆ ಅಥವಾ ರಮ್ಯಗೊಳಿಸುತ್ತವೆ. ಇಲ್ಲವೇ ವಸ್ತು ದುರಂತತೆಗೆ ಮೆರುಗು ನೀಡುತ್ತವೆ. ಈ ಕಾರಣದಿಂದಲೇ ಜನಮನದಲ್ಲಿ ನೆನಪುಗಳಾಗಿ ಉಳಿದು ಬರುತ್ತವೆ. ಇತಿಹಾಸ ರಚನೆಗೆ ಅತ್ಯಮೂಲ್ಯವಾದ ಆಧಾರಗಳನ್ನು ಒದಗಿಸುತ್ತವೆ. ಗೊತ್ತಾದ ಸ್ಥಳಕ್ಕೆ ಅಂಟಿಕೊಂಡು ಪರಿಮಿತ ಪಾಠಾಂತರಗಳಿಂದ ಕೂಡಿ ಸಂಕ್ಷಿಪ್ತ ವಿವರಗಳಿಂದಲೂ ಮಿತ ವರ್ಣನೆಗಳಿಂದಲೂ ಕೂಡಿರುವುದು ಐತಿಹ್ಯದ ಸ್ವರೂಪ.

ಐತಿಹ್ಯವನ್ನು Legend ಎಂಬುದಕ್ಕೆ ಸಂವಾದಿಯಾಗಿ ಇಂದು ನಾವು ಪ್ರಯೋಗಿಸುವುದಕ್ಕೆ ಮೊದಲೇ ಐತಿಹ್ಯವೆಂಬ ಪದವು ನಮ್ಮಲ್ಲಿ ಸಾಕಷ್ಟು ರೂಢಿಯಲ್ಲಿತ್ತು. ಜನಸಾಮಾನ್ಯರು ಇತಿಹಾಸವೆಂದು ನಂಬಿಕೊಂಡು ಬಂದ ಘಟನೆ ಅಥವಾ ಕಥನವೆಂಬ ಅರ್ಥದಲ್ಲಿ ಅದು ಪ್ರಯೋಗಗೊಳ್ಳುತ್ತಿತ್ತು. ಜಾನಪದ ಅಧ್ಯಯನವು ಶಾಸ್ತ್ರೀಯ ಸಂಶೋಧನೆಯಾಗಿ ಬೆಳೆದು ಬಂದಿದ್ದರಿಂದ ಐತಿಹ್ಯವೆಂಬುದೊಂದು ನಿಶ್ಚಿತ ಪರಿಕಲ್ಪನೆಯಾಗಿ ಉಳಿದು ಬಂದಿದೆ. ಮಧ್ಯಕಾಲೀನ ಲ್ಯಾಟಿನ್‌ನ ಲೆಂಜೆಂಡಾ (Legenda) ಎಂಬ ಶಬ್ದ ಮೂಲದಿಂದ ರೂಪ ನಿಷ್ಪನ್ನವಾದ ಲೆಜೆಂಡ್ (Legend) ಎಂಬ ಪದವು ಪಠಿಸಬಹುದಾದದ್ದು ಎಂಬ ಅರ್ಥವನ್ನು ಮಾತ್ರ ಒಳಗೊಂಡಿದೆ. ಯುರೋಪಿನಲ್ಲಿ ಸಂತರ ಕಥೆಗಳು ಎಂದು ಪ್ರಚಲಿತವಾಗಿದ್ದಿತು. ಅಲ್ಲದೆ ಈಗ ವ್ಯಕ್ತಿ, ಸ್ಥಳ ಅಥವಾ ಘಟನೆಯನ್ನು ಒಳಗೊಂಡು ಅದರ ಸುತ್ತ ಪಾರಂಪರಿಕವಾಗಿ ಕೆಲವು ಮೂಲ ಸಂಗತಿಗಳನ್ನು ಆಧರಿಸಿ ಬೆಳೆದು ಬಂದ ಕಥನ ರೂಪದ ವಿಶಿಷ್ಟ ಗದ್ಯ ನಿರೂಪಣೆಯೇ ಐತಿಹ್ಯ. ಹೆಚ್ಚಿನ ಸಂದರ್ಭಗಳಲ್ಲಿ ಐತಿಹ್ಯ ಕಥನವಾಗಿರುತ್ತದೆ. ನಂಬಿಕೆಗಳು, ಧಾರ್ಮಿಕ ಸಂಪ್ರದಾಯಗಳು, ಆಚರಣೆಗಳು, ಚಾರಿತ್ರಿಕ ಘಟನೆಗಳು, ನೈಸರ್ಗಿಕ ವೈಚಿತ್ರ್ಯಗಳು, ವ್ಯಕ್ತಿಗೆ ಸಂಬಂಧಿಸಿದ ಸಾಧನೆ, ದುರಂತ, ವಂಚನೆ ಮುಂತಾದ ಸಂಗತಿಗಳ ನೆನಪುಗಳು ಐತಿಹ್ಯಗಳ ಸೃಷ್ಟಿಗೆ ಕಾರಣವಾಗುತ್ತವೆ.

ನಂಬಿಕೆಯೇ ಐತಿಹ್ಯದ ಜೀವಾಳ. ನಡೆದಿದೆಯೆಂಬ ದೃಢತೆಯಿಂದ ಐತಿಹ್ಯವನ್ನು ಒಪ್ಪಿಕೊಳ್ಳುತ್ತಾರೆ. ಎಷ್ಟೋ ವೇಳೆ ನಂಬಿಕೆಗಳು ಐತಿಹ್ಯಗಳ ಸೃಷ್ಟಿಗೆ ಕಾರಣವಾಗುತ್ತವೆ. ಪಾಂಡವರು ವನವಾಸ ಮಾಡಿದರು ಎಂಬ ನಂಬಿಕೆ ಎಷ್ಟೋ ಸ್ಥಳಗಳಿಗೆ ಆರೋಪಿತವಾಗಿ ಐತಿಹ್ಯದ ರೂಪವನ್ನು ಪಡೆದಿದೆ. ನಂಬಿಕೆಯ ಸಣ್ಣ ಘಟಕವೊಂದು ಐತಿಹ್ಯವಾದಾಗ ದೀರ್ಘ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಆದರೆ ಪುರಾಣದಂತೆ ಸುದೀರ್ಘವಾಗಿ ಹೆಣೆಯಲ್ಪಡುವುದೂ ಇಲ್ಲ. ಕಥೆಯನ್ನು ಹೆಚ್ಚಿನ ವರ್ಣನೆ ವಿವರಣೆಗಳಿಂದ ಬೆಳೆಯುತ್ತಾ ಹೋಗುವುದೂ ಇಲ್ಲ. ಏಕೆಂದರೆ ಐತಿಹ್ಯದಲ್ಲಿ ಕಥೆಗೆ ಕಾರಣವಾದ ವಸ್ತು ಮೊದಲೇ ವಾಸ್ತವ ಪ್ರಪಂಚದಲ್ಲಿ ನಡೆದಿರುತ್ತದೆ ಅಥವಾ ಹಾಗೆಂದು ಜನಪದರು ಭಾವಿಸುತ್ತಾರೆ. ಯಾವುದೋ ಒಂದು ನಿರ್ದಿಷ್ಟತೆಗೆ ಇಡೀ ಕತೆ ಬದ್ಧವಾಗಿರುತ್ತದೆ. ಐತಿಹ್ಯಗಳ ಕ್ರಿಯೆ ವಾಸ್ತವ ಪ್ರಪಂಚಕ್ಕೆ ಸಂಬಂಧಿಸಿರುವುದರಿಂದ ಇದು ಕೇಳುವವರಿಗೆ ತೀರಾ ಹತ್ತಿರ ಮತ್ತು ಅದರ ಪರಿಣಾಮ ನೇರ, ಗಾಢತನ, ಭಾವನಾತ್ಮಕ-ಘಟನೆಗಳ ಹಿನ್ನೆಲೆಯಾಗಿ ಐತಿಹ್ಯಗಳು ರೂಪುಗೊಳ್ಳುತ್ತವೆ. ಇವುಗಳಲ್ಲಿ ಘಟನೆ ನಡೆದಿದೆ ಯೆಂದು ತೋರಿಸುವ ಸ್ಥಳದ ಆಧಾರವು ಪ್ರಧಾನವಾದರೂ ವಿವರಣೆಯೆ ಅದರ ಪೋಷಣೆಯಾಗುತ್ತದೆ. ಆದ್ದರಿಂದ ಐತಿಹ್ಯದ ಆಧಾರ ಹಾಗೂ ವಿವರಣೆಗಳನ್ನು ಬೆನ್ನೆಲುಬು ಒಡಲುಗಳಾಗಿ ಗುರುತಿಸಬಹುದು. ನಿರೂಪಣೆಯನ್ನು ಪೋಷಣೆಯೆನ್ನಬಹುದು.

ಸದಾ ಮನುಷ್ಯನ ಕುತೂಹಲಕ್ಕೆ ಕಾರಣವಾದದ್ದು ಪ್ರಕೃತಿ. ಪ್ರಕೃತಿಯೊಂದಿಗೆ ಮನುಷ್ಯನಿಗಿರುವ ವಿಸ್ಮಯ ಆತಂಕಗಳು ಭಯ-ಭಕ್ತಿಗಳಿಗೆ ಕಾರಣವಾಗಿವೆ. ಪ್ರಕೃತಿಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ

ಅನಿವಾರ್ಯತೆ ಇರುವುದರಿಂದ ತಾರ್ಕಿಕತೆಗೆ ಮೀರಿದ ವಿಷಯಗಳನ್ನು ಮೂರ್ತ-ಅಮೂರ್ತ ಭಾವನೆಗಳನ್ನು ಪ್ರಕೃತಿಯ ಸಹಜತೆ-ವೈಚಿತ್ರ್ಯಗಳಿಗೆ ಆರೋಪಿಸುತ್ತಾನೆ. ಇಂಥ ಸಂದರ್ಭಗಳಲ್ಲಿ ಅತಿಮಾನುಷ ಅಂಶಗಳು ಇಲ್ಲವೇ ಪುರಾಣದ ಕಲ್ಪನೆಗಳನ್ನು ಪ್ರಕೃತಿಯೊಂದಿಗೆ ಸರಿ ಹೊಂದಿಸುವ ಪ್ರಯತ್ನ ನಡೆಯುತ್ತದೆ. ಅದು ಐತಿಹ್ಯವಾಗಿ ಸ್ಥಳಪುರಾಣವಾಗಿ ಪರಿಚಲನಗೊಳ್ಳುತ್ತದೆ. ಐತಿಹ್ಯಗಳ ಮೂಲಕ ವರ್ತಮಾನ ಕಾಲದಲ್ಲಿದ್ದು ಕೊಂಡು ಭೂತಕಾಲವನ್ನು ಆರಾಧಿಸುವ ಮೂಲಕ ಐತಿಹಾಸಿಕ ಪ್ರಜ್ಞೆಯನ್ನು ಹೊಂದಿರುತ್ತಾರೆ. ಆದರೆ "ಚರಿತ್ರೆಯ ದೊಡ್ಡ ಸಮಸ್ಯೆಯೆಂದರೆ ಅದು ಸಂಪೂರ್ಣವಾಗಿ ಭೂತವನ್ನು ವರ್ತಮಾನದಿಂದ ಪ್ರತ್ಯೇಕ ಮಾಡಿಬಿಡುತ್ತದೆ. ಸೌಹಾರ್ದಯುತವಾಗಿ ಭೂತ ಮತ್ತು ವರ್ತಮಾನ ಒಟ್ಟಿಗೇ ಇರಬಲ್ಲವು ಎಂಬ ಸಾಧ್ಯತೆಯನ್ನು ಅದು ಗಣನೆಗೆ ತೆಗೆದುಕೊಳ್ಳುವುದೇ ಇಲ್ಲ. ಹಾಗೂ ಕಾಲದ ಛಿದ್ರೀಕರಣ ಕೇವಲ ಕೃತಕವಾದದ್ದು ಎಂಬುದನ್ನು ಅರ್ಥಮಾಡಿಕೊಳ್ಳುವುದಿಲ್ಲ"[3] ಎಂಬ ಅಭಿಪ್ರಾಯಗಳು ಲಿಖಿತ ಚರಿತ್ರೆಯ ಸ್ವರೂಪವನ್ನು ಕುರಿತಂಥವುಗಳು. ರಾಮ-ಲಕ್ಷ್ಮಣ ಸೀತೆಯರು ಅಥವಾ ಪಾಂಡವ ಪರಿವಾರವು ವಾಸವಾಗಿದ್ದರೆಂಬ ಸ್ಥಳೈತಿಹ್ಯಗಳಿಗೆ ಆಧಾರವೆಂದು ತೋರುವ ಕುರುಹುಗಳು ಪುರಾಣಗಳ ಬಗ್ಗೆ ಜನಪದರಿಗೆ ಇರುವ ಗೌರವಾದರಗಳನ್ನು ತೋರಿಸುತ್ತದೆ. ಪೌರಾಣಿಕ ವ್ಯಕ್ತಿಗೂ ಘಟನೆಗೂ ಪ್ರಕೃತಿಯ ಸ್ವರೂಪಕ್ಕೂ ಐತಿಹ್ಯದ ಮೂಲಕ ಸಂಬಂಧ ಕಲ್ಪಿಸುವ ಪ್ರಯತ್ನವನ್ನು ಕಾಣಬಹುದು. ಎಲ್ಲಿಯೋ ಯಾವ ಲೋಕದಲ್ಲಿಯೋ ನಡೆದಿವೆಯೆಂಬ ಪುರಾಣದ ಅತಿಮಾನುಷ ಘಟನೆಗಳಿಗೆ ಸ್ಪಂದಿಸುವ ಜನಪದರ ಸಹೃದಯತೆ ತಮಗೆ ಪರಿಚಿತವಿರುವ ಸ್ಥಳಗಳಲ್ಲಿ ಅನ್ವಯಿಸಿ ಅರ್ಥೈಸಿಕೊಳ್ಳುವಲ್ಲಿ ಅನುವಾಗುತ್ತದೆ. ಅಲ್ಲದೆ ಪುರಾಣದ ಸರಿಕಲ್ಪನೆಗಳನ್ನು ಪರಿಭಾವಿಸುವ ಜನಪದರ ಮನಸ್ಸಿಗೆ ಪರಿಚಿತವಾದ ಪ್ರಕೃತಿಯ ಹಿನ್ನೆಲೆಯಿಂದ ಅದು ಅನುಭವದಂತೆ ವೇದ್ಯವಾಗುತ್ತದೆ. ಅಮೂರ್ತವಾದ ಪುರಾಣದ ಪ್ರತೀಕಗಳನ್ನು ಈ ನೆಲದ ಮೂರ್ತ ನೆಲೆಗಳ ಮೂಲಕ ಗ್ರಹಿಸಲು ಅನುವಾಗುತ್ತದೆ.

ಚರಿತ್ರೆ ಅಥವಾ ಇತಿಹಾಸಕ್ಕೆ ಸಂಬಂಧಿಸಿದ ವ್ಯಕ್ತಿ, ಸ್ಥಳ ಹಾಗೂ ಘಟನೆಗಳನ್ನು ಬಿಂಬಿಸುವಲ್ಲಿ ಐತಿಹ್ಯವು ಅನುವಾಗುತ್ತದೆ. ಚರಿತ್ರೆ ಅಥವಾ ಇತಿಹಾಸ ಎಂದರೆ ರಾಜ, ಪರಿವಾರ, ಸಾಮ್ರಾಜ್ಯ, ವೈಭವ, ದಿಗ್ವಿಜಯ, ಅವನತಿಗಳೆಂಬ ಆವರಣಗಳಲ್ಲಿ ನಮಗೆ ಲಿಖಿತ ವಿವರಣೆಗಳು ಒದಗುತ್ತವೆ. ಆದರೆ ಜನ ಸಾಮಾನ್ಯರು ಕಂಡ, ಅರ್ಥೈಸಿಕೊಂಡ ಗ್ರಹಿಸಿದ ಇತಿಹಾಸದ ಅನುಭವಗಳು ಐತಿಹ್ಯಗಳಲ್ಲಿ ಲಭ್ಯವಾಗುತ್ತವೆ. ಲಿಖಿತ ಚರಿತ್ರೆಯಲ್ಲಿನ ವಿವರಗಳು ರಾಜನ ಪರವಾದ ದೃಷ್ಟಿಕೋನದಿಂದ ಕೂಡಿದ್ದಾಗಿರುತ್ತವೆ. ಐತಿಹ್ಯ ಗಳು ಜನಪರ ದೃಷ್ಟಿಕೋನದಿಂದ ಇತಿಹಾಸವನ್ನು ಪುನರ್‌ಸೃಷ್ಟಿ ಮಾಡಿಕೊಡುತ್ತವೆ. ಹೀಗೆ ಐತಿಹ್ಯಗಳಲ್ಲಿ ವಿವಿಧ ಪ್ರಕ್ರಿಯೆಗಳು ನಡೆಯುತ್ತವೆ. ಐತಿಹ್ಯಗಳಲ್ಲಿ ಕೆಲವು ಸ್ಥಳೀಯ ವೈಶಿಷ್ಟ್ಯತೆಗಳಿಗೆ ಒಗ್ಗಿಕೊಂಡಿರುತ್ತವೆ. ಮತ್ತೆ ಕೆಲವು ಸಂಚಾರಿ ಗುಣಧರ್ಮಗಳಿಂದ ಕೂಡಿರುತ್ತವೆ. ಜನಸಾಮಾನ್ಯರ ನೋವು-ನಲಿವುಗಳು, ಕಷ್ಟ-ಕಾರ್ಪಣ್ಯಗಳನ್ನು ಲಿಖಿತ ಚರಿತ್ರೆಯು ಬಿಂಬಿಸುವುದಿಲ್ಲ. ಐತಿಹ್ಯಗಳು ಇಂಥ ಸಂಗತಿಗಳನ್ನು ಸಾರುತ್ತವೆ.

ಸೂಳೆಕೆರೆ, ಸೂಳೆಬಾವಿ, ಸಾಲಗಾರನಕೆರೆ ಇತ್ಯಾದಿ ಐತಿಹ್ಯಗಳು ಜನಸಾಮಾನ್ಯರ ಸಾಧನೆಗಳನ್ನು ತೋರುವುದಲ್ಲದೆ, ಸಾಮಾಜಿಕ ಅಥವಾ ಧಾರ್ಮಿಕ ಒತ್ತಡಗಳಿಗೆ ಬಲಿಯಾಗಿ ಅಸಹಾಯಕತೆಯಿಂದ ಪ್ರಾಣಾರ್ಪಣೆ ಮಾಡಿದವರ ಬದುಕಿನ ಬವಣೆಯನ್ನು ಸಾರುತ್ತವೆ. ಕೋಟೆ-ಕೆರೆಗಳ ಬಲಿ, ಮಹಾಸತಿ ಆಚರಣೆ ಮತ್ತು ವೀರಮರಣಗಳ ಹಿಂದೆ ಅಡಗಿರುವ ಒತ್ತಡ, ಕ್ರೌರ್ಯಗಳನ್ನು ಬಿಂಬಿಸುತ್ತವೆ. ಒಟ್ಟಾರೆ ಮಾನವ ವರ್ಗದ ಅನುಭವಗಳು ಜನಪದರ ಮೌಖಿಕ ಪರಂಪರೆಯಲ್ಲಿ ಆಧಾರಗಳನ್ನು ನೀಡಿ 'ಹೀಗೆ ನಡೆದಿದೆ' ಎಂದು ನಿರೂಪಿತವಾಗಿ ಕೆಲವು ವಾಸ್ತವಾಂಶಗಳನ್ನು ಉಳಿಸಿಕೊಂಡಿರುತ್ತವೆ. ಆದ್ದರಿಂದ ಚರಿತ್ರೆಕಾರರಿಗೆ, ಸಮಾಜವಿಜ್ಞಾನಿಗಳಿಗೆ ಮಾನವಶಾಸ್ತ್ರದ ಅಧ್ಯಯನಕಾರರಿಗೆ ಸಾಹಿತಿಗಳಿಗೆ ಇತ್ಯಾದಿ ಸಂಶೋಧಕರಿಗೆ ಅಮೂಲ್ಯ ಆಧಾರಗಳನ್ನು ನೀಡುತ್ತವೆ.

ಐತಿಹ್ಯಗಳಲ್ಲಿ ಕಂಡುಬರುವ ಕಲ್ಪನೆ, ಉತ್ಪ್ರೇಕ್ಷೆ, ಪವಾಡ, ಪುರಾಣ ಮುಂತಾದ ಅಂಶಗಳು ಮೇಲ್ನೋಟಕ್ಕೆ ನಿಜಸಂಗತಿಯನ್ನು ಮರೆಮಾಚುತ್ತವೆ ಎನಿಸಿದರೂ ಜನಪದರ ಸಾಂಸ್ಕೃತಿಕ ಚರಿತ್ರೆಯ ಅನೇಕ ಅಂಶಗಳನ್ನು ಹೇಳುತ್ತಿರುತ್ತವೆ. ನಂಬಿಕೆ ಆಚಾರ ವಿಚಾರಗಳ ಹಿನ್ನೆಲೆಯಲ್ಲಿ ಜನಸಮೂಹಗಳ ಬದುಕಿನ ಕ್ರಮವನ್ನು ಚಿಂತನಶೀಲತೆಯನ್ನು ನಿರೂಪಿಸುತ್ತವೆ. ಹೀಗೆ ಐತಿಹ್ಯದ ಸ್ವರೂಪವು ಮೌಖಿಕ ಆಧಾರದ ಎಳೆಯ ಮೇಲೆ ಕಥೆ, ಚರಿತ್ರೆ, ಪುರಾಣ, ಗಾದೆ, ಒಗಟುಗಳ ಹಂದರದ ಮೇಲೆ ಕೆಲವು ಜನಪದ ಗೀತೆಗಳ ಜನಪದ ಕಲೆಗಳ ಜೀವಂತಿಕೆಗೆ ಕಾರಣವಾಗುತ್ತದೆ. ಐತಿಹ್ಯದ ನಿರೂಪಕ ಹಾಗೂ ಕೇಳುವ ಜನಪದ ವರ್ಗ ನಡೆದ ಘಟನೆಗೆ ಸಮಕಾಲೀನ ಸಂದರ್ಭದಲ್ಲೂ ಜೀವಂತಿಕೆ ನೀಡುವುದರಿಂದ ಐತಿಹ್ಯವು ಸೃಜನಾತ್ಮಕ ಪ್ರಕ್ರಿಯೆಯಾಗುತ್ತದೆ.

### ಐತಿಹ್ಯಗಳ ವೈಶಿಷ್ಟ್ಯಗಳು, ಆಶಯಗಳು

ಐತಿಹ್ಯಗಳು ಯಾವ ಸಮುದಾಯ ಅಥವಾ ಸಮಾಜ ಇಲ್ಲವೇ ಪ್ರದೇಶದಲ್ಲಿ ಮೊದಲು ರೂಪುಗೊಂಡಿರಬಹುದೆಂದು ನಿರ್ಧರಿಸುವುದು ಅಸಾಧ್ಯದ ಸಂಗತಿ. ಒಟ್ಟಾರೆ ಮನುಷ್ಯ ಪ್ರಕೃತಿಯೊಂದಿಗೆ ಹೊಂದಾಣಿಕೆಯಾಗುತ್ತಾ ಸಂಸ್ಕೃತಿಯನ್ನು ರೂಪಿಸಿಕೊಂಡ ಹಂತದಿಂದಲೇ ಜನಪದಗಳು ವಿಸ್ತಾರಗೊಳ್ಳ ತೊಡಗಿದವು. ಜನಪದ ಜ್ಞಾನಶಾಖೆಗಳಲ್ಲಿ ತೋಂಡಿ ಪರಂಪರೆಯು ಪ್ರಮುಖ ಅಂಶವಾಗಿದ್ದು, ಜ್ಞಾನಶಾಖೆಗಳ ಪ್ರಕಾರಗಳಿಂದ ಮೊತ್ತವಾದ ಜಾನಪದವು ಸೃಷ್ಟಿಯಾಯಿತು. ಇಂಥ ಶಾಖೆಗಳ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಐತಿಹ್ಯವು ಯಾವ ಹಂತದಲ್ಲಿ ರಚನೆಯಾಗಿರಬಹುದು ಎಂಬುದೂ ಕಷ್ಟಕರ ಸಂಗತಿ. ಜನಪದ ಸಾಹಿತ್ಯದ ಗದ್ಯಪ್ರಕಾರಗಳಲ್ಲಿ ಕಥೆ, ಪುರಾಣ, ಐತಿಹ್ಯಗಳನ್ನು ಅವಲೋಕಿಸಿದಾಗ ಐತಿಹ್ಯವನ್ನೇ ಮೊದಲು ಸೃಷ್ಟಿ ಮಾಡಿದಂತೆ ಅನ್ನಿಸುತ್ತದೆ. ಪ್ರಕೃತಿಯ ವೈಚಿತ್ರ್ಯಗಳನ್ನು ಹೇಗೆ ಎಂದು ಅರ್ಥೈಸಿಕೊಳ್ಳಲು ಹೊರಟ ಮನುಷ್ಯನಿಗೆ ನಡೆದ ಘಟನೆಗಳು ಅನುಭವಗಳು ಹೀಗೆ ಎಂದು ಉತ್ತರ

ನೀಡಿವೆ. ಇಲ್ಲಿ ಹೀಗೆ ನಡೆಯಿತು ಅಲ್ಲಿ ಹಾಗೆಂದು ತಿಳಿಯಿತು ಎಂಬ ಅಂಶಗಳೇ ಐತಿಹ್ಯಗಳನ್ನು ಸೃಷ್ಟಿ ಮಾಡಿವೆ. ಎಲ್ಲಿ ನಡೆದಿದೆ ಎಂಬ ಸ್ಥಳದ ಅಥವಾ ಘಟನೆಯೂ ಸ್ಪಷ್ಟನೆ ಇಲ್ಲದೆ ಘಟನೆಗಳ ವಿವರಗಳು ಬೆಳೆದು ಕಥೆಗಳಾಗಿವೆ. ಇಂಥದೇ ಘಟನೆಗಳು ಈ ಲೋಕದಿಂದ ಆಚೆಗೂ ವ್ಯಾಪಿಸಿ ಅತಿಮಾನವೀಯ ಗುಣಗಳನ್ನು ಹೊಂದಿ ಪುರಾಣಗಳಾಗಿ ಪರಿಣಮಿಸಿರಬಹುದು.

ಮಾನವನು ವಿಕಾಸದ ಹಂತದಲ್ಲಿ ವಿಸ್ಮಯಗಳಿಗೆ ಪ್ರತಿಕ್ರಿಯಿಸುವಾಗ ಜನಪದ ಕಲೆಗಳು ರೂಪುಗೊಂಡವೆಂದು ಹೇಳುತ್ತಾರೆ. ಇಂಥ ವಿಸ್ಮಯಗಳಿಗೆ ಮೌಖಿಕ ಆಧಾರವಾಗಿ ಐತಿಹ್ಯಗಳು ಹುಟ್ಟಿರಬಹುದು. ಇಲ್ಲವೇ ವಿಕಾಸದ ಹಂತದಲ್ಲಿ ಮನುಷ್ಯನು ಭಾಷೆಯನ್ನು ರೂಢಿಸಿಕೊಂಡಾಗಲೇ ತನ್ನ ಸುತ್ತಮುತ್ತಲಿನ ಪರಿಸರದಲ್ಲಿ ಏನಾಯಿತು ಎಂಬುದನ್ನು ಹೇಳತೊಡಗಿದ. ಅದೇ ಘಟ್ಟವು ಐತಿಹ್ಯಗಳ ಸೃಷ್ಟಿಗೆ ಕಾರಣವಾಗಿದೆ. ಈ ಘಟ್ಟದಲ್ಲಿ ಅವನ ಸ್ವಂತಿಕೆಗೊಂದು ಆಧಾರ ಬೇಕಾಗಿತ್ತು. ಇದರಿಂದ ಇತರರಲ್ಲಿ ಭರವಸೆ ಮೂಡಿಸುವುದಕ್ಕಾಗಿ, ಒಪ್ಪಿಕೊಳ್ಳುವಂತೆ ಮಾಡುವುದಕ್ಕಾಗಿ ಮೌಖಿಕ ಆಧಾರಗಳನ್ನು ನೀಡುತ್ತಿದ್ದ. ಇದನ್ನು ಒಪ್ಪಿಕೊಂಡ ಸಮೂಹವು ಉಳಿದವರಿಗೆ ಅದನ್ನು ನಿರೂಪಿಸ ತೊಡಗಿದ್ದಲ್ಲದೆ, [ತಮ್ಮದೆಂಬ ಸಹೃದಯಿತೆಯಿಂದ] ಐತಿಹ್ಯಗಳ ಸೃಷ್ಟಿಯನ್ನೂ, ಪ್ರಸರಣವನ್ನೂ ಮುಂದುವರೆಸಿತು. ಮನುಷ್ಯ ಭಾಷೆಯನ್ನು ಕಂಡುಕೊಂಡಂಥ ಕಾಲದಿಂದಲೂ ಸಾಹಿತ್ಯ ಭಾಷೆಯ ಭಾಗವಾಗಿ ಬೆಳೆಯತೊಡಗಿತು. ಸ್ಮರಣಶಕ್ತಿಯ ಮೂಲಕ ಭಾಷೆ ಹಾಗೂ ಸಾಹಿತ್ಯ ಕಂಠಸ್ಥ ಪರಂಪರೆಯಲ್ಲಿ ಬೆಳೆದು ಬಂದು ಯಾವುದೋ ಒಂದು ಹಂತದಲ್ಲಿ ಭಾಷೆಗೆ ಲಿಪಿಯನ್ನು ಕಂಡುಕೊಂಡರು. ಲಿಪಿಯ ಸೌಲಭ್ಯ ಭಾಷೆಗೆ ಮತ್ತೊಂದು ಆಯಾಮವಾದಾಗಲೂ ಲಿಪಿಯ ಜ್ಞಾನ ಪಡೆಯದ ಸಮೂಹಗಳು ಭಾಷೆ ಮತ್ತು ಸಾಹಿತ್ಯಗಳನ್ನು ಕಂಠಸ್ಥವಾಗಿಯೇ ಉಳಿಸಿಕೊಂಡರು. ಬದುಕು-ಭಾಷೆ-ಸಾಹಿತ್ಯಗಳು ಇಂಥ ಜನಪದರ ಜೀವನದಲ್ಲಿ ಅವಿಭಾಜ್ಯ ಅಂಗಗಳಾದವು.

ಜನಪದರ ಬದುಕಿನ ಶ್ರಮದ ಹಿನ್ನೆಲೆಯಲ್ಲಿ ಸಾಹಿತ್ಯ ಸೃಷ್ಟಿಯಾಯಿತೆಂದು ಹೇಳುತ್ತಾರೆ. ದೈನಂದಿನ ಬದುಕಿನ ಒಗ್ಗುವಿಕೆ ಹಾಗೂ ಒತ್ತಡಗಳು ಮತ್ತು ದುಡಿಮೆ ಸೃಜನಶೀಲತೆಗೆ ಕಾರಣವಾಯಿತು. ದುಡಿಮೆ ಬದುಕಿನಲ್ಲಿ ಅನಿವಾರ್ಯವಾದಾಗ ದುಡಿಮೆಯ ಏಕತಾನತೆ ಶ್ರಮದ ಜಂಜಡಗಳಿಂದ ಪರಿಹಾರ ಪಡೆಯುವ ಸಲುವಾಗಿ ಸಾಹಿತ್ಯ - ಕಲೆಗಳು ಹುಟ್ಟಿಕೊಂಡವು. ಶ್ರಮದ ಉಪಉತ್ಪಾದನೆಯಾದ ಸಾಹಿತ್ಯದ ಸೃಜನಶೀಲತೆಯಲ್ಲಿ ಅನುಭವಗಳೊಂದಿಗೆ ಅಭಿವ್ಯಕ್ತಿಗಳನ್ನು ಬೆಸೆಯುವ ಹಂತದಲ್ಲಿ ಮೂರ್ತ-ಅಮೂರ್ತ ಭಾವಗಳು ವಾಸ್ತವ ಬದುಕಿನ ಆಚೆಗೆ, ಬೌದ್ಧಿಕ ಜಗತ್ತನ್ನು ದಾಟಿದ ಮತ್ತೊಂದು ಕಾಲ್ಪನಿಕ ಲೋಕವನ್ನು ಸೃಷ್ಟಿಸತೊಡಗಿದರು. ಪ್ರಕೃತಿಯ ಅಗೋಚರ-ಅತಿಮಾನವೀಯ ಶಕ್ತಿಗಳನ್ನು ಸೀಮಿತ ಅನುಭವ ವಲಯಕ್ಕೆ ತಂದು ಅರ್ಥೈಸಿಕೊಳ್ಳುವಾಗ ಕಲ್ಪನೆ ರಮ್ಯತೆಗಳು ಕಂಡುಬಂದವು. ಇಂಥ ಸಂದರ್ಭಗಳು ಮೌಖಿಕ ಅಭಿವ್ಯಕ್ತಿಗೆ ಕಥೆ-ಗೀತೆ-ಪುರಾಣ ಐತಿಹ್ಯಗಳಾಗಿ ಕವಲೊಡೆಯಿತು. ಇವುಗಳೊಂದಿಗಿನ

ಲೋಕಾನುಭವ ಗಾದೆ-ಒಗಟು-ಒಡಪುಗಳು ಮತ್ತಷ್ಟು ಸಾಹಿತ್ಯಿಕ ಪ್ರಕ್ರಿಯೆ ಬೆಳೆಯತೊಡಗಿತು. ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಐತಿಹ್ಯವು ಎಲ್ಲದರೊಂದಿಗೂ ಸಂಬಂಧವನ್ನು ಸ್ಥಾಪಿಸಿಕೊಂಡಿದೆ. ಕಥೆಯ ಗುಣಗಳನ್ನು ಪುರಾಣದ ಆಶಯಗಳನ್ನು ತನ್ನ ಶರೀರವನ್ನಾಗಿಸಿಕೊಂಡಿದ್ದರೂ ವಸ್ತು ಮತ್ತು ಘಟನೆಯನ್ನು ವಾಸ್ತವವೆಂದು ಸಾರುವಾಗ ಆಧಾರವೊಂದನ್ನು ಒದಗಿಸುವುದು ಐತಿಹ್ಯದ ವಿಶಿಷ್ಟತೆ. ಎಲ್ಲಿ, ಏಕೆ, ಹೇಗೆ ಎಂಬಿತ್ಯಾದಿ ಪ್ರಶ್ನೆಗಳಿಗೆ ಭೌತಿಕ ಜಗತ್ತಿನಲ್ಲಿ ಉತ್ತರವನ್ನು ಸಮರ್ಥಿಸುವುದು ಐತಿಹ್ಯದಲ್ಲಿ ಮಾತ್ರ. ಕಥೆ-ಐತಿಹ್ಯಗಳ ವಸ್ತು ಘಟನೆ-ಸಂದರ್ಭಗಳು ಜನಪದರಲ್ಲಿ ಮನನೀಯವಾದಂತೆಲ್ಲ ಗೇಯತೆಯ ಲಕ್ಷಣ ಪಡೆದು ಗೀತೆಗಳಾಗುತ್ತವೆ. ಕೆಲವು ಐತಿಹ್ಯಗಳು ಕಥಾನಕದಿಂದ (ಗದ್ಯದಿಂದ) ಪದ್ಯಗಳಾಗುತ್ತವೆ. ಉದಾ : ಸಿರಿಪಾಡ್ದನ್, ಉತ್ತರಾದೇವಿಯಕಥೆ, ಈರೋಬಿಕಥೆ ಇತ್ಯಾದಿ.

ತಲೆಮಾರಿನಿಂದ ತಲೆಮಾರಿಗೆ ಸಾಂಪ್ರದಾಯಿಕವಾಗಿ ಸಂವಹನಗೊಂಡ; ಲಿಖಿತ ಚರಿತ್ರೆಯಲ್ಲಿ ದಾಖಲಾಗದ; ಜನ ನಡೆದಿದೆ ಎಂದು ನಂಬುವ ವೃತ್ತಾಂತಗಳನ್ನು ಐತಿಹ್ಯಗಳೆಂದು ಕರೆಯಬಹುದು. "ಅರ್ವಾಚೀನ ಬಳಕೆಯಲ್ಲಿ ಐತಿಹ್ಯವೆಂಬ ಪದಕ್ಕೆ ಪ್ರಧಾನವಾಗಿ ಎರಡು ಅರ್ಥಗಳಿವೆ. ನಾಣ್ಯ, ಸ್ಮಾರಕ, ಪದಕ ಮೊದಲಾದವುಗಳ ಮೇಲಿನ ಶಾಸನ ಮತ್ತು ಚರಿತ್ರೆಯಂತೆ ತಾಳೆ ನೋಡಲಾಗದ, ಪ್ರಾಚೀನ ಮೂಲವುಳ್ಳದೆಂದು ಗ್ರಾಹ್ಯವಾಗಿರುವ ಬರವಣಿಗೆಯ ಕಥನ". In modern usage, however the word has two Principal meanings (1) An Inscription on a coin or medal especially once around the rim and (2) Any written story supposedly of Ancient Orgin and Unverifiable as history.[೩] ಪ್ರಾದೇಶಿಕ ವಸ್ತು-ಆಶಯ ಗುಣಧರ್ಮಗಳ ಸತ್ವವನ್ನೊಳಗೊಂಡ ಐತಿಹ್ಯಗಳು ಸ್ಥಳೀಯ ಆಗು-ಹೋಗುಗಳ, ಸ್ಥಿತಿ-ಗತಿಗಳ ಸತ್ವದಿಂದ ಕೂಡಿರುತ್ತವೆ. ಇಂಥ ಐತಿಹ್ಯಗಳಿಗೆ ಪ್ರಾದೇಶಿಕವಾದ ಪ್ರಭಾವ ಪರಿಣಾಮಗಳು ಪ್ರೇರಣೆಗಳಾಗಿರುತ್ತವೆ. ರಾಜಕೀಯ ವಾತಾವರಣ, ಉತ್ಪಾದನಾ ವಿಧಾನಗಳು, ಸಾಮಾಜಿಕತೆ, ಪ್ರಾದೇಶಿಕ ಬದುಕನ್ನು ನಿಯಂತ್ರಿಸುತ್ತವೆ. ಆದ್ದರಿಂದ ಪ್ರಾದೇಶಿಕ ಐತಿಹ್ಯ ಗಳಿಗೊಂದು ಮಹತ್ವವಿರುತ್ತದೆ.

ಜನಪ್ರಿಯತೆಯ ಕಾರಣದಿಂದ ಕೆಲವು ಐತಿಹ್ಯಗಳು ವಲಸೆಯ ರೂಪದಲ್ಲಿ ಎಲ್ಲೆಲ್ಲೂ ನೆಲೆಗೊಳ್ಳುತ್ತವೆ ಎಂಬುದು ಸರಳವಾದ ಮಾತು. ಆದರೆ ಎಲ್ಲೆಲ್ಲೂ ವಲಸೆ ಐತಿಹ್ಯಗಳಿಗೂ ಜನಪ್ರಿಯತೆಯೊಂದೇ ಕಾರಣವಲ್ಲ. ಏಕೆಂದರೆ, ಯಾವುದೋ ಒಂದು ಸಮಾಜ, ಸಂಸ್ಕೃತಿ, ಧರ್ಮ, ಪುರಾಣ, ಆರಾಧನೆ-ನಂಬಿಕೆಗೆ ಬದ್ಧವಾದ ಜನಸಮುದಾಯಗಳು ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುತ್ತಿರಬಹುದು. ಇಂಥ ಸಂದರ್ಭಗಳಲ್ಲಿ ತಾವು ಗೌರವಿಸುವ ಅಥವಾ ಅನುಸರಿಸುವ ವಾತಾವರಣಗಳನ್ನು ತಮ್ಮ ಸುತ್ತ-ಮುತ್ತಲೂ ಕಟ್ಟಿಕೊಳ್ಳುವ ವ್ಯವಸ್ಥೆ ಮನುಷ್ಯನದು. ಇಂಥ ಪರಿಸ್ಥಿತಿಯಲ್ಲಿ ಮನುಷ್ಯ ಧರ್ಮದ ಪ್ರಭಾವದಿಂದಾಗಿಯೋ, ಪುರಾಣದ ಮೇಲಿನ ಗೌರವದಿಂದಾಗಲಿ ಎಲ್ಲೋ ನಡೆದ ಕೆಲವು

ಘಟನೆಗಳನ್ನು ತನ್ನ ನೆಲದಲ್ಲಿ ಪುನರ್ ಸ್ಥಾಪಿಸಿಕೊಳ್ಳಲು ಪ್ರಯತ್ನಿಸುತ್ತದೆ. ಐತಿಹ್ಯಗಳ ಮೂಲ, ಸೃಷ್ಟಿಯಾದ ಕಾಲಘಟ್ಟ ಹಾಗೂ ಭೌಗೋಳಿಕ ಆಧಾರದ ಮೇಲೆ ವಿಶ್ಲೇಷಿಸುವುದು ಕಷ್ಟ. ಸೃಷ್ಟಿಯ ಮೂಲವನ್ನು ಕುರಿತ ಐತಿಹ್ಯಗಳು; ಪ್ರಕೃತಿಯ ಅದ್ಭುತಗಳನ್ನು, ಅನೇಕ ವಿಚಿತ್ರ ವಿಶಿಷ್ಟ ಘಟನೆಗಳನ್ನು ನಿರೂಪಿಸುತ್ತವೆ. ಇಂಥ ಐತಿಹ್ಯಗಳಿಗೆ ಧಾರ್ಮಿಕ ಪ್ರಭಾವದ ಲೇಪನವಿರುತ್ತದೆ. ಐತಿಹ್ಯಗಳಲ್ಲಿನ ವಸ್ತು ವಾಸ್ತವವಿರಬಹುದು ಅಥವಾ ಇಲ್ಲದೆಯೂ ಇರಬಹುದು. ನಿರೂಪಕರು ಅವುಗಳನ್ನು ವಾಸ್ತವಿಕ ಘಟನೆಗಳ ಆಧಾರದ ಮೇಲೆ ರೂಪಿತವಾಗಿವೆ ಎಂದೇ ಹೇಳುತ್ತಾರೆ. ಅಲ್ಲದೆ ಕೇಳುಗರಲ್ಲಿ ನಂಬಿಕೆಯನ್ನು ಹುಟ್ಟಿಸುತ್ತಾರೆ. ಕೇಳುಗನಲ್ಲಿ ಮತ್ತಷ್ಟು ಆಸಕ್ತಿಯನ್ನು ಕೆರಳುವಂತೆ ಮಾಡುವುದು ನಿರೂಪಕನ ವರ್ಣನಾ ವೈಖರಿ, ನಿರೂಪಣಾ ವಿಧಾನ. ಭಾಷೆಯ ನೈಪುಣ್ಯ ಅಭಿವ್ಯಕ್ತಿ ಕಲೆಗಾರಿಕೆಗಳಾಗಿರುತ್ತವೆ. ಭಾಷೆಯ ಕೌಶಲ್ಯ, ಕಥನಕಲೆ, ಕಾವ್ಯಾಂಶಗಳಿಂದ ಕೂಡಿದ ಐತಿಹ್ಯಗಳು ಆಯಾ ಪ್ರದೇಶ, ನಾಡು, ನುಡಿಯ ಪ್ರತೀಕಗಳಾಗುತ್ತವೆ. ಒಮ್ಮೆ ಕೇಳುಗನಾದವನು ಮತ್ತೆ ವಕ್ತೃವಾಗುತ್ತಾನೆ. ನಿರೂಪಕ ಹೀಗೆ ಕಂಠಸ್ಥ ಸಂಪ್ರದಾಯದಲ್ಲಿ ಜನಪದರ ಮನದಾಳದಲ್ಲಿ ಐತಿಹ್ಯಗಳು ನೆಲೆಸುತ್ತವೆ. ಒಮ್ಮೊಮ್ಮೆ ಜನಸಾಮಾನ್ಯರು ಅಕ್ಷರಸ್ಥ-ಅನಕ್ಷರಸ್ಥರು ಎಂಬ ಬೇಧ ಭಾವವಿಲ್ಲದೆ ಒಪ್ಪಿಕೊಳ್ಳುವಂತೆ ಆಸಕ್ತಿ ವಹಿಸುವಂತೆ ವ್ಯಕ್ತವಾಗುತ್ತವೆ. ಐತಿಹ್ಯದ ವಸ್ತುವು ಸ್ಥಳ, ವ್ಯಕ್ತಿ, ಘಟನೆಗಳನ್ನು ಕುರಿತಂತೆ ಆಧಾರವನ್ನು ಕೊಟ್ಟು ವಿವರಿಸುವುದಾಗಿರುತ್ತದೆ. ಐತಿಹ್ಯಗಳು ನಿಜವಾಗಿ ನಡೆದಿವೆ-ಘಟಿಸಿವೆ ವಾಸ್ತವಾಂಶಗಳು ಎಂದು ನಂಬುವುದಾದರೆ ಐತಿಹಾಸಿಕವೆನಿಸುತ್ತವೆ. ಲಿಖಿತ ಇತಿಹಾಸದಲ್ಲಿ ದಾಖಲಾಗದ ಮಾಹಿತಿಗಳ ಸುಳಿವುಗಳು ಐತಿಹ್ಯಗಳಿಂದ ಲಭಿಸುತ್ತವೆ.

ಅತಿಮಾನುಷ ಶಕ್ತಿಗಳೆಂದು ಜನಪದರು ನಂಬುವ ದೆವ್ವ, ಪಿಶಾಚಿ, ರಾಕ್ಷಸ, ಬೇತಾಳ ಹಾಗೂ ದೈವಿಕವಲಯದ ಶಕ್ತಿಗಳನ್ನು ಕುರಿತಂತೆ ಹಲವು ಮೂಲಗಳಿಂದ ಕೆಲವು ಐತಿಹ್ಯಗಳು ಸೃಷ್ಟಿಯಾಗುತ್ತವೆ. ಇವು ಅತಿಮಾನುಷ ಶಕ್ತಿಗಳ ಹೆಸರಿನಲ್ಲಿ ನಿಸರ್ಗದ ಅದ್ಭುತಗಳ ವೈಚಿತ್ರ್ಯಗಳನ್ನು ಹೊಂದಾಣಿಕೆ ಮಾಡಲು ಪ್ರಯತ್ನಿಸುತ್ತವೆ. ನಿರ್ದಿಷ್ಟ ಸ್ಥಳಕ್ಕೆ ಬದ್ಧವಾದಾಗ ಘಟನಾಪ್ರಧಾನ ವಿವರಣೆಯೊಂದಿಗೆ ನಂಬಿಕೆ, ಆಚರಣೆ, ಸಂಸ್ಕೃತಿ, ಸಂಪ್ರದಾಯಗಳ ಕುರುಹುಗಳಾಗಿ ಉಳಿಯುತ್ತವೆ. ನಿಸರ್ಗದತ್ತ ಅದ್ಭುತಗಳ ಹಿನ್ನೆಲೆಯಲ್ಲಿ ಸ್ಥಳನಾಮಗಳಿಗೆ ಸಂಬಂಧಿಸಿದ ಸ್ಥಳಮಹಿಮೆ, ಸ್ಥಳಪುರಾಣ, ಸ್ಥಳಚರಿತ್ರೆಗಳೆಂಬ ಸ್ಥಳೀಯ ಐತಿಹ್ಯಗಳು ಸೃಷ್ಟಿಯಾಗುತ್ತವೆ. ಸ್ಥಳೀಯ ಐತಿಹ್ಯಗಳ ವಸ್ತುವು ಯುದ್ಧಗಳಲ್ಲಿ ಮಡಿದ ವೀರರನ್ನು ಕುರಿತದ್ದು ಅಥವಾ ಯುದ್ಧ ಸಂಬಂಧ ಬಲಿಯಾದವರ ತ್ಯಾಗವನ್ನು ಪ್ರತಿನಿಧಿಸುವುದು; ಸತಿಸಹಗಮನಗಳಿಗೆ ಸಂಬಂಧಿಸಿದ್ದು ಆಗಿರುತ್ತದೆ. ಸಾಮಾಜಿಕ ನಂಬಿಕೆಗಳ ಕಾರಣದಿಂದ ಕೆರೆ-ಕೋಟೆಗಳಿಗೆ ಬಲಿಯಾದವರ ಕಥಾನಕವು ಐತಿಹ್ಯಗಳ ವಸ್ತುವಾಗಿರುತ್ತದೆ. ಜೊತೆಗೆ ತನ್ನ ಸಮುದಾಯವನ್ನು ಪ್ರಾಣಿಗಳಿಂದ, ದುಷ್ಟರ ಆಕ್ರಮಣಗಳಿಂದ ರಕ್ಷಿಸಲು ಹೋರಾಟ ನಡೆಸಿದವರ ಸಾಹಸಗಳು ಕೆಲವು ಐತಿಹ್ಯಗಳ ವಸ್ತುಗಳಾಗಿರುತ್ತವೆ. ಕೌಟುಂಬಿಕ ಭಾವ-ಸಂಬಂಧಗಳಿಗೆ ಸೇರಿದ ನೆಲೆಗಳು ಐತಿಹ್ಯಗಳ ವಸ್ತುಗಳಾಗುತ್ತವೆ. ದಾಂಪತ್ಯ ಜೀವನದ

ಅನ್ಯೋನ್ಯತೆ, ತಾಯಿ-ಮಕ್ಕಳ ಸಂಬಂಧಗಳನ್ನು ತುಂಡರಿಸುವ ಸಾವಿನ ಪ್ರಸಂಗಗಳಿಗೆ ಮಿಡಿತ ಜನಪದ ಮನಸ್ಸು ಐತಿಹ್ಯಗಳನ್ನು ರೂಪಿಸುತ್ತದೆ. ಕುಟುಂಬದ ಉನ್ನತಿ ಅವನತಿಗಳಿಗೆ ಸಂಬಂಧಿಸಿದ ವಿಷಯಗಳು ಐತಿಹ್ಯಗಳಾಗಿರುತ್ತವೆ.

**ಐತಿಹ್ಯಗಳ ವಸ್ತು :** ನಂಬಿಕೆಗಳು, ಅತಿಮಾನುಷ ಶಕ್ತಿಗಳು, ವಾಸ್ತವದಲ್ಲಿ ನಡೆದ ಘಟನೆಗಳು, ಪುರಾಣ ವ್ಯಕ್ತಿಗಳು, ಐತಿಹಾಸಿಕ ವ್ಯಕ್ತಿಗಳು-ತ್ಯಾಗ-ಬಲಿದಾನಕ್ಕೆ ಸಂಬಂಧಿಸಿದವರು, ಅನನ್ಯ ಪ್ರೀತಿಗೆ ಹೆಗ್ಗುರುತಾದವರು ಸಾಂಸ್ಕೃತಿಕ ವೀರರು, ಸಂಸ್ಕೃತಿಯ ಮೂಲಪುರುಷರು, ರಾಜರ ಸಾಧನೆಗಳು, ಜನಸಾಮಾನ್ಯರ ನೋವು-ನಲಿವು, ಸಾಧನೆ-ದುರಂತಗಳು ಇತ್ಯಾದಿ ಐತಿಹ್ಯಗಳ ವಸ್ತುಗಳಾಗುತ್ತವೆ. ಕೆಲವೊಂದು ಕಥೆಗಳು-ಹಾಡುಗಳು ಜನಪದರ ಮನಸ್ಸಿನಲ್ಲಿ ನೆಲೆಯೂರುತ್ತವೆ. ಕಥಾನಕ ಪಾತ್ರಗಳಿಗೆ ಒದಗುವ ಸಂಕಷ್ಟಗಳು ಪಾತ್ರಗಳ ದಿಟ್ಟತೆ ಸಾತ್ವಿಕತೆ ಇತ್ಯಾದಿ ಗುಣಗಳಿಗೆ ಸ್ಪಂದಿಸುವ ಜನರ ಮನಸ್ಸುಗಳು ಅಲ್ಲಿನ ಅನುಭವಗಳನ್ನು ಲೋಕಾನುಭವದಲ್ಲಿ ಕಂಡುಕೊಳ್ಳುವ ಪ್ರಯತ್ನವನ್ನು ಮಾಡುತ್ತವೆ. ಎಲ್ಲಿಯೋ ನಡೆದಿವೆಯೆಂಬ ಘಟನೆಗಳನ್ನು ತಮ್ಮ ಸುತ್ತ-ಮುತ್ತ ನಡೆದಂತೆ ಆರೋಪಿಸುತ್ತಾರೆ. ಇಂಥ ಸಂದರ್ಭಗಳು ಐತಿಹ್ಯಗಳ ಆಶಯಗಳಾಗುತ್ತವೆ. ಮನುಷ್ಯನ ಇಂದ್ರಿಯಗಳಿಗೆ ಎಟಕುವ ಜಗತ್ತು ಮನಸ್ಸು ಕಟ್ಟುವ ವಾಸ್ತವ ಹಾಗೂ ಕಾಲ್ಪನಿಕ ಜಗತ್ತು, ಬೌದ್ಧಿಕ ಗ್ರಹಿಕೆಗೆ ಬರುವ ಮೂರ್ತ-ಅಮೂರ್ತ ಸಂಗತಿಗಳು ಹೀಗೆ ಅನುಭವ-ಅನುಭಾವದ ವಸ್ತು ವಿಶೇಷಗಳೆಲ್ಲವೂ ಐತಿಹ್ಯಗಳ ವಸ್ತುಗಳಾಗಬಹುದು. ಆದರೆ ಯಾವುದೇ ವಿಷಯಕ್ಕೂ ಈ ನೆಲದ ಮೇಲಿನ ಯಾವುದೋ ನೆಲೆಯನ್ನು ಒದಗಿಸುವುದರ ಮೂಲಕ ಸಾಬೀತು ಮಾಡುವ ಸಂಗತಿಯಾಗಿ ಐತಿಹ್ಯವು ಉಳಿದು ಬಿಡುತ್ತದೆ. ಇದು ಐತಿಹ್ಯದ ಮುಖ್ಯ ಗುಣ. ವ್ಯಕ್ತಿ, ಸ್ಥಳ, ಬೆಟ್ಟ, ಗುಡ್ಡ, ಕೋಟೆ, ಕೆರೆ-ಕಟ್ಟೆ, ಬಾವಿ, ಪ್ರಕೃತಿಯ ವಿಸ್ಮಯಕಾರಿ ಅಥವಾ ಭಯಂಕರವಾದ ಘಟಕಗಳು ಇತ್ಯಾದಿಗಳೆಲ್ಲವೂ ಐತಿಹ್ಯಗಳ ವಸ್ತುಗಳಿಗೆ ನೆಲೆಗಳಾಗಿವೆ.

ಜನಪದರು ತಮಗೆ ಸರಿ ಎನಿಸಿದ್ದನ್ನು, ಸರಿಯೆಂದು ಕಂಡುಕೊಂಡ ಸತ್ಯಗಳನ್ನು ಮೌಖಿಕ ಪರಂಪರೆಯಲ್ಲಿ ಅಳಿಯದೆ ಉಳಿಸಿಕೊಂಡ ಪ್ರಕಾರವಾಗಿ ಐತಿಹ್ಯವು ಪ್ರಮಾಣೀಕೃತವಾಯಿತು. ನಿರ್ದಿಷ್ಟ ವಸ್ತು-ವಿಷಯಗಳಿಗೆ ಅಂಟಿಕೊಂಡು ಸ್ಥಿರವಾಗುವ, ಸ್ಥಳಾಂತರಗೊಂಡು ಚಲನಶೀಲತೆಯನ್ನು ಪಡೆದುಕೊಳ್ಳುವ ಗುಣವುಳ್ಳ ಐತಿಹ್ಯಗಳು ಘಟನೆಗೆ ಸಂಬಂಧಿಸಿದ ಸತ್ಯಾಂಶಗಳನ್ನು, ವಾಸ್ತವಕ್ಕೆ ಹತ್ತಿರವಾಗುವ ಸುಳಿವು-ಸೂಕ್ಷ್ಮತೆಗಳನ್ನು ಅರಿಯುವಂತೆ ಮಾಡುತ್ತವೆ. ಲೌಕಿಕ-ಅಲೌಕಿಕತೆಗಳೆರಡನ್ನೂ ಒಗ್ಗೂಡಿಸಿ ನೆಲದ ಒಡಲಿಗೆ ತಂದು ಸಮೀಕರಿಸುವ ಆಶಯುವುಳ್ಳವೂ ಆಗಿರುತ್ತವೆ. ಎಲ್ಲಿಯೋ ಎಂದೋ ನಡೆದುಹೋದ ಘಟನೆ ಇತಿಹಾಸದ ಲಿಖಿತ ಪುಟಗಳಲ್ಲಿ ದಾಖಲಾಗಿ ಭೂತಕಾಲಕ್ಕೆ ಸೇರುತ್ತದೆ. ಆದರೆ ಐತಿಹ್ಯವನ್ನು ಖಚಿತವಾಗಿ ಎಂದು ನಡೆದಿದೆ ಎಂದು ದಾಖಲಿಸುವ ಬದಲು ವರ್ತಮಾನಕ್ಕೆ ಅನ್ವಯಿಸುವ ಪ್ರಯತ್ನ

ಮಾಡುತ್ತಾರೆ. ನಿರೂಪಕ ಮತ್ತು ಕೇಳುಗರಲ್ಲಿ ಐತಿಹ್ಯದ ಸಂವಹನವೇರ್ಪಡುವಾಗಲೆಲ್ಲಾ ಅದು ವರ್ತಮಾನದ ಪ್ರಕ್ರಿಯೆಯಾಗುತ್ತದೆ.

ಪ್ರಕೃತಿಯ ವಿಸ್ಮಯ ವೈಚಿತ್ರ್ಯಗಳು ಅತಿಮಾನುಷ ಕಲ್ಪನೆಗಳು ಪುರಾಣ ಪ್ರತಿಮೆಗಳು ಇವೆಲ್ಲವನ್ನೂ ವಾಸ್ತವ ಜಗತ್ತಿನೊಂದಿಗೆ ಬೆಸೆದುಕೊಳ್ಳುವಂತೆ ಮಾಡುವುದು, ಒಂದು ಕಾಲದಲ್ಲಿ ವಾಸ್ತವ ಸತ್ಯವೆಂದು ಸೃಷ್ಟಿಯಾದದ್ದು ಕಾಲಘಟ್ಟಗಳಲ್ಲಿ ಪಡೆಯುವ ಹಲವು ಸತ್ಯಗಳ ವಿವಿಧ ಮುಖಗಳನ್ನು ಪರಿಚಯಿಸುವುದು ಐತಿಹ್ಯಗಳ ಆಶಯ. ಸೃಷ್ಟಿ ಇಲ್ಲವೇ ಜಗತ್ತಿನ ಉಗಮದ ಬಗ್ಗೆ ನಿರೂಪಿತವಾಗಿರುವ ಐತಿಹ್ಯಗಳು ಪ್ರಕೃತಿಯ ಅದ್ಭುತಗಳನ್ನು ಮನುಷ್ಯನು ಅರ್ಥೈಸಿಕೊಂಡ ಆಶಯಗಳಿಗೆ ಉದಾಹರಣೆಗಳಾಗುತ್ತವೆ. ಅದ್ಭುತಗಳನ್ನು ವಿಚಿತ್ರ ಹಾಗೂ ವಿಶಿಷ್ಟ ಘಟನೆಗಳಾಗಿ ನಿರೂಪಿಸುವ ಮೂಲಕ ಪರಂಪರೆಯಲ್ಲಿ ಉಳಿಸಿಕೊಂಡಿರುತ್ತಾರೆ. ಇವು ತಲೆಮಾರಿನಿಂದ ತಲೆಮಾರಿಗೆ ಪ್ರವಹಿಸುವಾಗ ಅಲ್ಪಸ್ವಲ್ಪ ವ್ಯತ್ಯಾಸಗಳಾಗ ಬಹುದೇ ಹೊರತು ಒಂದು ಮತ್ತೊಂದಾಗಿ ಮಾರ್ಪಾಟಾಗಿರುವುದಿಲ್ಲ. ಪುರಾಣದ ನೆರವಿನಿಂದ ರೂಪಿತವಾದ ಇಂಥ ಐತಿಹ್ಯಗಳು ಆಯಾ ಪ್ರದೇಶದ ಧಾರ್ಮಿಕ ಪ್ರಭಾವಕ್ಕೆ ಒಳಗಾಗುತ್ತವೆಯಾದರೂ ಇಂಥವು ಸಂಚಾರಿ ಐತಿಹ್ಯಗಳ ಸ್ವರೂಪ ಪಡೆದಾಗ ಭೌಗೋಳಿಕ ಆಧಾರದ ಅವಲಂಬಿಸಿಯಾಗಲಿ, ಚಾರಿತ್ರಿಕ ಹಿನ್ನೆಲೆಗಳಿಂದಾಗಲಿ ಏಕಸೂತ್ರಕ್ಕೆ ಬದ್ಧಗೊಳಿಸಲಾಗುವುದಿಲ್ಲ.

ಎಲ್ಲ ಐತಿಹ್ಯಗಳೂ ನೇರವಾಗಿ ಚರಿತ್ರೆಯನ್ನು ಕಟ್ಟಿಕೊಡದಿರಬಹುದು. ಅವು ಯಥಾವತ್ತು ಕಲ್ಪನೆಗಳು ಎನಿಸಬಹುದು. ಆದರೂ ಐತಿಹ್ಯಗಳು ಮನೋವಿಜ್ಞಾನದ ಅಂಶಗಳನ್ನು ಅಂತರ್ಗತ ಮಾಡಿಕೊಂಡಿರುತ್ತವೆ. ಭಾಷಿಕ, ಸಾಂಸ್ಕೃತಿಕ, ಚಾರಿತ್ರಿಕ, ಮಾನವಿಕ, ಸಾಮಾಜಿಕವಾಗಿ ಕೆಲವು ಸತ್ವಗಳನ್ನು ಅಥವಾ ಸತ್ಯಗಳನ್ನು ಹೇಳುತ್ತಿರುತ್ತವೆ. ಸಂಬಂಧಿಸಿದ ಪ್ರದೇಶದಲ್ಲಿ ವಿಶಿಷ್ಟವೆನಿಸುವ ಇಂಥ ಐತಿಹ್ಯವು ಏಕೆ ರೂಪುಗೊಂಡಿದೆ ಎಂದು ಪ್ರಶ್ನಿಸಿಕೊಂಡಾಗ ಐತಿಹ್ಯದ ವಿವರದೊಳಗಿನ ಸೂಕ್ಷ್ಮತೆ ಮತ್ತು ಮಹತ್ವ ಅರಿವಾಗುತ್ತದೆ. "ಐತಿಹ್ಯ ಕೆಲವು ವೇಳೆ ಸತ್ಯ ಘಟನೆಯೊಂದರಿಂದಲೇ ಹುಟ್ಟಿಕೊಂಡಿರಬಹುದು ಎಂದರೆ ಅದು ನಿಜವಾದ ಚರಿತ್ರೆಯನ್ನೊಳಗೊಂಡಿರಬಹುದು. ಆದರೆ ಯಾವತ್ತೂ ಅದರಲ್ಲಿ ಚರಿತ್ರೆಯೇ ಇರುತ್ತದೆಂದು ಅಪೇಕ್ಷಿಪಡುವುದು ಮಾತ್ರ ತಪ್ಪು. ಹೆಚ್ಚಿನ ಸಂದರ್ಭಗಳಲ್ಲಿ ಐತಿಹ್ಯದಲ್ಲಿ ಚರಿತ್ರೆ ಎಳ್ಳಷ್ಟು ಇರಲೂಬಹುದು. ಆದರೆ ಐತಿಹ್ಯ ಚರಿತ್ರೆಯ ವೇಷವನ್ನು ತಪ್ಪದೇ ಧರಿಸುತ್ತದೆ. ಅಷ್ಟೇ ಅಲ್ಲ ಅದು ಅದರ ಪ್ರಧಾನ ಲಕ್ಷಣಗಳಲ್ಲಿ ಒಂದು".[೪]

## ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಐತಿಹ್ಯಗಳ ಅಧ್ಯಯನ

ಸಮಾನ ಗುಣಧರ್ಮಗಳ ಸಮುದಾಯವು ಜನಪದವೆನಿಸುತ್ತದೆ. ಇಂಥ ಸಮುದಾಯಗಳ ತಿಳುವಳಿಕೆ, ಜ್ಞಾನ ಜಾನಪದವಾಗುತ್ತದೆ. ಯಾವುದೇ ಜನಪದ ಶಾಖೆಯ ಒಟ್ಟು ಜ್ಞಾನವನ್ನು

ಅಧ್ಯಯನಕ್ಕೆ ಒಳಪಡಿಸಿದರೆ ಅದು ಜಾನಪದ ಅಧ್ಯಯನವಾಗುತ್ತದೆ. ಉದಾ: ಹಂಪಿ ಜಾನಪದ, ಆಕಾಶ ಜಾನಪದ, ವ್ಯವಸಾಯ ಜಾನಪದ, ಹವ್ಯಕ ಜಾನಪದ ಇತ್ಯಾದಿ. ಜನಪದ ಜ್ಞಾನದ ಒಂದು ಶಿಸ್ತು ಅಥವಾ ಪ್ರಕಾರವನ್ನು ಕುರಿತ ಅಧ್ಯಯನಗಳು ಸಂಬಂಧಿಸಿದ ಪ್ರಕಾರವನ್ನು ಕುರಿತದ್ದಾಗಿರುತ್ತವೆ. ಉದಾ: ಜನಪದ ಕಲೆಗಳು, ಸಾಹಿತ್ಯ, ಸಂಗೀತ, ಆಚರಣೆಗಳು, ವೈದ್ಯ ಇತ್ಯಾದಿ. Folk ಎಂಬುದಕ್ಕೆ ಸಂವಾದಿಯಾಗಿ ಜನಪದವನ್ನೂ, Lore ಎಂಬುದಕ್ಕೆ ಕಲಿಕೆ, ಜ್ಞಾನ, ತಿಳುವಳಿಕೆ ಎಂಬರ್ಥಗಳನ್ನು ಸಮನ್ವಯಿಸಿದ್ದಾರೆ. ಇದರಂತೆ ನಿರ್ದಿಷ್ಟ ಸಮುದಾಯ(ಜನಪದ)ದ ಜ್ಞಾನ ಜಾನಪದವಾಗುತ್ತದೆ. Folklore ಎಂಬುದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಜಾನಪದವೆಂಬ ಪದವನ್ನು ಬಳಸಿದ ಹಾ.ಮಾ. ನಾಯಕರು ಹೀಗೆ ಹೇಳುತ್ತಾರೆ : "ಮಾನವನ ಸಾಂಸ್ಕೃತಿಕ ಕ್ಷೇತ್ರದಲ್ಲಿ ಜಾನಪದವು ಅತ್ಯಂತ ಮಹತ್ತರ ವಿಷಯವಾಗಿದೆ. ಈ ಐತಿಹಾಸಿಕ ವಿಜ್ಞಾನವು ಬರಿಯ ಊಹೆಯನ್ನು ಅವಲಂಬಿಸಿರುವ ಶಾಸ್ತ್ರವಾಗಿರದೆ ವಾಸ್ತವಿಕ ಆಧಾರಗಳ ಮೇಲೆ ಬೆಳೆಯುತ್ತಿರುವ ಅಧ್ಯಯನದ ವಿಷಯವಾಗಿದೆ."[8] ಈ ಮಾತು ಐತಿಹ್ಯ ಪ್ರಕಾರಕ್ಕೆ ನೂರಕ್ಕೆ ನೂರರಷ್ಟು ಅನ್ವಯಿಸುತ್ತದೆ.

ಸಂಸ್ಕೃತಿಯ ಒಂದು ಭಾಗವಾಗಿ ಜಾನಪದವು ಅಸ್ತಿತ್ವದಲ್ಲಿರುತ್ತದೆ. ಜಾನಪದದ ವಿಷಯಗಳೆಲ್ಲವೂ ಏಕಕಾಲಕ್ಕೆ ಸಂಸ್ಕೃತಿಯ ಮೂಲವಸ್ತುಗಳಾಗಿರುತ್ತವೆ. ಆದರೆ ಸಂಸ್ಕೃತಿಯ ಎಲ್ಲ ವಲಯಗಳೂ ಜಾನಪದವಾಗಲಾರವು. ಸಂಸ್ಕೃತಿಯಲ್ಲಿ ಜಾನಪದ ವಿಷಯಗಳನ್ನು ಒಳಗೊಂಡಂತೆ ಇತರೆ ವಿಷಯಗಳೂ ಇರುತ್ತವೆಯಾದರೂ ಜಾನಪದವನ್ನು ಹೊರತುಪಡಿಸಿದ ಸಂಸ್ಕೃತಿ ಇರಲಿಕ್ಕೆ ಸಾಧ್ಯವಿಲ್ಲ. ಏಕೆಂದರೆ "ಜಾನಪದ ಸಂಸ್ಕೃತಿಯ ಮಾದರಿಗಳನ್ನು ಸ್ಮೃತಿಯಲ್ಲಿ ಉಳಿಸಿಕೊಂಡು ಬಂದದ್ದು, ಅವುಗಳನ್ನು ಅಧ್ಯಯನ ಮಾಡುವುದರ ಮೂಲಕ ಸಂಸ್ಕೃತಿಯ ಆಶಯಗಳನ್ನೂ ಅರ್ಥವನ್ನೂ ವಿವರಿಸಬಹುದಾಗಿದೆ."[9] ಮಧ್ಯಕಾಲೀನ ಲ್ಯಾಟಿನ್‌ನ Legendaದಿಂದ ನಿಷ್ಪನ್ನವಾದ Legend ಎಂಬ ಇಂಗ್ಲೀಷ್ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ನಾವಿಂದು ಐತಿಹ್ಯವೆಂದು ಕರೆಯುತ್ತೇವೆಯಾದರೂ ಅದರ ಬಳಕೆಯ ಬೆಳವಣಿಗೆ ಹೀಗಿದೆ :

Legenda ಲೆಜೆಂಡಾ ಎಂಬುದು ಲೆಗರೇ Legere ಎಂಬುದರಿಂದ ಬಂದದ್ದು. ಇದು ಪಠಿಸು ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಇದು ಪರಂಪರಾಗತವಾಗಿ ಮೌಖಿಕ ರೂಪದಲ್ಲಿ ಸಂವಹನಗೊಂಡು ನಡೆದ್ದದೆಂದು ನಂಬುವ ಕಥೆ. ಲಿಖಿತರೂಪದ ಸನ್ಯಾಸಿಯ ಜೀವನ ಕಥೆ ಅಥವಾ ಅಂಥ ಕಥೆಗಳ ಸಂಕಲನಕ್ಕೆ ಬಳಸುತ್ತಿದ್ದ ಪದ. "Legend any non historical story supposedly transmited by tradition from Antiquity. Originally, the term devoted a written story of the life of a saint or a collection of the such stories". (The encyclopedia of

Americana, Vol.17, page 214) "ಮಧ್ಯಯುಗದ ಐತಿಹ್ಯಗಳಲ್ಲಿ ಚರಿತ್ರೆ ಮತ್ತು ನೀತಿಕಥೆಗಳು ಅವಿಭಾಜ್ಯವಾಗಿ ಸೇರಿಕೊಂಡವು. ತನ್ನ ವಸ್ತುವಿನ ನೈಜತೆಯನ್ನು ಸ್ಪಷ್ಟೀಕರಿಸಿಕೊಂಡ ನಂತರ ಉಳಿದ ನೀತಿ ಕಥೆಗಳು ಮತ್ತು ನಂಬಲರ್ಹವಿಲ್ಲದ ಕಥೆಗಳು ಐತಿಹ್ಯ ಕ್ಷೇತ್ರಕ್ಕೆ ಸೇರಿರಬಹುದು" - ಎಂದು ಹಾರಿಂಗ್ ಅಭಿಪ್ರಾಯ ಪಡುತ್ತಾನೆ.[2] ನಾಣ್ಯ, ಸ್ಮಾರಕ, ಪದಕ ಮೊದಲಾದವುಗಳ ಮೇಲಿನ ಶಾಸನ ಹಾಗೂ ಚರಿತ್ರೆಯಂತೆ ತಾಳೆಮಾಡಲಾಗದ ಪ್ರಾಚೀನ ಮೂಲವುಳ್ಳದ್ದೆಂದು ಗ್ರಾಹ್ಯವಾಗುವ ಬರವಣಿಗೆಯ ಕಥನ. ರೋಮನ್ ಕ್ಯಾಥೋಲಿಕ್ ಚರ್ಚ್‌ನಲ್ಲಿ ನಿತ್ಯ ಓದುತ್ತಿದ್ದ ಪಾಠಗಳನ್ನು Legend ಎಂದು ಕರೆಯುತ್ತಿದ್ದರು. ಮಾರ್ಥ್ಯರ್ಸ್ ಮತ್ತು ಸೇಯಂಟ್ಸ್‌ರ ಆತ್ಮಚರಿತ್ರೆಯ ಸಂಕಲನಕ್ಕೆ Legend ಎಂಬ ಪದವನ್ನು ಬಳಸಿದರು. ಆದ್ದರಿಂದ ಮಾರ್ಥ್ಯರ್ಸ್ ಹಾಗು ಸೇಯಂಟ್ಸ್‌ರವರಿಗೆ ಸಂಬಂಧಿಸಿದ ಕಥೆಗಳು ಐತಿಹ್ಯಗಳಾದವು. ಚರ್ಚ್‌ನ ಸಂಪ್ರದಾಯಕ್ಕೆ ಸಂಬಂಧಿಸಿದ ಧಾರ್ಮಿಕ ಗುಣಧರ್ಮಗಳ ಅದ್ಭುತ ಮೋಹಕವೆನಿಸುವ ಪವಾಡಗಳಿಗೆ (miraculous) ಬಳಸುತ್ತಿದ್ದರು. ಹೀಗೆ ಪುರಾತನ ಗ್ರಂಥಗಳಿಂದ ಬಂದ (ಕ್ರೈಸ್ತ?) ಸನ್ಯಾಸಿಗಳ ಜೀವನ ಕಥೆಗಳು ಅಥವಾ ಸನ್ಯಾಸಿಗಳ ಜೀವನ ಕಥೆಗಳಂತೆ ಕಂಡುಬರುವ (ಹೋಲುವ?) ಕಥೆಗಳಿಗೆ ಐತಿಹ್ಯಗಳೆಂದು ಅನ್ವಯಿಸಿದಂತೆ ಕಾಣುತ್ತದೆ. ಜಾನಪದ ವಿದ್ವಾಂಸರು ಕಂಠಸ್ಥ ಪರಂಪರೆಯಲ್ಲಿ ಸಂವಹನಗೊಂಡು ನಡೆದಿದೆ ಎಂದು ನಂಬುವ ಸ್ವಾರಸ್ಯಗಳನ್ನು ಐತಿಹ್ಯಗಳೆನ್ನುತ್ತಾರೆ. ಇವು ಕಥೆಗಳ ರೂಪದಲ್ಲಿದ್ದರೂ ನಿರೂಪಿತವಾಗುವ ಸಂಗತಿಗಳನ್ನು ಮೌಖಿಕ ಆಧಾರದ ನಿಲುವುಗಳು ಸ್ಪಷ್ಟಪಡಿಸುತ್ತವೆ, ದೃಢಗೊಳಿಸುತ್ತವೆ.

ಜಾನ್‌ಕೀಟ್ಸ್ ಎಂಬ ಕವಿಯು ಹೂವಿನಂತೆ ನವುರಾಗಿಯೂ ಸುಗಂಧಾಕರ್ಷಕ ಸವಿಯಾಗಿಯೂ ಕವಿಗಳ ಮಾಧುರ್ಯಕ್ಕಿಂತ ಮಿಗಿಲಾಗಿಯೂ ಐತಿಹ್ಯ ಕಥೆಗಳಿರುತ್ತವೆ ಎನ್ನುತ್ತಾನೆ. "A flowery tale more sweetly than our rhyme; what leaf fringed legend haunts about they shape of deities or mortals, or of both" - (ode on grecian urn : john keats) ಹೀಗೆ ಅವನು ಐತಿಹ್ಯವನ್ನು ಹೂವಿನಂಥ ಕಥೆಯೆನ್ನುತ್ತಾನೆ. ಮೂಲತಃ ಲ್ಯಾಟಿನ್‌ನ ಪದವಾದ Legend ಇಂಗ್ಲಿಷ್‌ನಲ್ಲಿ ಬಳಕೆಯಾದಾಗಲೂ ಪ್ರಾರ್ಥನಾ ಮಂದಿರಗಳಲ್ಲಿ ಪಠಣ ಮಾಡಬಹುದಾದ ವಿಷಯಗಳಿಗೆ ಸಂಬಂಧಿಸಿದ್ದು ಎಂಬ ಅರ್ಥದಲ್ಲೇ ಇತ್ತು. ಈ ಅರ್ಥ ವ್ಯಾಪ್ತಿಯು ಬೈಬಲ್‌ನಲ್ಲಿರುವ ಸಂಗತಿಗಳು ಮತ್ತು ಸಾಧು ಸಂತರ ಜೀವನ ಚರಿತ್ರೆ ಎಂಬುದಕ್ಕೆ ಸೀಮಿತಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ Legendನ ಅರ್ಥವು ಒಂದು ಕಾಲದಲ್ಲಿ ನಡೆದ ಸತ್ಯಸಂಗತಿಯನ್ನು ಸಂಕೇತಿಸುತ್ತದೆ. ಜನಪದ ಸಾಹಿತ್ಯವೆನ್ನುವುದು ಜಾನಪದದಲ್ಲಿ ಅಡಗಿರುವ ಒಂದು ಪ್ರಕಾರ ಅಥವಾ ಶಾಖೆ. ಇದರಂತೆಯೇ ಜನಪದ ನೃತ್ಯ, ಸಂಗೀತ, ಉಡುಗೆ, ಅಡುಗೆ, ವೈದ್ಯ, ಕಲೆ ಇತ್ಯಾದಿಗಳು ಹಲವು ಪ್ರಕಾರಗಳು. ಜನಪದ ಸಾಹಿತ್ಯವು ಉಳಿದ ಪ್ರಕಾರಗಳಂತೆ ಮೌಖಿಕ ಪರಂಪರೆಯದೇ ಆದರೂ ಇದು ವಾಙ್ಮಯ ರೂಪದ ಜಾನಪದ (Folklore of the spoken

word). ಇದರಲ್ಲಿನ ಅತ್ಯಂತ ಮುಖ್ಯ ವಿಭಾಗಗಳೆಂದರೆ ೧. ಕಥೆಗಳು ೨. ಗೀತೆಗಳು ೩. ಒಗಟುಗಳು ೪. ಗಾದೆಗಳು.[೮]

ಎಡ್ವಿನ್ ಸಿಡ್ನಿ ಹಾಟ್‌ಲ್ಯಾಂಡ್‌ನ ಪ್ರಕಾರ ಜನಪದ ಕಥೆಯ ಸಂಪ್ರದಾಯದಿಂದ ಬಂದ ನಿರೂಪಣೆ ಅದ್ಭುತ ಘಟನೆಗಳನ್ನು ಪ್ರಧಾನವಾಗಿ ಉಳ್ಳದ್ದು. ಅತಿಮಾನುಷ ಶಕ್ತಿಗಳಿಗೆ ಸಂಬಂಧಿಸಿದ್ದಾಗಲಿ ಲೋಕದ ಸೃಷ್ಟಿನಾಶಗಳನ್ನು ಕುರಿತದ್ದಾಗಲಿ, ನಡೆದ ಘಟನೆಗಳನ್ನು ನಿರೂಪಿಸುವುದಾಗಲಿ ಆಗಿರುವುದಿಲ್ಲ. ಇಂಥವು ಕಥೆಗಳಿಂದ ಭಿನ್ನವಾಗಿ ಐತಿಹ್ಯಗಳೆನಿಸುತ್ತವೆ. ಇವು ನಿರ್ದಿಷ್ಟ ಸ್ಥಳಕ್ಕೆ ಆರೋಪಿತವಾಗಿರುತ್ತವೆ. ಅತಿಮಾನುಷ ವ್ಯಕ್ತಿಗಳು ಚಾರಿತ್ರಿಕ ವ್ಯಕ್ತಿಗಳು. ಒಮ್ಮೊಮ್ಮೆ ಕೂಡಿಯೂ ಮತ್ತೊಮ್ಮೆ ಪ್ರತ್ಯೇಕವಾಗಿಯೂ ವಿಜೃಂಭಿಸುವುದುಂಟು. ಎನ್‌ಸೈಕ್ಲೊಪೀಡಿಯಾ ಆಫ್ ಬ್ರಿಟಾನಿಕದಲ್ಲಿ ಜನಪದ ಕಥೆಗಳನ್ನು ಪುರಾಣಗಳು, ಐತಿಹ್ಯಗಳು, ಮನರಂಜಕಗಳು ಎಂದು ೩ ರೀತಿಯಲ್ಲಿ ವಿಂಗಡಿಸಿದ್ದಾರೆ. ಸ್ಮಿತ್‌ಥಾಂಸನ್ ವಾಕ್‌ಸಂಪ್ರದಾಯದ ಕಥೆಗಳನ್ನು (Stories of oral tradition) ೨ ಬಗೆಗಳಲ್ಲಿ ಗುರುತಿಸುತ್ತಾರೆ. ೧. ಐತಿಹ್ಯ **ಸಂಪ್ರದಾಯಗಳು (sage)** : ಸ್ಥಳ, ವ್ಯಕ್ತಿ ಕಾರ್ಯಕಾರಣ ಸಂಬಂಧ ಹಾಗೂ ಕಿನ್ನರ ಕಥೆಗಳು ಹಾಗೂ ಘಟನಾ ಪ್ರಧಾನ ಐತಿಹ್ಯಗಳು ಇಲ್ಲಿ ಸೇರುತ್ತವೆ. ಸತ್ಯದ ಪ್ರತಿಪಾದನೆ ಮುಖ್ಯವಾಗುತ್ತದೆ. **೨. ಕಟ್ಟುಕತೆಗಳು (Marchen)** : ಪ್ರಾಣಿಕಥೆಗಳು, ಅತಿಮಾನುಷ ಶಕ್ತಿಗಳ ಕಥೆಗಳು, ವಿನೋದ ಕಥೆಗಳು, ತಾಂತ್ರಿಕ ಕಥೆಗಳು ಇಲ್ಲಿ ಬರುತ್ತವೆ. ಕಾಲ್ಪನಿಕ ಕಥೆ ಹೇಳುವುದು ಮುಖ್ಯವಾಗುತ್ತದೆ. Standard dictionary of folklore, mythlogy and legendನಲ್ಲಿ ಐತಿಹ್ಯಗಳು, ಕಿನ್ನರ ಕಥೆಗಳು (Fairy tales), ಪ್ರಾಣಿಕಥೆಗಳು (Animal tales), ನೀತಿಕಥೆಗಳು (Folks) ಮತ್ತು ಪುರಾಣಗಳು ಎಂದು ವಿಭಾಗಿಸಿದ್ದಾರೆ.

ಡಾ.ಚಂದ್ರಶೇಖರ ಕಂಬಾರರು ಐತಿಹ್ಯಗಳನ್ನು ಕಥೆಗಳ ವರ್ಗೀಕರಣದಲ್ಲಿ ಸೇರಿಸಿದ್ದಾರೆ. ಹಾಗೂ ಕಥೆಗಳನ್ನು ೧. ಮನರಂಜನೆಯ ಕಥೆಗಾರಿಕೆ ೨. ನಡಾವಳಿ ಕಥೆಗಾರಿಕೆ ಎಂದು ವಿಭಾಗಿಸಿದ್ದಾರೆ.[೯] ಮನರಂಜನೆಯ ಕಥೆಗಳಲ್ಲಿ ಆರಾಧನೆಯ ಕತೆಗಳೆಂಬ ಮತ್ತೊಂದು ವಿಂಗಡಣೆಯನ್ನು ತಂದು ದೈವದ ಆರಾಧನೆಯ ಸಂದರ್ಭಗಳಲ್ಲಿ ಸಂಬಂಧಿಸಿದ ದೈವದ ಹುಟ್ಟು ಪರಾಕ್ರಮ ಇತಿಹಾಸಗಳಿಗೆ ಸಂಬಂಧಿಸಿದ ಕಥೆಗಳೆಂದು ಹೇಳುತ್ತಾರೆ. ಶಿಷ್ಟ ಆರಾಧನೆಯ ಕಥೆಗಳಿಗೆ ಪಠ್ಯಗ್ರಂಥಗಳಿದ್ದರೆ, ಜನಪದ ಆರಾಧನೆಗಳಿಗೆ ಮೌಖಿಕ ಪಠ್ಯಗಳಿರುತ್ತವೆ. ಶಿವರಾತ್ರಿಯ ಕಥೆ, ಏಕಾದಶಿಯ ಪೂಜೆ, ಸತ್ಯನಾರಾಯಣ ವ್ರತ ಮುಂತಾದ ಶಿಷ್ಟ ಆಚರಣೆಗಳ ಕಥೆಗಳಲ್ಲಿ ದೇವರುಗಳ ಪ್ರತಾಪ, ಭಕ್ತರ ಸಾಧನೆ, ರಾಕ್ಷಸ ಸಂಹಾರ ಇತ್ಯಾದಿ ವಿಷಯಗಳಿರುತ್ತವೆ. ಜನಪದ ಆರಾಧನೆ / ಆಚರಣೆಯ ಕಥೆಗಳಲ್ಲಿ ಸಂಸ್ಕೃತಿಯ ಮೂಲ ಪುರುಷ ಅಥವಾ ಸಾಂಸ್ಕೃತಿಕ ನಾಯಕ/ವೀರರ ಸಾಹಸಗಾಥೆಗಳಿರುತ್ತವೆ. ಇವು ಐತಿಹ್ಯಗಳೆಂದರೆ ತಪ್ಪಾಗಲಾರದು. ನಡಾವಳಿಯ

ಕಥೆಗಳು ಸಂಬಂಧಿಸಿದಂತೆ ನಂಬಿಕೆ, ನಡವಳಿಕೆ, ಅದರ ಕತೆ ಮೂರು ಅಂಶಗಳನ್ನು ವಿಶಿಷ್ಟ ರೀತಿಯ ಜನಪದ ಸ್ಥಳಪುರಾಣಗಳಿವು. ನಂಬಿಕೆ, ನಡವಳಿಕೆ ಮರೆತು ಬರೀ ಕಥೆ ಮಾತ್ರ ಉಳಿದ ಸ್ಥಳಪುರಾಣಗಳೂ ಇವೆ. ಸಾಮಾನ್ಯವಾಗಿ ಹಳ್ಳಿಯ ಗುಡಿ, ಹೊಳೆ, ಮನೆ, ಹೊಲ ಇಂಥ ಒಂದೊಂದು ನೆಲೆಗೂ ಕಥೆಗಳಿರುತ್ತವೆ. ಇವು ನಿರ್ದಿಷ್ಟವಾಗಿ ವ್ಯಕ್ತಿ, ಸ್ಥಳ, ಘಟನೆಗಳನ್ನು ಕುರಿತಂಥವುಗಳಾಗಿರುವುದರಿಂದ ಐತಿಹ್ಯಗಳೆನಿಸುತ್ತವೆ.

| ಕಥೆ | ಐತಿಹ್ಯ |
| --- | --- |
| ೧. ಅದ್ಭುತ ಘಟನೆಗಳು ಪ್ರಧಾನ | ನಡೆದಿವೆ ಎಂದು ಆರೋಪಿತವಾದ ಘಟನೆಗಳು ಮುಖ್ಯ. |
| ೨. ಯಾವುದೋ ಕಾಲದಲ್ಲಿ ಎಲ್ಲಿಯೋ ಸಂಭವಿಸಬಹುದೆಂಬ ತಿಳುವಳಿಕೆಯೇ ಕೇಂದ್ರ | ಕಾಲ ಅನಿರ್ದಿಷ್ಟವಾದರೂ ಸ್ಥಳಘಟನೆಗಳ ಸಂಬಂಧದ ಆರೋಪದಲ್ಲಿ ನಂಬಿಕೆ ದೃಢವಾಗಿರುತ್ತದೆ. |
| ೩. ವಿನೋದ, ಕಲ್ಪನೆ ಮುಖ್ಯವಾಗುತ್ತದೆ. | ಘಟನೆ ಮತ್ತು ನಂಬಿಕೆ ಮುಖ್ಯವಾಗುತ್ತದೆ. |
| ೪. ವಿವರಣೆ ಪ್ರಧಾನ | ಸಂಕ್ಷಿಪ್ತತೆ ಪ್ರಧಾನ |
| ೫. ನಿರೂಪಣೆ ಜೀವಾಳ | ತಿಳುವಳಿಕೆಯೇ ತಿರುಳು |
| ೬. ಕಥೆಯ ಬೆಳವಣಿಗೆ | ನಿರೂಪಣೆಯ ಬೆಳವಣಿಗೆ ಪ್ರಮಾಣದ ಪ್ರತಿಪಾದನೆ |
| ೭. ಸೊಗಸಾದ ಕಥಾನಕ ವರ್ಣನಾತ್ಮಕ ನೆಲೆಯಲ್ಲಿರುತ್ತದೆ. | ವಿವರಣೆ ಸಂಕ್ಷಿಪ್ತವಿರುತ್ತದೆ. |
| ೮. ವಿವರಣೆ ಕಾರ್ಯಕಾರಣ ಸಂಬಂಧದ ಅರ್ಥವನ್ನು ಕುರಿತದ್ದಾಗಿರುತ್ತದೆ. | ನಿರ್ದಿಷ್ಟತೆಗೆ ಸಂಬಂಧಿಸಿದ ವಿವರಣೆಯಾಗಿರುತ್ತದೆ. |

ಐತಿಹ್ಯವು ಸ್ವರೂಪದಲ್ಲಿ ಜನಪದ ಕಥೆಗಿಂತ ಕಿರಿದಾದದ್ದು, ನಿರ್ದಿಷ್ಟ ಸ್ಥಳಕ್ಕೆ ಸಂಬಂಧಿಸಿದ್ದೋ ವ್ಯಕ್ತಿ ಅಥವಾ ಘಟನೆಯನ್ನು ಕುರಿತದ್ದೋ ಆದ ಗದ್ಯಾತ್ಮಕ ನಿರೂಪಣೆಯಾಗಿರುತ್ತದೆ. ಇದರಲ್ಲಿ ವಿಶಿಷ್ಟ ಸ್ವರೂಪದ ಮನೋಜ್ಞವಾದ ಕಥಾನಕವಿರುತ್ತದೆ. ನಿರ್ದಿಷ್ಟ ಸ್ಥಳಕ್ಕೆ ಅಂಟಿಕೊಂಡದ್ದಾಗಿರಬಹುದು ಅಥವಾ ವ್ಯಕ್ತಿ ಇಲ್ಲವೇ ಘಟನೆಯೊಂದನ್ನು ಕುರಿತದ್ದಾಗಿರಬಹುದು. ಯಾವುದೇ ಆದರೂ ಸಾಂಪ್ರದಾಯಿಕ ಅಥವಾ ಪರಂಪರಾಗತವಾದ ಮೂಲವಸ್ತುವಿನ ನಿರೂಪಣೆ ಸಂಬಂಧಿಸಿದ ಸಂಗತಿ ಸತ್ಯವೆಂದು ಸಾಬೀತು ಮಾಡುವುದಾಗಿರುತ್ತದೆ. ಹಾಗೂ ನಂಬಿಸುವಂಥ ನಿಜಾಂಶದ ಮೇಲೆ ಆಧರಿಸಲ್ಪಟ್ಟ ಕಥಾ ನಿರೂಪಣೆಯಿರುತ್ತದೆ. ವ್ಯಕ್ತಿಗಳಿಗೆ ಸಂಬಂಧಿಸಿದ ಐತಿಹ್ಯಗಳೆಂದರೆ ಲಿಖಿತ ಚರಿತ್ರೆಯಲ್ಲಿ ದಾಖಲಾದ ವ್ಯಕ್ತಿಗಳಿರಬಹುದು ಅಥವಾ ಜನಸಾಮಾನ್ಯರಲ್ಲಿ ಒಬ್ಬರಾಗಿದ್ದುಕೊಂಡು ತನ್ನ ಸಮುದಾಯ ಇಲ್ಲವೆ ಆ ಪ್ರದೇಶದ ಜನತೆಯಲ್ಲಿ ಸಾಧನೆಯ ಮೂಲಕ ಸ್ಮರಣೆಯನ್ನು ಉಳಿಸಿಕೊಂಡವರಿರಬಹುದು, ಪೌರಾಣಿಕ ವ್ಯಕ್ತಿಗಳು ಅಥವಾ ಪುರಾಣಗಳೊಂದಿಗೆ ಸಮೀಕರಿಸಲ್ಪಟ್ಟ ಸಾಮಾಜಿಕ ಚಾರಿತ್ರಿಕ ವ್ಯಕ್ತಿಗಳೂ ಇರಬಹುದು. ಲಿಖಿತ ಚರಿತ್ರೆಯಲ್ಲಿ ದಾಖಲಾದ ವ್ಯಕ್ತಿಗಳ ಕುರಿತು ಸೃಷ್ಟಿಯಾದ ಐತಿಹ್ಯಗಳಲ್ಲಿ ವಾಸ್ತವಾಂಶದ ತಿರುಳಿನ

ಸೂಕ್ಷ್ಮತೆಗಳನ್ನು ಗಮನಿಸಬಹುದು. ಇವು ಬರವಣಿಗೆಯಲ್ಲಿ ದಾಖಲಾದ ಇತಿಹಾಸಕ್ಕಿಂತ ಭಿನ್ನವಾಗಿ ಕಂಡರೂ ಪೂರಕವಾಗಿರುತ್ತವೆ. ಐತಿಹಾಸಿಕ ಮತ್ತು ಐತಿಹ್ಯ ಸೂಚನಾ ಅಂಶಗಳು ಇವೆರಡೂ ತುಲನೆಗೆ ಒಳಪಟ್ಟಾಗ ಇವೆರಡರ ಮೂಲಕ ಮತ್ತೂ ಸ್ಪಷ್ಟಚಿತ್ರಣ ಲಭಿಸುತ್ತದೆ. ಇದರಿಂದ ಕಳೆದುಹೋದ ಹಾಗೂ ಉಳಿದುಬಂದ ಸಾಂಸ್ಕೃತಿಕ ಚರಿತ್ರೆಯ ಹೆಜ್ಜೆಗುರುತುಗಳನ್ನು ಪತ್ತೆ ಹಚ್ಚುವುದು ಸಾಧ್ಯವಾಗುತ್ತದೆ. ಉದಾ: ಟಿಪ್ಪೂಸುಲ್ತಾನನ ಹೆಸರಿಗೆ ಸಂಬಂಧಿಸಿದಂತೆ ಇರುವ ಐತಿಹ್ಯ-ಹೈದರ್‌ಅಲಿಗೆ ಬಹುದಿನಗಳ ಕಾಲ ಮಕ್ಕಳಿರಲಿಲ್ಲ. ಹುಟ್ಟಿದ ಕೂಸುಗಳೆಲ್ಲವೂ ಸಾಯುತ್ತಿದ್ದುದರಿಂದ ತಿಪ್ಪೇಸ್ವಾಮಿಗೆ ಹರಕೆ ಮಾಡಿಕೊಂಡ. ಅದರಂತೆ ಹುಟ್ಟಿದ ನಂತರ ಬದುಕಿ ಉಳಿದ ಮಗನಿಗೆ ತಿಪ್ಪೇಸ್ವಾಮಿಯ ಹೆಸರಿಟ್ಟ. ಅವರು ಮುಸಲ್ಮಾನರಾಗಿದ್ದರಿಂದ ಟಿಪ್ಪೂ ಎಂದು ಕರೆದುಕೊಂಡರು. ಈ ಐತಿಹ್ಯದಿಂದ ತಿಳಿಯುವ ಅಂಶಗಳೆಂದರೆ, ಜನಪದರಲ್ಲಿ ಧಾರ್ಮಿಕ ಬೇಧಭಾವಗಳಿರುವುದಿಲ್ಲ. ಕಾಪಾಡುವುದಾದರೆ ಯಾವ ದೈವವಾದರೂ ಆರಾಧಿಸುತ್ತಾರೆ. ಸತ್ತ ಮಗುವು ಮತ್ತೆ ಬೇಗ ಹುಟ್ಟಿಬರಲೆಂದು ತಿಪ್ಪೆಯಲ್ಲಿ ಹೂಳುತ್ತಾರೆ. ಮಗುವಿನ ಜನನ ಹಾಗೂ ಹೊಸ ಫಸಲಿನ ಸಾಮ್ಯತೆ ಇಲ್ಲಿ ಕೆಲಸ ಮಾಡುತ್ತದೆ. ಗೊಬ್ಬರ ಸಂಗ್ರಹಣೆಯಾದ ತಿಪ್ಪೆ ಕಸದಿಂದ ಮತ್ತೆ ಹೊಸ ಬೆಳೆಗೆ ಸತ್ವ ನೀಡುವುದರಿಂದ ಅದು ದೈವವಾಗುತ್ತದೆ. ತಿಪ್ಪೆಯೊಂದಿಗೆ ಹರಕೆ ಹೊತ್ತು ಹುಟ್ಟಿದ ಮಗುವಿಗೆ ತಿಪ್ಪಣ್ಣ, ತಿಪ್ಪಮ್ಮ, ತಿಪ್ಪೇಸ್ವಾಮಿ, ತಿಪ್ಪೇದೇವಿ ಇತ್ಯಾದಿ ಹೆಸರುಗಳಿಡುತ್ತಾರೆ. ತಿಪ್ಪೆಯಂತೆ ತಮ್ಮ ಮಗು ಕಷ್ಟಗಳಲ್ಲಿ ಸತ್ವವನ್ನು ಒಳಗೊಳ್ಳಲೆಂಬ ಆಶಯವಿದು. ಟಿಪ್ಪೂವಿನ ತಂದೆ ತಾಯಿಗಳು ತಿಪ್ಪೆಯ ಹರಕೆಯನ್ನು ಹೊತ್ತಿರಲೂಬಹುದು. ಇದರಂತೆ ಹುಟ್ಟಿದ ಮಗುವು ಶಕ್ತಿಹೀನವಾಗಿದ್ದರೆ ತೊಟ್ಟಿಲಶಾಸ್ತ್ರ ಮಾಡುವಾಗ ಮೊದಲು ಗುಂಡುಕಲ್ಲನ್ನು ತೊಟ್ಟಿಲಲ್ಲಿಟ್ಟು ಮಗುವಿಗೆ ಗುಂಡಪ್ಪ ಅಥವಾ ಗುಂಡಮ್ಮನೆಂದು ಹೆಸರಿಡುವ ಸಂಪ್ರದಾಯವಿದೆ. ಗುಂಡುಕಲ್ಲಿನಂತೆ ಮಕ್ಕಳು ಗಟ್ಟಿಮುಟ್ಟಾಗಿರಬೇಕೆಂಬ ಆಶಯವಿದು.

ಇಂಥ ಸಂಸ್ಕೃತಿಯ ಅಂಶಗಳನ್ನು ಐತಿಹ್ಯಗಳು ಕಟ್ಟಿಕೊಡುತ್ತವೆ. ಹಾಗೆಯೇ ಜನಪದರ ಮುಕ್ತವಾದ ಮಾನಸಿಕ ವಾತಾವರಣವನ್ನು, ನಂಬಿಕೆ ಅರ್ಪಣೆಗಳನ್ನು ಬಿಂಬಿಸುತ್ತವೆ. ಸ್ಥಳಸಂಬಂಧಿ ಐತಿಹ್ಯಗಳು ಬಹುಪಾಲು ಸ್ಥಳೀಯ ಐತಿಹ್ಯಗಳಾಗಿರುತ್ತವೆ. ಸ್ಥಳನಾಮಗಳು ಮತ್ತು ಸ್ಥಳೈತಿಹ್ಯಗಳಿಗೆ ಸಂಬಂಧಿಸಿದಂಥ ವಿವರಗಳೆಲ್ಲವೂ ಸ್ಥಳಸಂಬಂಧಿ ಐತಿಹ್ಯಗಳಾಗುತ್ತವೆ. ಊರ ಹೆಸರುಗಳು, ಕೆರೆ, ಕೋಟೆ, ಬಾವಿ ಹೀಗೆ ವ್ಯಕ್ತಿ ನಿರ್ಮಿಸಿಕೊಂಡ ಭೌಗೋಳಿಕ ನೆಲೆಯ ಪರಿವರ್ತನೆ ಅಥವಾ ಮಾರ್ಪಾಟಿನ ಪ್ರಯತ್ನಗಳ ಆಯಾಮಗಳನ್ನು ಈ ಐತಿಹ್ಯಗಳು ಒಳಗೊಂಡಿರುತ್ತವೆ. ಕಾಡಿನ ಅವಸ್ಥೆಯಿಂದ ನಾಡಿನ ವ್ಯವಸ್ಥೆ ಮಾಡಿಕೊಂಡ ಪ್ರಯತ್ನದ ಹಂತಗಳನ್ನು ಇಂಥ ಐತಿಹ್ಯಗಳಲ್ಲಿ ಕಾಣಬಹುದು. ಊರುಗಳು ನಿರ್ಮಾಣವಾದದ್ದು, ಊರಿಗೆ ಹೆಸರು ಬಂದದ್ದು, ವ್ಯವಸಾಯ, ಪಶುಪಾಲನೆ ಮತ್ತಿತರ ಉದ್ದೇಶಗಳಿಗೆಂದು

ಭೂಮಿಯನ್ನು ಸಾಗುವಳಿ ಇಲ್ಲವೇ ಹಸನು ಮಾಡಿಕೊಂಡದ್ದು, ಕೆರೆ ಕಟ್ಟೆ ಬಾವಿಗಳನ್ನು ತೋಡಿದ್ದು, ಗ್ರಾಮದಿಂದ ಮುಂದುವರಿದು ಪಟ್ಟಣ, ನಗರ, ರಾಜ್ಯ, ಸಾಮ್ರಾಜ್ಯಗಳು ತಲೆ ಎತ್ತಿದ್ದು ವೈಭವವಾಗಿ ಮೆರೆದದ್ದು, ಪತನಗೊಂಡಿದ್ದು ಮತ್ತೆ ಯಾವುದೋ ಒಂದು ಸ್ಥಿತಿಗೆ ಹೊಂದಾಣಿಕೆಯಾದದ್ದು ಎಲ್ಲವೂ ಸೇರುತ್ತವೆ. ಹೀಗೆ ಸ್ಥಳೀಯ ಹಿನ್ನೆಲೆಯಲ್ಲಿ ಸ್ಥಾಪನೆಗೊಂಡು ಬೆಳವಣಿಗೆಯ ಹಂತಗಳಲ್ಲಿ ಮರೆಯಾದದ್ದರ ನೆನಪುಗಳನ್ನು ಉಳಿಸಿಕೊಂಡು ಬಂದ ಕುರುಹುಗಳು ಸ್ಥಳಗಳಿಗೆ ಸಂಬಂಧಿಸಿದ ಐತಿಹ್ಯಗಳಲ್ಲಿ ಸಿಗುತ್ತವೆ.

ಸ್ಥಳೀಯವಾದ ಸಾಮಾಜಿಕ ಬದುಕಿನ ಮೇಲಾದ ಆರ್ಥಿಕ, ಧಾರ್ಮಿಕ, ಚಾರಿತ್ರಿಕ ಅಭಿವೃದ್ಧಿಗಳು ಇಲ್ಲವೇ ಅಧಃಪತನಗಳಿಗೆ ಸಂಬಂಧಿಸಿದ ಸುಳಿವುಗಳು ಸ್ಥಳಸಂಬಂಧಿ ಐತಿಹ್ಯಗಳಲ್ಲಿ ಲಭಿಸುತ್ತವೆ. ಕೆರೆ ಕೋಟೆಗಳ ನಿರ್ಮಾಣ ಕುರಿತ ಐತಿಹ್ಯಗಳು ಬಲಿಗೆ ಸಂಬಂಧಿಸಿದವು. ಸೂಳೆಬಾವಿ, ಸೂಳೆಕೆರೆ ಹೆಸರಿನ ಐತಿಹ್ಯಗಳೂ ಸಾಮಾಜಿಕವಾಗಿ ಪುರಸ್ಕಾರವಿಲ್ಲದೆ ಕಳಂಕವೆಂದು ಗುರ್ತಿಸಲ್ಪಟ್ಟ ಸೂಳೆಗಾರಿಕೆಗೆ ಬಲಿಯಾದ ಹೆಣ್ಣುಗಳು ಪಶ್ಚಾತ್ತಾಪಕ್ಕೆಂದೋ ಪಾಪಪರಿಹಾರಕ್ಕೆಂದೋ ಕಟ್ಟಿಸಲ್ಪಟ್ಟ ಅದೆಷ್ಟೋ ಕೆರೆಬಾವಿ ಹಿನ್ನೆಲೆಯಲ್ಲಿ ಅಡಗಿರುವ ಸಾಮಾಜಿಕ ನಿಲುವುಗಳು ಗಮನೀಯವಾದವು. ಇದೇ ರೀತಿ ವ್ಯಾಪಾರಸ್ಥರು, ಶ್ರೀಮಂತರು ಪುಣ್ಯ ಲಭಿಸಲೆಂಬ ಕಾರಣಕ್ಕಾಗಿ ಕೆರೆಬಾವಿಗಳನ್ನು ತೋಡಿಸಿದ ಐತಿಹ್ಯಗಳಿವೆ. ಪಾಪಪ್ರಜ್ಞೆಗೆ ಸಂಬಂಧಿಸಿದ ಆತ್ಮಸಾಕ್ಷಿಯ ಸಾಕ್ಷಾತ್ಕಾರವನ್ನು ಇಂಥ ನಿರ್ಮಾಣಗಳ ಹಿನ್ನೆಲೆಯಲ್ಲಿ ಕಾಣಬಹುದು. ಅಲ್ಲದೆ ಹಲವು ಮಾದರಿಯ ಚಾರಿತ್ರಿಕ ಕುರುಹುಗಳು ಅಂದಂದಿನ ಮೌಲ್ಯಗಳ ಮಾನದಂಡಗಳು ಸ್ಥಳಸಂಬಂಧಿ ಐತಿಹ್ಯಗಳಲ್ಲಿ ಕಂಡುಬರುತ್ತವೆ. ಇದಕ್ಕೆ ಧಾರ್ಮಿಕ ಕಾರಣಗಳೂ ಇರಬಹುದು. ಕೆಲವೊಮ್ಮೆ ಇವು ಪುರಾಣಲೇಪನವನ್ನು ಪಡೆಯುತ್ತವೆ.

ಉದಾ : **ಮಾಸ್ತಿಕಲ್ಲು, ವೀರಗಲ್ಲುಗಳಿಗೆ ಸಂಬಂಧಿಸಿದ ಐತಿಹ್ಯಗಳು** : ಹೋರಾಟದಲ್ಲಿ ಮಡಿದು ವೀರಸ್ವರ್ಗವನ್ನು ಸೇರುವ ವೀರರು, ಸತಿ ಪದ್ಧತಿಯಲ್ಲಿ ಚಿತೆಯೇರುವ ಮೂಲಕ ಸ್ವರ್ಗದಲ್ಲಿ ವೀರನನ್ನು ಸೇರುವ ಆತನ ಮಡದಿ ಮಹಾಸತಿ ಕಲ್ಪನೆಯ ಹಿಂದೆ ಅಡಗಿರುವ ಆಶಯ ಐತಿಹಾಸಿಕ, ಸಾಮಾಜಿಕ, ಧಾರ್ಮಿಕ ಹಾಗೂ ಪೌರಾಣಿಕ ಆಯಾಮಗಳಿಂದ ಕೂಡಿದ್ದಾಗಿದೆ. ಘಟನಾಪ್ರಧಾನ ಐತಿಹ್ಯಗಳು ಬಹುಪಾಲು ಸಂಚಾರಿ ಗುಣವನ್ನು ಹೊಂದಿರುತ್ತವೆ. ಜನಪ್ರಿಯವಾದ ಐತಿಹಾಸಿಕ ಘಟನೆಗಳು ಇಲ್ಲವೇ ಪೌರಾಣಿಕ ಘಟನೆಗಳು ಪ್ರಕೃತಿಯ ವಿವಿಧ ಎಡೆಗಳಿಗೆ ಸ್ಥಳಗಳಿಗೆ ಆರೋಪಿತವಾಗಿ ಹೆಣೆಯಲ್ಪಟ್ಟಿರುತ್ತವೆ. ಕೆಲವೊಮ್ಮೆ ಪರಂಪರೆಯಲ್ಲಿ ಘಟಿಸಿದ ಘಟನೆಗಳು ನಂಬಿಕೆಯನ್ನೋ ನಿಷೇಧವನ್ನೋ ತಂದೊಡ್ಡಿದ ಸಂದರ್ಭಗಳೂ ಉಂಟು. ಉದಾ : ಕೆಲವು ಗುಂಪಿನ ಜನರು ಯಾವುದೋ ಒಂದು ಹಬ್ಬವನ್ನು ಆಚರಿಸಬಾರದೆಂದು ಸಾಂಸ್ಕೃತಿಕ ನಿಷೇಧವಿರುತ್ತದೆ. ಕಾರಣವೇನೆಂದರೆ, ಹಿಂದೆ ಅವರ ಪರಂಪರೆಯಲ್ಲಿ ಪೂರ್ವಿಕರು ಹಬ್ಬದ ಆಚರಣೆಗೆ ಸಿದ್ಧರಾಗುತ್ತಿದ್ದಂತೆ, ಆಕಸ್ಮಿಕವಾಗಿ ದುರ್ಮರಣ ಹೊಂದಿದ ಸಂದರ್ಭದ ನೆನಪು ಅಲ್ಲಿರುತ್ತದೆ.

ಬೇಡ-ನಾಯಕ ಜನಾಂಗದ (ಒಂದು ಪಂಗಡದಲ್ಲಿ) ಮದುವೆಗಳಲ್ಲಿ ಹೆಂಗಸರು ರವಿಕೆಯನ್ನು ಧರಿಸುವುದು ನಿಷಿದ್ಧ. ಇತ್ತೀಚೆಗೆ ಕಳಸ ಹೊರುವ ಮುತ್ತೈದೆ ರವಿಕೆಯಿಲ್ಲದೆ ಕಳಸ ಹೊರಬೇಕೆಂಬ ನಿಯಮಕ್ಕೆ ಬಂದು ನಿಂತಿದೆ. ಕಾರಣವೇನೆಂದರೆ ಹಿಂದೆ ಯಾವುದೋ ಒಂದು ದಿನ ಈ ಪಂಗಡದ ಮದುವೆಯಲ್ಲಿ ರವಿಕೆಗಳನ್ನು ಹೊಲಿಸಿ ತರಲು ಪೇಟೆಗೆ ಹೋದ ಓರಿಯರು ದಾರಿಯಲ್ಲಿ ದುರ್ಮರಣ ಹೊಂದಿದರು. ಅವರ ನೆನಪಿಗಾಗಿ ಮದುವೆಗಳಲ್ಲಿ ಹೆಂಗಸರು ರವಿಕೆ ಧರಿಸುತ್ತಿರಲಿಲ್ಲ. ಇತ್ತೀಚೆಗೆ ಇದು ಕಳಸ ಶಾಸ್ತ್ರಕ್ಕೆ ಸೀಮಿತಗೊಂಡಿದೆ. ಈಗಲೂ ಈ ಬುಡಕಟ್ಟಿನ ಹಳೆಯ ಕಾಲದ ಅಜ್ಜಿಯರು ರವಿಕೆಯನ್ನು ಧರಿಸುವುದಿಲ್ಲ. ಏಕೆಂದರೆ, ಬುಡಕಟ್ಟಿನ ಜನರಿಗೆ ವಸ್ತ್ರ ಪ್ರಪಂಚದ ಪರಿಚಯವಾದದ್ದೇ ಅವರಿಗೆ ನಾಡಿನ ಸಂಪರ್ಕವೇರ್ಪಟ್ಟ ಹಂತದಿಂದ ಎಂದರೆ ತಪ್ಪಾಗಲಾರದು. ಮರದ ತೊಗಟೆ ಹಾಗೂ ಎಲೆಗಳಿಗೆ ಬದಲಾಗಿ ಬಟ್ಟೆಯುಟ್ಟು ಮಾನಮುಚ್ಚಿಕೊಳ್ಳುವುದು ನಾಡಿನಲ್ಲಿ ಅವರಿಗೆ ಅನಿವಾರ್ಯ. ಇದಕ್ಕೆ ಮನಸ್ಸುಗಳನ್ನು ಒಗ್ಗಿಸಿಕೊಳ್ಳುವ ಹಂತಗಳಲ್ಲಿ ಆದ ಕೆಟ್ಟ ಅನುಭವಗಳು ಕೆಲವು ನಂಬಿಕೆ ನಿಷೇಧಗಳಿಗೆ ಕಾರಣವಾಗಿವೆ. ಇದನ್ನು ವಸತಿ ಊಟದ ಹಿನ್ನೆಲೆಯಿಂದಲೂ ಪರಿಶೀಲಿಸಬಹುದು. ಉದಾ : ಇದೇ ಬುಡಕಟ್ಟಿನ ಬೇಡರು ಮನೆಗೆ ಸುಣ್ಣ ಬಳಿಯುವುದು ನಿಷೇಧ. ಒಲೆಯನ್ನು ಹಾಕುವುದು ರಚಿಸಿಕೊಳ್ಳುವುದು ನಿಷೇಧ. ಏಕೆಂದರೆ ಮೂಲತಃ ಅಲೆಮಾರಿಗಳಾಗಿದ್ದ ಕಾಲದಲ್ಲಿ ಭದ್ರವಾಗಿ ಒಲೆಯನ್ನು ಹಾಕಿಕೊಳ್ಳುವ ಅನಿವಾರ್ಯತೆ ಇರಲಿಲ್ಲ. ಇಂಥ ಅಲೆಮಾರಿಗಳು ಮನೆಯನ್ನೂ ಕಟ್ಟಿಕೊಳ್ಳುತ್ತಿರಲಿಲ್ಲ. ಆಶ್ರಯಕ್ಕಾಗಿ ಮಾಡು ಅಥವಾ ಸೂರನ್ನು ಸ್ಥಾಪಿಸಿಕೊಂಡರೂ ಕೊಂಬೆ-ರೆಂಬೆಗಳ ತಡಿಕೆಗಳನ್ನು ಕಟ್ಟಿಕೊಳ್ಳುತ್ತಿದ್ದರು ಅಥವಾ ಮಣ್ಣಿನ ಮೆತ್ತೆಗಳನ್ನು ಹಾಕಿಕೊಳ್ಳುತ್ತಿದ್ದರು. ಬೇಡರ ಪಂಗಡಗಳು ದಾರಿಗಳ್ಳರು ತುರುಗಳ್ಳರು ದರೋಡೆಕೋರರೂ ಆಗಿದ್ದರೆಂದು ಮೌಖಿಕ ಪರಂಪರೆಯಲ್ಲಿ ನಿದರ್ಶನಗಳಿವೆ. ಇಂಥವರು ಮನೆಗಳಿಗೆ ಸುಣ್ಣ ಹಚ್ಚಿದರೆ ಇವರ ನೆಲೆಗಳು ಸುಲಭವಾಗಿ ಗೊತ್ತಾಗುತ್ತಿದ್ದವು. ಆದ್ದರಿಂದ ಸುಣ್ಣ ಬಣ್ಣಗಳಿಲ್ಲದೆ ರಹಸ್ಯವಾಗಿ ಬದುಕಿರಬಹುದು.

ಕೆಲವೊಮ್ಮೆ ಜನಸಾಮಾನ್ಯರು ತಮ್ಮ ಸಾಧನೆಯನ್ನು ಜನ ಅಲ್ಪವಾಗಿ ಅಲಕ್ಷಿಸುತ್ತಾರೆಂದು ಪುರಾಣದ ಲೇಪನವನ್ನು ನೀಡುವ ಮೂಲಕ ಮಹತ್ವವನ್ನು ಗಳಿಸಿಕೊಟ್ಟಿರುತ್ತಾರೆ. ಉದಾ : ಸಾಮಾನ್ಯನು ಸ್ಥಾಪಿಸಿದ ಶಿವಲಿಂಗವೆಂದರೆ ಮಹತ್ವವಿರುವುದಿಲ್ಲ. ಆದ್ದರಿಂದ ರಾಮ ಸೀತೆಯರು ಸ್ಥಾಪಿಸಿ ಪೂಜಿಸಿದ್ದೆಂದೋ ಪಾಂಡವರು ಪೂಜಿಸಿದ್ದೆಂದೋ ಹೇಳುವ ಮೂಲಕ ಮಹತ್ವ ಸಿಗುತ್ತದೆ. ಇಂಥ ಕಡೆಗಳಲ್ಲೆಲ್ಲಾ ಪುರಾಣದ ಅಂಶಗಳು ಆನ್ವಯಿಕವಾಗಿ ಬಳಕೆಯಾಗಿರುತ್ತವೆ. ಇದರಿಂದ ಮತ್ತೊಮ್ಮೆ ಪುರಾಣದ ಅಂಶವನ್ನು ಸಂಬಂಧಿಸಿದ ಸ್ಥಳದಲ್ಲಿ ಮರುಸ್ಥಾಪನೆ ಮಾಡಿದಂತಾಗುತ್ತದೆ. ಈ ಮೂಲಕ ಮರೆಯಾಗುತ್ತಿರುವ ಧಾರ್ಮಿಕ ಅಂಶಗಳ ಪ್ರಯತ್ನವೂ ಆಗಿರುತ್ತದೆ. ಇಂಥವುಗಳನ್ನು ಶಿಷ್ಟ ದೇವಾಲಯಗಳಿಗೆ ಸಂಬಂಧಿಸಿದ

ಐತಿಹ್ಯಗಳಲ್ಲಿ ಕಾಣಬಹುದು. ಕೋಲಾರಮ್ಮನ ಐತಿಹ್ಯವು ಪಡೆದುಕೊಂಡಿರುವ ಜನಪದ-ಶಿಷ್ಟ ಪರಂಪರೆಗಳ ಯಲ್ಲಮ್ಮ-ರೇಣುಕೆ, ಪರಶುರಾಮ, ಜಮದಗ್ನಿ, ಕಾರ್ತವೀರನ ಪ್ರತಿಮೆಗಳಲ್ಲದೆ ಚಾರಿತ್ರಿಕ ಕಲಹಗಳೂ ಇದರೊಂದಿಗೆ ಸೇರುವುದು ಮುಖ್ಯವಾಗುತ್ತದೆ.

ಸ್ಮರಣಶಕ್ತಿಯ ಮೂಲಕ ಕಂಠಸ್ಥ ಸಂಪ್ರದಾಯದಲ್ಲಿ ಪರಂಪರಾನುಗತವಾಗಿ ಮುಂದುವರೆಸಿಕೊಂಡು ಬರುವ ಜ್ಞಾನವು ಮೌಖಿಕ ಸ್ವರೂಪದಲ್ಲಿರುತ್ತದೆ. ಸಂದರ್ಭಕ್ಕೆ ಅನುಗುಣವಾಗಿ ಅದು ಪರಿವರ್ತನಾಶೀಲವಾಗುತ್ತದೆ. ವಕ್ತೃವಿನ ಮನಃಸ್ಥಿತಿ, ಸಂದರ್ಭ, ಸನ್ನಿವೇಶಗಳಿಗೆ ಅನುಗುಣವಾಗಿ ಕೆಲವೊಮ್ಮೆ ಅದು ಹಿಗ್ಗಬಹುದು ಅಥವಾ ಕುಗ್ಗಬಹುದು. ಇಲ್ಲವೇ ಹೊಸ ಅಂಶಗಳು ಸೇರಬಹುದು. ಇಂಥ ಗುಣ ಬಹುವಾಗಿ ಜನಪದ ಸಾಹಿತ್ಯಕ್ಕೆ ಅನ್ವಯಿಸುತ್ತದೆ. ಜನಪದ ಸಾಹಿತ್ಯದ ಪ್ರಕಾರಗಳಾದ ಗದ್ಯ-ಪದ್ಯಗಳಲ್ಲಿ ಜನಪದ ಗೀತೆಗಳು ಪದ್ಯ ಪ್ರಕಾರಕ್ಕೆ ಸೇರುತ್ತವೆ. ಗದ್ಯ ಪ್ರಕಾರಗಳಲ್ಲಿ ಕಥೆ, ಗಾದೆ, ಒಗಟು, ಒಡುಪು, ಪುರಾಣ, ಐತಿಹ್ಯ ಇತ್ಯಾದಿಗಳು ಸೇರುತ್ತವೆ. ಜನಪದ ಗದ್ಯ ಸಾಹಿತ್ಯದ ಪ್ರಕಾರಗಳಲ್ಲಿ ಒಂದಾದ ಐತಿಹ್ಯವು ಜನಪದ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ವ್ಯಾಪ್ತಿಯನ್ನು ಉಳಿಸಿಕೊಳ್ಳುವುದು ವಿಶೇಷತೆಯೆನಿಸುತ್ತದೆ. ನಡೆದಿದೆ ಎಂಬುದಕ್ಕೆ ನಂಬಲು ಆಧಾರವನ್ನು ತೋರಿಸಿ, ನಿರೂಪಣೆಯಾಗುವ ಐತಿಹ್ಯವು ಹೀಗೆ ನಡೆದಿದೆ ಎಂದು ಸಾಬೀತು ಮಾಡುತ್ತದೆ. ಐತಿಹ್ಯವು ಮೊದಲಿಗೆ ಕಥಾನಕ ರೂಪದಲ್ಲಿದ್ದು ಗೀತೆ, ಒಗಟುಗಳಲ್ಲಿ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಬಹುದು. ಪುರಾಣದೊಂದಿಗೆ ತನ್ನ ಅಸ್ತಿತ್ವವನ್ನು ಹೆಚ್ಚಿಸಿಕೊಳ್ಳಬಹುದು.

ಐತಿಹ್ಯಗಳು ನಿಜವಾಗಿ ನಡೆದ ಘಟನೆಗಳು ಎಂಬುದಾಗಿ ನಿರೂಪಕರು ನಂಬಿಕೆಯನ್ನು ಹೊಂದಿರುತ್ತಾರೆ. ಅಲ್ಲದೆ ಕೇಳುಗರಿಗೂ ಅಂಥ ನಂಬಿಕೆಯನ್ನು ಮೂಡಿಸಿಯೇ ಐತಿಹ್ಯಗಳನ್ನು ನಿರೂಪಿಸಿರುತ್ತಾರೆ. ಹೀಗೆ ವಕ್ತೃ ಹಾಗೂ ಕೇಳುಗರ ವರ್ಗದ ಸಹೃದಯತೆಯಿಂದಾಗಿ ಇವು ಮೌಖಿಕ ಪರಂಪರೆಯ ಇತಿಹಾಸವಾಗಿ ಬೆಳೆಯುತ್ತಾ ಹೋಗುತ್ತವೆ. ಐತಿಹ್ಯವು ಹಿಂದೆ ನಡೆದಿರಬಹುದಾದದ್ದು ಎಂಬ ಮೌಖಿಕ ಆಕರಗಳ ಬಗ್ಗೆ ಜನಪದರ ಮನಸ್ಸಿನ ದೃಢತೆ ಮುಖ್ಯವೇ ಹೊರತು ಲಿಖಿತ ದಾಖಲೆಗಳು ಈ ಪರಧಿಗೆ ಸೇರುವುದಿಲ್ಲ. ಲಿಖಿತ ಇತಿಹಾಸದ ಪುಟಗಳಿಂದ ಕೆಲವೊಮ್ಮೆ ನೇರವಾದ ಆಧಾರಗಳು ಲಭಿಸಬಹುದು ಅಥವಾ ಲಭಿಸದೆಯೂ ಇರಬಹುದು. ಈ ಹಿನ್ನೆಲೆಯಲ್ಲಿ ಬರವಣಿಗೆಗೆ ಎಟುಕದ ಅಥವಾ ಸಂಕೋಚವೆನಿಸುವ ಇಲ್ಲವೇ ಶಿಷ್ಟ ಪರಂಪರೆಗೆ ಮೈಲಿಗೆಯೆನಿಸುವ ಸೂಕ್ಷ್ಮ ಸಂಗತಿಗಳು ಐತಿಹ್ಯಗಳಲ್ಲಿ ಸಿಗುತ್ತವೆ. ಉದಾ : ರತ್ನಗಿರಿಯ ರಾಜರು ಗುಂಡಾಪುರ, ಮಾದನಹಳ್ಳಿ, ದಾರಿನಾಯಕನ ಪಾಳ್ಯ ಹೀಗೆ ಪಾಳೆಯಗಾರರಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸಲು ಬರುತ್ತಿದ್ದರು. ಆಗ ಪಾಳೆಯಗಾರರು ಕನ್ಯೆಯರಾದ ತಮ್ಮ ಹೆಣ್ಣು ಮಕ್ಕಳನ್ನು ಅವರೊಂದಿಗೆ ಕಳುಹಿಸಿಕೊಡುತ್ತಿದ್ದರು. ರಾಜ ಕುದುರೆಯ ಮೇಲೆ ಕನ್ಯೆಯನ್ನು

ಕೂರಿಸಿಕೊಂಡು ಹೋಗುವುದೇ ಕೊನೆಯ ಬೀಳ್ಕೊಡುಗೆ. ಮತ್ತೆ ಎಂದೂ ಅವಳನ್ನು ತೌರಿಗೆ ಕಳುಹಿಸುತ್ತಿರಲಿಲ್ಲ. ರಾಜರ ಹೆಣ್ಣು ಮಕ್ಕಳನ್ನು ಪಾಳೆಯಗಾರರಿಗೆ ಕೊಡುತ್ತಿರಲಿಲ್ಲವೆಂಬ ಐತಿಹ್ಯವಿದೆ.

ಕೋಲಾರ ಜಿಲ್ಲೆಯ ಗೌರೀಬಿದನೂರು ತಾಲೂಕಿಗೆ ಅಂಟಿಕೊಂಡಂತಿರುವ ಮಧುಗಿರಿ ಸಮೀಪದ ರತ್ನಗಿರಿ ಪಾಳೆಯಗಾರರು ಹಾಗೂ ಚಿಕ್ಕಪುಟ್ಟ ಪಾಳೆಯಗಾರರ ಸಂಬಂಧದ ಎಳೆಗಳನ್ನು ಮೇಲ್ಕಂಡ ಐಹಿತ್ಯದಲ್ಲಿ ಕಾಣಬಹುದಾಗಿದೆ. ರತ್ನಗಿರಿಯ ಪಾಳೆಯಗಾರರ ವಂಶಸ್ಥರು ಚಿತ್ರದುರ್ಗ, ಶಿರಾ ಹಾಗೂ ಸುರಪುರದವರೆಗೂ ತಮ್ಮ ವ್ಯಾಪ್ತಿಯನ್ನು ವಿಸ್ತರಿಸುತ್ತಾ ವಿಜಯನಗರ ಅರಸರ ಸಾಮಂತರಾಗಿದ್ದರು. ವಿಜಯನಗರದ ಪತನಾನಂತರ ಸ್ವತಂತ್ರ ಪಾಳೆಯಗಾರರೆಂದು ಘೋಷಿಸಿಕೊಂಡರು. ಆಗಾಗ ಟಿಪ್ಪು-ಹೈದರ್‌ಆಲಿಯನ್ನು ಎದುರಿಸಿ, ಕೆಲವೊಮ್ಮೆ ಕಪ್ಪಕೊಟ್ಟು ಮತ್ತೆ ಹಲವು ಬಾರಿ ಕಣ್ಮರೆಯಾಗಿ ಅಡಗಿ ಕೊನೆಗೆ ಟಿಪ್ಪುವಿನಿಂದ ಪತನಗೊಂಡರು. ಯಾವುದೇ ಪ್ರಭಾವಿ ಪಾಳೆಯಗಾರರು ಇಲ್ಲವೇ ರಾಜರು ದಾಳಿಯಿಟ್ಟಾಗಲೆಲ್ಲಾ ಅಧೀನರಾಗಿದ್ದವರ ಸಂಪತ್ತಿನಲ್ಲಿ ಸ್ತ್ರೀಸಂಪತ್ತು ಕೂಡ ಪ್ರಬಲರಿಗೆ ಸಂದಾಯ ವಾಗುತ್ತಿತ್ತು. ನಂತರದ ದಿನಗಳಲ್ಲಿ ಅವರ ಯೋಗಕ್ಷೇಮವಾಗಲಿ, ಅವರು ಏನಾಗಿರಬಹುದೆಂಬ ಸಂಗತಿಗಳಾಗಲಿ ತೌರಿನವರಿಗೆ ತಲುಪುತ್ತಿರಲಿಲ್ಲವೆಂಬ ಅಂಶ ಮನಮಿಡಿಯುವಂಥದ್ದು. ಇಂಥ ವಿವರಗಳು ಇತಿಹಾಸದ ಪುಟಗಳಲ್ಲಿ ದೊರೆಯಲಾರವು. ಅವು ಜನಪದ ಪರಂಪರೆಯ ನೆನಪಿನಿಂದ ಬೆಳಕನ್ನು ಕಾಣುತ್ತವೆ. ಐತಿಹ್ಯ ಒದಗಿಸುವ ಮಾಹಿತಿಗಳು ಸಾಂಪ್ರದಾಯಿಕವಾದವು, ಕಂಠಸ್ಥಪರಂಪರೆಯಲ್ಲಿ ದೊರೆಯುವಂಥವು ಆಗಿರುತ್ತವೆ.

**ಲಾವಣಿ ಮತ್ತು ಐತಿಹ್ಯ :** ಜನಪದ ಕಥೆಗಳ ಲಕ್ಷಣಗಳು ಬಹುಪಾಲು ಲಾವಣಿಗಳಲ್ಲಿಯೂ ಕಂಡುಬರುತ್ತವೆ. ಕಥನ ನಿರೂಪಣೆಗೆ ಇಲ್ಲಿಯೂ ಪ್ರಾಮುಖ್ಯತೆ ಇರುವುದೇ ಇದಕ್ಕೆ ಕಾರಣ. ಈ ನಿರೂಪಣೆ ಹಾಡುಗಾರಿಕೆಗೆ ಒಗ್ಗಿಕೊಂಡು ಒಂದು ಪ್ರಧಾನ ವಸ್ತುವನ್ನು ಅವಲಂಬಿಸಿರುತ್ತದೆ. ಪಾತ್ರ ಆವರಣ ಮತ್ತು ಕ್ರಿಯೆಗಳ ಮೂಲಕ ಲಾವಣಿ ಜೀವಂತಿಕೆಯನ್ನು ಪಡೆಯುತ್ತಾ ಹೋಗುತ್ತದೆ. ಅದು ಪೌರಾಣಿಕ, ಚಾರಿತ್ರಿಕ, ವಾಸ್ತವಿಕ, ವಿಡಂಬನಾತ್ಮಕ ಮತ್ತು ಮಾಂತ್ರಿಕವೆಂಬ ವಿಂಗಡಣೆಗಳಿಂದ ತಿರುವು ಪಡೆಯುತ್ತದೆ. ಲಾವಣಿಯ ನಿರ್ಮಾಣ ಯಾರೋ ಒಬ್ಬರಿಂದ ಆದೊಡನೆಯೇ ಜನಪದ ಅದನ್ನು ತನ್ನ ಕೈಗೆತ್ತಿಕೊಂಡಿತು. ಹೀಗೆ ಕಾಲಕಳೆದಂತೆ ಲಾವಣಿಗಳು ಬಾಯಿಂದ ಬಾಯಿಗೆ ಪ್ರಸರಿಸಿದಂತೆಲ್ಲ ಅವು ಹಿಗ್ಗಿದವು, ಬೆಳೆದವು, ಬದಲಾದವು. ರಚಿಸಿದವನ ಹೆಸರನ್ನು ಹೇಳಿಕೊಳ್ಳುವ ಲಾವಣಿಗಳು ಮಾತ್ರ ತೀರ ಈಚಿನವು. ಲಾವಣಿಗಳಲ್ಲಿ ಒಂದು ಘಟನೆಯ ಸುತ್ತ ಕಥೆ ಹೆಣೆದುಕೊಂಡಿರುತ್ತದೆ. ಇದು ಒಬ್ಬ ವ್ಯಕ್ತಿಯ ಸುತ್ತ ಸುಳಿದು ಬದುಕಿನ ಒಂದು ಘಟ್ಟವನ್ನೋ ಸಂದರ್ಭವನ್ನೋ ಚಿತ್ರಿಸಿ ಕೊನೆಗೊಳ್ಳುತ್ತದೆ. ವಸ್ತು ಸಾಮಾನ್ಯವಾಗಿ ವಾಸ್ತವಿಕ ಘಟನೆಗಳನ್ನು ಹೆಚ್ಚಾಗಿ ಅವಲಂಬಿಸಿರುವುದಲ್ಲದೆ, ಬದುಕಿನ ಅನೇಕ

ದುರಂತಗಳನ್ನು ಅಭಿವ್ಯಕ್ತಿಗೊಳಿಸುತ್ತವೆ. ಇಲ್ಲಿ ಬರುವ ವ್ಯಕ್ತಿಗಳು ಕಾಲ್ಪನಿಕ ವ್ಯಕ್ತಿಗಳಲ್ಲ; ಸಮಾಜದಲ್ಲಿ ಒಂದು ಕಾಲಕ್ಕೆ ಬದುಕಿ ಬಾಳಿದವರು. ವಿಧಿಯ ಕೈವಾಡದಿಂದಲೋ ಪರರ ಕೈವಾಡದಿಂದಲೋ ಅತೀವ ಸಂಕಟಕ್ಕೆ ಒಳಗಾದವರು; ಬದುಕಿನಲ್ಲಿ ಕಷ್ಟನಷ್ಟಗಳನ್ನು ಅನುಭವಿಸಿದವರು; ತಮ್ಮ ಸುಂದರವಾದ ಬದುಕನ್ನು ದುರಂತಕ್ಕೆ ಈಡುಮಾಡಿಕೊಂಡವರು; ತಮ್ಮದಲ್ಲದ ತಪ್ಪಿಗಾಗಿ ತಮ್ಮ ಪ್ರಾಣವನ್ನೇ ಈಡಾಡಿದವರು ಇಂಥವರ ತ್ಯಾಗ, ಬಲಿದಾನ, ನಿಷ್ಠೆ, ಆದರ್ಶಗಳು ಜನಪದರ ಮನಸ್ಸನ್ನು ಕಲಕುತ್ತವೆ. ಅವರ ವ್ಯಕ್ತಿತ್ವದ ಪ್ರಭಾವ ಅನೇಕ ದಿನಗಳವರೆಗೆ ನಿಲ್ಲುತ್ತದೆ. ಅವರ ಬಗ್ಗೆ ಕಥೆಗಳು ಹುಟ್ಟಿಕೊಳ್ಳುತ್ತವೆ. ಕಾಲ-ದೇಶಗಳ ಸಂಚಾರದಲ್ಲಿ ಸಾಕಷ್ಟು ಬದಲಾವಣೆಗಳನ್ನು ಸಾಧಿಸಿಕೊಂಡು ಮೊದಲು ಏಕಕರ್ತೃವಾಗಿದ್ದು ನಂತರ ಬಹುಕರ್ತೃಕ ರೂಪವನ್ನು ಧರಿಸುತ್ತವೆ ಎಂದರೆ ಸಾಮೂಹಿಕ ಪುನಸ್ಸೃಷ್ಟಿಗೆ ಒಳಗಾಗುತ್ತವೆ. ಆದ್ದರಿಂದ ಇಂಥ ಲಾವಣಿಗಳ ವಸ್ತುವು ಐತಿಹ್ಯಕ್ಕೆ ತೀರ ಸಮೀಪವಾದದ್ದು. ಈ ವಸ್ತುವೇ ಅನೇಕ ಸ್ಥಳೀಯವಾದ ಐತಿಹ್ಯಗಳನ್ನು ಸೃಷ್ಟಿಮಾಡುತ್ತದೆ. ಉದಾ : ಉತ್ತರಾದೇವಿ, ಹಿರಿದಿಮ್ಮಿ, ಈರೋಬಿ ಮುಂತಾದವರ ಐತಿಹ್ಯಗಳು.

ಲಾವಣಿಗಳು ದೀನ ದಲಿತರ, ಅಸಹಾಯಕರ, ಮುಗ್ಧರ, ವೀರಪುರುಷರ ಪರವಾದ ಧೋರಣೆಯನ್ನು ಒಳಗೊಂಡಿರುವುದಲ್ಲದೆ. ಮೌಖಿಕ ರೂಪದ ಸಾಕ್ಷಿಗಳಾಗಿ ನಿಲ್ಲುತ್ತವೆ. ಇವು ಗದ್ಯ ಕಥೆಗಳಿಗಿಂತ ಭಿನ್ನವೂ ಐತಿಹ್ಯಗಳಿಗೆ ಅಬೇಧ್ಯವೂ ಆಗಿರುತ್ತವೆ. ಆದರೆ ಇಂಥ ಐತಿಹ್ಯಗಳಲ್ಲಿಯೂ ಕೂಡ ಲಾವಣಿಯ ಸಹಜ ಲಕ್ಷಣಗಳಾದ ಕಥಾನಕ ಹಾಗೂ ಭಾವನಾತ್ಮಕ ಗುಣ ಬೆರೆತಿರುತ್ತದೆ. ಹೆಚ್ಚಾಗಿ ದುರಂತ ವಿನ್ಯಾಸ ಕೆಲಸ ಮಾಡುತ್ತಿರುತ್ತದೆ. ಹಾಸ್ಯ ವಿನೋದಭರಿತ ಲಾವಣಿಗಳಲ್ಲಿಯೂ ಕೂಡ ಯಾವುದೋ ಒಂದು ನಂಬಿಕೆ ಆಚರಣೆ ಇಲ್ಲವೇ ಸಾಂಪ್ರದಾಯಿಕ ಪಲ್ಲಟವಾಗುತ್ತಿರುವುದರ ಬಗ್ಗೆ ವ್ಯಂಗ್ಯ ವಿಡಂಬನೆಗಳಿರುತ್ತವೆ.

ಖಂಡಕಾವ್ಯಗಳು ಕಥಾನಾಯಕನನ್ನೋ, ನಾಯಕಿಯನ್ನೋ ಗಮನದಲ್ಲಿಟ್ಟುಕೊಂಡು ಸುಖಾಂತವಾಗುವ ಗುಣವುಳ್ಳವು. ಜನಪ್ರಿಯ ಪುರಾಣ, ಕಥೆ, ಐತಿಹ್ಯಗಳು ಜನಪದರ ಮನಸ್ಸುಗಳಲ್ಲಿ ಮನೆ ಮಾಡಿದ್ದಾಗ ಇಂಥ ರಚನೆಗಳು ಸಮೂಹದಿಂದ ಮೂಡುತ್ತವೆ. ಉದಾ: ಬಾಲನಾಗಮ್ಮನ ಕಥೆ, ಸಾಸಲಚಿನ್ನಮ್ಮನ ಕಥೆ, ಸರ್ಜಪ್ಪನಾಯಕನ ಕಥೆ, ಗುಣಸಾಗರಿ, ಈರೋಬಿಕಥೆ ಇತ್ಯಾದಿ. ಶಿಷ್ಟ ಸಮುದಾಯ ಹಾಗೂ ಲಿಖಿತ ಚರಿತ್ರೆಗಳು ರಾಜರ ಇತಿಹಾಸವನ್ನು ಕಟ್ಟಿಕೊಡುತ್ತವೆ. ಏಕೆಂದರೆ ಶಿಷ್ಟ ಸಮುದಾಯದವು ದಾಖಲಿಸುವ ಚರಿತ್ರೆ ವ್ಯವಸ್ಥಿತ ರೂಪದಲ್ಲಿರುತ್ತದೆ. ಆದರೆ ಜನಪದರು ಸಮುದಾಯದ ಒಳವಿವರಗಳಲ್ಲಿ ಒಂದನ್ನೂ ಬಿಡದೆ, ಸೂಕ್ಷ್ಮಾತಿಸೂಕ್ಷ್ಮ ಮಾಹಿತಿಗಳನ್ನು ಪರಂಪರಾಗತವಾಗಿ ಪ್ರಸರಣ ಗೊಳಿಸುತ್ತಿರುತ್ತಾರೆ. ಜನಸಾಮಾನ್ಯರ ಇತಿಹಾಸವನ್ನು ಹೇಳುವ ತಿಳುವಳಿಕೆ ಮೂಡಿಸುವ ಮೂಲಕ ಸಂಸ್ಕೃತಿಯ ಇತಿಹಾಸವನ್ನು ನಿರ್ಮಿಸುವ, ಚರಿತ್ರೆಯನ್ನು ಬೆಳೆಸುವ ಮೌಲ್ಯಗಳು ಜನಪದರ ಮೌಖಿಕ

ಆಕರಗಳಲ್ಲಿವೆ. ಆದ್ದರಿಂದಲೇ ಜನಪದದಲ್ಲಿ ತಮ್ಮ ನಡುವೆ ಸಾಮಾನ್ಯರಂತೆ ಬೆಳೆದು ಕಷ್ಟಗಳ ಪರಂಪರೆಯನ್ನು ಅರ್ಥಮಾಡಿಕೊಂಡು ಹಂಚಿಕೊಂಡು ಹಾಗೂ ತನ್ನ ಜನರನ್ನು ಕಾಡುವ ಕಷ್ಟಗಳಿಂದ ಪಾರು ಮಾಡಲು ಹೆಣಗಿದ ವ್ಯಕ್ತಿಯೇ ವೀರನೆಂಬ ಹೆಗ್ಗಳಿಕೆಗೆ ಪಾತ್ರನಾಗುತ್ತಾನೆ. ಈ ಕಾರಣದಿಂದಾಗಿಯೇ ಜನಪದ ಕಾವ್ಯಗಳೆಲ್ಲವೂ, ಸ್ಥಳೀಯ ಸಾಂಸ್ಕೃತಿಕ ವೀರರ, ಪವಾಡ ಪುರುಷರ, ಬೈರಾಗಿಗಳ, ಸಾಧಕರ ಮಹಿಮೆಗಳನ್ನು ಹೇಳುವಂಥವಾಗಿವೆ. ಜನಸಾಮಾನ್ಯರ ವರ್ಗದಿಂದ ವೀರತ್ವಕ್ಕೆ ಏರಿದವರನ್ನು ಶಿಷ್ಟ ಸಮುದಾಯ ವ್ಯವಸ್ಥಿತವಾಗಿ ದಾಖಲೆಯಿಂದ ಮರೆಮಾಡಿದೆ.

**ಸ್ತ್ರೀ ಕೇಂದ್ರೀಕೃತ ಖಂಡಕಾವ್ಯಗಳಲ್ಲಿ ಐತಿಹ್ಯಗಳು :** ಮಹಿಳೆಯರನ್ನು ಪುರುಷಪ್ರಧಾನ ವ್ಯವಸ್ಥೆಯ ಅಡಿಯಾಳುಗಳಂತೆ ಚಿತ್ರಿಸಲಾಗಿದೆ. ನೀರಿಗೆ ಹೋದ ಉತ್ತರಾದೇವಿಯು ತಡವಾಗಿ ಮನೆಗೆ ಹಿಂದಿರುಗಿದ ಕಾರಣಕ್ಕಾಗಿ ಗಂಡನ ಮನೆಯಿಂದ ಹೊರತಳ್ಳಲ್ಪಡುತ್ತಾಳೆ. ಗಂಡ ಸತ್ತಾಗ ಈರೋಬಿಯು ಕೊಂಡವೇರಿ ಉದಾತ್ತಳೆನಿಸುತ್ತಾಳೆ. ಮದುವೆಗೆ ಮೊದಲೇ ಮಡಿದ ಭಾವಿಪತಿ ಚಂದಯ್ಯನಿಗಾಗಿ ನಾಗವ್ವ ಸಹಗಮನ ಮಾಡುತ್ತಾಳೆ. ಕಟ್ಟಿಸಿದ ಕೆರೆಗೆ ನೀರು ಬಾರದಿದ್ದಾಗ ಅಥವಾ ಕೆರೆಯ ಒಡ್ಡು ನಿಲ್ಲದಿದ್ದಾಗ ಹಾಗೂ ಕಟ್ಟಿದ ಕೋಟೆ ಭದ್ರವಾಗಿ ನಿಲ್ಲದಿದ್ದಾಗ ಬಲಿಯಾದ ಸೊಸೆಯರಿಗೆ, ಕನ್ಯೆಯರಿಗೆ ಲೆಕ್ಕವೇ ಇಲ್ಲ. ಅಂತೆಯೇ ಗಂಡನೊಂದಿಗೆ ಬಾಳುವ ಮುನ್ನವೇ ಅನ್ಯರ ಕಾಟಕ್ಕೆ ಒಳಗಾಗಿ ಶೀಲ ರಕ್ಷಿಸಿಕೊಳ್ಳಲು ಬೆಂಕಿಗೆ ಹಾರಿದ ಹೆಂಡತಿಯರ ಕಥೆ ಐತಿಹ್ಯಗಳೂ ಪುರುಷ ವ್ಯವಸ್ಥೆಯ ಸಾಮಾಜಿಕ ವಲಯದಲ್ಲಿ ಹೆಣ್ಣನ್ನು ದಮನ ಮಾಡಿದ್ದರ ಉದಾಹರಣೆಗಳಾಗಿವೆ. ಹೆಣ್ಣನ್ನು ವಿನಾಕಾರಣ ವೈಭವೀಕರಿಸುತ್ತಾ ಪುರುಷ ಪಾರಮ್ಯವನ್ನು ಮೆರೆಯುವ ಮೂಲಕ ಇಂಥ ಮೌಲ್ಯಗಳನ್ನು ಸಂರಕ್ಷಿಸಿಕೊಂಡು ಬಂದಿದ್ದಾರೆ. ಇವು ಹೆಣ್ಣನ್ನು ಹೀನಾಯವಾಗಿ ಬಳಸಿಕೊಂಡಿರುವುದನ್ನು ಸಾರುತ್ತವೆ. ಸಾಸುಲಚಿನ್ನಮ್ಮನ ಕಥೆಯ ಐತಿಹ್ಯದ ಖಂಡಕಾವ್ಯದಲ್ಲಿ ಚಿನ್ನಮ್ಮನು ತನ್ನ ಗಂಡನ ಮನೆಯ ಶೋಷಣೆಯನ್ನು ಸಹಿಸುತ್ತಲೇ ತನ್ನ ನಿಲುವುಗಳನ್ನು ಉಳಿಸಿಕೊಂಡ ಆದರ್ಶವನ್ನು ವೈಭವೀಕರಿಸಲಾಗಿದೆ.

**ಗದ್ಯಕಥಾನಕಗಳಲ್ಲಿ ಐತಿಹ್ಯಗಳು :** ಜನಪದ ಗೀತೆಗಳನ್ನು ಸಂದರ್ಭೋಚಿತವಾಗಿ ಹಾಡುತ್ತಾರೆ. ಇಂಥಲ್ಲಿ ಆಚರಣೆ ಅಥವಾ ರಂಜನೆ ಮುಖ್ಯವಾಗುತ್ತದೆ. ಕಥೆಗಳಲ್ಲಿ ಬಹುಪಾಲು ರಂಜನೆ ಇದ್ದು ಕಥೆಯನ್ನು ನಿಜವೆಂದು ನಂಬುವುದಿಲ್ಲ. ಹೀಗೆ ನಂಬಬೇಕಾದರೆ ವಸ್ತು ಐತಿಹ್ಯವಾಗಿರಬೇಕು. ಐತಿಹ್ಯದ ವಿವರಗಳು ಬದಲಾಗುವುದಿಲ್ಲ. ಮೌಖಿಕ ಆಧಾರದ ಹೊರತಾಗಿ ಐತಿಹ್ಯಗಳನ್ನು ಪ್ರಶ್ನಿಸುವುದಿಲ್ಲ. ಐತಿಹ್ಯದ ವ್ಯಕ್ತಿಗಳು ಸ್ಮರಣಾರ್ಹರು. ಜನಪದ ಇತಿಹಾಸದಲ್ಲಿ ಮತ್ತೆ ಮತ್ತೆ ಮೌಲ್ಯಕ್ಕೆ ಒಳಪಡುತ್ತಾರೆ. ಈ ಮೂಲಕ ನಿರಂತರ ಪ್ರಕ್ರಿಯೆ ಏರ್ಪಡುತ್ತದೆ. ಐತಿಹ್ಯದ ವ್ಯಕ್ತಿಗಳಿಗೂ ಘಟನೆಗೂ ಸ್ಥಳಕ್ಕೂ ನಂಟು ಸಂಬಂಧ ಜನಪದದ ಮೂಲಕ ಏರ್ಪಡುತ್ತದೆ.

ಪ್ರಕೃತಿಯ ಅಗಾಧತೆ ನಿಗೂಢತೆಗೆ ಮನುಷ್ಯ ಕಂಡುಕೊಂಡ ಉತ್ತರ ಅರ್ಥ ಐತಿಹ್ಯಗಳಲ್ಲಿರುತ್ತದೆ. ಇದು ಸಮಂಜಸವೇ, ಸಮರ್ಪಕವೇ ಎಂಬುದು ನಂತರದ ವಿಷಯ. ಜನಪದರು ತಮ್ಮ ಪರಿಸರವನ್ನು ನಡೆದಿದೆ ಎಂಬ ಘಟನೆಯೊಂದಿಗೆ ದೃಢೀಕರಿಸುವ ನಿಲುವು ಐತಿಹ್ಯಗಳಲ್ಲಿ ಕಂಡುಬರುತ್ತದೆ. ಮಾನವೀಯತೆ ಎಲ್ಲವನ್ನು ಮನುಷ್ಯ ಶಕ್ತಿ ಹಾಗೂ ಬುದ್ಧಿಯ ಪರಿಮಿತಿಗೆ ಒಗ್ಗಿಸಿಕೊಳ್ಳುವ ಪ್ರಯತ್ನ ಐತಿಹ್ಯಗಳದು. ಜನಪದರ ಅನುಭವದಲ್ಲಿ ನಡೆದ ಘಟನೆಗೆ ಸ್ಥಳದ ಆಧಾರವನ್ನು, ಸ್ಥಳಕ್ಕೆ ಘಟನೆಯ ಆಧಾರವನ್ನು ನೀಡುವ ಪ್ರಕ್ರಿಯೆ ಲಿಖಿತ ದಾಖಲೆಗಿಂತ ನಂಬಲು ಅರ್ಹವಾದದ್ದಾಗಿರುತ್ತದೆ. ಏಕೆಂದರೆ ಇದಕ್ಕೆ ಹಿನ್ನೆಲೆಯಾಗಿ ಒಂದು ಪರಂಪರೆಯೇ ಸಾಕ್ಷಿಯಾಗಿರುತ್ತದೆ.

**ಕಥೆ ಮತ್ತು ಗೀತೆಗಳಲ್ಲಿ ಐತಿಹ್ಯ ಪಡೆಯುವ ತಿರುವುಗಳು :** ಗದ್ಯರೂಪದ ಜನಪದ ಕತೆಗಳೆಲ್ಲ ಸುಖಾಂತರಗಳು-ಬಹುಶಃ ಅಪವಾದಗಳೇ ಇಲ್ಲವೆನ್ನುವಷ್ಟು. ಆದರೆ ಜನಪದ ಕಥನಗೀತೆಗಳಲ್ಲಿ ಸುಖಾಂತರಗಳೂ ಉಂಟು, ದುಃಖಾಂತರಗಳೂ ಉಂಟು. ಜನಪದ ಕತೆಗಳಲ್ಲಿ ದುಃಖಾಂತ ಬಂದಾಗ ಇದ್ದಕ್ಕಿದ್ದಂತೆ ಋಷಿಯ ಮಾಯದಿಂದಲೋ ಅಥವಾ ಕೇವಲ ಆಕಸ್ಮಿಕದಿಂದಲೋ ಅದು ಸುಖಾಂತವಾಗಿ ಬಿಡುತ್ತದೆ. ದುಷ್ಟರು ತಮ್ಮ ತಪ್ಪಿಗೆ ಶಿಕ್ಷೆಯನ್ನು ಅನುಭವಿಸಲೇಬೇಕು. ಸತ್ಪುರುಷರು ತಮ್ಮ ಕಾರ್ಯಕ್ಕೆ ಪ್ರತಿಫಲವಾದ ಸುಖವನ್ನು ಪಡೆಯಲೇಬೇಕು. ಜನಪದ ಮನಸ್ಸು ಕೆಲಸ ಮಾಡುವುದೇ ಹೀಗೆ. ಆದರೆ ಜನಪದ ಕಥನಗೀತೆಗಳಲ್ಲಿ (Folk narrative Poems) ಮಾತ್ರ ದುಃಖಾಂತ ಸಾಧ್ಯ. ಉದಾಹರಣೆಗೆ ಕೆರೆಗೆಹಾರದ ಭಾಗೀರಥಿ ಮನಸ್ಸಿಲ್ಲದ ಮನಸ್ಸಿನಿಂದ ಕೆರೆಗೆ ಬಲಿಯಾಗುತ್ತಾಳೆ. ಅವಳ ಗಂಡ ಅಗಲಿಕೆಯ ದುಃಖವನ್ನು ತಾಳಲಾರದೆ ತಾನೂ ಕೆರೆಗೆ ಹಾರಿ ಸಾಯುತ್ತಾನೆ. ಹೋಗಲಿ ಅವರೇನೋ ಸತ್ತರು, ಆದರೆ ಚಿಕ್ಕಿ ಉಂಗುರಕ್ಕೆ ಸೋತು ಜೋಗಿಯನ್ನು ಹಿಂಬಾಲಿಸಿದ ಹೆಣ್ಣಿನ ಪಾಡು, ಯಾತನೆ ಏನು? ದುರಂತದ ನಡುವೆಯೇ ಆ ಗೀತೆ ಉಳಿದುಬಿಡುತ್ತದೆ. ಈ ಅಂಶವು 'ಜನಪದ' ಕತೆಯಲ್ಲಿ ಮೂಡಿದ್ದರೆ ಅದರ ಸ್ವರೂಪವು ಬೇರೆಯೇ ಆಗಿರುತ್ತಿತ್ತು. ಹೆಣ್ಣಿನ ಬಗ್ಗೆ ಗೀತೆಯಲ್ಲಿ ಮೂಡಿದಷ್ಟು ಸಹಾನುಭೂತಿ ಕಥೆಯಲ್ಲಿ ಮೂಡುತ್ತಿರಲಿಲ್ಲವೇನು! ಜನಪದ ಕಥೆಗೂ ಕಥನಗೀತೆಗೂ ಇಂಥ ವ್ಯತ್ಯಾಸಗಳಿರುತ್ತವೆ.

ಜನಪದ ಕಥೆಗಳ ಆಶಯಗಳು ಜನಪದರ ಮನಸ್ಸಿನಲ್ಲಿ ನೆಲೆಯೂರಿದರೆ ಅದಕ್ಕೆ ಸ್ಪಂದಿಸುವ ಹೃದಯಗಳು, ಮಿಡಿಯುವ ಮನಸ್ಸುಗಳು ಅಂಥವನ್ನು ತಮಗೆ ಆಗುತ್ತಿರುವ ಅನುಭವಗಳೆಂಬಂತೆ ಸ್ಪಂದಿಸುತ್ತವೆ. ಆದ್ದರಿಂದ ಕಥೆಯ ಘಟನೆಗಳನ್ನು ತಮ್ಮ ಸುತ್ತಮುತ್ತಲಿನ ಪರಿಸರದೊಂದಿಗೆ ಆರೋಪಿಸಿ ಘಟನೆಯನ್ನು ಸಮೀಕರಿಸುತ್ತಾರೆ. ಆಗ ಕಥೆಗಳು ಐತಿಹ್ಯಗಳಾಗುವ ಸಾಧ್ಯತೆ ಇದೆ. ಅಲ್ಲದೆ ಐತಿಹ್ಯಗಳ ಘಟನೆಗಳು ಎಲ್ಲಿ ಸಂಭವಿಸಿದವು ಎಂಬ ಅಂಶ ಗೌಣವಾಗುತ್ತಾ ಹೋದಂತೆಲ್ಲ ಕಥಾನಕಕ್ಕೆ ಪ್ರಾಧಾನ್ಯತೆ ಹೆಚ್ಚುತ್ತದೆ. ಆಗ ಐತಿಹ್ಯವು ಕಥೆಯಾಗಿ ಮಾರ್ಪಡುತ್ತದೆ. ಹೀಗೆ ಕಥೆ ಮತ್ತು ಐತಿಹ್ಯಗಳು ಪರಿವರ್ತನೆಯಾಗುವ ಸಾಧ್ಯತೆಗಳಿವೆ.

ಐತಿಹ್ಯಗಳು ಕಥೆಗಳಿಗಿಂತ ಭಿನ್ನವಾಗುವುದು ವಿಶಿಷ್ಟವೆನಿಸುವುದು ಹೀಗೆ : ಐತಿಹ್ಯಗಳಲ್ಲಿ ಕಥೆ ಇದ್ದರೂ ಇಲ್ಲಿ ಕಥೆಗಿಂತ ಕಥೆ ನಡೆದಿದೆ ಎಂಬ ದೃಢತೆ ಮುಖ್ಯವಾಗುತ್ತದೆ. ಹಾಗಾಗಿ ಐತಿಹ್ಯಗಳಲ್ಲಿ ಬರುವ ವ್ಯಕ್ತಿಗಳಿಗೆ ಘಟನೆಗಳಿಗೆ ಸ್ಪಷ್ಟವಾದ ಖಚಿತವಾದ ನೆಲೆಗಟ್ಟು ಲಭಿಸಿರುತ್ತದೆ. ಹೀಗೆ ಐತಿಹ್ಯಗಳು ವಿವರಣಾತ್ಮಕವಾಗಿ ಸೃಷ್ಟಿ ಹಾಗೂ ಆರಂಭವನ್ನು ಕುರಿತಂತೆ ಇರುತ್ತವೆ. ''ದೈವಗಳನ್ನೋ, ಅತಿಮಾನುಷ ವ್ಯಕ್ತಿಗಳನ್ನೋ ಈ ಕಥೆಗಳು ಸಂಬಂಧಿಸಿರಬಹುದು. ಕೆಲವು ಸಲ ಐತಿಹಾಸಿಕ ಹಾಗೂ ಅರ್ಧ ಐತಿಹಾಸಿಕ ಸಂಗತಿಗಳನ್ನೂ ವ್ಯಕ್ತಿಗಳನ್ನೂ ಉದ್ದೇಶಿಸಿದವಾಗಿರುತ್ತವೆ.''[೧೦] ಜನಪದ ಕಥೆಗಳನ್ನು ನಮ್ಮಲ್ಲಿ ಅಜ್ಜಿ ಕಥೆಗಳೆಂದು ಕರೆಯುವುದು ವಾಡಿಕೆ. ಅಜ್ಜಿಯರು ಅಜ್ಜಂದಿರು ಪರಂಪರೆಯಿಂದ ಗ್ರಹಿಸಿಕೊಂಡ ಕಥೆಗಳನ್ನು ನಂತರದ ಪೀಳಿಗೆಗೆ ಪ್ರಸರಣ ಮಾಡುತ್ತಾರೆ. ಎಳೆಯ ವಯಸ್ಸಿನಲ್ಲಿ ಜೀವನಾವಧಿಯ ಮುಪ್ಪಿನ ಅವಸ್ಥೆಯಲ್ಲಿನವರೆಗೂ ಮೌಖಿಕವಾಗಿ ಕೇಳಿ ಗ್ರಹಿಸಿಕೊಂಡದ್ದನ್ನು ಸಂದರ್ಭಕ್ಕನುಗುಣವಾಗಿ ಹಿಗ್ಗಿಸಿ-ಕುಗ್ಗಿಸಿ ಹೊಸತನ್ನು ಸೇರಿಸಿ ನಿಷ್ಪ್ರಯೋಜಕವೆನಿಸಿದ್ದನ್ನು ಕೈ ಬಿಡುತ್ತಾ ಜನಪದ ಸಾಹಿತ್ಯವನ್ನು ಮತ್ತೆ ಮತ್ತೆ ಜೀವಂತಗೊಳಿಸುತ್ತಾರೆ. ಈ ಸಾಧ್ಯತೆ ಐತಿಹ್ಯಗಳಿಗಿಂತ ಹೆಚ್ಚಾಗಿ ಕಥೆಗಳಿಗೆ ಅನ್ವಯಿಸುತ್ತದೆ. ಏಕೆಂದರೆ ಕಥೆಗಳು ಸಂಪ್ರದಾಯದಲ್ಲಿ ಬಂದ ನಿರೂಪಣೆಗಳಾಗಿರುತ್ತವೆ. ಕಲ್ಪನೆ ಪ್ರಧಾನವಾದದ್ದಾಗಿರುತ್ತದೆ. ಕಥೆಗಳನ್ನು ಹೇಳುವವರೂ, ಕೇಳುವವರು ಯಾರೂ ನಿಜವೆಂದು ನಂಬುವಂತೆಯೂ ಇಲ್ಲ. ನಂಬಿಸುವಂತೆಯೂ ಇಲ್ಲ. ಆದರೆ ಕಥೆಗಳಲ್ಲಿ ನೀತಿಯ ಅಂಶ ಮುಖ್ಯವಾಗಿರುತ್ತದೆ.



ಐತಿಹ್ಯಗಳಲ್ಲಿ ದೈವಿಕ ಶಕ್ತಿಗಳನ್ನು ಕುರಿತಂತೆ ವಿಶ್ವಶಾಸ್ತ್ರಕ್ಕೆ ಸಂಬಂಧಿಸಿದಂತೆ, ರಾಷ್ಟ್ರೀಯ ಘಟನೆಗಳನ್ನು ಒಳಗೊಂಡಂತೆ ಹುಡುಕಾಟ ನಡೆಸಿದರೆ, ಕೆಲವೊಮ್ಮೆ ಅದ್ಭುತ ಘಟನೆಗಳೇ ಇಲ್ಲಿ ಪ್ರಾಧಾನ್ಯತೆಯನ್ನು ಪಡೆದಂತೆ ಅನಿಸುತ್ತದೆ. ಗೊತ್ತಾದ ಸ್ಥಳಕ್ಕೆ ಆರೋಪಿತವಾಗಿ, ನಿರ್ದಿಷ್ಟ ವ್ಯಕ್ತಿಗಳ ಅತಿಮಾನುಷತ್ವವನ್ನು ಪ್ರತಿಪಾದಿಸಿ, ಚಾರಿತ್ರಿಕ ಸುಳಿವುಗಳನ್ನು ನೀಡಿ ಯಾವುದೇ ಒಂದು ಕಾಲಘಟ್ಟದಲ್ಲಿ ಸಂಭವಿಸಿರಬಹುದೆಂದು ಘಟನೆಗಳನ್ನು ನಂಬುವ ಅಂಶ ವಿಶಿಷ್ಟವಾದದ್ದು. ಸಂಪೂರ್ಣ ದಿಟವೂ ಅಲ್ಲ, ಸುಳ್ಳು ಅಲ್ಲ ಎಂಬ ಅಂಶಗಳನ್ನು ಐತಿಹ್ಯಗಳು ಒಳಗೊಂಡಿರುತ್ತವೆ. ಆದರೆ ಜನಪದ ಕಥೆಗಳ ವ್ಯಕ್ತಿ ಪಾತ್ರದಲ್ಲಿ ವೈವಿಧ್ಯತೆಯಿದ್ದರೂ ಕ್ರಿಯೆಗಳು ಮಾತ್ರ ಸಾಮಾನ್ಯ ದೃಢ. ಈ ದೃಢಕ್ರಿಯೆಗಳು ಸಂಖ್ಯೆಯಲ್ಲಿ ಹಲವಿಲ್ಲ. ಕ್ರಿಯೆಗಳ ಅನುವೃತ್ತಿ ಸದಾ ಒಂದೇ ಗತಿಯಲ್ಲಿರುತ್ತದೆ. ಎಲ್ಲ ಕಥೆಗಳು ರಚನೆಯ ದೃಷ್ಟಿಯಿಂದ ಒಂದೇ ವರ್ಗವಾಗಿರುತ್ತವೆ. ಕಥೆಗಳು ನಿಧಾನವಾಗಿ ಆರಂಭವಾಗುತ್ತವೆಯೇ ಹೊರತು ಮುಖ್ಯ ಕ್ರಿಯೆಯಿಂದ ಆರಂಭವಾಗುವುದಿಲ್ಲ. ಈ ನಿಧಾನವಾದ ಆರಂಭವು ಕಥೆಗೆ ಪ್ರವೇಶವನ್ನು ಕೊಡುತ್ತದೆ. ಮುಂದುವರೆದು ಕಥೆಯ ಕೇಂದ್ರಬಿಂದುವನ್ನು ದಾಟಿ ವ್ಯಾಪಕತೆಯನ್ನು ಪಡೆಯುತ್ತಾ ಹೋಗುತ್ತದೆ. ನಿರ್ದಿಷ್ಟವಾಗಿ ಕಥೆಯನ್ನು ಇಲ್ಲಿಗೇ ನಿಲ್ಲಿಸಬೇಕೆಂದೇನೂ ಇಲ್ಲ. ವಕ್ತೃವಿನ ಕಲ್ಪನೆಯ ಸಾಮರ್ಥ್ಯದ ಆಧಾರದ ಮೇಲೆ ಕತೆಯು ಹಬ್ಬುತ್ತಾ ಹೋಗುತ್ತದೆ. ಹಾಗೊಮ್ಮೆ, ಈಗೊಮ್ಮೆ

ಪುನರಾವರ್ತನೆ ಅವಶ್ಯಕವೆಂಬಂತೆ ಮೂಡಿ ಬರುತ್ತದೆ. ಕಥೆ ಹಾಗೂ ಪಾತ್ರಗಳ ವ್ಯಾಪ್ತಿ ಸರಳವಾಗಿದ್ದು, ಅಗತ್ಯವಿದ್ದಷ್ಟು ಅವಕಾಶವನ್ನು ಒದಗಿಸಿಕೊಳ್ಳುತ್ತವೆ. ಪಾತ್ರಗಳಲ್ಲಿ ವೈವಿಧ್ಯತೆಯಿದ್ದರೂ ಅವು ಸಾಮಾನ್ಯವೂ ದೃಢವೂ ಆಗಿರುತ್ತವೆ. ಇಂಥ ದೃಢವಾದ ಕ್ರಿಯೆಗಳು ಹೆಚ್ಚಾಗಿರುವುದಿಲ್ಲ. ಅವು ನಿರ್ವಹಿಸುವ ಕಾರ್ಯವು ಹಲವು ಬಗೆಗಳದಾದರೂ ಅದು ಒಂದೇ ರೀತಿಯಲ್ಲಿರುತ್ತದೆ.[೧೯]

ಇಂದಿನ ಲೋಕಸ್ಥಿತಿಯ ಪೂರ್ವೋತ್ತರಗಳ ಸುತ್ತ ಹೆಣೆಯಲ್ಪಡುವ ಕಥೆಗಳು ಪುರಾಣಕತೆಗಳಾಗುತ್ತವೆ. ಇಂಥವು ಐತಿಹ್ಯಗಳಿಗೂ ಸಮೀಪವಾಗುತ್ತವೆ. ಪೌರಾಣಿಕ ಪಾತ್ರಗಳು ಅತಿರಂಜನಾತ್ಮಕವಾದಾಗ ಕಿನ್ನರ ಕಥೆಗಳು ಆಗುತ್ತವೆ. ಪುರಾಣ ಕಥೆಗಳು ಐತಿಹ್ಯಗಳು ಎಂದು ವಿಂಗಡಿಸುವುದು ಕಷ್ಟವಾದರೂ ಪುರಾಣಗಳ ಅವತರಣ ದೈವಿಕ ಪಾತ್ರಗಳು, ದೇವತೆಗಳು, ಇವುಗಳ ಉದ್ದೇಶ ನಿರೂಪಣೆ, ಐತಿಹ್ಯಗಳಾದರೋ ಸ್ಥಳಸಂಗತಿ ವ್ಯಕ್ತಿಗಳನ್ನು ಕುರಿತವು, ಹೇಳುವವರೂ ಕೇಳುವವರೂ ನಿಜವೆಂದೇ ಭಾವಿಸಿರುವ ಐತಿಹ್ಯದ ಕಥೆಗಳು ಹೊರನೋಟಕ್ಕೆ ಪುರಾಣ ಕಥೆಗಳಂತೆ ಗೋಚರಿಸಿದರೂ ವಿವರಗಳು ಬೇರೆಯಾಗಿರುತ್ತವೆ. ಜನಪದ ಕತೆಗಳಲ್ಲಿ (Folk-tales) ದುರಂತತೆ ಸಾಧ್ಯವಿಲ್ಲ. ಆದರೆ ಗದ್ಯರೂಪದ ಐತಿಹ್ಯಗಳಲ್ಲಿ (Legends) ದುರಂತತೆ ಸಾಧ್ಯ. ಐತಿಹ್ಯವು ವಾಸ್ತವ ಘಟನೆಗೆ ಹತ್ತಿರವಾಗಿರುತ್ತದೆಯೆಂಬುದನ್ನು ಇಲ್ಲಿ ಗಮನಿಸಬೇಕು. ಜನಪದ ಕತೆಯಲ್ಲಿಲ್ಲದ ದುರಂತತೆ ಏಕೆ ಜನಪದ ಕಥನಗೀತೆಗಳಲ್ಲಿ ಸ್ಥಾನವನ್ನು ಪಡೆದಿದೆಯೆಂಬುದರ ಬಗ್ಗೆ ಇನ್ನೂ ಹೆಚ್ಚಿನ ವಿಚಾರಕ್ಕೆ ಅವಕಾಶವುಂಟು.

**ಆಡುನುಡಿ ಮತ್ತು ಗಾದೆಗಳಲ್ಲಿ ಐತಿಹ್ಯದ ವಿವರಗಳು :** ಗಾದೆಗಳು ಜನಪದರ ಜೀವನಾನುಭವದಿಂದ ಮೂಡಿ ಬಂದ ಹೇಳಿಕೆಗಳು. ಆಯಾ ಜನಪದ ಸಮೂಹದ ಒಪ್ಪಿಗೆ ಅಥವಾ ಅಂಗೀಕಾರ ಪಡೆದ-ಪಡೆಯದ ನಿಲುವುಗಳನ್ನು ಇವು ಪ್ರತಿಪಾದಿಸುತ್ತವೆ. ಬದುಕಿಗೆ ಸಂಬಂಧಿಸಿದ ನೀತಿ-ಅನೀತಿ ಪರಿಣಾಮಗಳನ್ನು ಗಾದೆಗಳು ವಿವರಿಸುತ್ತವೆ. ಆಯಾ ಕಾಲಘಟ್ಟಗಳ ಸಾಮಾಜಿಕ ನಿರ್ಣಯಗಳನ್ನು ಜನಪದರ ಗಾದೆಗಳಲ್ಲಿ ಅಡಗಿಸಿಡುತ್ತಾರೆ. ಕಾಲಘಟ್ಟಗಳಿಗೆ ಅನುಗುಣವಾಗಿ ನಿರ್ಣಯಗಳಲ್ಲಿ ತಿದ್ದುಪಡಿ ಮಾರ್ಪಾಟುಗಳಾದಾಗ ಹೊಸ ಗಾದೆಗಳು ಉಂಟಾಗುತ್ತಿರುತ್ತವೆ. ಹಳೆಯ ಗಾದೆಗಳು ಅಷ್ಟು ಬೇಗ ಮರೆಯಾಗುವುದಿಲ್ಲ. ಇಂಥ ಸಂದರ್ಭಗಳಲ್ಲಿ ಕೆಲವು ಅರ್ಥಹೀನವೆನಿಸಿದರೂ ಅವು ಸೃಷ್ಟಿಯಾದ ಸಂದರ್ಭದ ಸತ್ಯಗಳನ್ನು ಹೇಳುತ್ತಿರುತ್ತವೆ. ಆದ್ದರಿಂದಲೇ ಗಾದೆಗಳನ್ನು ವೇದಕ್ಕೆ ಸಮಾನವೆಂದು, ವೇದ ಸುಳ್ಳಾದರೂ ಗಾದೆ ಸುಳ್ಳಾಗುವುದಿಲ್ಲವೆಂದು, ನೋವು-ನಲಿವು; ಅದ್ಭುತ-ದುರಂತಗಳ ಅನುಭವಗಳಿಂದ ಹೊರಹೊಮ್ಮುವ ಗಾದೆಗಳಲ್ಲಿ ಐತಿಹಾಸಿಕ ಅಂಶಗಳು ಇರದೆ ಇರುವುದಿಲ್ಲ. ಯಾವುದೇ ಪ್ರದೇಶ ಅಥವಾ ಸಮೂಹ ಇಲ್ಲವೇ ವ್ಯಕ್ತಿ-ಘಟನೆಗಳಿಗೆ ಸಂಬಂಧಿಸಿದ ಗಾದೆಗಳಲ್ಲಿನ ಚಾರಿತ್ರಾರ್ಹ ಸಂಗತಿಗಳು ಮೌಖಿಕ ಪರಂಪರೆಯಲ್ಲಿ ಒಬ್ಬರಿಂದ ಮತ್ತೊಬ್ಬರಿಗೆ, ತಲೆಮಾರಿನಿಂದ ತಲೆಮಾರಿಗೆ ಪರಿಚಲನಗೊಳ್ಳುತ್ತಿದ್ದರೆ.

ಅವು ಐತಿಹ್ಯಗಳ ಮಾಹಿತಿಗಳನ್ನು ನೀಡುತ್ತಿರುತ್ತವೆ. ಉದಾ : 'ಓಬೀರಾಯನ ಕಾಲದ್ದು' ಎಂಬ ಗಾದೆ. ಈಗಾಗಲೇ ಮೌಖಿಕ ಪರಂಪರೆಯಲ್ಲಿಯೂ ಓಬೀರಾಯನ ಸ್ಮೃತಿ ಕಳೆದು ಹೋಗಿರುವಾಗಲೂ ಬಹಳ ಹಿಂದಿನ ಕಾಲದಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದ ಪ್ರಭಾವಿತ ವ್ಯಕ್ತಿಯನ್ನು ನೆನಪಿಸಿಕೊಳ್ಳುತ್ತೇವೆ. ಆದರೆ ಆತ ಯಾವ ಕಾರಣದಿಂದ ಹೆಸರುವಾಸಿಯಾಗನೆಂಬ ಅಂಶ ಪರಂಪರೆಯ ನೆನಪಿನಿಂದ ಕಳಚಿ ಹೋಗಿದೆ.

ಸಾರಂಗಧರನಿಗೆ ಕೈಕಾಲು ಕತ್ತರಿಸಿದವಳು-ಎಂಬ ಗಾದೆ ಕುಮಾರರಾಮನ ಐತಿಹ್ಯದ ಸಾರಾಂಶವನ್ನು ಒಳಗೊಂಡಿದೆ. 'ದೊರೆಗಳು ಮಾಡಿದ್ದಕ್ಕೆ ದಂಡವಿಲ್ಲ', 'ರೆಡ್ಡಿ ಮಾತು ಮೀರೋಕೆ ಆಗಲ್ಲ, ಹಾರೇನ ನುಂಗೋಕೆ ಆಗಲ್ಲ', 'ಪಾಳೆಯಗಾರನ ಥರ ಮೆರಿಯೋಕೆ ಹೋಗಿ ಮೂಳೆ ಮುರಿಸಿಕೊಂಡ' ಇತ್ಯಾದಿ ಗಾದೆಗಳು ಆಯಾ ಕಾಲಘಟ್ಟದ ಚರಿತ್ರೆಯ ದರ್ಪದ ಆಯಾಮಗಳನ್ನು ಕಟ್ಟಿಕೊಡುತ್ತವೆ. 'ಬಂಜಿಗರ ದೇವ್ರು ಗೂಟಗಳನ್ನು ತುಳಿದುಕೊಂಡು ಬಂದ ಹಾಗೆ' ಎಂಬ ಗಾದೆ ಕೋಲಾರ ಜಿಲ್ಲೆಯ ಕೆಳಜಾತಿಗಳಲ್ಲಿ ಪ್ರಚಲಿತವಿದೆ. ಇದು ವೀರಭದ್ರ ವೇಷವನ್ನು ಕಂಡು ಹೆದರಿದ ಸಮುದಾಯದಿಂದ ಮೂಡಿದ ಗಾದೆ. ತೆಲುಗು ಮಾತೃಭಾಷೆಯುಳ್ಳ ಈ ಜನಕ್ಕೆ ತಮ್ಮ ಮೇಲೆ ಅನ್ಯಧರ್ಮದ ಹೇರಿಕೆಯುಂಟಾದಾಗ, ಜಂಗಮರ ಭಿಕ್ಷಾಟನೆಯ ಆರ್ಭಟಕ್ಕೆ ಹೆದರಿ ಮಕ್ಕಳು ಮರಿಗಳನ್ನು ಹೊತ್ತುಕೊಂಡು ಓಡಿ ಹೋಗಿ ಬಾಗಿಲು ಹಾಕಿಕೊಳ್ಳುತ್ತಿದ್ದ ನೆನಪು ಈಗಲೂ ಈ ಗಾದೆಮಾತಿನಲ್ಲಿ ಅಡಗಿದೆ.

'ಅಕ್ಕಯ್ಯಮ್ಮನ ಸವಾಲು ಆಯ್ತು' ಎಂಬ ಗಾದೆಯಲ್ಲಿ, ಅಕ್ಕಯ್ಯಮ್ಮನೆಂಬ ಯುವತಿಯೊಬ್ಬಳ ಜೀವನದ ಸ್ವರೂಪವನ್ನು ಸ್ಮರಿಸುವುದನ್ನು ಕಾಣುತ್ತೇವೆ. ಗೌರೀಬಿದನೂರು ತಾ. ಚಿಕ್ಕಕುರುಗೋಡಿನವಳಾದ ಈಕೆ ಮುಗ್ಧೆ ಅಥವಾ ಅಮಾಯಕಳು. ತಂದೆ ತೀರಿಕೊಂಡ ನಂತರ ತಾಯಿಯ ಪೋಷಣೆಯಲ್ಲಿ ಬೆಳೆದಳು. ಅವಳನ್ನು ಯಾರೂ ಮದುವೆಯಾಗಲಿಲ್ಲ. ಕಾರಣಾಂತರಗಳಿಂದ ತನ್ನನ್ನು ತಾಯಿ ಹೊಡೆದಾಗಲೆಲ್ಲಾ ಊರಿನ ಶಾನುಭೋಗರಲ್ಲಿ ಈಕೆ ದೂರುತ್ತಿದ್ದಳು. ಶಾನುಭೋಗ ಶಾಮಪ್ಪ ಸಮಾಧಾನ ಹೇಳಿ ಕಳುಹಿಸುತ್ತಿದ್ದ. ಒಮ್ಮೆ ಅವಳು ಗ್ರಾಮಸ್ಥನೊಬ್ಬನ ಅತ್ಯಾಚಾರಕ್ಕೆ ಒಳಗಾದಳು. ದೂರನ್ನು ಶಾನುಭೋಗರಿಗೆ ಹೇಳಿ ಅತ್ತಳು. ಏನೋ ಬರೆದುಕೊಳ್ಳುತ್ತಿದ್ದ ಅವರು ಗಮನಕೊಡದೆ ನಿಮ್ಮ ತಾಯಿಗೆ ಹೇಳ್ತೀನಿ ಹೋಗೇ ಅಕ್ಕಯ್ಯಮ್ಮ ಎಂದುಬಿಟ್ಟರು.

ದಿನಕಳೆದಂತೆ ಆಕೆ ಗರ್ಭವತಿಯೆಂಬ ಸುಳಿವು ತಾಯಿಗೆ ತಿಳಿಯಿತು. ಅವಳು ಮಗಳನ್ನು ಹೊಡೆದು ದಂಡಿಸಿದಳು. ಕುಪಿತಗೊಂಡ ಅಕ್ಕಯ್ಯಮ್ಮ ಓಡಿ ಬಂದು ಶಾನುಭೋಗರಿಗೆ ಹೊಡೆದಳು. ಕಾರಣ ಕೇಳಿದರೆ ನಾನು ಆ ಹೊತ್ತೇ ನಿನಗೆ ಎಲ್ಲಾ ಹೇಳಿದ್ದೆ, ಈಗ ನಮ್ಮ ತಾಯಿ ಹೊಡೆಯುತ್ತಿದ್ದಾಳೆಂದು ಅತ್ತಳು. ಅಲ್ಲಿ ನೆರೆದಿದ್ದವರೆಲ್ಲರೂ ಸಮಾಧಾನ ಮಾಡಿದರು. ಅಮಾಯಕಳನ್ನು ಮೋಸ ಮಾಡಿದ ವ್ಯಕ್ತಿಯ ಕಡೆಯವರು ಗಟ್ಟಿಗರಾಗಿದ್ದರಿಂದ ಅವನನ್ನು ದಂಡಿಸಲಿಲ್ಲ. ದಿಕ್ಕು ದೆಸೆ ಇಲ್ಲದ ಅವಳಿಗೂ

ಒಂದು ಮಗುವಾದರೆ ಆಧಾರವಾಗುತ್ತದೆಂದು ತೀರ್ಮಾನ ಮಾಡಿ ತಾಯಿಯನ್ನು ಒಪ್ಪಿಸಿದರು. ಹೆಣ್ಣು ಮಗುವೂ ಆಯಿತು. ಅಕ್ಕಯ್ಯಮ್ಮನ ತಾಯಿ ಇರುವವರೆಗೂ ಮಗುವನ್ನು ಚೆನ್ನಾಗಿ ಪೋಷಿಸಿದಳು. ಅವಳ ಮರಣಾನಂತರ ಅಕ್ಕಯ್ಯಮ್ಮನಿಗೆ ಮಗುವಿನ ಪೋಷಣೆ ಕಷ್ಟವಾಯಿತು. ಅಂಥ ಸಂದರ್ಭಗಳಲ್ಲೆಲ್ಲಾ ಅವಳು ನೇರವಾಗಿ ಶಾನುಭೋಗರನ್ನು ಹುಡುಕಿಕೊಂಡು ಹೋಗುತ್ತಿದ್ದಳು. ಕಾಣಿಸಿದ ತಕ್ಷಣ ಹಿಡಿದು ಹೊಡೆಯಲಾರಂಭಿಸುತ್ತಿದ್ದಳು. ತನಗಾದ ಅನ್ಯಾಯಕ್ಕೆ ಸರಿಯಾದ ತೀರ್ಪು ನೀಡದೆ ದಾರಿ ತಪ್ಪಿಸಿದನೆಂಬುದೇ ಅವಳ ಕೋಪ. ಕಾಯಿಲೆಯಿಂದ ನರಳಿ ಅವಳ ಮಗುವೂ ತೀರಿಕೊಂಡಿತು. ಶಾನುಭೋಗ ಅಕ್ಕಯ್ಯಮ್ಮನಿಗೆ ಅನಾಥರ ಮಾಸಾಶನವನ್ನು ಮಂಜೂರು ಮಾಡಿಸಿದ. ಒಬ್ಬಂಟಿಯಾಗಿ ಬದುಕಿನ ಬವಣೆಯಲ್ಲಿ ಬೇಯುತ್ತಿದ್ದ ಅವಳಿಗೆ ತ್ರಾಣವಿರುವವರೆಗೂ ಶಾನುಭೋಗನ ಬಗ್ಗೆಯೇ ಅಸಮಾಧಾನ. ಶಾನುಭೋಗನಿಗೆ ಅವಳನ್ನು ಕಂಡರೆ ಹೆದರಿಕೆ.

'ದೊಡ್ಡವರ ಕೈ ಹಿಡಿದುಕೊಂಡು ಬದುಕಿಕೋ' ಎಂಬ ಗಾದೆಯಲ್ಲಿ ಅಮಾಯಕ ದಲಿತ ಯುವತಿಯ ದುರಂತ ಸಾವಿನ ವಿವರಗಳಿವೆ. ಊರಿನಲ್ಲಿ ನಾಟಕವಿತ್ತು. ಹಗಲಿಡೀ ಗದ್ದೆಯಲ್ಲಿ ಪೈರು ನಾಟಿ ಮಾಡಿ ಬಂದ ದಲಿತ ಯುವತಿಯು ಸಂಜೆ ಮನೆಗೆ ಬಂದು ನಾಟಕ ನೋಡಲು ಹೊರಡುವುದಕ್ಕೆ ಸಿದ್ಧವಾದಳು. ಮತ್ತೆ ಮತ್ತೆ ಕೈಕಾಲು ಮುಖ ತೊಳೆದರೂ ಅಂಟಿದ್ದ ಬುರುಜೆಯ ಅಂಶ ಸ್ಪಷ್ಟವಾಗುತ್ತಿತ್ತು. ತಲೆತುಂಬ ಅರಳೆಣ್ಣೆಯಿಟ್ಟು, ತಲೆಬಾಚಿ ಕೈಕಾಲುಗಳಿಗೆಲ್ಲ ಅರಳೆಣ್ಣೆಯನ್ನು ಹಚ್ಚಿದಳು. ತಲೆಯ ಎಣ್ಣೆ ಮುಖಕ್ಕೂ ಇಳಿಯಿತು. ನಾಟಕ ಸ್ಟೇಜ್‌ನ ಮುಂದೆ ಕುಳಿತು ನಾಟಕ ನೋಡುತ್ತಿದ್ದಳು. ಇದ್ದಕ್ಕಿದ್ದಂತೆ ಕರೆಂಟ್ ಹೋಯ್ತು. ಊರ ರೆಡ್ಡಿಯ ಮಗ ಪೆಟ್ರೋಮ್ಯಾಕ್ಸ್ ಹಚ್ಚಿದ. ಮುಂದೆ ಕುಳಿತಿದ್ದ ಇವಳನ್ನು ನೋಡಿ ನಕ್ಕುಬಿಟ್ಟ. ಇವಳಿಗೋ ಸಂತೋಷ ತಡೆಯಲಾಗಲಿಲ್ಲ. ಮನೆಗೆ ಓಡಿದಳು; ತಾಯಿಗೆ ವಿಷಯ ತಿಳಿಸಿದಳು. ತಾಯಿ ಬಾಣಂತಿಯಾಗಿದ್ದಳು. ಅವಳು ಒಳಗಿನಿಂದ ಹಾಗಾದ್ರೆ ನೀನು ಆಚೆ ಕಡೆಯೇ ಮಲಗು ರೆಡ್ಡಿ ಮಗ ಬರುತ್ತಾನೆ ಎಂದಳು. ಇವಳು ತಾಯಿಯಿಂದ ಒಂದು ಗೋಣಿಚೀಲವನ್ನು ಪಡೆದು ಅದರೊಳಕ್ಕೆ ತೂರಿಕೊಂಡು ಆಚೆ ಮಲಗಿದಳು.

ನಡುರಾತ್ರಿಯ ಸಮಯದಲ್ಲಿ ಅವಳನ್ನು ಚೀಲದ ಸಮೇತ ಯಾರೋ ಹೊತ್ತು ಒಯ್ದರು. ಆಗ ಅವಳು ಅಮ್ಮಾ ನಾನು ಹೋಗುತ್ತೇನೆ ಎಂದಳು. ಅದಕ್ಕೆ ತಾಯಿಯು ಆಯ್ತೂ ಮಗು ದೊಡ್ಡವರ ಕೈ ಹಿಡಿದು ಬದುಕಿಕೋ ಎಂದು ಒಳಗಿನಿಂದಲೇ ಆಶೀರ್ವಾದ ಮಾಡಿದಳು. ತಾಯಿಗೆ ತನ್ನ ಮಗಳು ದೊಡ್ಡ ಶ್ರೀಮಂತರ ಮನೆ ಸೇರಿದಳೆಂಬ ಸಂಭ್ರಮ. ಕೆಲವು ದಿನಗಳ ನಂತರ ಮಗಳನ್ನು ನೋಡಲೆಂದು ರೆಡ್ಡಿ ಮನೆಗೆ ಹೋದಳು. ಅವರು ಇವಳನ್ನು ಒಳಗೆ ಸೇರಿಸಿಕೊಳ್ಳಲಿಲ್ಲ. ಆಗ ಅವಳು ನಿನ್ನ ಮಗ ನನ್ನ ಮಗಳನ್ನು ತಂದಿದ್ದಾನೆಂದಳು. ಅವನ್ನು ಕರೆದು ವಿಚಾರಿಸಿದರು. ಆತ ತನಗೇನೂ ಗೊತ್ತಿಲ್ಲವೆಂದನು. ತಾಯಿಯು ನಾಟಕದ ಸ್ಟೇಜ್‌ನಿಂದ ನಗಲಿಲ್ಲವೇ ನೀನು ನಂತರ ಮನೆಗೆ ಬಂದು ನನ್ನ ಮಗಳನ್ನು

ಹೊತ್ತು ತರಲಿಲ್ಲವೇ ಎಂದು ಪ್ರಶ್ನಿಸಿದಳು. ಅವನು ಮತ್ತೊಮ್ಮೆ ನಕ್ಕು ಕರೆಂಟ್ ಇಲ್ಲದ ಕತ್ತಲಿನಲ್ಲಿ ಫಳಫಳನೆ ಹೊಳೆಯುತ್ತಿದ್ದ ಕಪ್ಪು ಹುಡುಗಿಯನ್ನು ಪೆಟ್ರೋಮ್ಯಾಕ್ಸ್ ಬೆಳಕಿನಲ್ಲಿ ಕಂಡು ನಕ್ಕಿದ್ದು ಮಾತ್ರ ನಿಜವೆಂದ. ಆಗ ತಾಯಿಯು ತನ್ನ ಮಗಳನ್ನು ಹೊತ್ತು ಒಯ್ದುವರಾರೆಂದು ಕೇಳಿದಳು. ಅಷ್ಟರಲ್ಲಿ ಒಬ್ಬ ಆಳು ಬಂದು ಹೇಳಿದ : "ನಿನ್ನ ಮಗಳನ್ನು ಬೆಟ್ಟದ ಬುಡದಲ್ಲಿ ಕತ್ತೆಕಿರುಬ ಬೇಟೆಯಾಡಿ ತಿಂದಿದೆ; ಸೀರೆ ಹರಿದಿದೆ; ತಲೆಗೂದಲು ಹರಡಿದೆ"-ಎಂದು. ಕೆಳಜಾತಿಯ ಯುವತಿಯರ ಪಾಲಿಗೆ ಇಂಥ ಸಾಂಕೇತಿಕ ಕಿರುಬಕತ್ತೆ ಕಂಟಕವಾಗುವ; ನಡೆದ ವಾಸ್ತವತೆಯನ್ನು ಮುಚ್ಚಿ ಹಾಕುವ ಚಾರಿತ್ರಿಕ ಶೋಷಣೆಯನ್ನು ಈ ಗಾದೆ ಬಿಂಬಿಸುತ್ತದೆ.

'ಗುಟ್ಟೆ ಚೌಡಮ್ಮನನ್ನು ಬಟ್ಟೆ ಬಿಟ್ಟು ಬರುವಂತೆ ಮಾಡಿದವನು' ಎಂಬ ಗಾದೆಯಲ್ಲಿ ತುಮಕೂರು ಜಿಲ್ಲೆಯ ಮಧುಗಿರ ತಾಲೂಕಿನ 'ಗುಟ್ಟೆ' ಚೌಡಮ್ಮನ ಗುಡಿಯಲ್ಲಿ ವಿಗ್ರಹವಿಲ್ಲ. ಗುಡಿಯ ಮುಂದೆ ನಾಚಿಕೆಯಿಂದ ತಲೆಬಾಗಿ ತನ್ನ ಎರಡೂ ಕೈಗಳಿಂದ ಮುಖವನ್ನು ಮುಚ್ಚಿ ನಿಂತಿರುವ ಹೆಣ್ಣಿನ ವಿಗ್ರಹವಿದೆ. ಅದಕ್ಕೆ ಸಂಬಂಧಿಸಿದ ಐತಿಹ್ಯ ಕೋಲಾರ ಜಿಲ್ಲೆಯಲ್ಲಿ ಗಾದೆಯಾಗಿದೆ. ಒಬ್ಬ ದಲಿತ ಭಕ್ತ ಗುಟ್ಟೆಯ ಚೌಡಮ್ಮನಿಗೆ ಹರಕೆ ಹೊತ್ತ. "ತಾಯಿ ನಿನ್ನ ದರ್ಶನ ನನಗೆ ಲಭಿಸಿದರೆ, ನಿನಗೆ ಚಿಟಿಕೆಯ ಚಪ್ಪರ ಹಾಕಿಸುತ್ತೇನೆ; ಹಗುರವಾದ ತೇರಿನಲ್ಲಿ ಮೆರವಣಿಗೆ ಮಾಡಿಸುತ್ತೇನೆ; ಸಾವಿರ ಕಾಲಿನ ಬೇಟೆಯನ್ನು ಬಲಿ ನೀಡುತ್ತೇನೆ; ಸಾವಿರ ಕಣ್ಣಿನ ಸೀರೆಯನ್ನು ಉಡಿಸುತ್ತೇನೆ;" ಎಂದು. ದೇವತೆಯು ತನ್ನ ಭಕ್ತನ ಹರಕೆಯಿಂದ ಕುತೂಹಲಭರಿತಳಾಗಿ ಮೊದಲು ಸಾವಿರ ಕಣ್ಣಿನ ಸೀರೆಯನ್ನು ಉಟ್ಟುಕೊಳ್ಳಬೇಕೆಂದು ಬೆತ್ತಲೆಯಾಗಿ ದೇವಾಲಯದಿಂದ ಹೊರ ಬಂದು ನಿಂತಳು. ಅವನು ಬೇಡರ ಬಲೆಯನ್ನು ತಂದಿದ್ದ. ಚಿಟಿಕೆಯ ಚಪ್ಪರವೆಂದು ನಾಲ್ಕು ಹುಲ್ಲುಕಡ್ಡಿಗಳನ್ನು ನಿಲ್ಲಿಸಿ, ಅವುಗಳ ಮೇಲೆ ನಾಲ್ಕು ಕಡ್ಡಿಗಳನ್ನು ಹಾಸಿದ್ದ. ಜೋಳದ ದಂಟಿನ ಬೆಂಡುಗಳಿಂದ ಆಟಿಕೆಯ ರಥವನ್ನು ತಯಾರಿಸಿದ್ದ. ವನಕೆಬಂಡೆ ಎಂಬ ಹುಳುವನ್ನು ಬೇಟೆಯಾಡಿ ಬಲಿ ಕೊಡಲು ಹಿಡಿದು ತಂದಿದ್ದ. ಇವೆಲ್ಲವನ್ನೂ ನೋಡಿ ಚೌಡಮ್ಮ ನಾಚಿ ತಲೆತಗ್ಗಿಸಿ ಮುಖ ಮುಚ್ಚಿಕೊಂಡಳು ಎಂಬ ಐತಿಹ್ಯ.

ಮಧುಗಿರಿಯ ಪ್ರಾಂತ್ಯಕ್ಕೆ ಅಂಟಿಕೊಂಡಂತಿರುವ ಕೋಲಾರ ಜಿಲ್ಲೆಯ ಭಾಗದಲ್ಲಿ ಈ ಐತಿಹ್ಯ ಹೆಚ್ಚು ವ್ಯಾಪಕವಾಗಿದೆ. ದಲಿತ ಸಮುದಾಯದಲ್ಲಿ ಈ ಐತಿಹ್ಯಕ್ಕೆ ಸಂಬಂಧಿಸಿದಂತೆ ಆರೋಪಿತವಾದ ದಲಿತ ಜನರ ಜಾಣ್ಮೆಯನ್ನು ಪ್ರಶಂಸಿಸಲೋ, ವ್ಯಂಗ್ಯ ಮಾಡಲೋ ಈ ಗಾದೆಯನ್ನು ಬಳಸುತ್ತಾರೆ. ಆದರೆ ಸಾಮಾಜಿಕವಾಗಿ, ಆರ್ಥಿಕವಾಗಿ ದುರ್ಬಲನಾದ ವ್ಯಕ್ತಿಯೊಬ್ಬನು ಮೇಲ್ವರ್ಗದ ಆಚರಣೆಗೆ ಪರ್ಯಾಯವಾಗಿ ರೂಪಿಸಿದ ಚಾಣಾಕ್ಷತೆ ದೇವಿಯನ್ನೇ ನಾಚಿಕೆಗೊಳಿಸಿದೆ. ಅವಳು ಅವನಿಗೆ ಶಾಪ ನೀಡಲಿಲ್ಲವೆಂಬುದು ಇಲ್ಲಿ ಗಮನಾರ್ಹ ಸಂಗತಿ. ಏಕೆಂದರೆ ಜನಪದ ದೇವತೆಗಳು ಕಾಡಿ ಬೇಡಿ ಕಷ್ಟ

ಕೊಟ್ಟು ಹರಕೆಗಳನ್ನು ಪೂರೈಸಿಕೊಳ್ಳುತ್ತವೆ ಎಂಬುದು ಜನಪದ ಮನಸ್ಸಿನ ಉದಾರತೆ. ಶಿಷ್ಟದಲ್ಲಿ ಶಾಪವೇ ಪರ್ಯಾಯವಾಗುತ್ತದೆ.

ಲಿಖಿತ ಚರಿತ್ರೆಯಲ್ಲಿ ದಾಖಲಾದ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಕೆಲವು ಆಡುನುಡಿಗಳು ಅಥವಾ ನುಡಿಗಟ್ಟುಗಳಲ್ಲಿ ಐತಿಹ್ಯದ ಅಂಶಗಳಾಗಿವೆ. 'ಪರಂಗಿಯವನಿಗೆ ಹುಟ್ಟಿದವನಂಗೆ ಆಡ್ತಾನೆ', 'ಎಲಿಜಬತ್ ರಾಣಿ ಹೇಳಿದ ಹಾಗೇ ಹೇಳ್ತಾಳೆ', 'ತುಘಲಕ್ ದರ್ಬಾರು ಮಾಡಿದ ಹಾಗೆ', 'ಮಹಾತ್ಮಗಾಂಧಿ ತರ ಉಪವಾಸ ಕೂತಿದ್ದಾನೆ', 'ಇಂದಿರಾಗಾಂಧಿ ಥರ ಆಡ್ತಾಳೆ', 'ಟಿಪ್ಪೂ-ಅವರ ಅಪ್ಪನ ಕಾಲದ ದರ್ಬಾರುಗಳು ಈಗ ನಡಿಯಲ್ಲ', 'ದಿವಾನ್ ಪೂರ್ಣಯ್ಯನ ನಿಷ್ಠೆ ಅವನದು', 'ಕೋಟೇನ ಗೆದ್ದ ಪಾಳೆಯಗಾರ ಸೂಳೆ ಸೆರೆಗೆ ಸಿಕ್ಕಿದ' - ಇತ್ಯಾದಿ ಹೇಳಿಕೆಗಳು ಜನತೆಯನ್ನು ಆಳಿ-ಅಳಿದ ರಾಜರ ಗುಣ-ಧರ್ಮಗಳ ನೆನಪನ್ನು ಕಟ್ಟಿಕೊಡುತ್ತವೆ. ಮತ್ತೆ ಕೆಲವು ಅಧಿಕಾರಶಾಹಿ ಮತ್ತು ಜಮೀನ್ದಾರಿ ಪದ್ಧತಿಯಿಂದ ತತ್ತರಿಸಿದ ಜನಜೀವನದ ದುರಂತಗಳನ್ನು ನೆನಪಿಗೆ ತರುತ್ತದೆ.

ಉದಾ : ಕುರ್ಸ-ಕುರ್ಸ ಕಾಟ್ರೆ ಅಂದ್ರೆ; ಬೆಳಿಗ್ಗೆ ಮಾಡಿದ್ದು ಹಾಜರೇ" ಎಂಬ ಗಾದೆಯು ಉಡುಮಲೋಡು ಕ್ರೈಸ್ತ ಹೆಣ್ಣು ಮಕ್ಕಳ ದಿನಗೂಲಿಯ ಪರಿಯನ್ನು ವಿವರಿಸುತ್ತದೆ. ಎಲ್ಲಿಂದಲೋ ವಲಸೆ ಬಂದ ಕ್ರೈಸ್ತರು ಊರ ಆಚೆ ನದಿ ದಡದಲ್ಲಿ ವಾಸ್ತವ್ಯ ಹೂಡಿದರು. ಸುತ್ತ-ಮುತ್ತಲಿನ ಊರುಗಳಿಗೆ ಕೂಲಿಗಾಗಿ ಪರದಾಡುತ್ತಿದ್ದರು. ಹೊಲಗದ್ದೆಗಳಲ್ಲಿ ತೆನೆ ಕೊಯ್ಯುವ ಕೆಲಸವೆಂದರೆ ಇವರಿಗೆ ಇಷ್ಟ. ಹೊಲದಲ್ಲಿ ಸಾಯಂಕಾಲದವರೆಗೂ ರಾಗಿಯ ತೆನೆಯೊಂದಿಗೆ ಕಡ್ಡಿಯನ್ನು ಸೇರಿಸಿ ಕೊಯ್ಯುತ್ತಿದ್ದರು. ಸಾಯಂಕಾಲದ ಸಮಯಕ್ಕೆ ಕಡ್ಡಿ ಇಲ್ಲದೆ ತೆನೆಗಳನ್ನೇ ಕೊಯ್ಯುತ್ತಿದ್ದರು. ಯಾರಾದರೂ ಆ ಸಮಯದಲ್ಲಿ ಕಡ್ಡಿಯ ಸಮೇತ ತೆನೆಯನ್ನು ಕತ್ತರಿಸಿದರೆ, ಉಳಿದವರು ಕುರ್ಸ ಕುರ್ಸ ಕಾಟ್ರೆ ಎಂದು ಎಚ್ಚರಿಸುತ್ತಿದ್ದರು. ಸಾಯಂಕಾಲ ಕತ್ತರಿಸಿದ ತೆನೆಯನ್ನು ಕೂಲಿಯ ರೂಪದಲ್ಲಿ ಹಾಕುತ್ತಿದ್ದುದರಿಂದ ಅವರು ಮೋಟು-ಮೋಟಾಗಿ ಕೊಯ್ದುಕೊಳ್ಳುತ್ತಿದ್ದರು. ಈ ಚಾಣಾಕ್ಷತೆಯನ್ನು ಗಮನಿಸಿದ ಮೇಸ್ತ್ರಿಯು ಸಾಯಂಕಾಲದ ಕೊಯ್ಲಿನ ತೆನೆಯನ್ನು ಪಕ್ಕಕ್ಕೆ ತೆಗೆದಿರುಸುತ್ತಿದ್ದ. ಹಾಗೆಯೇ ಇವರು ಮೊದಲು ಕೊಯ್ದ ಕಡ್ಡಿ ಸಮೇತದಿಂದ ತೆನೆಯನ್ನು ಉಳಿಸಿಕೊಂಡಿರುತ್ತಿದ್ದರು. ಆ ಮಹಿಳೆಯರು ಕುರ್ಸ-ಕುರ್ಸ ಕಾಟ್ರೆ ಎಂದು ಗುಪ್ತ ಭಾಷೆಯಲ್ಲಿ ಮಾತನಾಡಿಕೊಂಡಿದ್ದಕ್ಕೆ ಪ್ರತಿಯಾಗಿ ಜಮೀನ್ದಾರನು "ಬೆಳಿಗ್ಗೆ ಮಾಡಿದ್ದು ಹಾಜರೆ" ಎಂದು ನಗುತ್ತಿದ್ದ.

'ಪರಂಗೋನ ಪಿರಂಗಿ ತೋರಿಸಿ ಹೆದರಿಸಿದಂಗೆ' ಎಂಬ ಗಾದೆಯಲ್ಲಿ ಬ್ರಿಟಿಷರ ನಿರ್ಗಮನದ ನಂತರ ಜಮೀನ್ದಾರ್ ರೆಡ್ಡಿಗಳು ತೋಟಿ - ತಳವಾರರನ್ನು ಶೋಷಿಸುತ್ತಿದ್ದ ಪರಿ ಬೆಳಕಿಗೆ ಬರುತ್ತದೆ. ಸ್ವತಂತ್ರ ಬಂದ ಹೊಸದರಲ್ಲಿ ಪ್ರಾದೇಶಿಕವಾಗಿ ಜಮೀನ್ದಾರರಾಗಿದ್ದ ಕೆಲವು ರೆಡ್ಡಿಗಳು ಬ್ರಿಟಿಷರಿಂದ

ಮಾನ್ಯದ ಜಮೀನುಗಳನ್ನು ಪಡೆದಿದ್ದ ತೋಟಿ - ತಳವಾರ ಮುಂತಾದವರನ್ನು ಕರೆಸಿ, ಜಮೀನುಗಳನ್ನು ಬರೆದುಕೊಡುವಂತೆ ಕೇಳುತ್ತಿದ್ದರು. ಅವರು ಒಪ್ಪಿದರೆ ಹೊಸ ತಣಿಗೆಯಲ್ಲಿ ಬಿಸಿ ಪಾಯಸದ ಊಟವನ್ನು ನೀಡಿ ತಣಿಗೆಯನ್ನು ಕಾಣಿಕೆಯಾಗಿ ಕೊಡುತ್ತಿದ್ದರು. ನಿರಾಕರಿಸಿದವರಿಗೆ ಕೋವಿಯನ್ನು ತೋರಿಸಿ ಹೆದರಿಸಿ ಆಸ್ತಿ-ಪಾಸ್ತಿಯನ್ನು ತಮ್ಮ ಹೆಸರಿಗೆ ಬರೆಸಿಕೊಂಡು ಕಳುಹಿಸುತ್ತಿದ್ದರು. ಇದಕ್ಕೆ ಪೂರಕವೆಂಬಂತೆ ಮತ್ತೊಂದು ಗಾದೆ "ತಿತ್ತಪ್ಪ ತರಡು ಹಿಸುಕಿಕೊಂಡ ಹಾಗೆ" ಎಂಬುದು. ಊರಿನ ಹಿರಿಯ ತಳವಾರನನ್ನು ಜಮೀನ್ದಾರ ಕರೆಸಿದ ಹೊಸ ತಣಿಗೆಯಲ್ಲಿ ಪಾಯಸದ ಊಟ ಮಾಡುವಂತೆ ಸೂಚಿಸಿದ. ಇದರ ಗೂಢಾರ್ಥವನ್ನು ಗ್ರಹಿಸಿದ ತಳವಾರ ತಿತ್ತಪ್ಪ ತನ್ನಿಂದ ಜಮೀನನ್ನು ಬರೆಸಿಕೊಳ್ಳುತ್ತಾರೆಂದು ಹೆದರಿ ತನ್ನ ತರಡುಗಳನ್ನು ತಾನೇ ಹಿಸುಕಿಕೊಂಡು ಸತ್ತ. ಈ ಮೂಲಕ ಅವನು ತನ್ನ ಸಮೂಹಕ್ಕೆ ಆಸ್ತಿಯನ್ನು ಉಳಿಸಿಹೋದ.

ಬ್ರಿಟಿಷ್ ಅಧಿಕಾರಿಗಳಿಗೆ-ಆಡಳಿತಕ್ಕೆ ಪ್ರತಿಕಾರವನ್ನು ತೋರಿದ ಆಶಯ ಕೆಲವು ಗಾದೆಗಳಲ್ಲಿದೆ: ಉದಾ: 'ಪರಂಗಿಯೋನಿಗೆ ಸಗಣಿ ಸೇವೆ ಮಾಡಿದ ಹಾಗೆ', 'ವಾಟ್ ಈಸ್ ದಿಸ್-ವಂಕಾಯಿ ಪುಲುಸ್ ನೀಕೇಮ್ ತೆಲ್ಸು ನಿಮ್ಮಕಾಯಿ ಪುಲುಸ್' ವಿದುರಾಶ್ವತ್ಥ ಹತ್ಯಾಕಾಂಡಕ್ಕೆ ಸಂಬಂಧಿಸಿದಂತೆ ತನಿಖೆ ನಡೆಸಲು ಬ್ರಿಟಿಷ್ ಸರ್ಕಾರ ಒಬ್ಬ ಅಧಿಕಾರಿಯನ್ನು ನೇಮಿಸಿತು. ಜನತೆಗೋ ಅವನ ಬಗ್ಗೆ ಅಸಮಾಧಾನ. ಆದರೆ ಗೌರವಾಧಾರಗಳಿಂದ ಸ್ವಾಗತಿಸಬೇಕು. ಬರುತ್ತಿದ್ದ ಅಧಿಕಾರಿಯನ್ನು ಸ್ವಾಗತಿಸಲು ದಾರಿಯ ಇಕ್ಕೆಲಗಳಲ್ಲಿ ವನಿತೆಯರು ನಿಂತರು. ಅವರು ಹಸಿ ಸಗಣಿಯ ಉಂಡೆಗಳಿಂದ ತುಂಬಿಸಿದ್ದ ತಟ್ಟೆಗಳನ್ನು ಹಿಡಿದಿದ್ದರು. ಆಗಮಿಸುತ್ತಿದ್ದ ಅಧಿಕಾರಿಗೆ ಸಗಣಿಯ ಉಂಡೆಗಳನ್ನು ಎಸೆದು ಸ್ವಾಗತಿಸಿದರು. ಆತನು ಪಕ್ಕದಲ್ಲಿದ್ದ ಸೇವಕನನ್ನು ವಾಟ್ ಈಸ್ ದಿಸ್ ಎಂದು ಕೇಳಿದ. ಅವನು 'ಸಗಣಿ ಬಾಲ್ಸ್' ಎಂದ. ಅಧಿಕಾರಿ 'ವಾಟ್ ಈಸ್ ಸಗಣಿ' ಎಂದ. ಸೇವಕ 'ಸಗಣಿ ಈಸ್ ಮೇಡ್ ಬೈಕ್' ಎಂದ. ಅಧಿಕಾರಿಗೆ ಅರ್ಥವಾಗಲಿಲ್ಲವೆಂದು ಅರಿತು ವಿವರಿಸಿದ 'ಕೌಸ್ ಟಾಪ್ ಆಫ್ ದಿ ಫೋರ್ ಲೆಗ್ಸ್ ಬಾಟಮ್ ಆಫ್ ದಿ ಟೇಲ್ ಪ್ರೊಡ್ಯೂಸ್ಡ್' ಎಂದು. ಅಧಿಕಾರಿ 'ಐಸೀ' ಎಂದು ಸಂತೋಷದಿಂದ ಓತಿಕ್ಯಾತದಂತೆ ತಲೆಯಾಡಿಸಿದ. ಸ್ವಾಗತ ನಂತರ ಭೋಜನ ಸಮಾರಂಭ. ಬದನೇಕಾಯಿ ಹುಳಿ ನಿಂಬೆಪಾನಕ ಅದರ ವಿಶೇಷಗಳು. ಅಧಿಕಾರಿಗೆ ಊಟ ಮಾಂಸಾಹಾರವಲ್ಲದ್ದರಿಂದ ಒಲ್ಲೆಯೆನಿಸಿತು. ಸಿಡಿಮಿಡಿಗೊಂಡು ವಾಟ್ ಈಸ್ ದಿಸ್ ಎಂದ. ಸೇವಕನಿಗೆ ಇಂಗ್ಲೀಷ್‌ನಲ್ಲಿ ಹೇಳಲಾಗಲಿಲ್ಲ. ಅವನು 'ವಂಕಾಯ್ ಪುಲುಸ್' (ಬದನೆಕಾಯಿ ಹುಳಿ) ಎಂದ. ಅಧಿಕಾರಿ ನಿಂಬೆಪಾನಕ ಕುಡಿದು ಮುಖ ಸಿಂಡರಿಸಿಕೊಂಡ. ಸೇವಕ (ನೀಕೇಮ್ ತೆಲ್ಸು ನಿಮ್ಮಕಾಯ ಪುಲುಸು' (ನಿನಗೇನು ಗೊತ್ತು ನಿಂಬೆ ಹುಳಿಯ ರುಚಿ) ಎಂದು ಚೋದ್ಯ ಮಾಡಿದ. ಎಲ್ಲರೂ ನಕ್ಕರು.

ಅಧಿಕಾರಿಯು ತನ್ನ ಆತ್ಮೀಯ ವಲಯದಲ್ಲಿ ಸಗಣಿಯ ಸ್ವಾಗತವನ್ನು ನೆನಪಿಸಿಕೊಂಡ. 'ಐ ಲೈಕ್ ಶಕುನಿ ಸ್ವಾಗತ' ಎಂದು ಕೊಂಡಾಡಿದ. ಅವನ ಗೆಳೆಯರು ಅದು ಸ್ವಾಗತವಲ್ಲ ಅವಮಾನವೆಂದು ವಿವರಿಸಿದರು. ಮೇಲಿನ ಎರಡೂ ಗಾದೆಗಳಲ್ಲಿ ಬ್ರಿಟಿಷರೊಂದಿಗೆ ಸ್ಪಂದಿಸಿದ ಭಾರತೀಯ ಮನಸುಗಳ ಅಸಮಾಧಾನ ವ್ಯಕ್ತವಾಗುತ್ತದೆ. ವಿಧುರಾಶ್ವತ್ಥದ ಹತ್ಯಾಕಾಂಡದಲ್ಲಿ ಕೊಲ್ಲಲ್ಪಟ್ಟವರ ಕುರಿತು ಐತಿಹ್ಯಗಳು ರಚನೆಯಾಗಿವೆ. ಸೆರೆ ಸಿಕ್ಕವರನ್ನು ಜೈಲಿನಲ್ಲಿ ಬಂಧಿಸಿದಾಗ ಅವರೊಂದಿಗೆ ಮಹಾತ್ಮಗಾಂಧೀಜಿಯೂ ಇದ್ದನೆಂದು ಹೇಳುತ್ತಾರೆ. ಗಾಂಧೀಜಿಯನ್ನು ಬಂಧಿಸಿ ಯಾವುದೇ ಜೈಲಿನಲ್ಲಿ ಹಾಕಿ ಭದ್ರವಾಗಿ ಬೀಗ ಹಾಕಿದರೂ ಮರುಕ್ಷಣದಲ್ಲಿ ಆಗಲೇ ಆತ ಜೈಲಿನಿಂದ ಮಾಯವಾಗುತ್ತಿದ್ದ. ಹಾಕಿದ ಬೀಗ ಹಾಕಿದ ಹಾಗೇ ಇರುತ್ತಿತ್ತು. ಹೀಗೆ ಗಾಂಧೀಜಿ ಸತ್ಯಾಗ್ರಹಗಳಲ್ಲಿ ಪಾಲ್ಗೊಳ್ಳುತ್ತಿದ್ದ-ಎನ್ನುತ್ತಾರೆ. ಆ ಕಾಲದಲ್ಲಿ ಸತ್ಯಾಗ್ರಹ ಚಳುವಳಿಗಳನ್ನು ಮಾಡುವವರು ಮೈಮೇಲೆ ಗಾಂಧೀಜಿ ಆವಾಹನೆಯಾಗಿ ಚಳುವಳಿಯ ಸ್ವರೂಪವನ್ನು ವಿವರಿಸುತ್ತಿದ್ದ ಹೋರಾಟಗಾರರು ಅದನ್ನು ಚಾಚೂ ತಪ್ಪದೆ ಅನುಸರಿಸುತ್ತಿದ್ದರು ಎಂಬ ಮಾತುಗಳೂ ಕೇಳಿ ಬರುತ್ತವೆ. ಕರ್ನಾಟಕದ ಹಲವೆಡೆಗಳ ಸ್ವಾತಂತ್ರ್ಯ ಚಳುವಳಿಗಳಲ್ಲಿ ಮುಖಂಡರು ಹೋರಾಟಗಾರರನ್ನು ಹುರಿದುಂಬಿಸಲು ಇವು ನನ್ನ ಮಾತುಗಳಲ್ಲ ಗಾಂಧೀಜಿ ಹೇಳುತ್ತಿರುವ ಮಾತುಗಳು ಎಂದು ಭಾಷಣಗಳನ್ನು ಮಾಡಿದ್ದಿರಬೇಕು. ಗಾಂಧೀಜಿಯ ಬಗ್ಗೆ ಜನತೆ ಇಟ್ಟಿದ್ದ ನಂಬಿಕೆ-ಗೌರವಗಳು ಸಿದ್ಧಪುರುಷನನ್ನಾಗಿ, ಅತಿಮಾನುಷ ವ್ಯಕ್ತಿಯನ್ನಾಗಿ ಪರಿಭಾವಿಸಲು ಕಾರಣವಾಗಿದ್ದವು. ಸತ್ತ ವ್ಯಕ್ತಿಗಳು ದೆವ್ವಗಳಾಗಿ ಮೈಮೇಲೆ ಬರುತ್ತವೆಂಬುದು ಜನಪದ ನಂಬಿಕೆ. ಆದರೆ ಗಾಂಧೀಜಿ ಬದುಕಿದ್ದಾಗಲೇ ಮೈಮೇಲೆ ಬಂದು ಮಾರ್ಗದರ್ಶನ ಮಾಡಿದನೆಂಬುದು ಗಮನಾರ್ಹ ಅಂಶ.

'ಉಪ್ಪು ಕಡಲೆ ಬರ ಬಂದ್ಹಾಗೆ' ಎಂಬುದೊಂದು ನುಡಿಗಟ್ಟು ಹಿಂದೊಮ್ಮೆ ಜಿಲ್ಲೆಗೆ ಭೀಕರ ಬರಗಾಲ ಬಂದಿದ್ದ ಸ್ಥಿತಿಯನ್ನು ನೆನಪಿಸುತ್ತದೆ. ಆ ಬರಗಾಲದಲ್ಲಿ ಉಪ್ಪು ಕಡಲೆಯನ್ನು ತಿಂದು ಜನ ಜೀವ ಹಿಡಿದುಕೊಂಡಿದ್ದರಂತೆ. ಅದೂ ಮುಗಿದು ಹೋಗಿ ಏನೂ ಇಲ್ಲದ ಸ್ಥಿತಿಗೆ ತಲುಪಿದ್ದಾಗ ಒಂದು ದಿನ ಮಗುವೊಂದು ಹಸಿವಿನಿಂದ ಒದ್ದಾಡುತ್ತಿತ್ತು. ಜೀವವನ್ನು ಬಿಡಲೂ ತ್ರಾಣವಿಲ್ಲದೆ ಪರಿತಪಿಸುತ್ತಿದ್ದುದನ್ನು ಕಂಡ ಮಗುವಿಗೆ ತಾಯಿಯು ಮನೆಯೆಲ್ಲಾ ಹುಡುಕಿದಾಗ ಮೂರು ಅಕ್ಕಿಯ ಕಾಳುಗಳು ಸಿಕ್ಕಿದವು. ಅವುಗಳಲ್ಲಿ ಅನ್ನ ಮಾಡಿ ಮೂರು ಅಗುಳನ್ನು ಮಗುವಿಗೆ ತಿನ್ನಿಸಿದಳು. ಅಷ್ಟರಲ್ಲಿ ಅವಳಿಗೆ ತಾಳಲಾರದ ಹಸಿವಾಯಿತು. ಇನ್ನೇನು ತನ್ನ ಜೀವ ಹೋಗುತ್ತಿದೆ ಎಂದೆನಿಸಿ ತಕ್ಷಣ ಮಗುವಿನ ಹೊಟ್ಟೆಯನ್ನು ಬಗೆದಳು. ಕರುಳಿನಲ್ಲಿದ್ದ ಮೂರು ಅನ್ನದ ಅಗುಳುಗಳನ್ನು ಆರಿಸಿ ತಿಂದಳು. ತಕ್ಷಣ ಮಳೆ ಸುರಿದು ಹರಿದಾಡಿತು. ಈ ಐತಿಹ್ಯದಲ್ಲಿ ಬರಗಾಲದ ಭೀಕರತೆಯ ಕುರಿತು ಹೇಳುವಾಗ ಅತಿ ಕಾಲ್ಪನಿಕ ನಿರೂಪಣೆ ಒದಗಿ ಬಂದಿದೆಯಾದರೂ ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಈ ಪ್ರದೇಶಕ್ಕೆ ಬರಗಾಲ ಬಂದಿತ್ತೆಂದು ಹೇಳುತ್ತಾರೆ. ಆಗ ಬ್ರಿಟಿಷ್ ಸರ್ಕಾರವು ಉಪ್ಪು ಕಡಲೆಯನ್ನು ಸರಬರಾಜು ಮಾಡುತ್ತಿದ್ದ ಅಂಶ ಐತಿಹ್ಯದಲ್ಲಿದೆ.

ದೈನಂದಿನ ಜೀವನದಲ್ಲಿ ಜನಪದರು ಕಂಡು ಕೇಳಿದ ಅತ್ಯಮೂಲ್ಯ ಅನುಭವಗಳ ಸಾರವು ಗಾದೆಗಳ ರೂಪದಲ್ಲಿ ಹೊರಬರುತ್ತದೆ. ಕೆಲವು ಕಥೆಗಳ ಆಧಾರದಿಂದ ಕೆಲವು ಗಾದೆಗಳು ಹುಟ್ಟಿಕೊಳ್ಳುತ್ತವೆ. ಪುರಾಣ ಇತಿಹಾಸಗಳು ಗಾದೆಗಳ ಸೃಜನಾತ್ಮಕತೆಗೆ ಕಾರಣವಾಗಬಹುದು. ಇತಿಹಾಸವೆಂದರೆ ಬರವಣಿಗೆಯಲ್ಲಿ ದಾಖಲಾದದ್ದನ್ನು ಒಳಗೊಂಡಂತೆ, ಮೌಖಿಕ ಪರಂಪರೆಯಲ್ಲಿ ಉಳಿದು ಬಂದ ಇತಿಹಾಸವೂ ಆಗುತ್ತದೆ. ಉದಾ : ನರಿಗೆ ಎಟುಕದ್ದು ಹುಳಿ ಅಂದ ಹಾಗೆ (ಕಥೆಯ ಹಿನ್ನೆಲೆ), ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ (ಪುರಾಣದ ಹಿನ್ನೆಲೆ), ಸುಲ್ತಾನನ ಕತ್ತಿಗೆ ಅಡ್ಡ ಇಲ್ಲ ಅಂದ ಹಾಗೆ (ಟಿಪ್ಪೂ ಸುಲ್ತಾನನ ಚರಿತ್ರೆಯ ಬಗ್ಗೆ)

ಕೆಲವು ಗಾದೆಗಳು ಸ್ಥಳೈತಿಹ್ಯಗಳನ್ನು, ಸಂಬಂಧಿಸಿದ ದೇಶದ ಚಾರಿತ್ರಿಕ ವಿಷಯಗಳನ್ನೂ ಸೂಚಿಸುತ್ತವೆ. ಉದಾ : ನಂದಿ ನೋಡದವರು ಹಂದಿಗಿಂತ ಕೀಳು. ನಂದಿಯ ಬೆಟ್ಟ ಹಾಗೂ ಆ ಪರಿಸರದ ಸೌಂದರ್ಯ, ಚಾರಿತ್ರಿಕ ಸ್ಥಳಗಳು; ದೇವಾಲಯಗಳ ಸಂದರ್ಶನ: ದೇವತೆಗಳಿಂದ ಆಶೀರ್ವಾದ: ಅಲ್ಲಿನ ದೇವಾಲಯಗಳ ಶಿಲ್ಪಕಲೆ: ಧಾರ್ಮಿಕ ಆಧ್ಯಾತ್ಮಿಕ ನಿಲುವುಗಳು ಇತ್ಯಾದಿಗಳಿಗೆ ಸ್ಪಂದಿಸದೆ ಪ್ರಸಿದ್ಧವಾದ ನಂದಿಯ ಕ್ಷೇತ್ರವನ್ನು ಕಡೆಗಣಿಸಿ ಬದುಕುವ ಸ್ಥಳೀಯರನ್ನು ಕುರಿತು ಈ ಗಾದೆ ರೂಪುಗೊಂಡಂತಿದೆ. ಟಿಪ್ಪೂ ಸುಲ್ತಾನನ ಕೋಟೆ ಹಾಗೂ ಟಿಪ್ಪೂ ಕಂದರ (ಟಿಪ್ಪೂ ಡ್ರಾಪ್) ರೋಮಾಂಚನಕಾರಿಯಾಗಿದೆ. ಟಿಪ್ಪೂ ತನ್ನ ರೆಕ್ಕೆ ಕುದುರೆಯನ್ನು ಹತ್ತಿ ಈ ಕಂದರದಲ್ಲಿ ಧುಮುಕಿ ಸುರಂಗ ಮಾರ್ಗದಲ್ಲಿ ನಡೆದು ಶ್ರೀರಂಗಪಟ್ಟಣವನ್ನು ತಲುಪುತ್ತಿದ್ದನೆಂದು ಐತಿಹ್ಯವಿದೆ. ಅಲ್ಲದೆ ಇಲ್ಲಿನ ಕೋಟೆಯನ್ನು ಕಟ್ಟಿಸುವಾಗ ಗಾರೆಯನ್ನು ತಯಾರಿಸಲು ನೀರಿಗೆ ಬದಲು ಕೋಳಿಮೊಟ್ಟೆಗಳ ದ್ರಾವಣವನ್ನು ಬಳಸಿದನೆಂದೂ ಆದ್ದರಿಂದ ಕೋಟೆ ಇಂದಿಗೂ ಭದ್ರವಾಗಿದೆಯೆಂದೂ ಐತಿಹ್ಯ ನಿರೂಪಣೆಯಾಗುತ್ತದೆ.

ಚಾರಿತ್ರಿಕ ವಿಷಯಗಳಿಗೆ ಸಂಬಂಧಿಸಿದಂತೆ, ''ಫ್ರಾನ್ಸ್ ದೇಶದವರು ಹಸಿವಾದರೆ ಕಾಗೆಯನ್ನೂ ಬಿಡರು ಎಂದು ರಷ್ಯನ್‌ರಲ್ಲಿ ಒಂದು ಗಾದೆಯಿದೆ. ನೆಪೋಲಿಯನ್ ರಷ್ಯಾದ ಮೇಲೆ ದಾಳಿ ಮಾಡಿದಾಗ ಫ್ರೆಂಚ್ ಸೈನಿಕರು ಹಸಿವು ತಾಳಲಾರದೆ ಕಾಗೆಗಳನ್ನು ಕೊಂದು ತಿಂದರೆಂದು ಪ್ರತೀತಿ.''[೧೨] ಹಾಗೆಯೇ ''ಹಂಪೆಗೆ ಹೋಗುವುದಕ್ಕಿಂತ ಕೊಂಪೆಯಲ್ಲಿರುವುದೇ ವಾಸಿ'' ಎಂಬ ಗಾದೆಯು ವಿಜಯನಗರ ಸಾಮ್ರಾಜ್ಯವು ಪತನಗೊಂಡು ಅವಶೇಷಗಳು ಉಳಿದ ದುರಂತವನ್ನು ನೆನಪಿಸುತ್ತದೆ. ಹಾಗೆಯೇ ''ಕೃಷ್ಣರಾಯ ಭೂಪ ಮನೆ ಮನೆಗೆ ದೀಪ, ಬುಕ್ಕರಾಯ ಮೆಚ್ಚಿ ಬೆಕ್ಕಿನ ಮರಿ ಇತ್ತ''[೧೩] ಎಂಬ ಗಾದೆಗಳಲ್ಲಿ ವಿಜಯನಗರದ ಸಾಮ್ರಾಜ್ಯದ ಅರಸರ ಬಗ್ಗೆ ಜನಪದರಲ್ಲಿದ್ದ ಅಭಿಪ್ರಾಯಗಳು ವ್ಯಕ್ತವಾಗುತ್ತವೆ.

ತೇಪೆಯವ್ವೆ ತೇಪೆಯವ್ವೆ ತೇರಿಗೆ ಬರ್‍ತೀಯಾ ಅಂದ್ರೆ; ರೆಪ್ಪೆ ಉದ್ರಿದೊಳೆ ರೆಪ್ಪೆ ಉದ್ರಿದೊಳೆ ರಾತ್ರಿಗೆ ಹೋಗೋಣ ಅಂದ ಹಾಗೆ ಎಂಬ ಗಾದೆಯು ತೇಪೆಯ ಬಟ್ಟೆ ಉಡುವುದು ಬಡತನವನ್ನು ಸೂಚಿಸಿದರೆ ರೆಪ್ಪೆ ಉದುರುವುದು ದರಿದ್ರವನ್ನು ಸಂಕೇತಿಸುತ್ತದೆ. ಇಂಥ ಜೋಡಿ ಹೆಂಗಳೆಯರು ಹಗಲಿನಲ್ಲಿ ತೇರಿಗೆ (ಉತ್ಸವಕ್ಕೆ) ಹೋಗಿ ಜನ ಸಮುದಾಯದೊಂದಿಗೆ ಬೆರೆಯಲಾಗದ ಸಂಕೋಚವನ್ನು ಪರಸ್ಪರ ತೋಡಿಕೊಳ್ಳುತ್ತಾರೆ. ರಾತ್ರಿ ತೇರಿಗೆ ಹೋಗುವುದೆಂದರೆ ತೇರನ್ನು ಕಳ್ಳರು ಲೂಟಿ ಮಾಡುವ ಅಣಕ (ಆಚರಣೆ) ನಡೆಯುತ್ತದೆ. ರಥವನ್ನು ಎಳೆಯುತ್ತಿರುವ ವ್ಯಕ್ತಿಗಳನ್ನು ಅಡ್ಡಗಟ್ಟಿ ಕಳ್ಳರು ತೇರಿನೊಳಕ್ಕೆ ನುಗ್ಗಿ ದೈವದ ಒಡವೆ ವಸ್ತ್ರಗಳನ್ನು ದೋಚುವ ಅನುಕರಣೆಯನ್ನು ಮಾಡುತ್ತಾರೆ. ಹಿರಿಯರು ಕಳ್ಳರನ್ನು ಹಿಡಿದು ದಂಡಿಸಿ ಹೊಡೆಯುವ ಅಣಕವನ್ನು ಮಾಡುತ್ತಾರೆ. ಇದು ಘಾಟಿ ಸುಬ್ರಹ್ಮಣ್ಯ ರಥ (ದೊಡ್ಡಬಳ್ಳಾಪುರ ತಾ.) ವಿಧುರಾಶ್ವತ್ಥ ಅಶ್ವತ್ಥ ನಾರಾಯಣಸ್ವಾಮಿ ರಥ ಇತ್ಯಾದಿ ಜಾತ್ರೆಗಳಲ್ಲಿ ನಡೆಯುವ ಆಚರಣೆ "ದೋಪು ತಿರಣಾಲು" ಎಂದು ತೆಲುಗಿನಲ್ಲಿ ಕರೆಯುತ್ತಾರೆ. ಹಿಂದೆ ಎಂದೋ ಒಮ್ಮೆ ಕಳ್ಳರು ರಥಗಳನ್ನು ತಡೆದ ಪ್ರಸಂಗ ಆಚರಣೆಯಾಗಿದೆ. ತೇರಿಗೆ ಹೋಗಲಾರದ ಬಡವರು ಈ ಆಚರಣೆಗೆ ಸ್ಪಂದಿಸುತ್ತಾರೆ.

ಜಿಲ್ಲೆಯ ಐತಿಹ್ಯಗಳು ನಡೆದ ಘಟನೆಯನ್ನು ಪ್ರಾದೇಶಿಕ ಹಿನ್ನೆಲೆಯಲ್ಲಿ ಸಮರ್ಥಿಸುತ್ತವೆ. ಘಟನೆ ವ್ಯಕ್ತಿ ಹಾಗೂ ಸ್ಥಳಸಂಬಂಧಿ ಪ್ರಚಾರವು ಪ್ರಚುರಗೊಂಡು ಜನಪ್ರಿಯವಾದಂತೆಲ್ಲ ಸಮಾಜದಲ್ಲಿ ಹಬ್ಬುತ್ತಾ ಹೋಗುತ್ತದೆ. ಗಾದೆಯಲ್ಲಿ ಅಡಗಿದ ಐತಿಹ್ಯದ ಪರಿಣಾಮವು ತೀವ್ರವಾದಂತೆಲ್ಲ ಐತಿಹ್ಯವಾಗಿ ಪರಂಪರೆಯಲ್ಲಿ ಮುಂದುವರಿಯುತ್ತಾ ಬೆಳೆಯುತ್ತದೆ. ಪ್ರಾದೇಶಿಕತೆಯ ಸೊಗಡು ಅಲ್ಲಿನ ಭಾಷೆಯಲ್ಲಿ ಮಿಳಿತವಾಗಿರುವುದು ಕಂಡುಬರುತ್ತದೆ. ಕೋಲಾರ ಜಿಲ್ಲೆಯಲ್ಲಿ ದ್ವಿಭಾಷಿಕತೆಯ ಸ್ವಾರಸ್ಯವು ಜನಜೀವನದಲ್ಲಿ ಬೆರೆತು ಹೋಗಿರುವ ರೀತಿಯು ಕೆಲವು ಗಾದೆಗಳಲ್ಲಿ ತಿಳಿದುಬರುತ್ತದೆ. ಇದಕ್ಕೆ ಕಾರಣವೇನೆಂದು ಯೋಚಿಸಿದರೆ, ಇಲ್ಲಿನ ಭಾಷೆಯ ಪದಗಳು ರಚನೆಗೊಂಡ ಹಿನ್ನೆಲೆಯನ್ನು ಗಮನಿಸಬೇಕಾಗುತ್ತದೆ. (ಜನಪದ ಸಾಹಿತ್ಯದ ಇತರ ಪ್ರಕಾರಗಳಲ್ಲಿ ಕಂಡುಬರುವ ಐತಿಹ್ಯಗಳಲ್ಲೂ ದ್ವಿಭಾಷಿಕ ಲಕ್ಷಣಗಳು ದಟ್ಟವಾಗಿವೆ). ಉದಾಹರಣೆಗೆ ದೊಸಕಾಯಿ, ಜಾಮಕಾಯಿ, ಚಿಂತಕಾಯಿ ಎಂಬಿತ್ಯಾದಿ ಪದಗಳು ತೆಲುಗಿನವಾಗಿದ್ದು ಕನ್ನಡದೊಂದಿಗೆ ಬೆರೆತು ಸೌತೇಕಾಯಿ, ಸೀಬೇಕಾಯಿ, ಹುಣಸೆಕಾಯಿಗಳನ್ನು ಅರ್ಥೈಸುತ್ತವೆ. ಹಾಗೆಯೇ ಇಲ್ಲಿನ ತೆಲುಗಿನೊಂದಿಗೆ ಕನ್ನಡ ಪದಗಳು ಸೇರಿಕೊಂಡು ಇಂಥದ್ದೇ ಪರಿಣಾಮಕ್ಕೆ ಕಾರಣವಾಗುತ್ತವೆ. ಬಾಳಕಾಯಿ, ಆಲೂಗಡ್ಡೆ, ಎಳನೀರು ಮುಂತಾದ ಪದಗಳು ತೆಲುಗನ್ನು ಪ್ರವೇಶಿಸಿರುವುದನ್ನು ಗಮನಿಸಬಹುದು. ಉದಾ : ಸಿಂತಕಾಯಿ ಮಾರೋಳಿಗೆ ಸಿರಿ ಬಂದ್ರೆ ಡೊಂಕ್ರ ಬಿಂಕ್ರ ಕಾಯಿ ಯಾತರ ಕಾಯಿ ಅಂದಳಂತೆ ಎಂಬ ಗಾದೆಯು ಒಂದು ಕಾಲಕ್ಕೆ ಹುಣಸೆಕಾಯಿಯನ್ನು ಮಾರುತ್ತಿದ್ದವಳಿಗೆ ಸಿರಿತನ ಬಂದಾಗ ಹುಣಸೆಕಾಯಿಯ ಹೆಸರನ್ನು ಮರೆತು ಡೊಂಕ್ರ ಬಿಂಕ್ರ ಕಾಯಿ

ಯಾತರ ಕಾಯಿ ಎಂದು ಕೇಳುವುದರ ಮೂಲಕ ತನ್ನ ಮೊದಲಿನ ಸ್ಥಿತಿಯನ್ನು ಮರೆತಿದ್ದಳೆಂಬ ಸೂಚನೆ ಕಂಡುಬರುತ್ತದೆ.

**ಒಗಟುಗಳಲ್ಲಿ ಐತಿಹ್ಯಗಳು :** ಮೇದರರ ಮನೆಯ ಸೊಸೆಯೊಬ್ಬಳು ಪಕ್ಕದ ಪೇಟೆಗೆ ಮೊರಗಳನ್ನು ಮಾರಲು ಹೋಗಬೇಕಾದ ಸಂದರ್ಭದಲ್ಲಿ ಹೋಗಲು ನಿರಾಕರಿಸುತ್ತಾಳೆ. ಅವಳು ಏಕೆ ಹೋಗುವುದಿಲ್ಲವೆಂಬುದಕ್ಕೆ ಕಾರಣವನ್ನು ಒಗಟಾಗಿ ನುಡಿಯುತ್ತಾಳೆ. ಒಗಟಿನ ಅರ್ಥ ಮನೆಯಲ್ಲಿ ಎಲ್ಲರಿಗೂ ತಿಳಿದದ್ದೇ ಆಗಿರುತ್ತದೆ. ಆದರೆ ಎಲ್ಲರೂ ತಮ್ಮ ತಮ್ಮ ಅಸಹಾಯಕತೆಯಿಂದ ಮತ್ತೊಬ್ಬರ ಸಲಹೆ ಕೋರಲು ಸೂಚಿಸುತ್ತಾರೆ. ಈ ಒಗಟು ಹಾಡಿನ ರೂಪದಲ್ಲಿ ದೊರೆಯುತ್ತದೆ.

ಸೊಸೆ : ರಾತ್ರಿ ಸುತ್ತೋ ಪೇಟೆಗೆ ಮೊರ ಮಾರಲು ಹೋಗಬೇಕು ಮಾವಾ ತಂದನಾ ನಾ-ತಾ-ನಂದನಾನಾ | ರಾತ್ರಿ ಸುತ್ತೋ ರೆಡ್ಡಿ ಮಗ ಸುಂಕದಲ್ಲಿ ಜೂಜುಗಾರ ತಂದನಾ ನಾ-ತಾ-ನಂದನಾನಾ|

ಮಾವ : ಅದೇನೋ ನನಗೆ ಗೊತ್ತಿಲ್ಲ. ನಿಮ್ಮತ್ತೇನಾ ಕೇಳಿ ಹೋಗು ನಾ ತಂದನಾನಾ-ತಾ-ನಂದನಾನಾ ಎನ್ನುತ್ತಾನೆ.

ಅತ್ತೆಯು ತನ್ನ ಹಿರಿಯ ಮಗನನ್ನು ಕೇಳಲು ಹೇಳುತ್ತಾಳೆ. ಆತನು ನಿನ್ನ ಗಂಡನನ್ನು ಕೇಳಿ ಹೋಗು ಎನ್ನುತ್ತಾನೆ. ಗಂಡನು ಆಯ್ತು ಹೋಗೆಂದು ಒಪ್ಪಿಗೆ ಕೊಡುತ್ತಾನೆ. ಮೊರಗಳನ್ನು ಅವಳ ತಲೆಯ ಮೇಲೆ ಹೊರಿಸುತ್ತಾನೆ. ಮೇದಾರ ಸೊಸೆಯು ರಾತ್ರಿ ಪೇಟೆಗೆ ಹೋದಾಗ ರೆಡ್ಡಿ ಮಗ ಅವಳ ಸುಂಕದಲ್ಲಿ ಜೂಜನ್ನು ಕಟ್ಟುತ್ತಾನೆ. ಈ ವಿಷಯದಲ್ಲವನು ಮೋಜುಗಾರ ಕೂಡ. ಅವಳ ಮೊರಗಳನ್ನು ಇಳಿಸುತ್ತಾನೆ. ಸೀರೆ-ರವಿಕೆಗಳನ್ನು ತನ್ನ ಜೂಜಿಗೆ ಪಣವಾಗಿ ಇಟ್ಟುಕೊಳ್ಳುತ್ತಾನೆ. ಜೂಜಿನಲ್ಲಿ ಗೆದ್ದು ಸುಂಕವನ್ನು ಬಿಟ್ಟುಕೊಡುತ್ತಾನೆ. ಮೊರಗಳನ್ನು ಮಾರುವ ಮಹಿಳೆಯೊಬ್ಬಳು ರೆಡ್ಡಿ ಮಗನ ಕಾಮಕ್ಕೆ ಬಲಿಯಾಗಿ ತನ್ನ ವೃತ್ತಿಯನ್ನು ಮುಂದುವರೆಸಿ ಕುಟುಂಬಕ್ಕಾಗಿ ದುಡಿದದ್ದನ್ನು ಹಾಡು ಧ್ವನಿಸುತ್ತದೆ. ಮನೆಮಂದಿಯು ಸುಂಕದ ಜೂಜಿನ ಒಗಟನ್ನು ಅರ್ಥಮಾಡಿಕೊಳ್ಳುತ್ತಾರೆ. ಆದರೆ ಅಸಹಾಯಕ ರಾಗಿರುವುದರಿಂದ ಒಪ್ಪಿಕೊಳ್ಳಲೇಬೇಕಾಗುತ್ತದೆ. ಜಮೀನ್ದಾರಿ ಕುಟುಂಬದ ವ್ಯಕ್ತಿಗಳು ಬುಡಕಟ್ಟು ಜನರನ್ನು ಶೋಷಿಸಿದ ಐತಿಹ್ಯ ಈ ಘಟನೆಯ ಪರೋಕ್ಷ ಮುಖವಾಗಿದೆ.

ಮತ್ತೊಂದು ಒಗಟು ಭೋಗಂ ಹೆಣ್ಣೊಬ್ಬಳು ಶ್ರೀಮಂತನನ್ನು ಆಕರ್ಷಿಸಲು ತವಕಿಸುತ್ತಿರುವುದನ್ನು ಹೀಗೆ ವಿವರಿಸುತ್ತದೆ : ಅಕ್ಕಾ ಮನಿ ಇಂಟಿ ಮೀದ ಗದ್ದಾಡುತುಂದಿ | ಗದ್ದುಕಿ ರೆಂಡು ಗೆಜ್ಜಲು ಕಟ್ಟಿತೆ ಬಾಗುಡ್ತುಂದಿ | ಕೊಪ್ಪುಲೋನಿ ಕೋಡಿ ಪುಂಜ ಕೂತೇಸ್ತುಂದಿ | ರವಿಕಿಲೋನ ರಾಮ ಚಿಲುಕಲು ರಮ್ಮಂಟುಂಡ್ಡಿ | ಗುನಕರಾಳ್ಳು ಗುಂದು ಮಕಮು ಆಯಮ್ಮ ಬಂಡಿ ಕಡ್ತುಂದಿ | ಸಾಮ್ರಾಣಿ ಪಗೇಸ್ತೆ ಸಚ್ಚಿ ಪೋತುಂದಿ || (ತೆಲುಗು) ಅಕ್ಕಾ ನಮ್ಮನೆ ಮೇಲೆ ಹದ್ದು ಆಡುತ್ತೆ | ಹದ್ದಿಗೆ ಎರಡು ಗೆಜ್ಜೆ

ಕಟ್ಟಿದ್ರೆ ಚೆನ್ನಾಗಿ ಆಡುತ್ತೆ | ತುರುಬಿನಲ್ಲಿನ ಕೋಳಿ ಹುಂಜ ಕೇಕೆ ಹಾಕುತ್ತೆ | ರವಿಕೆಯೊಳಗಿನ ರಾಮಗಿಣಿ ಬಾ ಅನ್ನುತ್ತೆ | ಜಾರುಗಲ್ಲ ದುಂಡ ಮುಖದವಳು ಬಂಡಿ ಕಟ್ತಾಳೆ | ಸಾಂಬ್ರಾಣಿ ಹೋಗೆ ಹಾಕಿದ್ರೆ ಸತ್ತು ಹೋಗುತ್ತೆ ||

ಬುಡಕಟ್ಟು ಮಹಿಳೆಯರ ವೇಷಭೂಷಣಗಳನ್ನು ನಗೆಪಾಟಲು ಮಾಡುವ ಲೈಂಗಿಕ ಚೇಷ್ಟೆಗಾಗಿ ಬಳಸಿಕೊಳ್ಳುವ ನಾಡಿಗರ ಪರಿಪಾಟ 'ಸುಕಾಲುಪಾಪಡಿ ಸುಣ್ಣಕೊಡ್ತೀಯಾ ಎದೆಮೇಲಿನ ಸೋರೆಕಾಯಿ ಎಷ್ಟಕ್ಕೆ ಕೊಡ್ತೀಯಾ?' ಇತ್ಯಾದಿ ಗಾದೆಗಳಲ್ಲಿ ಕಂಡುಬರುತ್ತದೆ.

ಒಗಟುಗಳಲ್ಲಿನ ಚಮತ್ಕಾರಗಳು ವ್ಯಕ್ತಿಗಳ ವೃತ್ತಿ ಹಿನ್ನೆಲೆಯ ಸಾಮಾಜಿಕ ಸ್ಥಾನಮಾನಗಳಿಗೆ ಸಂಬಂಧಿಸಿದ ಐತಿಹ್ಯಗಳ ಪೂರಕ ಅಂಶಗಳಾಗಿರುತ್ತವೆ. ಮತ್ತೊಂದು ಒಗಟಿನಲ್ಲಿ ಕಳ್ಳನೊಬ್ಬನು ಊರಿನೊಳಕ್ಕೆ ಪ್ರವೇಶಿಸಿ ಊರ ಮುಂದಿನ ಕೋಲಾಟ ತಂಡದಲ್ಲಿ ಸೇರಿಕೊಂಡು, ಊರಾಚೆ ಇರುವ ಕಳ್ಳನಿಗೆ ಕುರಿ ಕದಿಯಲು ನಿರ್ದೇಶಿಸಿದ ಸಂದರ್ಭ ಹೀಗೆ ಸಾಬೀತಾಗುತ್ತದೆ.

ಕೋಲಾಟ ಹಾಡು : ಕೋಲು ಕೋಲು ಕೋಲೆ ಎಲೆ ಚನ್ನಪ್ಪ ಮಾಡೋ ಎಚ್ಚರ ಕೋಲೆ| ಒಳ್ಳೊಳ್ಳೆ ಪಟ್ಲಿ (ಟಗರು)ಗಳಣ್ಣಾ ಕೊಂಬು ತಿರುಗಿದ ಪಟ್ಲಿಗಳಣ್ಣಾ | ತುಂಬೆ ಮರದಡಿ ತೂತು ಇದೆ ಕಣಣ್ಣಾ ತೂರಿ ತೂರಿ ನೀವು ಹೊತ್ತು ಬಿಡ್ರಣ್ಣಾ||

ಈ ಒಗಟಿಗೆ ಪೂರಕವಾಗಿ ಮತ್ತೊಂದು ಒಡಪು ಸೂಚ್ಯವಾಗುತ್ತದೆ. ಪೂವ್ವಾಲು ಪುವ್ವಾಲು ಚೆಂಡ್ಲು ಆಡವೊದ್ದು ಅನ್ನಯ್ಯ | ನಿತ್ಯಾ ಮಲ್ಯಾಲ ಚೆಂಡ್ಲು ಆಡವೊದ್ದುರಾ | ಭೋಗವೊಳ್ಳು ಇಂಟಿಕಾಕ ಪೊವೊದ್ದುರ ಅನ್ನಯ್ಯ | ಭೋಗಮೊಳ್ಳು ಇಂಟಿಕಾಡ ಚೂಡೊದ್ದುರನ್ನನ್ಯ ……………..|| (ತೆಲುಗು)

ಹೂವು ಹೂವಿನ ಚೆಂಡುಗಳಾಡ ಬೇಡವಣ್ಣಯ್ಯ| ನಿತ್ಯಾಮಲ್ಲಿಗೆ ಚಂಡುಗಳಾಡ ಬೇಡವೋ | ಭೋಗದವರ ಮನೆ ಕಡೆ ಹೋಗಬೇಡವಣ್ಣಯ್ಯ | ಭೋಗದವರ ಮನೆ ಕಡೆ ನೋಡಬೇಡವೋ - ಎಂಬ ಎಚ್ಚರಿಕೆ ನೀಡಿದರೂ ಆಕರ್ಷಣೆಯಿಂದ ಬಿಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಆಗ ಭೋಗದ ಹೆಣ್ಣು ಹಣ ಕೇಳುವ ಪರಿ ಹೀಗಿರುತ್ತದೆ . ಚನ್ನಿಗಾ ಸೊಗಸುಗಾ ಅತ್ತಿ ಹೂವಿನ ಮೋಜುಗಾ ನನ್ನ ಕಡೆ ನೀ ನೋಡಿ ನಗಬೇಡವೋ | ಹೂವು - ಹಣ್ಣಿನ ಅಂಗಡಿಹತ್ರ ಕೂಡುಬಾರಾ - ಚನ್ನಿಗಾ ಹೂವು - ಹಣ್ಣಿಗೆ ಒಂದು ರೂ. ಕೊಟ್ಟು ಹೋಗೋ ಚನ್ನಿಗಾ | ನನ್ನಾಣೆ ನಿನ್ನಾಣೆ ಇಲ್ಲವಲ್ಲೇ ಲಚ್ಚುಮಿ - ಇಲ್ಲದಿದ್ರೆ ಪೀಡೆ ಹೋಯ್ತು ಎದ್ದು ಹೋಗೋ ಚನ್ನಿಗಾ ||

ಮತ್ತೊಂದು ಐತಿಹ್ಯವು ಅಸ್ಪೃಶ್ಯರ ಮೇಲೆ ಜಮೀನ್ದಾರರು ಮಾಡಿದ ದೌರ್ಜನ್ಯಗಳನ್ನು ಅಸ್ಪೃಶ್ಯ ಸಮೂಹದಲ್ಲಿನ ರಹಸ್ಯ ಭಾಷೆಯನ್ನು ಒಳಗೊಂಡ ಒಗಟನಲ್ಲಿ ವಿವರಿಸುತ್ತದೆ. ಒಕ್ಕಲಿಗರ ಹೊಲದಲ್ಲಿ ಹೊಲೆಯನೊಬ್ಬನು ಪಿಚ್ಚಕಿಗುವ್ವಕ್ಕೆ (ಸಣ್ಣ ಗುಬ್ಬಿಗೆ) ಉರುಲು ಹಾಕಿದ್ದ. ಆ ಹೊಲದ ಬೀಡಿನಲ್ಲಿ

ಗೊಬ್ಬರ ಚೆಲ್ಲುತ್ತಾ ಉಳುಮೆ ಮಾಡಲು ಏಳು ನೇಗಿಲುಗಳು ಏಳು ಜೊತೆ ಎತ್ತುಗಳು ಉಳುವವರು ಆಳುಗಳೊಂದಿಗೆ ಬಂದರು. ಈತನು ಉಷ್ .... ಜೀವ ಉರುಲಿಗೆ ಬೀಳ್ತಿದೆ ಹಿಂದಕ್ಕೆ ಸರಿಯಿರಿ ಎಂದು ಹೇಳಿ ತಡೆದ. ಕೊನೆಗೆ ಹಕ್ಕಿಯೊಂದನ್ನು ಉರುಲು ಹಾಕಿ ತಮ್ಮ ಕೆಲಸ ನಿಲ್ಲಿಸಿದ್ದು ಅವರಿಗೆ ತಿಳಿಯಿತು. ಅವರು ಅವನನ್ನು ಚೆನ್ನಾಗಿ ಥಳಿಸಿ ಸೊಂಟ ಮುರಿದರು. ಮೇಲೇಳಲೂ ಆಗದೆ ನಿತ್ರಾಣಗೊಂಡ ಅವನು ಗೊಬ್ಬರದ ಗುಡ್ಡೆಗೆ ಆತುಕೊಂಡು ಮಲಗಿದ್ದ. ಇನ್ನೇನು ಜೀವವನ್ನು ತ್ಯಜಿಸುತ್ತೇನೆಂದು ಅವನಿಗೆ ಅರಿವಾಗತೊಡಗಿತು. ಆಗ ಆ ಮಾರ್ಗವಾಗಿ ಓಡಾಡುತ್ತಿದ್ದ ತನ್ನ ಊರಿನ ಜನರಿಂದ ತನ್ನ ಹೆಂಡತಿ ಹಾಗೂ ಅವಳ ತಾಯಿಗೆ ಸಂದೇಶವೊಂದನ್ನು ಹೇಳಿ ಕಳುಹಿಸಿದ. ನಮ್ಮ ಒಸೆ (ಏನೇ) ಒಸೆಯವರ (ಏನೇಯವರ) ಅಮ್ಮನಿಗೆ 'ನಿಮ್ಮ ಮಾಲುಮೇಲುಕುಮಾರ ರೆಡ್ಡಿಯವರ ಯುದ್ಧಭೂಮೀಲಿ ಹಾರ್‍ತಿದ್ದ ಹಕ್ಕೀನ ಹಿಡಿದು ಏಳು ಸುತ್ತಿನ ಸೈನ್ಯನಾ ಎದುರಿಸಿ ಮಹಾಮೇರು ಗುಡ್ಡಕ್ಕೆ ಆತುಕೊಂಡಿದ್ದಾನೆ. ಸುದ್ಧಿ ತಿಳಿದ ತಕ್ಷಣ ಪುತ್ತಾರಿ ಚೆಂಬಿನಲ್ಲಿ ನೀರು, ಬಾಯಿಮೇಳ, ಕೈತಾಳಾನ ವೇಗವಾಗಿ ಹಿಡಿದು ಶೀಘ್ರವಾಗಿ ನಡೆದು ಬರಬೇಕಂತೆ, ತಡವಾದರೆ ಪಕ್ಷೀನ ಹಿಡಿದು ಹಾರ್‍ತಾನಂತೆ ಎಂದು ಹೇಳಿ ಕಳುಹಿಸುತ್ತಾನೆ. ಈ ಮಾತುಗಳ ಅರ್ಥವನ್ನರಿತ ಅವನ ಅತ್ತೆ ಹಾಗೂ ಹೆಂಡತಿ ತಲಗೊರವಿ (ತಲೆಕೊಳ್ಳಿ)ಗೆಂದು ಗಡಿಗೆಯಲ್ಲಿ ನೀರನ್ನು ಹಿಡಿದು ಅಳುತ್ತಾ ಬಾಯಿ ಬಡಿದುಕೊಂಡು ಬೇಗ ಬೇಗ ಬಂದರಂತೆ.

**ವದಂತಿ-ದಂತಕಥೆ-ಐತಿಹ್ಯ :** ಮೌಖಿಕ ಪರಂಪರೆಯಲ್ಲಿ ಹುಟ್ಟುವ ಸುದ್ಧಿಗಳು ವದಂತಿಗಳಾಗುತ್ತವೆ. ಸಂಬಂಧಿಸಿದ ಸುದ್ಧಿಮೂಲವನ್ನು ಯಾರು-ಯಾರಿಗೆ-ಯಾವಾಗ-ಎಲ್ಲಿ ಹೇಳಿದರೆಂಬ ಅಂಶಗಳು ತಿಳಿದು ಬರುವುದಿಲ್ಲ. ವದಂತಿಗಳ ಆಧಾರದ ಮೇಲೆ ಕೆಲವು ಬಾರಿ ಪರಂಪರೆ ಸೃಷ್ಟಿಯಾಗುತ್ತದೆ. ಅದು ಐತಿಹ್ಯ ಸ್ಥಳ ಪುರಾಣ ಕಥೆಗಳಂಥ ಪ್ರಕಾರಗಳನ್ನು ಸೃಷ್ಟಿಸಬಹುದು. ವ್ಯಕ್ತಿಯ ಸುತ್ತ ವ್ಯಾಪಿಸಿಕೊಂಡ ವದಂತಿಗಳು ವ್ಯಕ್ತಿತ್ವವನ್ನು ನಾಶಪಡಿಸುವಂತೆಯೂ ಬೆಳೆಯುತ್ತಿರಬಹುದು. ಆದ್ದರಿಂದ ವ್ಯಕ್ತಿ ವಿಚಾರಗಳನ್ನು ತಿಳಿಯಲು ಹೆಚ್ಚು ಹೆಚ್ಚು ಜನಸಂಪರ್ಕವನ್ನು ಹೊಂದಬೇಕಾಗುತ್ತದೆ. ಸಾಮೂಹಿಕ ವಿಚಾರಗಳನ್ನು ವೈಯಕ್ತಿಕ ವಿಚಾರಗಳನ್ನು ಬೇರೆ ಬೇರೆಯಾಗಿಯೇ ಗ್ರಹಿಸಬೇಕಾಗುತ್ತದೆ. ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳ ಬಗ್ಗೆ ವ್ಯಾಪಿಸುವ ವದಂತಿಗಳು ಯಾವುದೋ ಒಂದು ಉದ್ದೇಶದಿಂದ ಕೂಡಿರುತ್ತವೆಯಾದ್ದರಿಂದ ಅಷ್ಟೊಂದು ಅನುಮಾನಕ್ಕೆ ಆಸ್ಪದವಿರುವುದಿಲ್ಲ.

ಐತಿಹ್ಯಗಳನ್ನು ದಂತಕಥೆಗಳೆನ್ನುತ್ತಾರೆ. ನಿರ್ದಿಷ್ಟ ಘಟನೆಗೆ ಸಂಬಂಧಿಸಿದ ಆಧಾರರಹಿತ ನಿರೂಪಣೆಯನ್ನು ದಂತಕತೆಗಳೆನ್ನುತ್ತಾರೆ. ಇದರ ಅರ್ಥ ಪಲ್ಲಟಗಳು ಹೀಗಿವೆ : ದಂತಕಥೆ - ಬಾಯಿಂದ ಬಾಯಿಗೆ ಹರಿದು ಬೆಳೆದು ಬಂದ ಕಥೆ. ತಲೆಮಾರಿನಿಂದ ತಲೆಮಾರಿಗೆ ಬೆಳೆಯಲ್ಪಟ್ಟ ಕಥೆ. ಸಂಸ್ಕೃತದ 'ಉದಂತ' ಎಂದರೆ ಜಾಣ್ಮೆ, ಒಳ್ಳೆಯದು ಎಂಬ ಅರ್ಥಗಳಿವೆ. ಅಲ್ಲದೆ, ಸಮಾಚಾರ ಸುದ್ಧಿ ಎಂಬ

ಅರ್ಥಗಳೂ ಇವೆ. ಸಾಹಿತ್ಯದಲ್ಲಿ ಉದಂತವಾರ್ತಾ ಎಂಬ ಅರ್ಥಪ್ರಯೋಗವಾದಂತಿದೆ. ಉದಾ : ಜನ್ನನ ಅನಂತನಾಥ ಪುರಾಣದ ೧೨.೧೨ ("ಪ್ರಾಣನಾಥಾ ಮರಣೋದಂತಾಭ್ರವಹ್ನಿ ಸ್ಫುಟಿತ ಹೃಯನ್ ......") ಎಂಬ ಉಲ್ಲೇಖ. ಪ್ರಾಕೃತದಲ್ಲಿಯು ದಂತಕಥೆ ಎಂಬುದಕ್ಕೆ ಸಮಾಚಾರ, ವೃತ್ತಾಂತ ಎಂಬ ಅರ್ಥವಿದೆ. ಉದಂತ ಎಂಬುದನ್ನು ಜನರಲ್ಲಿ ಪ್ರಚಲಿತವಾದದ್ದು ಎಂದು ಅರ್ಥೈಸಿದರೆ ಉದಂತಕಥಾ ಎಂಬುದೇ ದಂತಕಥೆಯಾಗಿ ಬಳಕೆಗೆ ಬಂದಂತೆ ತೋರುತ್ತದೆ. ಹೀಗೆ ದಂತಕಥಾ ಎಂಬುದು ಜನಶ್ರುತಿ, ಕಿವದಂತಿ, ಕಲ್ಪಿತಕಥೆ, ಬಾಯಿಂದ ಬಾಯಿಗೆ ಹರಿದು ಬಂದ ಕಥೆ ಎಂಬ ಅರ್ಥಗಳಲ್ಲಿ ಬಳಕೆಯಾಗುತ್ತದೆ.

ದಂತಕಥೆಯೆಂಬುದು ಜನರಿಂದ ಕಲ್ಪಿತವಾಗಿ ಬಾಯಿಂದ ಬಾಯಿಗೆ ಹರಿದು ಬಂದ, ಕೆಲವು ಸಾರಿ ಗ್ರಂಥಸ್ಥವಾಗಿರಬಹುದಾದ ಕತೆಯನ್ನು ಸೂಚಿಸುತ್ತದೆ. ದಂತಕಥೆಯು ಸಂಪೂರ್ಣವಾಗಿ ಕಲ್ಪಿತವಾಗಿದ್ದು ಇತಿಹಾಸಕ್ಕೆ ವಿರೋಧವಾಗಿರಬೇಕಾದ್ದೇನೂ ಇಲ್ಲ. ಕೆಲವು ಸಾರಿ ವಾಸ್ತವ ಸಂಗತಿಯೊಂದು ಜನಗಳ ಕಲ್ಪನೆಯಲ್ಲಿ ರೆಕ್ಕೆ ಪುಕ್ಕ ಬಣ್ಣಗಳನ್ನು ತಳೆದುಕೊಂಡು ಅದ್ಭುತ ಸಂಗತಿಯಾಗಿ ಪರಿಣಮಿಸಬಹುದು. ಆದ್ದರಿಂದ ದಂತಕಥೆಗಳೆಲ್ಲವೂ ಕಲ್ಪಿತಗಳೆಂದು ತಳ್ಳಿಹಾಕುವಂತಿಲ್ಲ. ದಂತಕಥೆಗಳಲ್ಲಿ ಕೆಲವು ಪೂರ್ತಿ ಕಲ್ಪಿತಗಳಿರಬಹುದು ಅಥವಾ ವೇಷವನ್ನು ತೊಟ್ಟ ಇತಿಹಾಸವಾಗಿರಬಹುದು. ಒಂದು ವಿಸ್ಮಯಾತ್ಮಕ ಸಂಗತಿಯ ವಿವರಣೆಯ ರೂಪವಾಗಿ ಒಂದು ಕಥೆ ಹುಟ್ಟಬಹುದು. ಭೀಮನಕಲ್ಲು, ಸೀತೆಬಂಡೆ, ಅಕ್ಕತಂಗಿಯರ ಕಲ್ಲು ಇತ್ಯಾದಿ. ಇಂಥ ಕಥೆಗಳಿಂದ ಪ್ರಾಕೃತಿಕ ವೈಲಕ್ಷಣಗಳ ಕಡೆಗೆ, ಪೌರಾಣಿಕ ಕತೆಗಳ ಕಡೆಗೆ ಜನರ ಗಮನವನ್ನು ಸೆಳೆಯಬಹುದು. ಇದು ಏನಿರಬಹುದು-ಯಾಕಿರಬಹುದು ಎಂಬುದಾಗಿ ಆಶ್ಚರ್ಯಪಡುವ ಜನರಿಗೆ ಇಂಥ ಕಥೆಗಳು ಉತ್ತರಗಳಾಗಿದ್ದು ತಮಗೆ ಉಂಟಾದ ಆಶ್ಚರ್ಯಕ್ಕೆ ಸಂಬಂಧಿಸಿದಂತೆ ಸಂಶಯವನ್ನು ಅಳಿಸಿಹಾಕಿ ಸಮಾಧಾನವನ್ನು ನೀಡುತ್ತವೆ.

ಬಹಳಷ್ಟು ದೇವಾಲಯಗಳನ್ನು ಚೋಳರ ಕಾಲದ್ದು ಎನ್ನುವುದು. ಶಿಲ್ಪಗಳನ್ನು ಡಂಕಣ ಡಕಣರು ಕೆತ್ತಿದ್ದರೆನ್ನುವುದು ಒಂದೇ ದಿನ ಅಥವಾ ರಾತ್ರಿಯಲ್ಲಿ ನಿರ್ಮಿಸಿದ್ದರೆನ್ನುವುದು ಇತ್ಯಾದಿ ಕತೆಗಳು. ಒಂದು ಸಂಗತಿಗೆ ಧಾರ್ಮಿಕ ಮಹತ್ವವನ್ನು ಕೊಡುವುದಕ್ಕಾಗಿ ಅದ್ಭುತ ಪವಾಡಗಳೊಂದಿಗೆ ಕೆಲವು ಕತೆಗಳು ಸೃಷ್ಟಿಯಾಗಿ ಅತಿಮಾನವೀಯ ಸ್ವರೂಪವನ್ನು ತಾಳುತ್ತದೆ. ಸಮಾಜದ ವಿಶಿಷ್ಟತೆಯನ್ನು ಬಿಂಬಿಸುವುದಕ್ಕಾಗಿ ಕೆಲವು ದಂತಕಥೆಗಳು ನಿರ್ಮಾಣವಾಗುತ್ತವೆ. ದಂತಕತೆಯನ್ನು ಕಲ್ಪಿತ ಕತೆ ಎನ್ನುವಂತಿಲ್ಲ. ಏಕೆಂದರೆ ವಾಸ್ತವ ಸಂಗತಿಯೊಂದು ಜನಗಳ ಕಲ್ಪನೆಯಲ್ಲಿ ಬೆಳವಣಿಗೆ ಹೊಂದುತ್ತಾ ಅದ್ಭುತ ಸಂಗತಿಯಾಗುವ ಸಾಧ್ಯತೆಗಳು ಬಹಳವಿರುತ್ತವೆ. ಇಂಥ ಕತೆಗಳು ಯಾವುದೇ ಉದ್ದೇಶದಿಂದ ನಿರ್ಮಾಣಗೊಂಡಿದ್ದರೂ ಇವು ಪ್ರಕೃತಿ ಅಥವಾ ಪುರಾಣ ಇಲ್ಲವೇ ಇತಿಹಾಸದ ಕಡೆಗೆ ಗಮನ ಸೆಳೆಯುವಂಥದ್ದಾಗಿರುತ್ತದೆ. ಕೆಲವು ಸಂದರ್ಭಗಳಲ್ಲಿ ಜನ ತಮ್ಮ ದಡ್ಡತನವನ್ನು ಮುಚ್ಚಿಕೊಳ್ಳಲು ಕೆಲವು ಕತೆಗಳನ್ನು ಕಟ್ಟಿರುತ್ತಾರೆ. ಉದಾ:

ಶಾಸನಗಳ ಬಗ್ಗೆ-ಕತೆಗಳು ಏನೂ ಗೊತ್ತಿಲ್ಲ ಅನ್ನುವುದಕ್ಕಿಂತ ಏನಾದರೂ ಹೇಳಿದರಾಯಿತು ಎನ್ನುವಂಥವು ಕೆಲವು. ಶಿವ ದೇವಾಲಯಗಳ ಬಗ್ಗೆ ಚೋಳರ ಕಾಲದವು ಎಂಬುದು.

ಸುಂದರಿಯೊಬ್ಬಳು ತನ್ನನ್ನು ಬಲತ್ಕರಿಸಿದ ಕಪ್ಪು ವ್ಯಕ್ತಿಗೆ ಒಲಿಯದೆ ಸಾಯುವ ಸಂದರ್ಭದಲ್ಲಿ "ನಿಮ್ಮ ವಂಶದಲ್ಲಿ ಸುಂದರವಾದ ಹೆಣ್ಣು ಮಕ್ಕಳು ಹುಟ್ಟದಿರಲಿ, ಹುಟ್ಟಿದವರೆಲ್ಲರೂ ಕಪ್ಪಾಗಿಯೇ ಇರಲಿ" ಎಂದು ಶಾಪ ಹಾಕಿದಳು. ಇಂಥ ದಂತಕಥೆಗಳನ್ನು ಅಲಕ್ಷಿಸುವಂತಿಲ್ಲ. ಇವು ಲಿಖಿತ ಇತಿಹಾಸದಿಂದ ಭಿನ್ನವೆನಿಸಿದರೂ ಒಂದು ಜನಾಂಗವನ್ನು ಅರ್ಥೈಸಿಕೊಳ್ಳಲು ಉಪಯೋಗವಾಗುತ್ತವೆ. ನಮ್ಮ ಕುತೂಹಲ ಹಾಗೂ ಪ್ರಶ್ನೆಗಳಿಗೆ ಈ ಮೂಲದ ಪುರಾಣ, ಜನಪದ, ನಂಬಿಕೆ ಇತ್ಯಾದಿ ಮುಖ್ಯ ವಾಗುತ್ತವೆ. ಯಾವ ಆಧಾರವೂ ಇಲ್ಲದೆ ಒಬ್ಬರಿಂದೊಬ್ಬರಿಗೆ ಹರಡುತ್ತಾ ಹೋಗುವ ಕತೆಗಳು ದಂತಕಥೆಗಳೆನಿಸುತ್ತವೆ.

ದಂತಕಥೆ ಮತ್ತು ಐತಿಹ್ಯಗಳಿಗೆ ವ್ಯತ್ಯಾಸವನ್ನು ಗುರುತಿಸಲು ಸಾಧ್ಯವಿಲ್ಲದಷ್ಟರ ಮಟ್ಟಿಗೆ ಸಾಮ್ಯತೆಗಳಿವೆ. ಆದರೆ ಐತಿಹ್ಯದ ನಿರೂಪಣೆಗೆ ಆಧಾರವಿದ್ದಂತೆ ದಂತಕಥೆಗೆ ಆಧಾರವಿರುವುದಿಲ್ಲ. ನಿರ್ದಿಷ್ಟತೆ ಇರುವುದಿಲ್ಲ ಎಂಬುದೇ ಇವುಗಳಲ್ಲಿ ಕಂಡುಬರುವ ವ್ಯತ್ಯಾಸ. ದಂತಕಥೆಗಳು ಇತಿಹಾಸಾಂಶವನ್ನು ಹೊಂದಿರುತ್ತವೆ ಎನ್ನಲಾಗುವುದಿಲ್ಲ. ಕೆಲವು ಸಲ ಪ್ರಾಕೃತಿಕ ಘಟನೆಗಳಿಗೂ ಸಮಕಾಲೀನ ಚರಿತ್ರೆಗೂ ಸಂಬಂಧವಿಲ್ಲದಿದ್ದರೂ ಜನಪದರ ಮನಸ್ಸು ಸಂಬಂಧವನ್ನು ಬೆಸೆಯುತ್ತದೆ ಎನ್ನುವುದು ಗಮನಿಸಬೇಕಾದ ಅಂಶ. ವಿಜಯನಗರದ ಅರಸರ ಅಧಿಕಾರಿ ಶ್ರೀರಂಗರಾಯರ ಹೆಂಡತಿಯು - "ತಲಕಾಡು ಮರುಳಾಗಲಿ, ಮಾಲಿಂಗಿ ಮಡುವಾಗಲಿ ಮೈಸೂರು ದೊರೆಗಳಿಗೆ ಗಂಡು ಮಕ್ಕಳಾಗದಿರಲಿ ಎಂದು ಶಪಿಸಿದ್ದಾರೆ ಫಲಿತವಾಗಿ ಫಲಿತಗಳಾದವು ಎಂಬ ಅಂಶ." ಇದಕ್ಕೊಂದು ನಿದರ್ಶನವಾಗುತ್ತದೆ.

ದಂತಕಥೆಗಳಲ್ಲಿ ಚರಿತ್ರೆಯನ್ನು ಹುಡುಕುವ ಪ್ರವೃತ್ತಿಯ ಬಗ್ಗೆ ನಾವು ಎಚ್ಚರಿಕೆಯಿಂದಿರಬೇಕು. Mythಗೆ ತನ್ನದೇ ಆದ ಸ್ವತಂತ್ರ ಅಸ್ತಿತ್ವ ಉದ್ದೇಶಗಳಿದ್ದು ಅದು ಇತಿಹಾಸವನ್ನು ಹೊಂದಿದೆ ಎಂಬ ಕಾರಣದಿಂದ ಮಾತ್ರ ಪ್ರಾಮುಖ್ಯತೆಯನ್ನು ಪಡೆಯಬೇಕಾಗಿಲ್ಲ. ಐತಿಹ್ಯಗಳು ಎಷ್ಟೋ ಬಾರಿ ಒಂದು ಪ್ರಾಕೃತಿಕ ವೈಲಕ್ಷಣ್ಯವನ್ನು ವಿವರಿಸಲು, ಕೆಲವು ನಂಬಿಕೆಗಳನ್ನು ದೃಢಪಡಿಸಲು, ಕೆಲವು ವಿಲಕ್ಷಣ ಸಂಗತಿಗಳನ್ನು ವ್ಯಾಖ್ಯಾನಿಸಲು ಹುಟ್ಟಿಕೊಂಡಿರುತ್ತವೆ. ಐತಿಹ್ಯಗಳಿಂದ ಜನಾಂಗದ ಹಿನ್ನೆಲೆಯನ್ನು ಅರ್ಥ ಮಾಡಿಕೊಳ್ಳಬಹುದು. ಪ್ರಶ್ನೆ ಹಾಗೂ ಕುತೂಹಲಗಳಿಗೆ ಉತ್ತರ ಕಂಡುಕೊಳ್ಳುವಿಕೆ, ನೀತಿ ನಿರೂಪಣೆ ಪುರಾಣಶ್ರದ್ಧೆ, ಸಂಗತಿಯ ಸಮರ್ಥನೆ, ಆದರ್ಶ ಜನತೆಯನ್ನು ಅರ್ಥೈಸಿಕೊಳ್ಳುವುದಕ್ಕೆ ಸಹಾಯಕವಾಗುತ್ತವೆ. ಏನೇ ಆದರೂ ದಂತಕಥೆಗಳು ಜನಜನಿತವಾಗಿ ಪ್ರಚಲಿತಗೊಂಡು ಪರಿಚಲನೆಯಾಗುವ ವಿಷಯಗಳು ಅಥವಾ ಸಂಗತಿಗಳಾಗಿರುತ್ತವೆ. ಅಂದರೆ ಯಾವ ಆಧಾರಗಳೂ ಇಲ್ಲದೆ ಹರಡುವ ಸುದ್ದಿಗಳನ್ನು

ದಂತಕಥೆಗಳೆನ್ನುತ್ತಾರೆ. ಐತಿಹ್ಯವು ಆಧಾರಸಹಿತವಾಗಿ ಸಂಗತಿಯನ್ನು ನಿರೂಪಿಸುವುದಾಗಿರುತ್ತದೆ. ಯಾವ ಆಧಾರವೂ ಇಲ್ಲದೆ ಯಾರೋ ಹೇಳಿದ ಕಥೆಯಾಗಿ ಮೌಖಿಕ ಪರಂಪರೆಯಲ್ಲಿ ಹಬ್ಬುವ ಸುದ್ದಿಯಾಗಿ ದಂತಕಥೆಯು ಉಳಿದುಕೊಂಡಿರುತ್ತದೆ.

**ಪುರಾಣ-ಐತಿಹ್ಯ :** ಪುರಾಣಗಳು ದೈವಿಕ ಆವರಣದಲ್ಲಿ ದೇವತೆಗಳಲ್ಲಿ, ಧರ್ಮಗಳಲ್ಲಿರುವ ನಂಬಿಕೆಗಳ ಹಿನ್ನೆಲೆಯಲ್ಲಿ ರಚಿತವಾಗಿರುತ್ತವೆ. ಇಂಥ ಆಶಯಗಳನ್ನು ಜೈವಿಕ ನೆಲೆಯ ಮೂಲಕ ಪುನರ್ ಸ್ಥಾಪಿಸುವ ಪ್ರಯತ್ನವನ್ನು ಪೌರಾಣಿಕ ಐತಿಹ್ಯಗಳಲ್ಲಿ ಕಾಣಬಹುದು. ಸೃಷ್ಟಿಕಾರ್ಯ, ಭೂಮಿ ರೂಪಗೊಂಡ ರೀತಿ, ಸಾಂಸ್ಕೃತಿಕ ವೀರರು ಇತ್ಯಾದಿ ವಿಷಯಗಳನ್ನು ಪುರಾಣಗಳು ಒಳಗೊಂಡಿರುತ್ತವೆ. ಇವು ಏಕಕಾಲಕ್ಕೆ ಐತಿಹ್ಯಗಳ ವಿಷಯಗಳಾಗಿರುತ್ತವೆ. ಇವು ಜಗತ್ತಿನ ಸೃಷ್ಟಿ ಕುರಿತಂತೆ ಪುರಾಣದ ಆಯಾಮಗಳನ್ನು ಪಡೆದುಕೊಂಡ ಐತಿಹ್ಯಗಳ ಮೇಲೆ ಆಯಾ ಪ್ರಾದೇಶಿಕ ಧಾರ್ಮಿಕ ಪ್ರಭಾವ ದಟ್ಟವಾಗಿರುತ್ತದೆ. ಇಂದು ನಿರ್ದಿಷ್ಟ ಸ್ಥಳದ, ವಸ್ತುವಿನ ಇಲ್ಲವೇ ವ್ಯಕ್ತಿಯ ಅಥವಾ ಘಟನೆಯ ವೈಶಿಷ್ಟ್ಯವನ್ನು ವಿವರಿಸುವುದೇ ಐತಿಹ್ಯದ ಉದ್ದೇಶವಾಗಿರುವುದರಿಂದ ವಿವರಣಾತ್ಮಕ ಕಥೆಯೊಂದಿಗೆ ಹೋಲಿಸಬಹುದು. ಮೇಲ್ನೋಟಕ್ಕೆ ಐತಿಹ್ಯ ಮತ್ತು ಕಥೆ ಒಂದೇ ಎಂಬಂತೆ ಕಂಡರೂ ಕಥೆಗಳಲ್ಲಿನ ವ್ಯಕ್ತಿ, ಸ್ಥಳ ಹಾಗೂ ವಸ್ತುಗಳಿಗೆ ನಿರ್ದಿಷ್ಟತೆ ಅಥವಾ ನಿಶ್ಚಿತತೆ ಇರುವುದಿಲ್ಲ. ಐತಿಹ್ಯಗಳಲ್ಲಿ ನಿರ್ದಿಷ್ಟತೆಯೇ ಮುಖ್ಯ ಗುಣ. ಐತಿಹ್ಯಗಳಲ್ಲಿನ ಕಥಾನಕವು ಸೊಗಸಾಗಿರಬಹುದು. ಆದರೆ ವಿವರಣೆ ಸಂಕ್ಷಿಪ್ತವಿರುತ್ತದೆ. ಆದರೆ ಕಥೆಗಳಲ್ಲಿ ಕಾರ್ಯಕಾರಣ ಸಂಬಂಧವನ್ನೂ ಅರ್ಥವನ್ನೂ ಒಳಗೊಂಡಂತೆ ವಿವರಣೆ ಹೆಚ್ಚುತ್ತಾ ಬೆಳೆಯುತ್ತಾ ಹೋಗುತ್ತದೆ.

ಮನುಷ್ಯ ಸಾಮರ್ಥ್ಯವನ್ನು ಮೀರಿದ ಅಥವಾ ಮಾನವ ಸಾಮರ್ಥ್ಯಕ್ಕಿಂತ ಹೆಚ್ಚಿನ ಶಕ್ತಿಯನ್ನು ಅತಿಮಾನುಷವೆಂದು ಗುರುತಿಸುತ್ತೇವೆ. ಮಾನವ ಸಾಮರ್ಥ್ಯವನ್ನು ಮೀರಿದ ಸಾಧನೆ ಅಂದರೆ ಮನುಷ್ಯನ ಯೋಗ್ಯತೆಗೆ ಸಾಧ್ಯವಾಗದ್ದು ಎಟುಕದ್ದು ಎಲ್ಲವೂ ಅತಿಮಾನುಷವೇ ಆಗುತ್ತದೆ. ಅಂತಹ ಕಲ್ಪನೆಗಳಿಗೆ ದೆವ್ವ, ಭೂತ, ಪೀಡೆ, ಪಿಶಾಚಿ, ರಾಕ್ಷಸ/ಸಿ, ಕಿನ್ನರ, ಗಂಧರ್ವ ಎಂಬಿತ್ಯಾದಿ ರೂಪಗಳಿವೆ. ಮನುಷ್ಯನ ಬುದ್ಧಿಯು ಕೆಲವು ಸಾಹಸಗಳಿಗೆ ಪ್ರೇರೇಪಿಸುತ್ತದೆ. ಆದರೆ ದೈಹಿಕ ಸಾಮರ್ಥ್ಯಕ್ಕೆ ಮಿತಿ ಇರುತ್ತದೆ. ಪ್ರಕೃತಿಯಲ್ಲಿ ಯಾವುದೋ ಜೀವಜಂತು ಪಶುಪಕ್ಷಿಗಳಿಗೆ ಇರುವ ಸಾಮರ್ಥ್ಯದ ಸವಲತ್ತು ತನಗಿಲ್ಲವೆಂದು ಮನುಷ್ಯ ತಿಳಿಯುವುದಲ್ಲದೆ ಆ ಕೊರಗನ್ನು ನೀಗಿಸಿಕೊಳ್ಳಲು ಕಲ್ಪನಾ ಶಕ್ತಿಗಳನ್ನು ರೂಪಿಸಿಕೊಳ್ಳುತ್ತಾನೆ. ಇವೇ ಅತಿಮಾನುಷ ಶಕ್ತಿಗಳು. ಪಕ್ಷಿಗಳಂತೆ ರೆಕ್ಕೆ ಇದ್ದರೆ ಹಾರಬಹುದೆಂಬ ಆಸೆ, ಗಾಳಿಯಂತೆ ಕಣ್ಣಿಗೆ ಕಾಣದೆ ಸುಳಿದಾಡಬೇಕೆಂಬ ಬಯಕೆ ಇತ್ಯಾದಿಗಳು ಮಾಯಶಕ್ತಿಗಳ ಕಲ್ಪನೆಗೆ ಕಾರಣವಾಗುತ್ತವೆ. ಪ್ರಕೃತಿಯ ನಿಗೂಢತೆಯನ್ನು ಬೇಧಿಸುವ ಮನುಷ್ಯನ ಸಂಶೋಧನೆಯ ಮೊದಲ ಹೆಜ್ಜೆ ಇಂಥ

ಯೋಚನೆಗಳೆನ್ನಬಹುದು. ಏಕೆಂದರೆ ಮಿತಿಗಳುಳ್ಳ ಮನುಷ್ಯನ ಬದುಕು ಅಪರಿಮಿತವಾದ ಪ್ರಕೃತಿಯ ಅಗಾಧತೆಯನ್ನು ಅರ್ಥೈಸಿಕೊಳ್ಳುವಾಗ ಎದುರಾದ ಸಮಸ್ಯೆಗಳಿಗೆ ಕಂಡುಕೊಂಡ ಪರಿಹಾರ ರೂಪದ ಉತ್ತರಗಳಿವು. ದೇಹವನ್ನು ಒಳಗೊಂಡ ಯಾರಿಗೇ ಆಗಲಿ ಯಾವ ಪ್ರಾಣಿಯೇ ಆಗಲಿ, ಯಾರಿಗೂ ಕಾಣದಂತೆ ಅದೃಶ್ಯರಾಗಿ ಬಾಳುವುದು ಅಸಂಗತ. ಈ ಹಿನ್ನೆಲೆಯ ಕಲ್ಪನೆಗಳೇ ಮಾಯಶಕ್ತಿಗಳಾದ ದೆವ್ವ ಭೂತ ಪ್ರೇತ ಪಿಶಾಚಿ ಇತ್ಯಾದಿ ಹೀಗೆ ಅತಿಮಾನವ ಕಲ್ಪನೆಯ ಸಾಮರ್ಥ್ಯವನ್ನು ಭೌತಿಕ ಜಗತ್ತಿನ ಸಾಧ್ಯತೆಗಳೊಂದಿಗೆ ಸಮೀಕರಿಸುವ ಪ್ರಯತ್ನ ಇಂಥ ಐತಿಹ್ಯಗಳಲ್ಲಿರುತ್ತದೆ.

ಜನಪದ ಪರಿವಲಯದಲ್ಲಿ ಕತೆ, ಪುರಾಣ ಮತ್ತು ಐತಿಹ್ಯಗಳ ನಡುವೆ ದೊಡ್ಡ ವ್ಯತ್ಯಾಸವನ್ನು ಗುರುತಿಸಲಾಗುವುದಿಲ್ಲ. ಈ ಹಿನ್ನೆಲೆಯಲ್ಲಿಯೇ ಬಾಗ್ಸ್ ಕತೆ, ಪುರಾಣ ಹಾಗೂ ಐತಿಹ್ಯಗಳನ್ನು ಜನಪದ ಗದ್ಯನಿರೂಪಣೆಯ ಪ್ರಕಾರಗಳೆಂದು ಗುರುತಿಸಿದ್ದಾರೆ. ಪುರಾಣವೆಂದರೆ ತುಂಬ ಹಳೆಯ ಅಥವಾ ಪ್ರಾಚೀನ ಕಾಲದಲ್ಲಿ ನಡೆದ ಘಟನೆ ಅಥವಾ ಕತೆ ಎಂಬ ಅರ್ಥವನ್ನು ನೀಡಬಹುದು. ಪುರಾಣ ಮತ್ತು ಐತಿಹ್ಯಗಳನ್ನು ಹೋಲಿಸಿದಾಗ ಪುರಾಣಗಳು ಸ್ವರೂಪದಲ್ಲಿ ದೀರ್ಘವಾಗಿರುವುದು ಸ್ಪಷ್ಟವಾಗುತ್ತದೆ. ಹಿಂದೆ ನಡೆದಿವೆಯೆಂದು ಹೇಳಲಾಗುವ ಅತಿಮಾನುಷ ವ್ಯಕ್ತಿಗಳ, ದೇವ ದೇವತೆಗಳ, ಸಂಸ್ಕೃತಿಯ ಮೂಲ ಪುರುಷರ, ಸಾಂಸ್ಕೃತಿಕ ವೀರರ ಸಾಹಸ - ಮಹಿಮೆ - ಪವಾಡಗಳನ್ನು ವಿವರಿಸುವ ಮೂಲಕ ಪುರಾತನ ಸಂಪ್ರದಾಯ ಹಾಗೂ ಧಾರ್ಮಿಕ ನಂಬಿಕೆಗಳನ್ನು ಸ್ಥಾಪಿಸುವ ಉದ್ದೇಶವುಳ್ಳ ಕತೆಗಳನ್ನು ಪುರಾಣಗಳೆಂದು ಕರೆಯುತ್ತಾರೆ. ಪುರಾಣಗಳನ್ನು ವೈಜ್ಞಾನಿಕ ಯುಗಕ್ಕಿಂತ ಮುನ್ನ ಮನುಷ್ಯನು ತನ್ನ ಕುತೂಹಲಗಳಿಗೆ ಕೊಟ್ಟ ಉತ್ತರ ರೂಪದ ಕಲ್ಪನೆಗಳೆಂದು ಕರೆಯಬಹುದು. ಏಕೆಂದರೆ ಪುರಾಣದಲ್ಲಿ ಜಗತ್ತಿನ ಸೃಷ್ಟಿ, ಪ್ರಕೃತಿ, ಭೂಮಿ, ಆಕಾಶಗಳ ಉಗಮದ ಅಸ್ತಿತ್ವದ ಬಗ್ಗೆ ವಿವರಣೆ ಮತ್ತು ಮಾಹಿತಿಗಳಿರುತ್ತವೆ. ಮನುಷ್ಯ ಮತ್ತು ಮೃಗ ಪಕ್ಷಿಗಳ ಸ್ವಭಾವ, ಅಸ್ತಿತ್ವ ಮುಂತಾದ ವಿಷಯಗಳ ಕುರಿತ ವಿವರಗಳಿರುತ್ತವೆ. ಪ್ರಕೃತಿಯ ವಿವಿಧ ವಲಯಗಳ ವಿಶಿಷ್ಟ ಗುಣ ಸ್ವಭಾವದ ಬಗ್ಗೆ ವಿವರಣೆ ಮಾಹಿತಿ ಪುರಾಣಗಳಲ್ಲಿರುತ್ತದೆ. ಅದರ ಸತ್ಯಾಸತ್ಯತೆಯ ವಿಚಾರ ಬೇರೆ. ಆದರೆ ಹೀಗೇಕೆ ಎಂಬ ಪ್ರಶ್ನೆ ಅಥವಾ ಕುತೂಹಲಕ್ಕೆ ಉತ್ತರ ದೊರೆಯುತ್ತದೆ. ಅದು ಉಪೇಕ್ಷೆಯಿರಬಹುದು, ರಂಜನೀಯವಿರಬಹುದು, ವೈಭವಯುತವಾದ ವಿಜೃಂಭಣೆಯಿರಬಹುದು. ಒಟ್ಟಾರೆ ವಿಷಯಗಳ ಬಗ್ಗೆ ವಿವರಣೆಯಿರುತ್ತದೆ.

ಏಕಕಾಲಕ್ಕೆ ಪುರಾಣ ಹಾಗೂ ಐತಿಹ್ಯಗಳಾಗಿ ಸಮನ್ವಯಿಕಗೊಂಡ ಸೃಜನಾತ್ಮಕ ರಚನೆಗಳ ಲಕ್ಷಣಗಳು ಹೀಗಿರುತ್ತವೆ : ಪುರಾಣದ ಉದ್ದೇಶ ಕೇವಲ ಮನರಂಜನೆಯಲ್ಲ. ಅವುಗಳಿಗೆ ಅವುಗಳದ್ದೇ ಆದ ಶೈಕ್ಷಣಿಕ ಉದ್ದೇಶಗಳಿರುತ್ತವೆ. ಅವುಗಳು ಜನರಿಗೆ ಒಂದು ಬಗೆಯ ತಿಳುವಳಿಕೆ ನೀಡುತ್ತ, ಸಾಂಪ್ರದಾಯಿಕ ಶಿಕ್ಷಣದ ಭಾಗವಾಗಿ ಕಾರ್ಯ ನಿರ್ವಹಿಸುತ್ತವೆ. ಸಂಸ್ಕೃತಿಯ ಕೇಂದ್ರ ಉದ್ದೇಶಕ್ಕೆ

ಅನುಗುಣವಾಗಿ ಐತಿಹ್ಯ ಪುರಾಣಗಳು ಸಂಸ್ಕೃತಿ ಪ್ರಸಾರದ ಪ್ರಬಲ ಸಾಧನಗಳೂ ಹೌದು. ಅದು ಜನರಿಗೆ ಯಾವುದು ಒಳ್ಳೆಯದು ಯಾವುದು ಕೆಟ್ಟದ್ದು? ಯಾವುದು ಔಚಿತ್ಯಪೂರ್ಣವಾದದ್ದು? ಯಾವುದು ಅನೌಚಿತ್ಯದ್ದು ........... ಎಂಬ ಬಗೆಗೆಲ್ಲ ಅರಿವು ಮೂಡಿಸುತ್ತದೆ. ಆ ಅರಿವಿನ ಮೂಲಕ ಪರೋಕ್ಷವಾಗಿ ಅದು ಜನರ ಆಂತರಿಕ ಸಂಘರ್ಷಗಳನ್ನು ನಿವಾರಿಸಲು ಪ್ರಯತ್ನಿಸುತ್ತದೆ. ಎಷ್ಟೋ ಬಾರಿ - ಐತಿಹ್ಯ ಪುರಾಣಗಳು ಜನಸಂಸ್ಕೃತಿಯ ಹರಕೆಯೊಂದನ್ನು ಕೂಡ ಧ್ವನಿಸುತ್ತವೆ. ನಿಜಲೋಕದಲ್ಲಿ ಜನರು ಏನನ್ನು ಕಳೆದುಕೊಂಡಿದ್ದಾರೋ ಅದನ್ನು ಅವರು ಭಾವುಕ ಕಲ್ಪನೆಯ ಮೂಲಕ ಈ ಪ್ರಕಾರಗಳಲ್ಲಿ ತುಂಬಿಕೊಂಡು ತಮ್ಮ ವರ್ತಮಾನಕ್ಕೆ ಅರ್ಥ ತಂದುಕೊಳ್ಳುವ ಸಾಧ್ಯತೆ ಇದೆ. ಈ ಅರ್ಥದಲ್ಲಿ ಐತಿಹ್ಯ ಪುರಾಣಗಳು ನಿಜಲೋಕದ ಬರಡು ಕನ್ನಡಿಗಳಲ್ಲ. ಬದಲು ಅವು ಲೋಕದಲ್ಲಿ ಬೇಸತ್ತವರಿಗೊಂದು ಆಶ್ರಯ ತಾಣವಾಗುವ ಮೂಲಕ ನಿಜಲೋಕದ ಅನುಮೋದನೆಗಳಾಗುತ್ತವೆ. ಈ ದೃಷ್ಟಿಯಿಂದಲೇ ಐತಿಹ್ಯ ಪುರಾಣಗಳ ಅಧ್ಯಯನವು ಲೋಕ ವಿವರಣೆಯನ್ನು ಅರ್ಥೈಸಿಕೊಳ್ಳಲು ಅನುವು ಮಾಡಿಕೊಡುತ್ತದೆ.

ಅಸಾಮಾನ್ಯವಾದ ವಸ್ತು ವಿಷಯಗಳು ಐತಿಹ್ಯ ಪುರಾಣಗಳಲ್ಲಿರುತ್ತವೆ. ಯಾವುದೇ ಸಂಸ್ಕೃತಿ ತನಗೆ ಒಗ್ಗುವಂತಹ ಹೊಸತನವನ್ನು ತನ್ನದಾಗಿಸಿಕೊಳ್ಳುವಂತೆ, ಅಸಂಬದ್ಧವೆನಿಸಿದ್ದನ್ನು ತಿರಸ್ಕರಿಸುತ್ತದೆ. ಆಯಾ ಕಾಲಘಟ್ಟಗಳಲ್ಲಿ ಸಂಸ್ಕೃತಿಯು ಇಂಥ ವಿಷಯಗಳಲ್ಲಿ ತಾಳುವ ನಿಲುವುಗಳನ್ನು ಇವುಗಳ ವಿಶ್ಲೇಷಣೆಯಿಂದ ಮನಗಾಣಬಹುದು. ಆದ್ದರಿಂದ ಯಾವುದೇ ಸಂಸ್ಕೃತಿಯು ಆಗಾಗ ಕೈಗೊಳ್ಳುವ ಕೆಲವು ನಿರ್ಣಯಗಳು ಕೆಲವು ತೀರ್ಮಾನಗಳು ಮಾರ್ಪಾಟುಗಳ ದಾಖಲೆಗಳಾಗಿ ಇವು ಉಳಿದುಬಿಡುತ್ತವೆ.

ಪುರಾಣವು ಧಾರ್ಮಿಕ ವಸ್ತು-ವಿವರಣೆಗಳಿಂದ ಕೂಡಿದ ಕಥೆಯಾಗಿರುತ್ತದೆ. ಈ ಕಥೆಯ ಮುಂದುವರಿಯುವಿಕೆಯಲ್ಲಿ ಸಾಂಸ್ಕೃತಿಕ ವೀರನ ಅಸ್ತಿತ್ವವಿರುತ್ತದೆ. ಅಲ್ಲದೆ ಹಲವಾರು ಘಟನೆ ಸಂದರ್ಭಗಳು ಇವನ ಕಥೆಯನ್ನು ಪುಷ್ಟಿಗೊಳಿಸಲು ಸುತ್ತುವರಿದು ಹೆಣೆಯಲ್ಪಟ್ಟಿರುತ್ತವೆ. ಆದ್ದರಿಂದ ಪುರಾಣವು ಧಾರ್ಮಿಕ ವಸ್ತು ವಿಷಯ ಮತ್ತು ಆಶಯಗಳ ಸುತ್ತ ಹೆಣೆಯಲ್ಪಟ್ಟಿರುವ ಘಟನೆಗಳಿಂದ ಕೂಡಿರುತ್ತದೆ. ನಿರ್ದಿಷ್ಟ ಸಮೂಹವೊಂದು ಸಂಬಂಧಿಸಿದ ಪುರಾಣವನ್ನು ದೃಢೀಕರಿಸಿಕೊಂಡಿರುತ್ತದೆ. ಆದ್ದರಿಂದ ಪುರಾಣವು ಯಾವುದೇ ವ್ಯಕ್ತಿಯೊಬ್ಬನ ವೈಯಕ್ತಿಕ ನೆಲೆಯ ಸ್ವಂತಿಕೆಯಾಗಿರದೆ, ಧರ್ಮವೊಂದನ್ನು ಅನುಸರಿಸುವ ಸಮೂಹದ ಒಟ್ಟಾರೆ ನಿಲುವು ಆಗಿರುತ್ತದೆ. ಹೀಗೆ ಪುರಾಣವು ವೈಯಕ್ತಿಕ ನೆಲೆಯ ಸಮರ್ಥನೆಯಾಗಿರದೆ ಸಾಮೂಹಿಕ ಸ್ವತ್ತು ಆಗಿರುತ್ತದೆ.

ಪುರಾಣವು ತನ್ನನ್ನು ನಂಬಿ ಸಮರ್ಥಿಸುವವರ ದೃಢೀಕರಿಸುವವರ ದೃಷ್ಟಿಯಲ್ಲಿ ಪುರಾತನ ಕಥೆ ಇಲ್ಲವೇ ಐತಿಹ್ಯವೆನಿಸುತ್ತದೆ. ಒಂದು ಕಾಲದಲ್ಲಿ ನಡೆದ ಘಟನೆ ಇಲ್ಲವೇ ಸಂಗತಿಗಳಾಗಿರುತ್ತವೆ ಎಂಬ ಭರವಸೆಯನ್ನು ತುಂಬಿರುವುದು ಪುರಾಣದ ಲಕ್ಷಣ. ಪೌರಾಣಿಕ ಪಾತ್ರಗಳು ಲೌಕಿಕ ನೆಲೆಯಿಂದ ಅಲೌಕಿಕ

ಜಗತ್ತಿನವರೆಗೆ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತವೆ. ಅಲೌಕಿಕ ವಲಯದಲ್ಲಿದ್ದು ಲೌಕಿಕ ಜಗತ್ತನ್ನು ನಿರ್ದೇಶಿಸುತ್ತವೆ. ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುತ್ತವೆಯಲ್ಲದೆ, ಸಾಮಾಜಿಕವಾಗಿ ಅನೈತಿಕ ವೆನಿಸುವ ಸಂಬಂಧಗಳನ್ನು ತಪ್ಪೆಂದು ಸಾರುತ್ತವೆ. ಇಂಥದ್ದಕ್ಕೆ ನಿದರ್ಶನವೆಂಬಂತೆ ಘಟನೆಗಳನ್ನು ರೂಪಿಸಿ ಅವುಗಳ ಫಲಿತಾಂಶಗಳಿಂದ ಮನದಟ್ಟು ಮಾಡುತ್ತವೆ. ಇಂಥ ನಿದರ್ಶನಗಳಿಂದ ಮನುಷ್ಯನ ಸಾಮಾಜಿಕ ನಡವಳಿಕೆಯಲ್ಲಿ ಸರಿಯಾದ ಸ್ಪಷ್ಟನೆ ಮೂಡುತ್ತದೆ. ಮಾನವೀಯ ಮೌಲ್ಯಗಳ ಸಂರಕ್ಷಣೆಯಾಗುತ್ತದೆ. ಈ ಮೂಲಕ ನೈತಿಕ ನೆಲೆಗಟ್ಟು ಭದ್ರಗೊಳ್ಳುತ್ತದೆ. ಪುರಾಣವು ಧರ್ಮದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿರುತ್ತದೆ. ಕೆಲವೊಮ್ಮೆ ಧರ್ಮ ಪ್ರಸಾರದ ಮಾಧ್ಯಮವಾಗಿಯೂ ಕಾರ್ಯ ನಿರ್ವಹಿಸುತ್ತದೆ. ಪುರಾಣವು ರೂಪಿಸುವ ಸಂಪ್ರದಾಯ ಹಾಗೂ ಪುರಾಣವು ಉಳಿಸಿಕೊಳ್ಳುವ ನಂಬಿಕೆಯಿಂದ ಅಚಲವಾದ ಧಾರ್ಮಿಕ ಶ್ರದ್ಧೆ ಮೂಡುತ್ತದೆ. ಧಾರ್ಮಿಕ ವ್ಯಾಪ್ತಿಯ ವಿಸ್ತರಣೆಗೆ ಪುರಾಣಗಳು ಕಾರಣವಾಗುತ್ತವೆ. ಅಲೌಕಿಕ ಜಗತ್ತು ಮತ್ತು ಅದಕ್ಕೆ ಸಂಬಂಧಿಸಿದ ದೈವಗಳು ರಾಕ್ಷಸರು ಸಾಂಸ್ಕೃತಿಕ ವೀರರು ಇತ್ಯಾದಿ ಅಲೌಕಿಕ ಜಗತ್ತಿನ ಕಲ್ಪನೆಗಳನ್ನು ವಿಸ್ತರಿಸುತ್ತದೆ. ಹೀಗೆ ಪುರಾಣವು ಪರಿಪೂರ್ಣವಾಗಿ ಧರ್ಮವನ್ನು ಅನುಮೋದಿಸುತ್ತದೆ.

ಪುರಾಣವು ತಾನು ಕಟ್ಟಿಕೊಡುವ ಜಗತ್ತಿನ ಬಗ್ಗೆ ನಂಬಿಕೆಯನ್ನು ಗಟ್ಟಿಗೊಳಿಸಿಕೊಂಡಿರುತ್ತದೆ. ಆದರೆ ಆ ಜಗತ್ತಿನ ವಾಸ್ತವ - ಅವಾಸ್ತವಗಳನ್ನು ಪ್ರಮಾಣೀಕರಿಸುವುದಿಲ್ಲ. ಸೃಷ್ಟಿಯಾದ ಧರ್ಮದ ಮಹತ್ವವನ್ನು ಹೇಳುತ್ತಿರುತ್ತದೆ. ಹಬ್ಬ ವ್ರತ ಉತ್ಸವ ಜಾತ್ರೆ ಮುಂತಾದವುಗಳ ಮಹತ್ವವನ್ನು ಸಾರುವ ಹಿನ್ನೆಲೆಯಲ್ಲೇ ಆಚರಣೆಗಳು ಯಾವಾಗ ಏಕೆ ಆರಂಭವಾದವು ಸದ್ಯದ ಪರಿಸ್ಥಿತಿಗೂ ಅವುಗಳ ಪ್ರಸ್ತುತಿ ಏನು ಎಂಬುದನ್ನು ಕುರಿತ ಚಿಂತನೆಗೆ ಪುರಾವೆಗಳಾಗಿ ಪುರಾಣಗಳು ಸಹಾಯಕಾರಿಯಾಗಿವೆ. ಪುರಾಣದ ಕಥನಾಂಶವು ಐತಿಹ್ಯ ಮತ್ತು ಕಥೆಗಳಂತೆಯೇ ಇರುತ್ತದೆ. ಜನಪದ ಕತೆಗಳ ಆಶಯಗಳನ್ನು ಪುರಾಣ ಗಳಲ್ಲೂ ಕಾಣಬಹುದು. ಕೆಲವೊಮ್ಮೆ ಪುರಾಣದ ಕಥೆಗಳು ಜನಪದ ಕತೆಗಳಾಗಿಯೂ ರೂಪಾಂತರ ಹೊಂದಬಹುದು. ಇಂಥವುಗಳಲ್ಲಿ ಐತಿಹ್ಯವು ಮೂಡಬಹುದು. ಆದರೆ ಪುರಾಣವು ತನ್ನ ಪ್ರತ್ಯೇಕತೆಯನ್ನು ಉಳಿಸಿಕೊಳ್ಳುವುದು ಅತಿಮಾನವ ಅತೀಂದ್ರಿಯ ಸಾಮರ್ಥ್ಯವನ್ನು ಪ್ರತಿಪಾದಿಸುವ ಮೂಲಕ ಎಂದರೆ ತಪ್ಪಾಗಲಾರದು. ಪುರಾಣಗಳು ಯಾವುದೋ ಒಂದು ಸ್ತರದಲ್ಲಿ ಐತಿಹ್ಯಗಳಾಗಿರುವ ಸಾಧ್ಯತೆಯೇ ಹೆಚ್ಚು. ಕೆಲವೊಮ್ಮೆ ಅನೇಕ ಐತಿಹ್ಯಗಳು ನಿಧಾನವಾಗಿ ಪುರಾಣಗಳಾಗಿ ಮಾರ್ಪಡುತ್ತವೆ. ಐತಿಹ್ಯಗಳು ಪುರಾಣ ಗಳಾಗಿ ಮಾರ್ಪಟ್ಟಾಗ ಅವುಗಳ ರಚನೆಯಲ್ಲಿ ತಾತ್ವಿಕ ನಿಲುವುಗಳಲ್ಲಿ ಮಾರ್ಪಾಡುಗಳು ಕಂಡುಬರುತ್ತವೆ. ಐತಿಹ್ಯಗಳಲ್ಲಿ ಚಾರಿತ್ರಿಕಪ್ರಜ್ಞೆ ಇದ್ದು ಕಾಲವನ್ನು ಅಲ್ಲಿ ಹಿಂದೆ-ಇಂದು ಎಂಬ ಸರಳ ರೇಖಾತ್ಮಕ ರೀತಿಯಲ್ಲಿ ಗುರುತಿಸಲ್ಪಡುತ್ತದೆ. ಪುರಾಣಗಳಲ್ಲಿ ಕಾಲವು ಚಿರಂತನವಾಗಿ ಪುನರಾವರ್ತನೆಗೊಳ್ಳುವಂತಿರುತ್ತದೆ.

ವ್ಯಾಪ್ತಿ ಮತ್ತು ವಿವರಣೆಯಲ್ಲಿ ಐತಿಹ್ಯಗಳು ಪುರಾಣಕ್ಕಿಂತ ಭಿನ್ನವಾಗಿರುತ್ತವೆ. ಅವು ಬಹುಪಾಲು ಯಾವುದಾದರೊಂದು ನಿರ್ದಿಷ್ಟ ಸ್ಥಳ ಇಲ್ಲವೇ ವ್ಯಕ್ತಿಗೆ ಸಂಬಂಧಿಸಿರುತ್ತವೆ. ಕೆಲವು ಐತಿಹ್ಯಗಳು ಜಾತಿ ಬುಡಕಟ್ಟುಗಳಿಗೆ ಬದ್ಧವಾಗಿರುತ್ತವೆ. ಇಂಥವು ತಮ್ಮ ಸೀಮಿತ ವಲಯವನ್ನು ಬೇಧಿಸಿಕೊಂಡು ಹೊರಗಿನ ಪ್ರಪಂಚಕ್ಕೆ ಕಾಲಿರಿಸಿದೊಡನೆ, ಅವುಗಳ ಅರ್ಥವಂತಿಕೆಯು ಬಹಳ ತೀವ್ರವಾದ ಸವಾಲುಗಳನ್ನು ಎದುರಿಸುತ್ತದೆ. ಜನಾಂಗ ಬದ್ಧತೆಯಿಂದ ತನ್ನನ್ನು ಬಿಡಿಸಿಕೊಂಡ ಐತಿಹ್ಯಗಳು ವಿಳಾಸ ಕ್ಷೇತ್ರದಲ್ಲಿ ಬದುಕುಳಿಯಬೇಕಾದರೆ ಸಾರ್ವಜನಿಕರಿಗೆ ಕೆಲವು ಐತಿಹ್ಯಗಳು ನಿಧಾನವಾಗಿ ಪುರಾಣಗಳಾಗಿ ಮಾರ್ಪಡುತ್ತವೆ. ಇವು ಸಾಂಸ್ಕೃತಿಕ ನಾಯಕರಿಗೆ ಮೂಲಪುರುಷರಿಗೆ ಸಂಬಂಧಿಸಿದವಾಗಿರುತ್ತವೆ. ಜನಪದ ವೀರರು ಇಲ್ಲವೇ ಬುಡಕಟ್ಟು ನಾಯಕರ ಸಾಹಸ ಸಾಧನೆ ಮತ್ತು ಕೊಡುಗೆಗಳನ್ನು ಒಳಗೊಂಡಿರುತ್ತವೆ. ನಾಯಕತ್ವಕ್ಕೇರಿದ ವ್ಯಕ್ತಿಗಳು ಪುರುಷರೇ ಆಗಬೇಕಾಗಿಲ್ಲ. ಸ್ತ್ರೀಯರೂ ಸೇರುತ್ತಾರೆ. ಸ್ತ್ರೀಯರಿಗೆ ಸಂಬಂಧಿಸಿದ ಇಂಥ ಐತಿಹ್ಯಗಳು ಮಾತೃತ್ವದ ನೆಲೆಗಳ ಪ್ರತಿಬಿಂಬಗಳಾಗಿರುತ್ತವೆ. ಸಾಮಾಜಿಕ ಆರ್ಥಿಕ ಧಾರ್ಮಿಕ ಹಾಗೂ ರಾಜಕೀಯದ ಹಿನ್ನೆಲೆಗಳಿಂದ ಇವು ಕೂಡಿರುತ್ತವೆ. ಯಲ್ಲಮ್ಮ ಮತ್ತು ರೇಣುಕೆಯ ಪುರಾಣವನ್ನು ಗಮನಿಸಿದಾಗ ಐತಿಹ್ಯವೊಂದು ಪುರಾಣವಾಗಿ ಮಾರ್ಪಟ್ಟಿರುವುದು ಗಮನಕ್ಕೆ ಬರುತ್ತದೆ. ಶಿಷ್ಟ ಪರಂಪರೆ ಅದನ್ನು ರೇಣುಕೆಯ ರೂಪದಲ್ಲಿ ಸ್ವೀಕರಿಸಿದರೆ, ಜನಪದರು ಯಲ್ಲಮ್ಮನ ಹೆಸರಿನಲ್ಲಿ ಕಟ್ಟಿಕೊಂಡಿದ್ದಾರೆ. ಸಾಮ್ಯತೆ ವ್ಯತ್ಯಾಸಗಳ ಹಿನ್ನೆಲೆಯಲ್ಲಿಟ್ಟು ನೋಡಿದಾಗ, ಮಾತೃಪ್ರಧಾನ್ಯತೆ ಮತ್ತು ಪುರುಷ ಪ್ರಾಧಾನ್ಯತೆಗಳ ಸಂಘರ್ಷವನ್ನು ಇದು ಹೇಳುತ್ತದೆ. ಅಲ್ಲದೆ, ಯಲ್ಲಮ್ಮನ ಗಂಡನು ಶಿಷ್ಟ ಪರಂಪರೆಯ ಮೇಲ್ವರ್ಗವನ್ನು ಪ್ರತಿಪಾದಿಸುತ್ತಾನೆ. ಹಾಗೂ ಶಿಷ್ಟತ್ವವನ್ನು ಏರಲು ಪ್ರಯತ್ನಿಸುತ್ತಾನೆ. ಅದನ್ನು ಮೀರಲು ಯಲ್ಲಮ್ಮನು ಹೋರಾಡುತ್ತಾಳೆ. ಅವಳ ಮಗ ಪರಶುರಾಮನು ಕೂಡ ಪುರುಷ ಪ್ರಾಧಾನ್ಯತೆಯ ಮೂಲಕ ಸಂಘರ್ಷಕ್ಕಿಳಿದಾದರೂ ಮಾತೃ ಪ್ರಾಧಾನ್ಯತೆಯನ್ನು ಕೊನೆಗೆ ಒಪ್ಪಿಕೊಳ್ಳುತ್ತಾನೆ.

ಐತಿಹ್ಯವು ಪುರಾಣವಾದಾಗ ಅದು ವಿವರಣೆ ಹಾಗೂ ಘಟನೆಗಳ ದೃಷ್ಟಿಯಲ್ಲಿ ವಿಸ್ತೃತ ರೂಪವನ್ನು ಪಡೆಯುತ್ತಾ ಬೆಳೆಯುತ್ತದೆ. ಆದರೆ ಐತಿಹ್ಯದ ಸ್ವಕೀಯ ಪ್ರತೀಕಗಳು, ಪುರಾಣದಲ್ಲಿ ಸಾರ್ವತ್ರಿಕ ಪ್ರತೀಕಗಳಾಗಿ ಸಮರ್ಥಿಸಲ್ಪಡುತ್ತವೆ. ಮತ್ತು ಸ್ಥಳಬದ್ಧತೆ, ವ್ಯಕ್ತಿನಿಷ್ಠತೆ ಮತ್ತು ಕಾಲಬದ್ಧತೆಯನ್ನು ಮೀರಿ ಸಾಧಿತವಾಗುತ್ತವೆ. ಆದ್ದರಿಂದ ಐತಿಹ್ಯಗಳಲ್ಲಿ ಅಡಗಿದ ಭೌತಿಕ ಆಧಾರಗಳು ಪುರಾಣಗಳಲ್ಲಿ ಗೌಣವಾಗುತ್ತವೆ. ಆದರೆ ಪುರಾಣವು ಧಾರ್ಮಿಕ ಮಹತ್ವದಿಂದ ಕೂಡಿರುವುದರಿಂದ ಐತಿಹ್ಯಕ್ಕಿಂತ ಗಂಭೀರವಾದ ಅಸ್ಥಿತ್ವವನ್ನು ಪಡೆದುಕೊಂಡಿರುತ್ತದೆ. ಆಚರಣೆಗಳ ಆವರ್ತದಲ್ಲಿ ಪುರಾಣವು ಪುನರ್ ಸೃಷ್ಟಿಯನ್ನು ಪಡೆಯುತ್ತಾ ಹೋಗುತ್ತದೆ. ಐತಿಹ್ಯಕ್ಕೆ ಇಂತಹ ಗುಣ ಸಂಬಂಧ ಅಥವಾ ಅವಕಾಶ ಒದಗುವುದು ಅತಿ ಕಡಿಮೆ.

**ಶಿಷ್ಟ ಮತ್ತು ಜನಪದ ಪುರಾಣಗಳು ಹಾಗೂ ಐತಿಹ್ಯಗಳು :** ಶಿಷ್ಟ ಪುರಾಣಗಳು ಶಿಷ್ಟ ಪರಂಪರೆಯನ್ನು ಬಿಂಬಿಸುವುದಲ್ಲದೆ ಲಿಖಿತ ರೂಪದಲ್ಲಿರುತ್ತವೆ. ಜನಪದ ಪುರಾಣಗಳು ಜನಪದ ಪರಂಪರೆಯನ್ನು ಒಳಗೊಂಡಿದ್ದು ನಿರಂತರವಾಗಿ ಬೆಳೆಸುತ್ತಿರುತ್ತವೆ. ಏಕೆಂದರೆ ಅವು ಮೌಖಿಕ ರೂಪದಲ್ಲಿರುತ್ತವೆ. ಬರಹವು ಸ್ಥಿರ ಅಥವಾ ಶಾಶ್ವತವೆಂದು ಪರಿಗಣಿತವಾಗುವುದರಿಂದ ಶಿಷ್ಟ ಪುರಾಣವು ಪರಿವರ್ತನೆಗೆ ಒಳಗಾಗುವ ಸಾಧ್ಯತೆ ಕಡಿಮೆ. ಜನಪದವು ಆಯಾ ಸಂದರ್ಭ ಹಾಗೂ ಕಾಲಘಟ್ಟಕ್ಕೆ ಅನುಗುಣವಾಗಿ ಬದಲಾಗುತ್ತಾ ಹೋಗುತ್ತದೆ. ಅಂದರೆ, ಅಂದಂದಿನ ಸತ್ಯಗಳನ್ನು ಒಳಗೊಳ್ಳುತ್ತಾ ಬೆಳೆಯುತ್ತದೆ. ಲಿಖಿತ ಪುರಾಣ ಮತ್ತು ಮೌಖಿಕ(ಜನಪದ) ಪುರಾಣಗಳಲ್ಲಿ ಇಂಥ ವ್ಯತ್ಯಾಸಗಳಲ್ಲದೆ ನಿರೂಪಣೆ ಹಾಗೂ ಮುಕ್ತಾಯದ ಹಂತಗಳಲ್ಲೂ ಪರಸ್ಪರ ಹೋಲುವುದಿಲ್ಲ. ಜನಪದ ಪುರಾಣಗಳು ಸಾಮಾನ್ಯವಾಗಿ ದುಃಖಾಂತ ನಿರೂಪಣೆಯಿಂದ ಕೂಡಿರುವುದಲ್ಲದೆ ಮಾನವ ಸಾಮರ್ಥ್ಯದ ಮಿತಿಗಳನ್ನು ಹೇಳುತ್ತವೆ. ಲಿಖಿತ(ಶಿಷ್ಟ) ಪುರಾಣ ಸುಖಾಂತದ ನಿರೂಪಣೆ ಮತ್ತು ಮುಕ್ತಾಯಗಳನ್ನು ಹೊಂದಿರುವುದರೊಂದಿಗೆ ಅತಿಮಾನವ ಸಾಮರ್ಥ್ಯಗಳನ್ನು ಪ್ರತಿಪಾದಿಸುತ್ತವೆ. ಮತ್ತು ರಮ್ಯ ಅದ್ಭುತ ಲೋಕವೊಂದನ್ನು ಕಟ್ಟಿಕೊಡುವುದರೊಂದಿಗೆ ಮನುಷ್ಯನ ವಾಸ್ತವ ಪ್ರಪಂಚದ ಅನುಭವಗಳಿಗಿಂತ ಭಿನ್ನವಾದ ಕಲ್ಪನಾ ಜಗತ್ತನ್ನು ಸೃಷ್ಟಿಸುತ್ತದೆ. ಜನಪದ ಪುರಾಣಗಳ ವ್ಯಕ್ತಿಗಳು ಸಾವಿಗೆ ಬದ್ಧರಾಗಿರುತ್ತಾರೆ. ಶಿಷ್ಟ ಪುರಾಣದ ಪಾತ್ರಗಳು ಸಾವನ್ನು ಮೀರುತ್ತಾರೆ. ಆದ್ದರಿಂದ ಅವರು ಸಾಧನೆಯೊಂದನ್ನು ಮಾಡಿ ಚಿರಾಯು ಅಥವಾ ಚಿರಂಜೀವಿಗಳಾಗಿ ಉಳಿದು ಬಿಡುತ್ತಾರೆ. ಆದರೆ ಜನಪದ ಪುರಾಣಗಳ ನಾಯಕರಲ್ಲಿ ತಮ್ಮ ಸಮೂಹಕ್ಕಾಗಿ ಹೋರಾಟ ನಡೆಸುತ್ತಲೇ ಕೆಲವರು ಸಾವನ್ನಪ್ಪಬಹುದು. ಈ ಮೂಲಕ ಸಮುದಾಯವು ಅಂಥವರನ್ನು ದೈವತ್ವಕ್ಕೇರಿಸುತ್ತದೆ.

ಶಿಷ್ಟ ಪುರಾಣದ ಪಾತ್ರಗಳಿಗೆ ಮಹತ್ವ ಒದಗುವುದು ಕೆಲವು ಅತ್ಯಾಶ್ಚರ್ಯಕರವಾದ ಅದ್ಭುತ ಕಾರಣಗಳಿಂದ. ಏಕೆಂದರೆ ಇವು ದೈವತ್ವದಿಂದ ಕೂಡಿದ ಇಲ್ಲವೇ ದೈವದ ಅವತಾರ ಎನಿಸಿಕೊಂಡ ಪಾತ್ರಗಳಾಗಿರುತ್ತವೆ. ಅಂಥ ವ್ಯಕ್ತಿಗಳು ಪೂರ್ವಜನ್ಮದ ಪುಣವಿಶೇಷಗಳಿಂದ ಕೂಡಿ ಅತ್ಯುತ್ತಮ ಸಾಮಾಜಿಕ ಸ್ಥಾನಮಾನಗಳನ್ನು ಗಳಿಸುತ್ತಾರೆ. ಅದೂ ಬ್ರಹ್ಮತ್ವ (ಬ್ರಾಹ್ಮಣ) ಇಲ್ಲವೇ ರಾಜತ್ವ (ರಾಜ ಪರಿವಾರ)ಗಳಿಗೆ ಸೇರಿರುತ್ತಾರೆ. ಈ ಮೂಲಕ ಸಾಮಾಜಿಕ ಮನ್ನಣೆ ಲಭಿಸುತ್ತದೆ. ಕೆಲವು ಪುರಾಣ ವ್ಯಕ್ತಿಗಳು ಜನನಪೂರ್ವದಿಂದಲೂ ಗರ್ಭ ಪ್ರವೇಶದ ಶುಭಸೂಚನೆಗಳನ್ನು ನೀಡುತ್ತಿರುತ್ತಾರೆ.

**ಟಿಪ್ಪಣಿಗಳು**

೧. ಕೃಷ್ಣಮೂರ್ತಿ ಹಾನೂರು; ಲಕ್ಕಪ್ಪಗೌಡ (ಸಂ); ೧೯೯೮, ಪು.೫೬೫

೨. ಚಂದ್ರಶೇಖರ ಕಂಬಾರ; ೨೦೦೪, ಪು.೧೩೮

೩. Encyclopedia Americans: Vol-17, Pp.214, ಉದ್ಧೃತ - ದಾಸೇಗೌಡ ಜಿ.ವಿ: ೧೯೭೮, ಪು.೨

೪. ಎಂ.ಬಿ. ನೇಗಿನಹಾಳ; ಲಕ್ಕಪ್ಪಗೌಡ ಎಚ್.ಜೆ. (ಸಂ); ೧೯೯೮, ಪು.೫೨೪

೫. ನಾಯಕ ಹಾ.ಮಾ.; ಲಕ್ಕಪ್ಪಗೌಡ ಎಚ್.ಜೆ. (ಸಂ); ೧೯೯೮, ಪು.೧೦೧

೬. ರಾಗೌ. ಲಕ್ಕಪ್ಪಗೌಡ ಎಚ್.ಜೆ. (ಸಂ); ೧೯೯೮, ಪು.೨೮೭

೭. ಉದ್ಧೃತ, ದಾಸೇಗೌಡ ಜಿ.ವಿ. (ಸಂ.) ೧೯೭೮, ಪು.೩

೮. ಅದೇ, ಪು.೨

೯. ಚಂದ್ರಶೇಖರ ಕಂಬಾರ, ೨೦೦೪, ಪು.೨೬೨

೧೦. ಹಾ.ಮಾ.ನಾ., ಲಕ್ಕಪ್ಪಗೌಡ ಎಚ್.ಜೆ. (ಸಂ.) ೧೯೯೮, ಪು.೧೦೭

೧೧. ಅದೇ, ಪು.೧೧೯

೧೨. ಬಸವರಾಜ ಹ. ಗೊನಮಟ್ಟಿ, ಪಿಎಚ್.ಡಿ. ಪ್ರಬಂಧ (ಕಿಟೆಲ್ ಕೋಶದ ಗಾದೆಗಳು) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೪, ಪು.೩೮

೧೩. ಅದೇ, ಪು.೩೭

## ಅಧ್ಯಾಯ ೩

# ನಂಬಿಕೆ-ಆಚರಣೆ ಮತ್ತು ಇತಿಹಾಸದೊಂದಿಗೆ ಐತಿಹ್ಯಗಳು

ನಂಬಿಕೆಯೆಂಬುದು ಮನುಷ್ಯನ ಮನಸ್ಸಿನ ಭರವಸೆ. ಇದು ವರ್ತಮಾನದೊಂದಿಗೆ ಭೂತ ಭವಿಷ್ಯತ್‌ಕಾಲಗಳನ್ನು ಕಟ್ಟಿಕೊಡುತ್ತದೆ. ದೈನಂದಿನ ಬದುಕಿಗೆ ಹಿನ್ನೆಲೆಯಾಗಿ ಮುಂದೊದಗುವ ಸಂದರ್ಭಗಳಿಗೆ ಪೂರಕವಾಗಿ ಪ್ರಸ್ತುತ ಸಂದರ್ಭದಲ್ಲಿ ಕಾರಣಗಳನ್ನು ಅವಲಂಬಿಸಿರುತ್ತದೆ. ಇವು ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹೀಗೆ ಹಲವು ವಲಯಗಳಿಗೆ ಸಂಬಂಧಿಸಿರುತ್ತವೆ. ಸಮಾಜದಲ್ಲಿ ಮನುಷ್ಯನ ಚಟುವಟಿಕೆಗಳು ನಂಬಿಕೆಗಳನ್ನು ಆಶ್ರಯಿಸಿರುತ್ತವೆ. ಇವು ಸಾಮಾಜಿಕವಾಗಿ ಮನುಷ್ಯ ಏನನ್ನು-ಏಕೆ-ಹೇಗೆ-ಎಲ್ಲಿ-ಎಲ್ಲಿಯವರೆಗೆ ಪಾಲಿಸಬೇಕು ಎಂಬುದನ್ನು ತಿಳಿಸುತ್ತವೆ. ಹಾಗೆಯೇ ಕೆಲವನ್ನು ಮಾಡಬಾರದೆಂಬ ಸಾಮಾಜಿಕ ನಿರ್ಬಂಧವಿರುತ್ತದೆ. ಇದು ನಿಷೇಧವೆನಿಸುತ್ತದೆ. ಇಂಥ ನಿರ್ಬಂಧಕ್ಕೆ ಆಧಾರವಾಗಿ ಮತ್ತೆ ಕೆಲವು ನಂಬಿಕೆಗಳುಂಟಾಗಿರುತ್ತವೆ.

ಮನುಷ್ಯನ ಬದುಕಿನ ಎಲ್ಲ ವಲಯಗಳು ನಂಬಿಕೆಗಳಿಂದ ಆವೃತ್ತವಾಗಿರುತ್ತವೆ. ನಿರಂತರವಾದ ಪರಂಪರೆಯಲ್ಲಿ ಅಂದಂದಿನ ಬದುಕಿಗೆ ಹಿಂದಣ ಬದುಕಿನ ನೆಲೆಗಳು ಮುಂದೆ ಆಶಿಸುವ ಆಶಿಸಬಾರದ ಪರಿಭಾವನೆಗಳೆಲ್ಲವೂ ನಂಬಿಕೆ-ನಿಷೇಧಗಳಾಗಿರುತ್ತವೆ. ನಂಬಿಕೆಗಳು ಆಚರಣೆಗಳನ್ನು ರೂಪಿಸುತ್ತವೆ. ಆಚರಣೆಗಳು ನಂಬಿಕೆ-ನಿಷೇಧಗಳನ್ನು ಜೀವಂತವಾಗಿಡುತ್ತವೆ. ಈ ಘಟ್ಟಗಳಲ್ಲಿ ಐತಿಹ್ಯಗಳುಂಟಾಗುತ್ತವೆ. ಯಾವುದೇ ಐತಿಹ್ಯ ಉಳಿಯಬೇಕಾದರೆ ಅದು ನಡೆದಿದೆ ಎಂಬುದಾಗಿ ವಕ್ತೃ ಮತ್ತು ಶ್ರೋತೃ ನಂಬಿಕೆಯನ್ನು ಇಡಬೇಕಾಗುತ್ತದೆಯೆಂಬುದು ಒಂದೆಡೆಯಾದರೆ ಕೆಲವು ನಂಬಿಕೆ-ನಿಷೇಧಗಳು ಏಕೆ ಉಳಿದಿವೆ ಇವುಗಳನ್ನು ಮೀರಿದ ಸಂದರ್ಭದ ಪರಿಣಾಮಗಳೇನು ಎಂಬುದನ್ನು ಐತಿಹ್ಯಗಳು ತಿಳಿಸುತ್ತವೆ. ಅಲ್ಲದೆ, ನಂಬಿಕೆ-ನಿಷೇಧಗಳನ್ನು ಪಾಲಿಸುವುದರಿಂದ ಉಂಟಾಗುವ ಅಥವಾ ಒದಗಿಸುವ ಪ್ರತಿಫಲವನ್ನು ನಿದರ್ಶನಾತ್ಮಕವಾಗಿ ನಿರೂಪಿಸುತ್ತವೆ. ಎಲ್ಲ ನಂಬಿಕೆಗಳು ಆಚರಣೆಗಳನ್ನು ಒಳಗೊಂಡಿರುವುದಿಲ್ಲವಾದರೂ ಎಲ್ಲ ಆಚರಣೆಗಳು ನಂಬಿಕೆಗಳನ್ನು ಒಳಗೊಂಡಿರುತ್ತವೆ. ನಿಷೇಧಗಳನ್ನು ಪಾಲಿಸುತ್ತವೆ. ಪ್ರಸ್ತುತ ಅಧ್ಯಯನ ದೃಷ್ಟಿಯಿಂದ ಸ್ಥಳ-ವ್ಯಕ್ತಿ-ಸಮುದಾಯ ಘಟನಾ ಸಂಬಂಧಿ ಆಚರಣೆ-ನಂಬಿಕೆಗಳ ಐತಿಹ್ಯಗಳನ್ನು ಆಯಾ ಅಧ್ಯಾಯಗಳಲ್ಲಿ ವಿಶ್ಲೇಷಿಸಿ ಈ ಅಧ್ಯಾಯದಲ್ಲಿ ದೈವ/ದೇವತೆಗಳಿಗೆ ಸಂಬಂಧಿಸಿದಂಥವನ್ನು ವಿವೇಚಿಸಲಾಗುವುದು. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಆಚರಣೆಗಳನ್ನೊಳಗೊಂಡ ಐತಿಹ್ಯಗಳು ಕಟ್ಟಿಕೊಡುವ ಸಂಸ್ಕೃತಿಯ ಆಯಾಮಗಳನ್ನು ಬೆಳಕಿಗೆ ತರುವ ಪ್ರಯತ್ನ ಇದಾಗಬಹುದು.

## ನಂಬಿಕೆ-ಆಚರಣೆ

ಒಬ್ಬನ ನಂಬಿಕೆ ಹಲವರ ನಂಬಿಕೆಯಾಗಿ ಅದು ಐತಿಹ್ಯವಾಗಿ ವಿಸ್ತಾರಗೊಂಡು ಕೊನೆಗೆ ಪುರಾಣವಾಗಿ ಬೆಳೆದುಬಿಡುತ್ತದೆ. ಐತಿಹ್ಯಗಳು ನಿರ್ದಿಷ್ಟ ಉದ್ದೇಶಗಳಿಗಾಗಿ ರಚನೆಯಾಗುತ್ತವೆ ಮತ್ತು ನಿರ್ದಿಷ್ಟ ಕಾರ್ಯಗಳನ್ನು ನಿರ್ವಹಿಸುತ್ತಾ ಬರುತ್ತವೆ. ರಾಜಕೀಯ ಆಡಳಿತಾತ್ಮಕ ಪ್ರದೇಶದೊಳಗಿನ ಆರಾಧನಾ ಕೇಂದ್ರಗಳ ನಡುವೆ ಸಂಬಂಧವಿರುವುದನ್ನು ಐತಿಹ್ಯಗಳು ತಿಳಿಸುತ್ತವೆ. ದೈವದ ಬಗೆಗೆ ಜನರಲ್ಲಿ ಭಯಭಕ್ತಿಯನ್ನು ಮೂಡಿಸುವುದಲ್ಲದೆ ಅದನ್ನು ನಿರಂತರವಾಗಿ ಕಾಪಾಡಿಕೊಂಡು ಬರುವ ಕೆಲಸವನ್ನು ಐತಿಹ್ಯವು ಮಾಡುತ್ತದೆ. ಧಾರ್ಮಿಕ ಪರಂಪರೆಗಳ ನಡುವೆ ನಡೆದಿರಬಹುದಾದ ಸಂಘರ್ಷವನ್ನು ಬಿಂಬಿಸುತ್ತವೆ. ದೇಶೀಯ ಸಂಸ್ಕೃತಿ ಮತ್ತು ಅನ್ಯಸಂಸ್ಕೃತಿಗಳ ನಡುವೆ ನಡೆದಿರಬಹುದಾದ ಬಿಕ್ಕಟ್ಟುಗಳನ್ನು ಐತಿಹ್ಯಗಳ ಮೂಲಕ ಗ್ರಹಿಸಬಹುದು.

**ತೆಲುಗು ಒಕ್ಕಲಿಗರ ಮದುವೆ ಆಚರಣೆ :** ತೆಲುಗು ಒಕ್ಕಲಿಗರನ್ನು ರೆಡ್ಡಿಗಳು ಎನ್ನುತ್ತಾರೆ. ಇವರುಗಳ ಒಂದು ಗುಂಪಿನವರು ಮದುವೆಯಲ್ಲಿ ಮದುವಣಗಿತ್ತಿಯ ತಲೆಯ ಮೇಲೆ ಹೂವಿನ ಸೂಸುಗವನ್ನು ಹಾಕುತ್ತಾರೆ. ಇಲ್ಲಿ ಸೂಸುಗದ ಆಕಾಶದಲ್ಲಿರುವ ನಕ್ಷತ್ರಪುಂಜಕ್ಕೆ ಸಂಬಂಧಿಸಿದಂತೆ ಹೇಳುವ ಕಥೆ ಚನ್ನಮ್ಮನ ಸೌಭಾಗ್ಯಕ್ಕೆ ಸಂಕೇತವಾಗಿದೆ. ಚನ್ನಮ್ಮನ ಸೂಸುಗ ಒಂದು ನಕ್ಷತ್ರ ಪುಂಜ. ಇದಕ್ಕೆ ಸಂಬಂಧಿಸಿದ ಐತಿಹ್ಯ ಹೀಗಿದೆ : ಮಕ್ಕಳಿಲ್ಲದ ರಾಜನೊಬ್ಬ ಮಕ್ಕಳಿಗಾಗಿ ದೀರ್ಘ ತಪಸ್ಸನ್ನು ಮಾಡಿದಾಗ ಶಿವನು ಪ್ರತ್ಯಕ್ಷನಾಗಿ ಅಲ್ಪಾಯುಷಿಯಾಗಿ ಗುಣವಂತನಾದ ಮಗ ಬೇಕೋ ದೀರ್ಘಾಯುಷಿ ಯಾದ ದುರ್ಗುಣಿಯಾದ ಮಗ ಬೇಕೋ ಎಂದು ಕೇಳಿದನು. ಇವೆರಡರಲ್ಲಿ ಮೊದಲಿನದನ್ನು ರಾಜ ಆಯ್ಕೆ ಮಾಡಿಕೊಂಡನು. ಮಗ ಹುಟ್ಟಿದ, ದೊಡ್ಡವನಾದ. ಒಮ್ಮೆ ಬೇಟೆಗೆ ಹೋದಾಗ ಎಡವಿ ಸತ್ತುಬಿದ್ದನು. ತಾಯಿ ದುಃಖಿತಳಾದಳು. ಮಗನನ್ನು ಬೋರಲಾಗಿ ಮಲಗಿಸಿ ಹೂಳಬೇಕಲ್ಲ ಅಂತ (ಅವಿವಾಹಿತರಾಗಿ ಸತ್ತವರನ್ನು ಒಂದು ದೊಡ್ಡ ಗಳುವಿಗೆ ಬೋರಲಾಗಿ ಮಲಗಿಸಿ ಕಟ್ಟುತ್ತಾರೆ.) ಹೆಣಕ್ಕೆ ಹೆಣ್ಣು ಕೊಡುತ್ತೀರಾ ಎಂದು ಬಿಂದಿಗೆ ಹೊನ್ನು, ಬಿಂದಿಗೆ ವರಹ ಕೊಟ್ಟು ಬೀದಿ ಬೀದಿಗೂ ಸಾರಿಸಿದರು. ಬಹಳಷ್ಟು ಜನ ಹೆಣ್ಣು ಮಕ್ಕಳಿದ್ದ ಬಡಬ್ರಾಹ್ಮಣನೊಬ್ಬ ಒಬ್ಬ ಮಗಳನ್ನು ಕೊಟ್ಟನು. ಮಗಳನ್ನು ಹೆಣಕ್ಕೆ ಕೊಡಬೇಕಲ್ಲ ಎಂದು ಆಕೆಯ ತಾಯಿ ಗೋಳಾಡಿದಳು. ಮದುವೆ ಮಾಡುವಾಗ ಎಲ್ಲಿಲ್ಲದ ಗುಡುಗು, ಮಿಂಚು, ಮಳೆ, ಬಿರುಗಾಳಿ ಎದ್ದು ದಂಡು ದಿಕ್ಕಾಪಾಲಾಯಿತು. ಆ ಹುಡುಗಿ ಗಂಡನ ಮೈ ಉಜ್ಜಿ ಆ ಮಣ್ಣಿನಿಂದ ಈಶ್ವರನ ಮೂರ್ತಿಯನ್ನು ಮಾಡಿ ಶಿವಧ್ಯಾನ ಮಾಡಿದಳು. ಲೋಕಸಂಚಾರಕ್ಕೆ ಹೊರಟ ಶಿವಪಾರ್ವತಿಯರು ಅವಳ ಕಷ್ಟವನ್ನು ತಿಳಿದು ಆತನಿಗೆ ಜೀವಕೊಟ್ಟರು. ಮಂಟಪ ಅರಮನೆಯಾಯಿತು. ಮರುದಿನ ದಂಡು ಬಂದು ಸಂತೋಷದಿಂದ ಅವರನ್ನು ಮೆರವಣಿಗೆಯಲ್ಲಿ ಊರಿಗೆ

ಕರೆದೊಯ್ದರು. ಸತ್ತ ಮಗ ಬದುಕಿ ಬಂದ ಅಂತ ಈ ಭಾಗ್ಯವಂತ ಸೊಸೆಯ ಕೈಯಲ್ಲಿ ಹೊನ್ನು ವರಹ ದಾನ ಮಾಡಿಸುತ್ತಾ ಬಂದರು. ಅವಳ ಅಪ್ಪ ಅಮ್ಮನೂ ಓಡಿ ಬಂದರು. ಅಪ್ಪನನ್ನು ನೋಡಿ ಅವಳು ಮುಖವನ್ನು ಅತ್ತ ತಿರುಗಿಸಿಕೊಂಡಳು. ಶಿವನು ಪ್ರತ್ಯಕ್ಷನಾಗಿ ನೀವು ಸುಖವಾಗಿ ರಾಜ್ಯವಾಳಿ ಸತ್ತ ನಂತರ ಸ್ವರ್ಗ ಸಿಗಲಿ ಅಂತ ಹಾರೈಸಿದನು. ಸತ್ತ ನಂತರ ನಕ್ಷತ್ರವಾಗಿ ನಿನ್ನ ಹೆಸರು ಸ್ಥಿರವಾಗಿರಲಿ ಎಂದು ಹೇಳಿದನು. ಅದೇ ಇಂದು ನಾವು ಕಾಣುವ ಚೆನ್ನಮ್ಮನ ಸೂಸುಗ ಎಂದು ಹೇಳುವುದುಂಟು.

ಬ್ರಾಹ್ಮಣರು ಆಚರಿಸುವ ಕಾಲುದೀಪದ ಹಬ್ಬದ ಹಿನ್ನೆಲೆಯಲ್ಲಿರುವುದು ಇದೇ ಕಥೆ. ಆಷಾಢ ಬಹುಳ ಅಮವಾಸ್ಯೆಯಂದು ಈ ಹಬ್ಬವನ್ನು ಆಚರಿಸುತ್ತಾರೆ. ಹೆಣ್ಣು ಮಕ್ಕಳೆಲ್ಲರು ಈ ಪೂಜೆಯನ್ನು ಮಾಡುತ್ತಾರೆ. ಚೆನ್ನಮ್ಮನೂ ಕಾಡಿನಲ್ಲಿದ್ದಾಗ ಇದೇ ಪೂಜೆಯನ್ನು ಮಾಡಿದ್ದಳಂತೆ. ಹಬ್ಬದಲ್ಲಿ ಬಾಳೆಹಣ್ಣಿನಲ್ಲಿ ದುಡ್ಡು ಇಡುತ್ತಾರೆ. ಅಣ್ಣತಮ್ಮಂದಿರು ಯಾರಾದರೂ ಈ ಭಂಡಾರವನ್ನು ಒಡೆಯಬೇಕು. ಚೆನ್ನಮ್ಮನಿಗೆ ಯಾರೂ ಇರಲಿಲ್ಲ. ಶಿವನೇ ಬಂದು ಭಂಡಾರವನ್ನು ಒಡೆದನಂತೆ. (ಕನ್ನಡ ಜಾನಪದ ವಿಷಯ ವಿಶ್ವಕೋಶ, ಪು.೭೮೮) ತಿನ್ನವಲ್ಲಿಯ ಅಯೋಧ್ಯೆ ರೆಡ್ಡಿಗಳ ಪಂಗಡದ ಮದುವೆಗಳಲ್ಲಿ ತಾಳಿಯ ಬದಲಿಗೆ ಅರಿಶಿನದ ದಾರವನ್ನು ಬಳಸುವ ಪದ್ಧತಿ ಇದೆ. ಮದುವೆಗೆ ತಾಳಿ ಮತ್ತು ಬಟ್ಟೆಯನ್ನು ತರಲು ಹೋದವನು ಬರಲೇ ಇಲ್ಲ ಎಂಬ ಮಾತು ಅದರಲ್ಲಿ ಬಳಕೆಯಲ್ಲಿದೆ. ಇದಕ್ಕೊಂದು ಐತಿಹ್ಯ ಇದೆ. ಹಿಂದೆ ಒಬ್ಬ ರೆಡ್ಡಿ ಸಾಮಂತನು ಮದುವೆಯಾಗ ಬಯಸಿದನಂತೆ. ಅದಕ್ಕಾಗಿ ಬೆಲೆಯುಳ್ಳ ತಾಳಿ ಮಾಡಿಕೊಡೆಂದು ಅಕ್ಕಸಾಲಿಗನಿಗೆ ಮುಂಗಡವಾಗಿ ಹಣ ಕೊಟ್ಟನು. ಕುಡುಕ ಅಕ್ಕಸಾಲಿಗ ತನ್ನ ಕರ್ತವ್ಯವನ್ನು ಮರೆತುಬಿಟ್ಟನು. ಮದುವೆ ದಿನ ಹತ್ತಿರ ಬಂತು. ತಾಳಿಯೇ ಬರಲಿಲ್ಲ. ಮುಹೂರ್ತದ ಸಮಯದಲ್ಲಿ ಹಿರಿಯ ರೆಡ್ಡಿ ತನ್ನ ಬಟ್ಟೆಯಿಂದ ಕೆಲವು ದಾರದ ಎಳೆಗಳನ್ನು ತೆಗೆದು ಹುಡಿ ಮಾಡಿ ಅದಕ್ಕೆ ಅರಿಶಿನ ಬಳಿದು ಹೆಣ್ಣಿನ ಕೊರಳಿಗೆ ಕಟ್ಟಿಸಿದನಂತೆ. ಅಂದಿನಿಂದ ಈ ಸಂಪ್ರದಾಯ ಉಳಿದು ಬಂದಿದೆ ಎಂದು ಹೇಳುತ್ತಾರೆ. (ಕನ್ನಡ ಜಾನಪದ ವಿಶ್ವಕೋಶ; ಪುಟ.೮೭)

**ದೆವ್ವಸಂಬಂಧಿ ನಂಬಿಕೆಗಳ ಹಿನ್ನೆಲೆಯಲ್ಲಿ ಐತಿಹ್ಯಗಳು** : ಸಾಮಾನ್ಯವಾಗಿ ಸತ್ತವರು ದೆವ್ವಗಳಾಗುತ್ತಾರೆಂಬ ನಂಬಿಕೆಯಿದೆ. ಅಕಾಲ ಮರಣಕ್ಕೆ ತುತ್ತಾಗುವರು ಬದುಕಿನ ಮೇಲೆ ಅತಿಯಾದ ಪ್ರೀತಿಯುಳ್ಳವರು ಮದುವೆಯಿಲ್ಲದೆ ಸತ್ತವರು ದುಷ್ಟರು, ಬಾಣಂತಿಯರು ಸತ್ತರೆ ದೆವ್ವಗಳಾಗುತ್ತಾರೆಂಬ ಕಲ್ಪನೆಯಿದೆ. ಇದಕ್ಕನುಗುಣವಾಗಿ ದೆವ್ವಗಳು ಜನರನ್ನು ಕಾಡುತ್ತವೆಯೆಂಬ ಐತಿಹ್ಯಗಳು ಎಲ್ಲ ಕಡೆಯೂ ಜನಜನಿತವಾಗಿರುತ್ತವೆ. ಕೆಲವೊಮ್ಮೆ ದೆವ್ವವೇ ಮಗುವಾಗಿ ಹುಟ್ಟಿ ಕಾಡಿಸುತ್ತದೆಯೆಂಬ ನಂಬಿಕೆಯೂ ಇದೆ. ಇಂಥ ಮಕ್ಕಳು ಹಣೆಯಲ್ಲಿ ಕಣ್ಣುಗಳನ್ನು ಹೊಂದಿದ್ದು ಕೈ ಕಾಲುಗಳು ಹಿಂದಕ್ಕೆ ತಿರುಗಿಸಿಕೊಂಡು ಹುಟ್ಟುತ್ತವೆಯೆಂದೂ ಹುಟ್ಟಿದ ತಕ್ಷಣವೇ ಸೂಲಗಿತ್ತಿಯ ಮುಂದಲೆಯೆಳೆದು ಒಲೆಯ ಮೇಲಕ್ಕೆ ಹತ್ತಿ

ಕುಳಿತುಕೊಳ್ಳುತ್ತವೆಂದೂ ಇಂಥ ಮಗುವನ್ನು ಸೂಲಗಿತ್ತಿಯು ತಕ್ಷಣವೇ ಕೊಂದಳೆಂದು ಸಂಚಾರಿ ಐತಿಹ್ಯಗಳು ಹೇಳುತ್ತವೆ.

ನಿಧಿಯು ದೆವ್ವವಾಗುತ್ತದೆಂದು ನಂಬಿಕೆಯಿದೆ. ಜಿಪುಣರು ಭೂಮಿಯಲ್ಲಿ ನಿಧಿಯನ್ನು ಬಚ್ಚಿಡುತ್ತಾರೆಂದು ಅವರು ಸತ್ತು ದೆವ್ವಗಳಾಗಿ ನಿಧಿಗೆ ಕಾವಲಿರುತ್ತಾರೆಂದೂ ನಂಬಿಕೆಯನ್ನು ಆಧರಿಸಿ ಐತಿಹ್ಯಗಳು ನಿರೂಪಿತವಾಗುತ್ತವೆ. ನಿಧಿಯನ್ನು ಕಾಯುವ ದೆವ್ವಗಳು ಸರ್ಪಗಳಾಗಿ ನಿಧಿಯ ಮೇಲೆ ಮಲಗಿ ಅದನ್ನು ರಕ್ಷಿಸುತ್ತವೆಯೆಂದು ನಿಧಿಯ ಸುತ್ತ-ಮುತ್ತ ಓಡಾಡುವವರನ್ನು ಅಟ್ಟಿಸಿಕೊಂಡು ಹೋಗುತ್ತವೆಯೆಂದು ಹೇಳುತ್ತಾರೆ. ವಾರಸುದಾರರನ್ನು ಕಂಡರೆ ನಿಧಿಯು ನೀನು ಬರುವೆಯೋ ನಾನು ಬರಲೋ ಎಂದು ಕೇಳುತ್ತದೆ. ಆಗ ಧೈರ್ಯಮಾಡಿ ನೀನೇ ಬಾ ಎಂದೆನ್ನಬೇಕು ಹೀಗೆ ಅನ್ನುವುದೇ ತಡ ದಡದಡನೆ ಶಬ್ದ ಮಾಡುತ್ತಾ ಭೂಮಿಯಿಂದ ಮೇಲಕ್ಕೇಳುತ್ತದೆ. ಆಗ ಕರಿಹೋತವನ್ನು ಬಲಿ ಕೊಡಬೇಕೆಂದು ನಿಯಮ-ಇವುಗಳನ್ನೆಲ್ಲ ಪಾಲಿಸಿ ಕೆಲವರು ನಿಧಿಯನ್ನು ವಶಪಡಿಸಿಕೊಂಡು ಶ್ರೀಮಂತರಾದ ಬಗೆಗೆ ಇಲ್ಲವೇ ನಿಧಿಯನ್ನು ತರುವಾಗ ರಕ್ತಕಾರಿ ನಡುದಾರಿಯಲ್ಲೇ ಸಾವನ್ನಪ್ಪಿದ ಬಗೆಗೆ ಐತಿಹ್ಯಗಳು ಜನಜನಿತವಾಗಿರುವುದು ಸಾಮಾನ್ಯ ಅಂಶ.

ಆಹಾರ ಪದಾರ್ಥಗಳನ್ನು ಕಂಡರೆ ದೆವ್ವಗಳಿಗೆ ಬಹಳ ಪ್ರೀತಿ. ಎಣ್ಣೆಯಲ್ಲಿ ಕರಿದ ತಿಂಡಿಗಳು, ಸಿಹಿ ಪದಾರ್ಥಗಳು ಎಂದರೆ ದೆವ್ವಗಳು ಆಶಿಸುತ್ತವೆ. ಹಾಗೆಯೇ ಮದ್ಯ ಮಾಂಸಗಳೆಂದರೆ ಹಿಂದೆಯೇ ಬೀಳುತ್ತವೆ ಎಂಬಿತ್ಯಾದಿ ನಂಬಿಕೆಗಳಿವೆ. ಆಹಾರ ಪದಾರ್ಥಗಳನ್ನು ತಿಂಡಿ ತೀರ್ಥಗಳನ್ನು ಊರಿಂದೂರಿಗೆ ಒಯ್ಯುವಾಗ ಇದ್ದಿಲು ಇಲ್ಲವೇ ಲೋಹದ ಚೂರನ್ನು ಹಾಕಿ ತಗೆದುಕೊಂಡು ಹೋಗುತ್ತಾರೆ. ಅಂದರೆ ಬೆಂಕಿ ಮತ್ತು ಆಯುಧಗಳಿಗೆ ದೆವ್ವ ಹೆದರುತ್ತದೆಯೆಂದು ಹೇಳುತ್ತಾರೆ. ತಮ್ಮನ್ನು ಕಾಡಿಸುವ ದೆವ್ವಗಳ ಮುಂದೊಗಲನ್ನು ಕತ್ತರಿಸಿಕೊಂಡರೆ ಅವು ಕೊನೆಯ ತನಕ ಗುಲಾಮರಾಗಿ ಕೆಲಸ ಮಾಡಿಕೊಡುತ್ತವೆ. ಇಂಥ ಕೆಲಸಗಳನ್ನು ಧೈರ್ಯಸ್ಥರಾದ ಮಂದಿ ಮಾಡಿಸಿಕೊಳ್ಳುತ್ತಿದ್ದರು ಎಂಬಿತ್ಯಾದಿ ನಂಬಿಕೆಗಳನ್ನು ಆಶ್ರಯಿಸಿ ಪೂರಕವಾಗಿ ಐತಿಹ್ಯಗಳು ಸೃಷ್ಟಿಗೊಂಡಿರುತ್ತವೆ. ಚಿಕ್ಕಕುರುಗೋಡಿನ ಬಳಿ ಹುಡುಗನು ಮಾಂಸವನ್ನು ತೆಗೆದುಕೊಂಡು ಹೋಗುತ್ತಿದ್ದ. ಪ್ರತಿ ಮಂಗಳವಾರ ಶುಕ್ರವಾರ ಊರಿನಲ್ಲಿ ಮಾಂಸವನ್ನು ಕೊಯ್ಯುತ್ತಿದ್ದರು. ಊರಾಚೆ ಮರುಳು ಬೀಡುಗಳಲ್ಲಿನ ಮನೆಗಳವರು ಇಲ್ಲಿಂದಲೇ ಮಾಂಸವನ್ನು ತೆಗೆದುಕೊಂಡು ಹೋಗುತ್ತಿದ್ದರು. ಒಂದು ಮನೆಯವರು ಏಳೆಂಟು ವರ್ಷದ ತಮ್ಮ ಮಗನನ್ನು ಮಾಂಸ ತರಲು ಕಳುಹಿಸುತ್ತಿದ್ದರು. ಅವನು ದಾರಿಯ ಉದ್ದಕ್ಕೂ ಆಟವಾಡುತ್ತಾ ಬಂದು ಮಾಂಸವನ್ನು ಪಡೆದುಕೊಂಡು ಆಟ ಆಡಿಕೊಂಡು ತೆಗೆದುಕೊಂಡು ಹೋಗುತ್ತಿದ್ದ. ಊರಾಚೆ ನಿರ್ಜನ ಪ್ರದೇಶಕ್ಕೆ ಹೋಗುತ್ತಿದ್ದಂತೆ ದೆವ್ವವೊಂದು ಆ ಹುಡುಗನನ್ನು ಹಿಂಬಾಲಿಸುತ್ತಿತ್ತು. ಲೇಯ್ ನನಗೊಂದು ತುಂಡು ಕೊಡೊ... ನನಗೊಂದು ತುಂಡು ಕೊಡೋ ಎಂದು ಪೀಡಿಸುತ್ತಿತ್ತು. ಹುಡುಗನಿಗೆ ಅದು ದೆವ್ವವೆಂದು

ತಿಳಿದಿರಲಿಲ್ಲವಾದ್ದರಿಂದ ಇಲ್ಲ ಹೋಗು ನಮಗೆ ಸ್ವಲ್ಪವೇ ಮಾಂಸ ಬಂದಿರುವುದು ಎಂದು ಹೇಳುತ್ತಿದ್ದ. ಒಂದು ದಿನ ಹೀಗೆ ಪೀಡಿಸುತ್ತಿದ್ದಾಗ ಆಕಸ್ಮಿಕವಾಗಿ ಹುಡುಗ ದೆವ್ವದ ಕಾಲುಗಳನ್ನು ನೋಡಿದ ಅವು ಹಿಂದು-ಮುಂದಾಗಿ ತಿರುಚಿಕೊಂಡಿದ್ದವು. ಪ್ರಜ್ಞೆ ತಪ್ಪಿ ಹುಡುಗ ಬಿದ್ದು ಬಿಟ್ಟ ಅಲ್ಲಿಯೇ ವಾಂತಿ ಭೇದಿಗಳಾಗುವಂತೆ ದೆವ್ವ ತುಳಿದು ಬಿಟ್ಟಿತ್ತು. ವಿಪರೀತ ಜ್ವರ ಬಂದಿತ್ತು. ಮಾಂತ್ರಿಕ ತಾಯತ ಕಟ್ಟಿ ವಾರುಮಾಡಿದ.

ಗುಡಿಬಂಡೆಯ ವರ್ಲ್ಲುಕೊಂಡ ಬೆಟ್ಟದ ಮೇಲೆ 'ಸುದ್ದದೊಣೆ' ಎಂಬ ಹೆಸರಿನ ದೊಣೆಯಿದೆ. ಇದರಲ್ಲಿ ಮೀನು ಹಿಡಿಯಲು ಹೋದ ಬುಡಬುಡುಕೆ ರಾಮಣ್ಣ ತೀರಿಕೊಂಡು ದೆವ್ವವಾದ. ಈ ದೆವ್ವವು ಮಧ್ಯಾಹ್ನ ೧೨ ಗಂಟೆಯ ಸಮಯದಲ್ಲಿ ಬುಡಬುಡುಕೆ ಭಾರಿಸುತ್ತಿತ್ತು. ಒಂದು ದಿನ ಬಟ್ಟೆ ಒಗೆಯಲೆಂದು ಹೋದ ಗಂಗಮ್ಮನಿಗೆ ಈ ದೆವ್ವ ಹಿಡಿಯಿತು. ದೆವ್ವ ಮೈಮೇಲೆ ಬಂದಾಗಲೆಲ್ಲ ಬುಡಬುಡುಕೆ ಶಬ್ದ ಮಾಡುತ್ತಿದ್ದಳು. ದಿನ ಕಳೆದಂತೆ ಅವಳೂ ತೀರಿಕೊಂಡಳು. ದೆವ್ವ ಸಂಬಂಧಿ ಕಥೆಗಳನ್ನು ನಿರ್ಜನ ಪ್ರದೇಶಗಳಿಗೆ ಹಾಳುಮನೆ ಮಂಟಪಗಳು, ಬಾವಿಗಳು, ದಟ್ಟವಾದ ಮರಗಿಡಗಳು ಇರುವೆಡೆಯಲ್ಲಿ ಆರೋಪಿಸಿ ಐತಿಹ್ಯಗಳನ್ನು ಸೃಷ್ಟಿಸುತ್ತಾರೆ. ಕೆಲವು ದೆವ್ವಗಳು ಶಾಶ್ವತವಾಗಿ ಅಂತರ ಪಿಶಾಚಿಗಳಾಗಿರುತ್ತವೆ. ಇವು ಸ್ಮಶಾನಗಳಲ್ಲಿ ವಾಸಿಸುತ್ತವೆಯಲ್ಲದೆ ತಮಗೆ ಬೇಕಾದ ಆಕಾರಗಳನ್ನು ಪಡೆದು ನಡುರಾತ್ರಿಯಲ್ಲಿ ಅದರಲ್ಲೂ ಅಮವಾಸ್ಯೆಯ ಕತ್ತಲಲ್ಲಿ ಜನರನ್ನು ಕಾಡಿಸುತ್ತವೆ. ಒಲಿಸಿಕೊಂಡವರಿಗೆ ಯಾವ ಸಹಾಯವನ್ನು ಬೇಕಾದರೂ ಮಾಡುತ್ತವೆಯೆಂದು ಹೇಳುತ್ತಾರೆ. ಸಾವಿನ ಬಗ್ಗೆ ಮನುಷ್ಯನಿಗೆ ಇರುವ ಭಯವು ಸತ್ತವರ ಬಗ್ಗೆ ದೆವ್ವದ ಕಲ್ಪನೆಗಳನ್ನು ಕಟ್ಟುತ್ತದೆ. ಅದು ಕತೆಗಳಾಗಿ ಐತಿಹ್ಯಗಳಾಗಿ ಜನಪರಂಪರೆಯಲ್ಲಿ ಬೆಳೆಯುತ್ತಾ ಹೋಗುತ್ತದೆ.

**ದೆವ್ವದ ಸಾಮಾನ್ಯ ಐತಿಹ್ಯಗಳು :** ಕೊಳ್ಳಿ ದೆವ್ವಗಳು ನಡುರಾತ್ರಿಯ ಸಮಯದಲ್ಲಿ ಬೆಳಕಿನ ಪಂಜುಗಳನ್ನು ಹಿಡಿದು ಸಾಲಾಗಿ ಹೋಗುತ್ತಿರುತ್ತವೆ ಎಂಬ ನಂಬಿಕೆಯಿದೆ. ಜನರು ಇದನ್ನು ತಾವು ನೋಡಿರುವುದಾಗಿ ತಿಳಿಸುತ್ತಾರೆ. ಅಲ್ಲದೆ ತಮ್ಮ ಪೂರ್ವಿಕರು ಇವುಗಳಿಂದ ರಾತ್ರಿಯಿಡೀ ದುಡಿಸಿ ಕೊಳ್ಳುತ್ತಿದ್ದರೆಂಬ ಐತಿಹ್ಯಗಳಿವೆ. ಮುನೇಶ್ವರ ಹಾಗೂ ಅವನ ಏಳುಮಂದಿ ಸಹೋದರಿಯರು ಕೆಲವೊಮ್ಮೆ ದೇವತೆಗಳಾಗಿಯೂ ಕೆಲವೊಮ್ಮೆ ದೆವ್ವಗಳಾಗಿಯೂ ಕಾಡುತ್ತಾರೆಂದು ನಂಬಿಕೆ ಹಾಗೂ ಐತಿಹ್ಯಗಳಿವೆ. ಈ ಸಹೋದರಿಯರನ್ನು 'ಏಳು ಜನ ಅಕ್ಕಂದಿರು'-ಮೋಹಿನಿಯರು ಎಂದು ಕರೆದು ಇವರು ಅವಿವಾಹಿತ ಯುವಕರಿಗೆ ಸ್ವಪ್ನದಲ್ಲಿ _ಕಾಡುತ್ತಾರೆಂಬ ನಂಬಿಕೆಗೆ ಅನುಗುಣವಾಗಿ ಐತಿಹ್ಯಗಳು ಕಂಡುಬರುತ್ತವೆ.

ಬಿಳಿಎಕ್ಕದ ಗಿಡದಲ್ಲಿನ ಬಾಲಬ್ರಾಹ್ಮಣ ಅಥವಾ ಬೆಣ್ಣೆ ದೆವ್ವಗಳು ಇರುತ್ತವೆ. ಇವುಗಳಿಂದ ಯಾರಿಗೂ ತೊಂದರೆಯಿರುವುದಿಲ್ಲವೆಂದು ಭಾವಿಸುತ್ತಾರೆ. ಇವು ಮಡಿಯುಟ್ಟು ದೇವರ ಪೂಜೆಗೆ ಹೋಗುತ್ತಿರುತ್ತವೆಂದು ಇಂಥವುಗಳನ್ನು ಜನ ನೋಡಿದುದಾಗಿಯೂ ಹೇಳುತ್ತಾರೆ. ಇವು ದೆವ್ವಗಳ ಗುಂಪಿನಲ್ಲಿ ಬಹಳ ಒಳ್ಳೆಯವು. ಅಕಾಲದಲ್ಲಿ ಮರಣ ಹೊಂದಿದ ಯುವತಿಯರು ಮೋಹಿನಿಯರಾಗಿ ಕಾಡುತ್ತಾರೆಂಬ ನಂಬಿಕೆ ಐತಿಹ್ಯದಲ್ಲಿದೆ. ದಾರಿಗಳಲ್ಲಿ ಕೊಲೆಯಾದ ಯುವತಿಯರು ಬಂದು ಹೋಗುವ ಗಂಡಸರನ್ನು ಕಾಡುವ ಹಾಗೂ ರಾತ್ರಿ ದನ-ಕರುಗಳ ರೂಪದಲ್ಲಿ ಹೊಲ-ಗದ್ದೆಗಳಿಗೆ ನುಗ್ಗಿ ಯುವಕರನ್ನು ಕಾಡಿಸುವ ದೆವ್ವಗಳಿರುತ್ತವೆಂದು ಹೇಳುತ್ತಾರೆ. ಈ ಸಂಬಂಧದ ಅನುಭವಗಳು ಐತಿಹ್ಯಗಳಾಗುತ್ತವೆ.

ಮಾಂಸಕ್ಕೆ ಹಿಂದೆ ಬೀಳುವ ದೆವ್ವಗಳು, ಗಡಿ ದಾಟುವಾಗ ತಿಂಡಿ-ತಿನಿಸುಗಳಲ್ಲಿ ಸೇರಿ ಆಸೆಯಿಂದ ಹಿಂಬಾಲಿಸುವ ದೆವ್ವಗಳು, ನನಗೊಂದು ತುಂಡು ಕೊಡು ಎಂದು ಕಾಡಿದವೆಂದು ಐತಿಹ್ಯಗಳಿವೆ. ರೂಪ ಅಲಂಕಾರಕ್ಕೆ ಮನಸೋಲುವ ದೆವ್ವಗಳು; ತಾವು ಕೂಡಿಸಿಟ್ಟ ಸಂಪತ್ತು ಹಾಗೂ ಮಾಡಿಟ್ಟ ಆಸ್ತಿಯಿಂದಾಗಿ ದೆವ್ವಗಳಾದವರು; ಅಕಾಲ ಮರಣಕ್ಕೆ ತುತ್ತಾದವರು ಅಥವಾ ಆಯಸ್ಸು ಮುಗಿದರು ಧನಮೋಹ ಬಿಡದವರು; ಅಕಾಲ ಮರಣಕ್ಕೆ ತುತ್ತಾಗಿ ಗಂಡನಿಗೆ ಮರುಮದುವೆ ಮಾಡಿಸುವ ದೆವ್ವಗಳು; ಕರುಳಬಳ್ಳಿಯ ನೆನಪಿಗಾಗಿ ಬಂದು ಮಲತಾಯಿಯನ್ನು ನಿಯಂತ್ರಿಸುವಂಥ ತಾಯಿದೆವ್ವಗಳು; ಹೆಂಡತಿ ಮಕ್ಕಳಿಗೆ ಧೈರ್ಯ ತುಂಬುವ ಗಂಡು ದೆವ್ವಗಳು; ತಮಾಷೆ, ಚೇಷ್ಟೆಯ ಮೂಲಕ ಕಿರಿಕಿರಿ ಮಾಡುವ ತುಂಟದೆವ್ವಗಳು; ಪ್ರೇಮ-ವಿವಾಹ ವಂಚಿತ ದೆವ್ವಗಳು-ಇವುಗಳಿಗೆ ಸಂಬಂಧಿಸಿದ ಐತಿಹ್ಯಗಳಿವೆ. ಮಾಂತ್ರಿಕರ ವಶದಲ್ಲಿರುತ್ತವೆ ಎಂದು ನಂಬಲಾದ ಬೇತಾಳ-ಪಿಶಾಚಿಗಳು, ಭೂತ-ಪ್ರೇತಗಳು; ಹುಣಸೆಯ ಮರದಲ್ಲಿರುವ ದೆವ್ವಗಳು, ಕಣಗಿಲೆಯ ಗಿಡದಲ್ಲಿರುವ ಬೇತಾಳಗಳು; ಆತ್ಮಹತ್ಯೆ ಮಾಡಿಕೊಂಡವರು ದೆವ್ವಗಳಾಗಿ ಕಾಡಿದರೆಂಬ ಐತಿಹ್ಯಗಳಿವೆ.

**ಜಡೆಮುನೇಶ್ವರನ ಆಚರಣೆ :** ಕರ್ನಾಟಕದ ಜನಪದ ಜೀವನದ ಕುತೂಹಲಕಾರಿ ಕಲ್ಪನೆಗಳಲ್ಲಿ ಹಾಗೂ ಅತಿಮಾನುಷ ಶಕ್ತಿಗಳಲ್ಲಿ ಜಡೆಮುನಿಯು ಒಂದು. ಜನಪದಕ್ಕಿರುವ ನಂಬಿಕೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಐತಿಹ್ಯಗಳಲ್ಲಿ ಜಡೆಮುನಿಯ ಘಟನೆಗಳು ಸಂಚಾರಿ ಸ್ವರೂಪದವು. ಜಡೆಮುನಿ ಜನಸಾಮಾನ್ಯರನ್ನು ಅಂಜಿಸುವ ಅಗೋಚರ ಶಕ್ತಿವಿಶೇಷಗಳಲ್ಲಿ ಒಂದು. ಅದು ಸಾಮಾನ್ಯ ದೆವ್ವ, ಕೊಳ್ಳಿದೆವ್ವಗಳಿಗಿಂತ ಭಿನ್ನವಾದುದು. ಇವೆರಡಕ್ಕಿಂತ ಉನ್ನತ ಸ್ಥಾನ ಅದಕ್ಕೆ, ಅತೀತ ಶಕ್ತಿಯನ್ನು ಪಡೆದ ದೆವ್ವಸ್ವರೂಪಿ ಶಕ್ತಿಯೊಂದು ಜ್ವಾಲೆಯ ರೂಪದಲ್ಲಿ ಆಗಾಗ ಕಾಣಿಸಿಕೊಂಡು ಜನರಿಗೆ ತಲ್ಲಣ ಉಂಟು ಮಾಡುವುದು, ಜಡೆಮುನಿಯ ಲಕ್ಷಣ ನೆಲದಲ್ಲಿ ಎಳೆದಾಡುವಷ್ಟು ಉದ್ದನೆಯ ಜಡೆ, ಕಾಂತಿಯುಕ್ತವಾದ ಮೈ. ಅಮವಾಸ್ಯೆ-ಹುಣ್ಣಿಮೆಯ ರಾತ್ರಿಗಳಲ್ಲಿ ಆತ ಕೆಲವರ ಕಣ್ಣಿಗೆ ಗೋಚರಿಸುವುದುಂಟು. ಅಂಥ

ರಾತ್ರಿಗಳಲ್ಲಿ ಒಂದು ನೆಲೆಯಿಂದ ಹೊರಟು ದೇವಾಲಯಗಳಿರುವ ಸ್ಥಳಗಳಲ್ಲಿ ಸಂಚರಿಸಿ ಬೆಳಗಾಗುವುದರಲ್ಲಿ ತನ್ನ ಮೂಲನೆಲೆಯನ್ನು ಸೇರಿಕೊಳ್ಳುತ್ತಾನೆಂದು ನಂಬಿಕೆ ಇಂಥ ಸಂಚಾರದ ಪ್ರದೇಶವನ್ನು ಮುನಿ ಸಂಚಾರದ ಪ್ರದೇಶ ಎಂದು ನಿರ್ದಿಷ್ಟವಾಗಿ ಜನ ಗುರುತಿಸುತ್ತಾರೆ.

ಮುನಿ ವಾಸಿಸುವುದು ಸಾಮಾನ್ಯವಾಗಿ ಆಲದ ಮರಗಳಲ್ಲಿ. ರಾತ್ರಿ ಆಲದ ಮರದಿಂದ ವಾದ್ಯಮೇಳಗಳೊಡನೆ ಹೊರಟು ಕೊಳದಲ್ಲಿ ಅಥವಾ ತೊರೆಯಲ್ಲಿ ಮಿಂದು ದೇವಾಲಯಗಳಿಗೆ ಹೋಗಿ ಬರುವುದು ಮುನಿಯ ಪದ್ಧತಿ ಮುನಿಯ ಪರಿವಾರದವರೂ ಇಂಥ ಅಗೋಚರ ಶಕ್ತಿಗಳೇ ಈ ಮುನಿಯನ್ನು ಪರಿವಾರ ಪಲ್ಲಕ್ಕಿಯಲ್ಲಿ ಹೊತ್ತು ಇವರು ಸಾಗುವುದುಂಟು ಅದನ್ನು ಕಣ್ಣಾರೆ ಕಂಡಂತೆ ಬಣ್ಣಿಸುವವರು ಇದ್ದಾರೆ. ಮುನಿಯನ್ನು ಮನುಷ್ಯರು ನೋಡಬಹುದು; ಆದರೆ ಮುನಿಯ ದೃಷ್ಟಿ ಮನುಷ್ಯನ ಮೇಲೆ ಬಿದ್ದರೆ ಮರಣ ಖಂಡಿತ ಎಂಬ ನಂಬಿಕೆ ಇದೆ. ಆದರೆ ಮುನಿಯೊಡನೆ ಮಾತಾಡಿದರು ಉಂಟು ಯಾವುದೋ ಗಂಟನ್ನು ಮರೆತು ಬಂದು ತರಲು ಹೋದಾಗ ಮುನಿಯ ದೃಷ್ಟಿಗೆ ಬಿದ್ದಾಗ ಮುನಿ ಅಂಥ ಅಸಹಾಯಕರನ್ನು ಕ್ಷಮಿಸಿ ಘಟನೆಯನ್ನು ಯಾರಿಗೂ ಹೇಳದಂತೆ ಎಚ್ಚರಿಸಿ ಕಳಿಸಿದ್ದುಂಟು. ಆದರೆ ಅದನ್ನು ಹೇಳಿಕೊಂಡು ಪಕ್ಕನೆ ಪ್ರಾಣ ಬಿಟ್ಟರೆಂದು ಹೇಳುವ ಜನಜನಿತ ಕಥೆಗಳು ಹಲವಾರು ಇವೆ. ಜನಪದ ಜೀವನದಲ್ಲಿ ಜಡೆಮುನಿಯ ಕಲ್ಪನೆ ವಿಚಿತ್ರವಾದುದು. 'ಮುನಿ' ಶಬ್ದ 'ಯತಿ'ಯೊಬ್ಬನನ್ನು ನಿರ್ದೇಶಿಸುತ್ತದೆ. ಇಲ್ಲಿನ ಕಲ್ಪನೆಯೂ ಋಷಿಯನ್ನೇ ನೆನಪಿಗೆ ತರುತ್ತದೆ. ಅಂಥದೇ ದೈವಿಕ ಆವರಣ ಮುನಿಯ ಸುತ್ತ ಕಲ್ಪಿತವಾಗಿದೆ. ಬೆಳೆ ಬಂದ ಕಾಲದಲ್ಲಿ ಬೆಳೆದ ಹೊಲದಲ್ಲಿ ಮುನಿಯಪ್ಪನನ್ನು ಪೂಜಿಸುವ ಆಚರಣೆ ಇದೆ. ಅನೇಕ ಕಡೆಯಲ್ಲಿ ಮುನಿಯಪ್ಪ, ಮುನೇಶ್ವರ ಮುಂತಾದ ಹೆಸರಿನ ದೈವಗಳಿಗೆ ಗುಡಿಗಳನ್ನು ಕಟ್ಟಿ ಆರಾಧಿಸುವುದೂ ಉಂಟು. ಆದರೆ ಈ ಮುನೇಶ್ವರನಿಗೂ ಜಡೆಮುನಿಗೂ ಇರುವ ಸಂಬಂಧ ಅಸ್ಪಷ್ಟವಾಗಿದೆ.

**ಅಲಕಾಪುರದ ಜಡೇಮುನೇಶ್ವರ** (ಗೌರೀಬಿದನೂರು ತಾ) : ಅಲಕಾಪುರದ ರಸ್ತೆ ಬದಿಯಲ್ಲಿ ದೊಡ್ಡ ಆಲದ ಮರವಿದೆ. ಆಂಧ್ರದಿಂದ ಬೆಂಗಳೂರಿಗೆ ದನಗಳನ್ನು ಮಾರಲೆಂದು ಸಾಗಿಸುತ್ತಿದ್ದರು. ಸಂಜೆಯಾಗುತ್ತಿದ್ದುದರಿಂದ ಮರದ ಕೆಳಗೆ ದನಗಳನ್ನು ಕಟ್ಟಿ ಅಲ್ಲೆ ಅನ್ನವನ್ನು ಬೇಯಿಸಿಕೊಂಡರು. ಒಲೆಯ ಮೇಲಿಂದ ಕೆಳಗಿಳಿಸಿ ನೋಡುವಾಗ ಅನ್ನವು ಕೆಂಪು ಬಣ್ಣ ಹೊಂದಿತ್ತು. ದನಕರುಗಳೆಲ್ಲ ಸತ್ತು ಬಿದ್ದಿದ್ದವು. ಅವರು ಮರದಲ್ಲಿ ಯಾವುದೋ ಶಕ್ತಿ ಇದೆಯೆಂದರಿತು ಆ ದೈವಕ್ಕೆ ಹರಕೆ ಹೊತ್ತು ತಮ್ಮದು ತಪ್ಪಾಯಿತೆಂದು ಮೊರೆಯಿಟ್ಟರು. ತಕ್ಷಣವೇ ದನಕರುಗಳಿಗೆ ಜೀವ ಬಂತು ಅನ್ನವೂ ಬಿಳುಪಾಯಿತು. ತಮ್ಮ ದನಕರುಗಳ ಗುಂಪಿನಿಂದ ಒಂದು ಎತ್ತಿನ ಕರುವನ್ನು ದೈವದ ಹೆಸರಿನಲ್ಲಿ ಬಿಟ್ಟು ಹೊರಟು ಹೋದರು.

ಸುಮಾರು ಐದಾರು ವರ್ಷಗಳ ನಂತರ ದೈವಕ್ಕೆ ಬಿಟ್ಟಿದ್ದ ದನವನ್ನು ಮುನ್ನೂರು ರೂ.ಗಳಿಗೆ ಮಾರಿ ಗುಡಿಯನ್ನು ಕಟ್ಟಿಸಿದ್ದರು. ಪಕ್ಕದ ಊರಾದ ಸಿಂಗನಹಳ್ಳಿಯ ಭಜಂತ್ರಿ ಲಿಂಗಣ್ಣನನ್ನು ಪೂಜಾರಿಯನ್ನಾಗಿ ನೇಮಿಸಿದರು. ಅಲ್ಲಿರುವ ದೈವವು ಯಾವುದು ಅದಕ್ಕೆ ಯಾವ ಹೆಸರಿಡಬೇಕೆಂದು ಯಾರಿಗೂ ತಿಳಿಯಲ್ಲಿಲ್ಲ. ಪೂಜೆಯ ಸಮಯ ಸಮೀಪಿಸುತ್ತಿದ್ದಂತೆ ಎಲ್ಲ ಗಂಟೆಗಳು ತಾವಾಗಿಯೇ ಮೊಳಗತೊಡಗಿದವು. ಮಂಗಳಾರತಿ ಮಾಡಿದರು. ಆ ವೇಳೆಗೆ ಎಲ್ಲರ ಕಣ್ಣಿಗೂ ಜಡೆಮುನೇಶ್ವರನ ಜಡೆಗಳು ಎಲ್ಲರಿಗೂ ಕಾಣಿಸಿದವು; ತಾನು ಜಡೆಮುನೇಶ್ವರನೆಂದ; ಎಲ್ಲರೂ ಕೇಳಿಸಿಕೊಂಡರು. ಎಲ್ಲರಿಗೂ ತೀರ್ಥ ಪ್ರಸಾದ ಹಂಚಿದರು. ಆದರೆ ಪೂಜೆಯ ವೇಳೆಗೆ ಹೂವು ಇಲ್ಲವೆಂದು ಪೂಜಾರಿಯು ತನ್ನ ಸೂಳೆಯು ಮುಡಿದಿದ್ದ ಹೂವನ್ನು ಬಿಡಿಸಿ ತಂದಿದ್ದ ಹೂವಿನ ಪ್ರಸಾದ ಹಂಚಲು ಹೋದಾಗ ಅವನಿಗೆ ಕಣ್ಣು ಕಾಣದಂತಾಯಿತು. ತನ್ನದು ತಪ್ಪಾಯಿತೆಂದು ಹರಕೆ ಮಾಡಿದ ಕಣ್ಣು ಕಾಣಿಸತೊಡಗಿದವು. ಅಂದಿನಿಂದ ನಿಯಮ-ನಿಷ್ಠೆಯಿಂದ ಪೂಜೆ ನಡೆಯುತ್ತದೆ. ಈ ಐತಿಹ್ಯದಲ್ಲಿ ಜಡೆಮುನೇಶ್ವರನೆಂಬ ಉಗ್ರಸ್ವರೂಪ ಬ್ರಹ್ಮಚಾರಿ ದೈವವನ್ನು ಸೂಳೆಯುಳ್ಳ ಪೂಜಾರಿಯು ಪೂಜಿಸುವುದು ವಿಶಿಷ್ಟವೆನಿಸುತ್ತದೆ. ಜಡೆಮುನೇಶ್ವರನ ಪೂಜಾರಿಗಳು ಪೂಜೆ-ಆರಾಧನೆಗಳು ನಡೆಯುವ ದಿನಗಳಂದು ಮಾತ್ರ ಶುದ್ಧವಾಗಿರಬೇಕೆಂಬ ನಿಯಮವಿದೆ.

**ಕಾಚಮಾಚೇನಹಳ್ಳಿಯ ಬೊಮ್ಮಪ್ಪನ(ಬೊಮ್ಮಲಿಂಗೇಶ್ವರ) ಆಚರಣೆ :** ಈ ದೈವವನ್ನು ಪಶುಪಾಲಕರು ಆರಾಧಿಸುತ್ತಾರೆ. ತಮ್ಮ ದನಕರುಗಳಿಗೆ ಕುರಿ-ಮೇಕೆಗಳಿಗೆ, ರೋಗ ರುಜಿನಗಳನ್ನು ನಿವಾರಿಸುವ ದೈವವೆಂದು ಆರಾಧಿಸುತ್ತಾರೆ. ಹೈನುಗಾರಿಕೆಯಿಂದ ಬರುವ ಹೇನು, ಚಿಕ್ಕಟ, ನೊಣ, ಇರುವೆ ಇತ್ಯಾದಿ ಕ್ರಿಮಿ-ಕೀಟಗಳ ನಿಯಂತ್ರಕವನ್ನಾಗಿಯೂ; ಸಮೃದ್ಧ ಪಶುಪಾಲನೆ ಹಾಗೂ ಹೈನುಗಾರಿಕೆ ಅಭಿವೃದ್ಧಿಯ ಅಧಿದೇವತೆಯನ್ನಾಗಿ ಸ್ವೀಕರಿಸಿದ್ದಾರೆ. ಈ ಸಂಬಂಧ ಹರಕೆ ಕಟ್ಟುತ್ತಾರೆ. ಹಾಲು, ಮೊಸರು, ತುಪ್ಪಗಳನ್ನು ಅರ್ಪಿಸಿ ಹರಕೆ ತೀರಿಸುತ್ತಾರೆ. ಮರದ ಕೆಳಗೆ ಬಯಲಿನಲ್ಲಿ ಇರುವ ಶಿವಲಿಂಗವಿದ್ದು ಅದರ ಸುತ್ತಲೂ ಬೆಣಚು ಕಲ್ಲುಗಳಿವೆ. ತೆಲುಗಿನಲ್ಲಿ ಇಂಥ ಕಲ್ಲಿನ ಬೊಂಬೆಗಳನ್ನು-ರಾತಿಬೊಮ್ಮಲು ಎಂದು ಕರೆಯುತ್ತಾರೆ. ಇಲ್ಲಿ ಬೊಮ್ಮ ಎಂದರೆ ಬೊಂಬೆ ಎಂದರ್ಥ. ಇಂಥ ಬೊಂಬೆಗಳನ್ನು ಬೊಮ್ಮಪ್ಪಗಳೆಂದು ಕರೆಯುತ್ತಾರೆ. ಹೀಗೆ ಈ 'ಬೊಮ್ಮ'ಗಳ ನಡುವೆ ಇರುವ ಲಿಂಗವು ಬೊಮ್ಮಲಿಂಗೇಶ್ವರನೆನಿಸಿದೆ. ಬೊಮ್ಮಪ್ಪನಿಗೆ ಹಾಲು ಮೊಸರಿನ ನೈವೇದ್ಯವನ್ನು ಮಾಡಿಸಿ ಸದಾ ಉರಿಯುವ ತುಪ್ಪದ ದೀಪಕ್ಕೆ ತುಪ್ಪವನ್ನು ಸಮರ್ಪಿಸಿ ಬರುತ್ತಾರೆ. ಇಲ್ಲಿಂದ ತೆಗೆದುಕೊಂಡು ಹೋದ ತೀರ್ಥವನ್ನು ಮನೆ ದನದ ಕೊಟ್ಟಿಗೆ ಕುರಿಮೇಕೆಗಳ ರೊಪ್ಪ ಇತ್ಯಾದಿ ಕಡೆಗಳಲ್ಲಿ ಚಿಮುಕಿಸಿದರೆ ಹೇನು, ಚಿಕ್ಕಟು, ನೊಣ, ಇರುವೆ, ಹಾವು, ಚೇಳು ಇತ್ಯಾದಿ ಕ್ರಿಮಿ-ಕೀಟ ವಿಷಜಂತುಗಳ ಕಾಟವಿರುವುದಿಲ್ಲವೆಂಬ ನಂಬಿಕೆ ಇದೆ. ಪ್ರತಿ ಸೋಮವಾರ ಜಾತ್ರೆ ನಡೆಯುತ್ತದೆ.

ಬೊಮ್ಮಪ್ಪನನ್ನು ಬಯಲಿನಲ್ಲಿಯೇ ಆರಾಧಿಸುತ್ತಾರೆ. ಭಜಂತ್ರಿ ಸಮುದಾಯದವರು ಈ ದೈವದ ಪೂಜಾರಿಗಳಾಗಿರುವುದು ಒಂದು ವಿಶೇಷವಾದರೆ ಬಯಲಿನಲ್ಲಿ ಪೂಜೆಗೊಳ್ಳುವುದು ಮತ್ತೊಂದು ವಿಶೇಷ. ಭಕ್ತಾದಿಗಳು ದೊಡ್ಡ ದೇವಸ್ಥಾನವನ್ನು ಕಟ್ಟಿಸಿದರೆ ಅವರ ಕನಸಿಗೆ ಹೋಗಿ ತನಗೆ ದೇವಾಲಯ ಬೇಡ ಗೋಡೆಗಳ ನಡುವೆ ಛಾವಣಿಯ ಕೆಳಗೆ ನಾನು ಇರುವವನಲ್ಲವೆಂದು ಈ ದೈವವು ಸೂಚಿಸಿದೆಯಂತೆ ಅದನ್ನು ಮೀರಿಯೂ ದೇವಸ್ಥಾನವನ್ನು ಕಟ್ಟಿಸಲು ಮುಂದಾದಾಗ ಕಟ್ಟಿದ ಗೋಡೆಗಳೆಲ್ಲ ಸೀಳಿ ಬಿರುಕು ಬಿಡುತ್ತಿವೆಯೆಂದು ಗೋಡೆಗಳನ್ನು ತೋರಿಸುತ್ತಾರೆ. ಬೊಮ್ಮಪ್ಪನಿಗೆ ಸಂಬಂಧಿಸಿದ ಭೂಮಿಯಲ್ಲಿ ಬಹಳಷ್ಟು ಮರಗಳು ಹುಲ್ಲು ಬೆಳೆದು ನಿಂತಿದ್ದರೂ ಏನನ್ನೂ ಆಚೆಗೆ ಕೊಂಡೊಯ್ಯುವಂತಿಲ್ಲ. ಕದ್ದು ತೆಗೆದುಕೊಂಡು ಹೋದರೆ ಹಿಂದಿರುಗಿಸಿ ತಂದು ಹಾಕುವವರೆಗೂ ಬಿಡದೆ ದೇವರು ಕಾಟ ಕೊಡುತ್ತಾನೆಂದು ನಂಬಿಕೆ ಹಾಗೆ ಮೀರಿ ತೆಗೆದುಕೊಂಡು ಹೋದವರು ಯಾವ ಕಷ್ಟಗಳಿಗೆ ಗುರಿಯಾದರೆಂಬುದನ್ನು ಕುರಿತು ಇಲ್ಲಿ ಐತಿಹ್ಯಗಳು ನಿರೂಪಿತವಾಗುತ್ತವೆ. ಇಲ್ಲಿಗೆ ಪೂಜೆ ಹರಕೆಗಳಿಗಾಗಿ ಬರುವ ಭಕ್ತಾದಿಗಳು ಉರುವಲನ್ನು ಬಳಸಿಕೊಂಡು ಅಡಿಗೆ ಮಾಡಿಕೊಳ್ಳಬಹುದು. ಎತ್ತಿನ ಗಾಡಿಗಳನ್ನು ಕಟ್ಟಿಕೊಂಡು ಪ್ರಯಾಣ ಬಂದಿದ್ದರೆ ಅವುಗಳನ್ನು ಮೇಯಿಸಿಕೊಂಡು ಹೋಗಬಹುದು. ಆದರೆ ಈ ಸ್ಥಳದಿಂದ ಆಚೆಗೆ ಇಲ್ಲಿ ಮಾಡಿದ ಅಡುಗೆಯನ್ನು ಕೂಡ ತೆಗೆದುಕೊಂಡು ಹೋಗಬಾರದೆಂಬ ನಿಷೇಧವಿದೆ. ಅದನ್ನು ಮೀರಿದ ಭಕ್ತರಿಗೆ ಮಾರ್ಗದ ಮಧ್ಯದಲ್ಲಿಯೇ ಹೊಟ್ಟೆ ನೋವು ಬರುವುದು ಇಲ್ಲವೇ ಕಣ್ಣು ಕಾಣದಂತಾಗುವುದು ಇತ್ಯಾದಿ ತೊಂದರೆಗಳುಂಟಾಗುತ್ತವೆ. ಮತ್ತೆ ಅವರು ತಪ್ಪು ಕಾಣಿಕೆ ಕಟ್ಟಿ ಹಿಂದಿರುಗಿ ಬಂದು ಹರಕೆ ಸಲ್ಲಿಸಿ ಹೋಗುತ್ತಾರೆಂದು ಅಂಥವರ ಬಗ್ಗೆ ಕತೆಗಳು ಪ್ರಚಲಿತವಿವೆ.

ಉದಾ : ಗಾಣಿಗರ ಹೆಂಗಸೊಬ್ಬಳು ಗಾಡಿಯಲ್ಲಿ ಅರಳು ಬೀಜಗಳನ್ನು ಹೇರಿಕೊಂಡು ಬಂದು ದೇವಾಲಯದ ತೋಪಿನಲ್ಲಿ ಎಣ್ಣೆಯನ್ನು ಮಾಡಿಸಿದಳು. ಹಿಂದಿರುಗುವಾಗ ಡಬ್ಬಗಳಿಗೆ ತುಂಬಿಕೊಂಡು ಹೊರಟಳು. ಮಾರ್ಗ ಮಧ್ಯದಲ್ಲಿ ಎಣ್ಣೆಡಬ್ಬಗಳಿಗೆ ಬೆಂಕಿ ಬಿತ್ತು. ತಕ್ಷಣವೇ ತಮ್ಮದು ತಪ್ಪಾಯಿತೆಂದು ಕಾಣಿಕೆ ಕಟ್ಟಿಕೊಂಡರು. ಬೆಂಕಿಯು ನಂದಿತು. ಹಿಂದಿರುಗಿ ಬಂದು ಎಣ್ಣೆಯನ್ನು ದೀಪಕ್ಕೆ ಸುರಿದು ಕಾಣಿಕೆ ಸಲ್ಲಿಸಿದರು. ಇಂಥ ಐತಿಹ್ಯಗಳು ಅಲ್ಲಿನ ನಿಯಮಗಳನ್ನು ಗಟ್ಟಿಗೊಳಿಸುವಂಥವಾಗಿರುತ್ತವೆ.

ಈ ದೇವರಿಗೆ ಬಿಸಿಲು, ಮಳೆ, ಗಾಳಿ, ಚಳಿಯಲ್ಲಿ ಉಳಿಯಬೇಕೆಂಬ ಆಸೆ, ದೇವಾಲಯವನ್ನು ಕಟ್ಟಬಾರದು, ಬ್ರಾಹ್ಮಣ ಅಥವ ಲಿಂಗಾಯಿತರ ಅರ್ಚಕರನ್ನು ನೇಮಿಸಬಾರದೆಂಬ ನಿಷೇಧಗಳಿವೆ. ಇಲ್ಲಿನ ಭಕ್ತಾದಿಗಳು ದೇವಾಲಯವನ್ನು ಕಟ್ಟಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ಅದು ಸೀಳಿ ಹೋಗಿದೆ ಎಂದು ಸೀಳಿದ ದೇವಾಲಯವನ್ನು ತೋರಿಸುತ್ತಾರೆ. ದೇವಾಲಯದ ಮುಂದೆ ಕಟ್ಟೆಯ ಮೇಲೆ ಸಣ್ಣ ಸಣ್ಣ ಬೆಣಚುಕಲ್ಲುಗಳನ್ನು ಇಟ್ಟು ಪೂಜೆ ಮಾಡುತ್ತಾರೆ.

**ದ್ಯಾವಪ್ಪತಾತನ ಆಚರಣೆ :** ಐತಿಹ್ಯದ ಪ್ರಕಾರ ಶಿಡ್ಲಘಟ್ಟ ತಾಲೂಕಿನ ಕೋಟೆಹಳ್ಳಿಯಲ್ಲಿ ದ್ಯಾವಪ್ಪ ತಾತನ ಸಮಾಧಿ ಹಾಗೂ ಸಮಾಧಿಯ ಸುತ್ತ ಗುಡಿಯನ್ನು ಕಟ್ಟಲಾಗಿದೆ. ಈತ ದನಕರುಗಳಿಗೆ ರೋಗ ಬಂದರೆ ಔಷಧಿಯನ್ನು ನೀಡುತ್ತಿದ್ದ. ಕೋಟೆಹಳ್ಳಿಯ ತನ್ನ ಮನೆಯಿಂದ ಹೊರ ಬಂದು ಶಿಡ್ಲಘಟ್ಟದ ಓಬಳಪ್ಪ ಎಂಬುವವರ ಮನೆಯಲ್ಲೆ ದನಕರುಗಳನ್ನು ಮೇಯಿಸಿಕೊಂಡಿದ್ದ. ತನ್ನ ವೈದ್ಯಕ್ಕಾಗಿ ಇಪ್ಪತ್ತೈದು ಪೈಸೆಗಳನ್ನು ಪಡೆಯುತ್ತಿದ್ದ. ಹೀಗೆ ಪಡೆದ ಹಣದಲ್ಲಿ ದನಕರುಗಳ ಕುಡಿಯುವ ನೀರಿಗೆಂದು ಕುಂಟೆಯನ್ನು ಕಟ್ಟಿಸಿದ (ದ್ಯಾವಪ್ಪನ ಕುಂಟೆ ಎಂದು ಕರೆಯುತ್ತಾರೆ.) ಈತನ ವೈದ್ಯ ಹಾಗೂ ಜನಸೇವೆಗಳು ಪ್ರಸಿದ್ಧಿಗೊಂಡು ಮೈಸೂರು ಅರಸರ ಕಿವಿ ಮುಟ್ಟಿದವು. ಚಾಮರಾಜ ಒಡೆಯರು ಹತ್ತು ಎಕರೆ ಜಮೀನನ್ನು ಬಹುಮಾನವಾಗಿ ನೀಡಿದ್ದರು. ೧೯೫೩ರಲ್ಲಿ ಇವರು ಮರಣಿಸಿದರು. ಜನ ಇವರ ಸಮಾಧಿಯನ್ನು ಕಟ್ಟಿದರು. ತಮ್ಮ ದನಕರುಗಳಿಗೆ ಕಾಯಿಲೆಯಾದಾಗ ಅಥವಾ ಸರಿಯಾಗಿ ಹಾಲು ಕರೆಯದಿದ್ದಾಗ ಸಮಾಧಿಗೆ ಹರಕೆಗಳನ್ನು ಕಟ್ಟುತ್ತಿದ್ದರು. ಭಕ್ತ ಸಮೂಹ ಹೆಚ್ಚಿದಂತೆಲ್ಲ ಸಮಾಧಿಯ ಸುತ್ತಲು ದೇವಸ್ಥಾನವನ್ನು ನಿರ್ಮಿಸಿದರು. ದನಕರುಗಳ ರೋಗ ರುಜಿನಗಳೊಂದಿಗೆ ತಮ್ಮ ಕಷ್ಟಸುಖಗಳಿಗೆ ಸಂಬಂಧಿಸಿದಂತೆ ಹರಕೆಗಳನ್ನು ಆಚರಣೆಗಳನ್ನು ನೆರವೇರಿಸುತ್ತಾ ಮುಂದುವರೆದರು. ಮಕ್ಕಳಿಲ್ಲದವರು ಸಂತಾನಭಾಗ್ಯಕ್ಕಾಗಿ ಹರಕೆಗಳನ್ನು ಕಟ್ಟುತ್ತಾರೆ. ಹರಕೆಗೆ ಅನುಗುಣವಾಗಿ ತಮ್ಮ ಮಕ್ಕಳಿಗೆ ದ್ಯಾವಪ್ಪ ದ್ಯಾವಮ್ಮ ಎಂದು ಹೆಸರುಗಳನ್ನಿಟ್ಟು ಕೃತಜ್ಞತೆಯನ್ನು ಸಲ್ಲಿಸುತ್ತಾರೆ. ಇವರ ಶಿಷ್ಯರಿಬ್ಬರು ಅಕ್ಕಮ್ಮ ಹಾಗೂ ಓಬಳಪ್ಪ ೧೯೮೭ರಲ್ಲಿ ಇದೇ ಸ್ಥಳದಲ್ಲಿ ಸಮಾಧಿಯಾಗಿದ್ದಾರೆ.

**ಗಂಗೆ(ನೀರು) ಸಂಬಂಧಿ ಆಚರಣೆಗಳು :** ಭೂಮಿ-ಆಕಾಶಗಳನ್ನು ಒಂದುಗೂಡಿಸುವ ಸಂಬಂಧ ಬೆಸೆಯುವ ಶಕ್ತಿ ನೀರಿಗೆ ಇದೆ. ಮಳೆಯ ರೂಪದಲ್ಲಿ ಆಕಾಶ ಮುಖೇನ ಭೂಮಿಗೆ ಇಳಿದಂತೆ, ಆವಿಯಾಗಿ ಮತ್ತೆ ಮೋಡ ಕಟ್ಟುವಿಕೆ ಒಂದು ಕ್ರಿಯೆಯಾಗುತ್ತದೆ. ಭೂಮಿಯ ಸಕಲ ಚೇತನಕ್ಕೆ ಅಗತ್ಯವಾದ ನೀರಿನ ರೂಪದಲ್ಲಿ ಭೂಮಿಯ ಮೇಲೆ ಹಲವು ನೆಲೆಗಳಲ್ಲಿ ಉಳಿಯುವುದು ಒಂದು ಗುಣವಾಗಿದೆ. ಅಂತೆಯೇ ಭೂಮಿಯ ಪದರಗಳ ಒಳಗೆ ಹಿಂಗುತ್ತಾ ಭೂಗರ್ಭದ ಪದರಗಳಲ್ಲಿ ಜಲನಿಧಿಯಾಗಿ ಹರಿಯುತ್ತದೆ. ಮನುಷ್ಯನ ಪ್ರಯತ್ನದ ಮೂಲಕ ಭೂಮಿಯ ಮೇಲಕ್ಕೆ ತರಲಾಗುತ್ತದೆ. ಹೀಗೆ ಆಕಾಶದಲ್ಲಿ ಮೋಡ ಕಟ್ಟಿದ ಹಾಗೂ ಭೂಮಿಯಲ್ಲಿ ಆಳದಲ್ಲಿ ಹಿಂಗಿದ ಭೂಮಿಯ ಮೇಲೆ ಹರಿಯುವ ನೀರಿನಿಂದ ಭೂವಲಯದ ಸಕಲ ಚೈತನ್ಯವೂ ಸಾಕಾರಗೊಳ್ಳುವುದರಿಂದ ನೀರಿಗೆ ದೈವದ ಸ್ಥಾನ ಲಭ್ಯವಿದೆ.

ಸುರಿವ ಮಳೆಯನ್ನು ಮಳೆರಾಯನೆಂದು ಕರೆಯುವಲ್ಲಿ ಪುರುಷಸೂಚಿ ಹಾಗೂ ಭೂಮಿಯನ್ನು ಆಳುವ ರಾಜನೆಂದು ಸಂಬೋಧಿಸುವುದು ನಂಬುವುದು ಕಂಡುಬರುತ್ತದೆ. ಇಲ್ಲಿ ಆಕಾಶ - ಭೂಮಿಯನ್ನು

ಗಂಡ-ಹೆಂಡಿರೆಂದು ಪರಿಭಾವಿಸಿರುವ ಅಂಶ ಒಂದೆಡೆಯಾದರೆ, ಭೂಮಿತಾಯಿಗೆ ಮಳೆರಾಯನ ಆಗಮನ ಸಂಭೋಗ ಕ್ರಿಯೆಯನ್ನು ಸಂಕೇತಿಸುತ್ತದೆ. ಮತ್ತೆ ಭೂಮಿಯನ್ನು ತಾಕಿದ ಮಳೆ ಹನಿಗಳು ಪಡೆಯುವ ಸ್ವರೂಪ ಬೇರೆಯಾಗುತ್ತದೆ ಅದೆಂದರೆ ಗಂಗೆಯ ರೂಪಾಂತರ. ಭೂಮಿಯ ಮಡಿಲಲ್ಲಿ ಹರಿಯುವ ಒಡಲಲ್ಲಿ ಅಡಗಿದ ನೀರೆಲ್ಲವೂ ಗಂಗೆಯಾಗಿ ಸ್ತ್ರೀ ಸ್ವರೂಪ ತಾಳುವ ಕಲ್ಪನೆ ಅದ್ಭುತವಾದದ್ದು. ಆದ್ದರಿಂದಲೇ ಸುರಿವ ಮಳೆಯ ಪ್ರಕ್ರಿಯೆಗೆ ಪುರುಷ ರೂಪ ನೀಡಿದ ನಂತರ ನೀರೆಲ್ಲವನ್ನು ಗಂಗೆಯೆಂದೇ ಗುರ್ತಿಸುತ್ತಾರೆ. ಭೂಮಿ-ಆಕಾಶಗಳ ಸೃಷ್ಟಿಗೂ ಮೊದಲು ಎಲ್ಲ ಕಡೆ ನೀರು ಮಾತ್ರ ಇದ್ದಿತೆಂಬುದು ನಂಬಿಕೆ. ಅಂತೆಯೇ ಜನಪದ ಪುರಾಣಗಳು ಸೃಷ್ಟಿಯ ಮೊದಲಲ್ಲಿ ಕೇವಲ ನೀರು ಮಾತ್ರ ಇತ್ತು ಎಂಬುದನ್ನು ಮತ್ತೆ ಮತ್ತೆ ಪುನರುಚ್ಚರಿಸಿದೆ. ಹೀಗೆ ನೋಡಿದಾಗ ನೀರು, ಭೂಮಿ ಮತ್ತು ಆಕಾಶಕ್ಕೂ ಪ್ರಾಚೀನವಾದುದು ಎಂಬುದು ಸ್ಪಷ್ಟವಾಗುತ್ತದೆ. ಜನಕಲ್ಪನೆಯಲ್ಲಿ ಭೂಮ್ಯಾಕಾಶಗಳನ್ನು ಆವರಿಸಿಕೊಂಡ ನೀರು ಮುಂದೆ ಕಡಲಾಗಿ ನದಿಯಾಗಿ ತೊರೆಯಾಗಿ ಕೆರೆಬಾವಿಗಳಾಗಿ ಪುನರ್ ಸೃಷ್ಟಿಯಾದರೆ, ಭಯಾನಕವಾದಾಗ ನೀರು ದೆವ್ವಗಳನ್ನು ಸೃಷ್ಟಿಸಿದೆ. ಈ ನಿಟ್ಟಿನಲ್ಲಿ ಆಕಾಶ ಮತ್ತು ಭೂಮಿಗಳು ಪರಸ್ಪರ ವಿರೋಧವಾದ ಎರಡು ಗುಣಗಳನ್ನು ಮೈಗೂಡಿಸಿಕೊಂಡಿವೆ ಎಂದು ಜನರು ಭಾವಿಸುತ್ತಾರೋ ಅದೇ ರೀತಿ ನೀರಿಗೂ ಕೂಡ ಪರಸ್ಪರ ವಿರೋಧವಾದ ಎರಡು ಗುಣಗಳನ್ನು ಜನಪದರು ಆರೋಪಿಸಿದ್ದಾರೆ.[೮]

ನೀರನ್ನು ಗಂಗೆ ಎಂದು ಪೂಜಿಸುವುದಲ್ಲದೆ, ನಡುರಾತ್ರಿ ನೀರಿನಲ್ಲಿ ಇಳಿಯಬಾರದೆಂದು ನಿಷೇಧವೂ ಇದೆ. ಏಕೆಂದರೆ ಅದು ಗಂಗೆಯು ಮೈ ಮರೆತು ಮಲಗಿ ನಿದ್ರಿಸುವ ಸಮಯವೆಂಬ ನಂಬಿಕೆ. ಆಗ ನೀರಿಗಿಳಿದವರು (ಧುಮುಕಿದವರು) ಮುಳುಗಿ ಸಾಯುತ್ತಾರೆಂದು ಹೇಳುತ್ತಾರೆ. ಈ ನಡುರಾತ್ರಿಯ ಸಮಯವನ್ನು ಹೊರತುಪಡಿಸಿ ಮತ್ತೆ ಯಾವಾಗಲಾದರೂ ಸರಿ ನೀರಿಗೆ ಹಾರಿದವರ ಜೀವವನ್ನು ಗಂಗೆಯು ಒಮ್ಮೆಗೇ ಸ್ವೀಕರಿಸುವುದಿಲ್ಲ. ಮೂರು ಸಲ ಮೇಲಕ್ಕೆ ತೇಲಿಸಿದ ನಂತರವೇ ತನ್ನಲ್ಲಿ ಮುಳುಗಿಸಿಕೊಳ್ಳುತ್ತದೆಯೆಂದು ಗುರುತಿಸುವುದನ್ನು ಪೂರಕವಾಗಿ ನೆನೆಯಬಹುದು.

ಆಚರಣೆ ಮತ್ತು ಸಂಪ್ರದಾಯಗಳ ಹಿನ್ನೆಲೆಯಲ್ಲಿ ನೀರು ಸಂಬಂಧಗಳನ್ನು ಕೂಡಿಸಲು, ಬೇರ್ಪಡಿಸಲು ಸಂಕೇತವಾಗುತ್ತದೆ. ಉದಾ: ಬಾಣಂತಿಯು ಗಂಗೆ ಪೂಜೆ ಮಾಡಿದಳೆಂದರೆ ಅದು ಮೈಲಿಗೆ ಕಳೆದು ಅವಳು ತನ್ನ ಮಗುವಿನೊಂದಿಗೆ ತನ್ನ ಕುಟುಂಬಕ್ಕೆ ಸೇರುವ ಸಂಕೇತವಾಗುತ್ತದೆ. ಹಾಗೆಯೇ ಸತ್ತವರ ಕರ್ಮಗಳನ್ನು ಮಾಡುವಾಗ ಬಿಡುವ ನೀರು ಸತ್ತವ್ಯಕ್ತಿ ಹಾಗೂ ಬದುಕಿದ ವ್ಯಕ್ತಿಗಳ ಸಂಬಂಧವನ್ನು ಕಡಿತಗೊಳಿಸುವುದಾಗಿರುತ್ತದೆ. ಮೈಲಿಗೆಯನ್ನು ಕಳೆದು ಮಡಿಯಾಗಲು ಕೂಡ ನೀರೇ ಬೇಕು. ಮದುವೆಯಲ್ಲಿ ಮದುಮಗ ಹಾಗೂ ಮದುಮಗಳ ಜೋಡಿಗಳ ಕೈಗೆ ಧಾರೆಯ ನೀರು ಬಿದ್ದಾಗಲೇ ಸಂಬಂಧ ಅಭೇದ್ಯವಾಗುತ್ತದೆ. ನದಿಯ ಎರಡು ದಂಡೆಗಳನ್ನು ನೀರು ಸೇರಿಸಿದ ಹಾಗೆ,

ಇಲ್ಲಿ ಗಂಡು ಹೆಣ್ಣುಗಳನ್ನು ನೀರು ಸೇರಿಸುತ್ತದೆ. ಹಾಗೆ ಬಿಂದುತ್ವವನ್ನು ವಿಭಜಿಸಲು ಕೂಡ ನೀರೇ ಬೇಕು. ಹರಿಯುವ ಹೊಳೆಯಲ್ಲಿ ನಿಂತ ಇಬ್ಬರು ತಮ್ಮ ಉಡುದಾರಗಳನ್ನು ತುಂಡು ಮಾಡಿಕೊಂಡರೆ ಎಲ್ಲ ಸಂಬಂಧಗಳು ಹರಿದು ಹೋಗುತ್ತವೆ. ಎಲ್ಲ ಆಚರಣೆಗಳಲ್ಲಿಯೂ ನೀರು ಆರಾಧನೆಗೆ ಒಳಪಡುತ್ತದೆ.[೨] ಮೈಲಿಗೆಯಿಂದ ಮಡಿಗೆ ಬರಬೇಕಾದರೆ ಸ್ನಾನದ ಕ್ರಿಯೆ ಆಗಲೇಬೇಕು. ಯಾವುದೇ ಆಚರಣೆ ಜಾತ್ರೆ ಉತ್ಸವಗಳನ್ನು ಗಮನಿಸಿದರೂ ಗಂಗೆ ಪೂಜೆಗೆ ಒಳಗಾಗದ ಸನ್ನಿವೇಶವಿರುವುದೇ ಇಲ್ಲ.

**ಮುದಗಾನಕುಂಟೆ ಗಂಗಮ್ಮನ ಆಚರಣೆ** (ಗೌರಿಬಿದನೂರು ತಾ) : ಪಂಚಭೂತಗಳ ಆರಾಧನೆಗಳು ಗಂಗೆಯ ಪೂಜೆ ಪ್ರಾಮುಖ್ಯತೆಯನ್ನು ಪಡೆದಿದೆ. ಜಗತ್ತಿನ ಎಲ್ಲ ಭಾಗಗಳಲ್ಲೂ ಒಂದಲ್ಲ ಒಂದು ಕ್ರಮದಲ್ಲಿ ಪ್ರಾಣಾಧಾರವಾದ ಗಂಗೆಯನ್ನು ನೀರಿನ ಆರಾಧನೆ ಮಾಡುತ್ತಾರೆ. ಮೇಘಗಳು ಸುಳಿದು ಮೋಡಗಳು ಕರಗಿ ನೆಲದ ಮೇಲೆ ಸುರಿಯುವ ನೀರಿನ ಹನಿಗಳನ್ನು ಮಳೆ ಎಂದು ಕರೆದು ಆರಾಧಿಸುವುದು ಒಂದು ಹಂತವಾದರೆ ಭೂಮಿಯಲ್ಲಿ ಹುದುಗಿರುವ (ಅಡಗಿರುವ) ನೀರನ್ನು ನೆಲದ ಮೇಲೆ ಹರಿಯುವ ನದಿಗಳ ನೀರನ್ನು ಕೆರೆಕಟ್ಟೆಗಳಲ್ಲಿ ಸಂಗ್ರಹಿತವಾದ ಜಲರಾಶಿಯನ್ನೂ ಗಂಗೆಯೆಂದು ಗೌರವಿಸಿ ಪೂಜಿಸಿ ಆಚರಿಸುತ್ತಾರೆ. ಗಂಗೆ ಪೂಜೆ ಕ್ರಿ.ಪೂ.೩೦೦೦ ವರ್ಷಗಳಿಂದ ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ಇದಕ್ಕೆ ಸಿಂಧೂ ಬಯಲಿನ ನಾಗರೀಕತೆ ಸಾಕ್ಷಿಭೂತ. ಈ ಆಚರಣೆ ಅನೇಕ ಚಕ್ರವರ್ತಿಗಳ, ಸಾಮಂತರ, ರಾಜಮಹಾರಾಜರ, ರಾಣಿಯರ ಪ್ರೋತ್ಸಾಹದಿಂದ ಹೆಮ್ಮರವಾಗಿ ಬೆಳೆಯಲು ಸಾಧ್ಯವಾಯಿತು. ಅಲ್ಲದೆ, ಜನಪದರ ಶುಭಕಾರ್ಯಗಳು ಆರಂಭವಾಗುವುದೇ ಗಂಗೆಯ ಪೂಜೆಯಿಂದ. ಶಿಷ್ಟ ಪರಂಪರೆಯ ಹೆಣ್ಣು ಮಕ್ಕಳಲ್ಲಿ ಗೌರಿಯ ವ್ರತಗಳು ಹೆಚ್ಚಾಗಿ ಕಂಡುಬಂದರೇ (ಸ್ವರ್ಣಗೌರಿ ವ್ರತ, ಮೌನಗೌರಿ ವ್ರತ, ವಿವಾಹ ಸಂದರ್ಭದ ಗೌರಿವ್ರತ ಹೀಗೆ) ಜನಪದ ಪರಂಪರೆಯಲ್ಲಿ ಹೆಣ್ಣಿನ ಬದುಕಿನ ಪ್ರತಿ ಪರಿವರ್ತನಾತ್ಮಕ ಘಟನೆಯ ಆಚರಣೆಯೂ ಗಂಗೆಯ ಪೂಜೆಯೊಂದಿಗೆ ಆರಂಭವಾಗುತ್ತದೆ. (ಋತುಮತಿ, ವಿವಾಹ, ಗರ್ಭಿಣಿ, ಬಾಣಂತಿ) ಹೀಗೆ. ಕೋಲಾರ ಜಿಲ್ಲೆಯಲ್ಲಿ ಕೆರೆಕಟ್ಟೆಗಳು ಹೆಚ್ಚು. ಮಳೆಗಾಲದಲ್ಲಿ ಹರಿದು ಬೇಸಿಗೆಗೆ ಬತ್ತುವ ನದಿಗಳೂ ಇವೆ. ಜೀವನದಿಗಳಿಲ್ಲ ಬಾವಿಗಳು ಇವೆಯಾದರೂ ಅಂತರಜಲದ ಮಟ್ಟ ಬಹಳ ಆಳವಾಗಿ ಇಳಿದಿರುವುದರಿಂದ ಇಂದು ಬಾವಿಗಳಲ್ಲಿ ನೀರಿಲ್ಲ. ಕೆಲವೆಡೆಗಳಲ್ಲಿ ಇದ್ದರೂ ಬೇಸಿಗೆ ಸಮೀಪಿಸುತ್ತಿದ್ದಂತೆ ಬಾವಿಗಳಲ್ಲಿ ನೀರು ಹಿಂಗಿ ಹೋಗುತ್ತದೆ. ಕುಡಿಯುವ ನೀರು ಮತ್ತು ಕೃಷಿಯ ಅವಶ್ಯಕತೆಗಾಗಿ ಜಿಲ್ಲಾಯಾದ್ಯಂತ ರಿಗ್‌ಬೋರ್‌ಗಳು ಜಲದ ನೆಲೆಯಾಗಿವೆ. ಈ ಎಲ್ಲ ಜಲಮೂಲಗಳು ಆರಾಧನೆಗಳಿಗೆ ಒಳಗಾಗುತ್ತಿವೆ. ನದಿಗಂಗಮ್ಮ, ಕೆರೆಗಂಗಮ್ಮ ಬಾವಿಗಂಗಮ್ಮ ಇತ್ತೀಚೆಗೆ ಬೋರ್‌ವೆಲ್‌ಗಂಗಮ್ಮಗಳೆಂಬ ಹೆಸರುಗಳಿಂದ ಕರೆಯುತ್ತಾರೆ.

ಮುತ್ತೈದೆಯರು ಹರಿಯುವ ನದಿಗೆ ಬಾಗೀನಗಳನ್ನು ಬಿಟ್ಟು ಪೂಜಿಸುವ ಕ್ರಮವೊಂದಿದ್ದರೆ ಮತ್ತೊಂದು ಕ್ರಮ (ನದಿ ಹರಿಯುತ್ತಿರಲಿ ಬತ್ತಿರಲಿ) ನದಿಯ ಮರಳಿನಲ್ಲಿ ಏಳು ಸಣ್ಣ ಬೆಣಚುಗಳನ್ನಿಟ್ಟು ಅರಿಶಿನ, ಕುಂಕುಮ, ಊದುಬತ್ತಿ, ಅಕ್ಷತೆ, ಬಳೆ, ಅರಿಶಿನದ ದಾರಗಳನ್ನು ಬಳಸಿಕೊಂಡು ಪೂಜಿಸುತ್ತಾರೆ. ಬೆಲ್ಲ ಮಿಶ್ರಿತ ನೆನೆಸಿದಅಕ್ಕಿ ಹಾಗೂ ಅಕ್ಕಿಹಿಟ್ಟು ಬೆಲ್ಲಗಳನ್ನು ಕಲಸಿ ಮಾಡಿದ ತಂಬಿಟ್ಟು ಹಸಿ ಅಕ್ಕಿ, ಹಸಿ ತಂಬಿಟ್ಟು ಇತ್ಯಾದಿಗಳ ನೈವೇದ್ಯ ಹಾಕುತ್ತಾರೆ. ತೆಂಗಿನಕಾಯಿ ಒಡೆದು ತಾಂಬೂಲದೊಂದಿಗೆ ಅಲ್ಲಿಯೇ ಬಿಡುತ್ತಾರೆ. ಹೊಸ ಮೊರದಲ್ಲಿ ಹೊಸ ಸೀರೆ ಹಾಗೂ ರವಿಕೆಯ ಕಣಗಳನ್ನು ಇಟ್ಟು ಪೂಜೆಯ ಮುಂದೆ ಇಟ್ಟು ನಂತರ ತೆಗೆದು ಅಲ್ಲೇ ಉಟ್ಟುಕೊಳ್ಳುತ್ತಾರೆ, ಇದೇ ಪೂಜೆಯ ಕ್ರಮ ಕೆರೆಗಂಗಮ್ಮ ಹಾಗೂ ಬೋರ್‌ಗಂಗಮ್ಮಗಳ ಆಚರಣೆಯಲ್ಲೂ ಕಂಡುಬರುತ್ತದೆ. ಸಂಬಂಧಿಸಿದ ಮೂಲದಿಂದ ಅಂದು ಮನೆಗೆ ನೀರನ್ನು ಕೊಂಡೊಯ್ದು ಸಿಹಿಅಡಿಗೆ (ಪಾಯಸ) ಮಾಡಿ ಊಟ ಮಾಡುತ್ತಾರೆ. ಈ ಆಚರಣೆಯನ್ನು ಸೋಮವಾರಗಳಂದು ಬೆಳಗಿನ ಸಮಯದಲ್ಲಿ ನೆರವೇರಿಸುತ್ತಾರೆ.

ಪ್ರಸ್ತುತ ಆಚರಣೆ ಪ್ರತಿ ಸೋಮವಾರಗಳಂದು ನಡೆಯುತ್ತದೆ. ದೈಹಿಕ ಹಾಗೂ ಮಾನಸಿಕ ಸಮಸ್ಯೆಗಳಿಗೆ ಒಳಗಾದ ಗಂಡು-ಹೆಣ್ಣುಗಳು ವಯಸ್ಸಿನ ಮಿತಿ ಇರದೆ ಗಂಗಮ್ಮನ ಪೂಜೆಯನ್ನು ಮಾಡುತ್ತಾರೆ. ಪೂಜಾಕ್ರಮವು ಮೇಲೆ ಹೇಳಿದಂತೆಯೇ ಆದರೂ ಆಚರಣೆಯಿಂದ ಬಯಸುವ ಪ್ರತಿಫಲ ಭಿನ್ನವಾಗಿದೆ. ಇದನ್ನು ಗಂಗಮ್ಮನನ್ನು ಮಾಡುವುದು ಎನ್ನುತ್ತಾರೆ. ಸಾಮಾನ್ಯವಾಗಿ ಹೆಣ್ಣುಮಕ್ಕಳು ಪ್ರಾಪ್ತವಯಸ್ಸಿಗೆ ಅನುಗುಣವಾಗಿ ಮೈನೆರೆದಿದ್ದಾಗ ಗಂಗಮ್ಮನ ಪೂಜೆಯನ್ನು ಮಾಡಿಸುತ್ತಾರೆ. ಮುಟ್ಟಿನ ತೊಂದರೆಗಳು, ಬಿಳಿಸೆರಗಿನ ಕಾಯಿಲೆ, ಮಂದಬುದ್ಧಿ, ವಾಸಿಯಾಗದ ಕಾಯಿಲೆಗಳು ಇಂಥ ಕಾರಣಗಳಿಂದ ವಿಮುಕ್ತಿಯನ್ನು ಬಯಸಿ ಪೂಜಿಸುವುದುಂಟು. ಸಂತಾನಾಪೇಕ್ಷೆಯಿಂದಲೂ ಹರಕೆ ಹೊರುತ್ತಾರೆ. ಜನಿಸಿದ ಮಕ್ಕಳಿಗೆ ಗಂಗಮ್ಮ, ಗಂಗಪ್ಪ, ಗಂಗಾಧರ, ಗಂಗಾದೇವಿ, ಮುದ್ದಗಂಗಮ್ಮ, ಮುದ್ದಗಂಗಪ್ಪ ಎಂಬ ಹೆಸರುಗಳನ್ನಿಡುತ್ತಾರೆ. ಬಾಣಂತನದ ಮೈಲಿಗೆಯನ್ನು ಕಳೆದುಕೊಳ್ಳಲು ಮೂರು ತಿಂಗಳಲ್ಲಿ ಗಂಗಮ್ಮನನ್ನು ಮಾಡುತ್ತಾರೆ. ಚಿಕ್ಕಮಕ್ಕಳಿಗೆ ಹುಟ್ಟುಕೂದಲು ತೆಗೆಸುತ್ತಾರೆ. ಗಂಡಸರು ನಿಶ್ಶಕ್ತಿಯ ಪರಿಹಾರ ಹಾಗೂ ಪುರುಷತ್ವದ ಉದ್ಧಾರಕ್ಕಾಗಿ ಗಂಗಮ್ಮನನ್ನು ಪೂಜಿಸುತ್ತಾರೆ.

**ಆಚರಣೆಯ ವಿಧಾನ** : ಮುದುಗಾನಕುಂಟೆಯ ನೀರಿನಲ್ಲಿ ಹರಕೆ ಹೊತ್ತ ಭಕ್ತಾದಿಗಳು ಮುಳುಗು ಜಳಕ ಮಾಡಿ ಮಡಿ ಬಟ್ಟೆಯಲ್ಲಿ ಪೂಜೆಗೆ ಅನುವು ಮಾಡಿಕೊಳ್ಳುತ್ತಾರೆ. ಹೂವು, ಹಣ್ಣು, ಕಾಯಿ, ಕಡ್ಡಿ, ಕರ್ಪೂರ, ಅರಿಶಿನ, ಕುಂಕುಮ, ಅಕ್ಷತೆ, ಬಳೆ ಮೊದಲಾದ ಪೂಜಾ ಪರಿಕರಗಳಿಂದ ಅರ್ಚಿಸುತ್ತಾರೆ. ಹಸಿತಂಬಿಟ್ಟು, ಹಸಿಅಕ್ಕಿ (ನೆನಸಿದ ಅಕ್ಕಿ)ಯ ಪ್ರಸಾದವನ್ನು ನೈವೇದ್ಯ ಮಾಡುತ್ತಾರೆ. ಏಳುಜನ ಅಕ್ಕಂದಿರನ್ನು (ಏಳು ಚಿಕ್ಕ ಬೆಣಚುಕಲ್ಲುಗಳು) ಪೂಜಿಸಿ ಸೀರೆ ಕುಪ್ಪಸದ ಕಣವನ್ನು ಸ್ವಲ್ಪ

ಸಮಯದವರೆಗೆ ಮುಂದೆ ಇಟ್ಟು ನಂತರ ಆ ಹೊಸ ಸೀರೆಯನ್ನು ಉಟ್ಟುಕೊಂಡು ತಮ್ಮ ಊರಿಗೆ ಹಿಂದಿರುಗುತ್ತಾರೆ. ಕೆಲವರು ಅಲ್ಲಿಯೆ ಅಡಿಗೆ ಮಾಡಿ ಊಟ ಮಾಡಿದ ನಂತರ ಮರಳುತ್ತಾರೆ. ಗಂಡಸರಾದರೆ ಗಂಗಮ್ಮನ ಮುಂದೆ ಪಂಚೆಯನ್ನು ಇಟ್ಟು ಪೂಜಿಸುತ್ತಾರೆ. ಪೂಜೆಯ ಸಮಯದಲ್ಲಿ ದಾಸಯ್ಯನಿಂದ ಜಾಗಟೆ ಹೊಡಿಸಿ, ಹಣೆಗೆ ನಾಮ ಹಾಕಿಸಿಕೊಳ್ಳುವ ನಿಯಮವಿದೆ.

ಮುದುಗಾನಕುಂಟೆಯಲ್ಲಿ ಎಷ್ಟೇ ಮಳೆ ಬಂದರೂ ನೀರು ನಿಲ್ಲುವುದಿಲ್ಲ. ಉಳಿದ ಅಲ್ಪಸ್ವಲ್ಪ ನೀರನ್ನು ಕೃಷಿಗಾಗಿ ಬಳಸುವಂತಿಲ್ಲ. ಭಕ್ತಾದಿಗಳ ಸ್ನಾನಾದಿಗಳಿಗೆ ಮಾತ್ರ ಉಪಯೋಗಿಸಿಕೊಳ್ಳಬೇಕು. ಈ ಪ್ರದೇಶದಲ್ಲಿ ಊಟದ ಎಲೆ (ಮುತ್ತುಗದ ಎಲೆ) ಹಾಗೂ ಉರುವಲು ಸೌದೆ, ಹೇರಳವಾಗಿ ದೊರೆಯುತ್ತದೆ. ಗಂಗಮ್ಮನನ್ನು ಮಾಡುವವರು, ಮಕ್ಕಳಿಗೆ ಹುಟ್ಟುಕೂದಲು ತೆಗೆಸುವವರು, ಬಹಳಷ್ಟು ಮಂದಿ ಸ್ಥಳದಲ್ಲೇ ಅಡಿಗೆ ಮಾಡಿ ಬಂದ ಪರಿವಾರವೆಲ್ಲ ಅಲ್ಲೆ ಊಟ ಮಾಡುತ್ತಾರೆ. ಉಳಿದ ಅಡಿಗೆಯನ್ನು ಅಲ್ಲಿಯೇ ಯಾರಿಗಾದರೂ ಊಟ ನೀಡಬೇಕೇ ಹೊರತು ಹಿಂದಿರುಗಿಸಿ ತಮ್ಮ ಊರುಗಳಿಗೆ ಕೊಂಡೊಯ್ಯಬಾರದು ಎಂಬ ನಿಷೇಧವಿದೆ. ಜೊತೆಗೆ ಉರುವಲು ಸೌದೆ, ಹಾಗೂ ಊಟದ ಎಲೆಗಳನ್ನು ತಮ್ಮ ಊರುಗಳಿಗೆ ತೆಗೆದುಕೊಂಡು ಹೋಗಬಾರದು. ಈ ನಿಯಮವನ್ನು ಮೀರಿದರೆ ವಾಂತಿ ಭೇದಿಗಳಾಗುತ್ತದೆಂಬ ನಂಬಿಕೆ ಇದೆ.

ಮುದುಗಾನಕುಂಟೆಯಲ್ಲಿ ಗಂಗಮ್ಮನ ದೇವಾಲಯವಿಲ್ಲ. ಭಕ್ತಾಧಿಗಳು ವಿಶಾಲವಾದ ಪ್ರಕೃತಿಯಲ್ಲಿ ಏಳು ಬೆಣಚು ಕಲ್ಲುಗಳನ್ನು ಇಟ್ಟು ಅಕ್ಕಮ್ಮಗಳೆಂದು ಅವರೇ ಮೂಲಗಂಗಮ್ಮನೆಂದೂ ಆರಾಧಿಸುತ್ತಾರೆ. ಈ ಗಂಗಮ್ಮನಿಗೆ ಒಬ್ಬ ಅಣ್ಣನಿದ್ದಾನೆ. ಆತ ಕರೆತಿಮ್ಮಪ್ಪ. ಈ ದೈವಕ್ಕೆ ಮಾತ್ರ ಒಂದು ಸಣ್ಣಗುಡಿ ಇದೆ. ಗಂಗೆಯ ಪೂಜೆಯಾದ ನಂತರ ಭಕ್ತಾಧಿಗಳು ಕರೆತಿಮ್ಮಪ್ಪನಿಗೆ ಹಣ್ಣುಕಾಯಿ ಮಾಡಿಸುವ ಶಾಸ್ತ್ರವಿದೆ. ಈ ಗುಡಿಯಲ್ಲಿ ಅರ್ಚಕರಿದ್ದು ಪೂಜಾಕಾರ್ಯಗಳನ್ನು ಮಾಡುತ್ತಾರೆ. ಆದರೆ ಗಂಗಮ್ಮನ ಆಚರಣೆಗೆ ಪೂಜಾರಿಗಳಿಲ್ಲ. ಸ್ವತಃ ಭಕ್ತರೇ ಪೂಜಿಸಿಕೊಳ್ಳುತ್ತಾರೆ. ಈ ಗಂಗಮ್ಮನಿಗಾಗಲಿ ಈಕೆಯ ಅಣ್ಣ ಕರೆತಿಮ್ಮಪ್ಪನಿಗಾಗಲಿ ಜಾತ್ರೆ ಇಲ್ಲ. ಇಲ್ಲಿಗೆ ಬರುವ ಭಕ್ತರು ಪ್ರಧಾನವಾಗಿ ಗಂಗಮ್ಮನ ಭಕ್ತರು. ಅವರು ಹರಕೆ ಹೊತ್ತು ಮೀಸಲು ಕಟ್ಟಿ ಪೂಜಿಸುವುದು ಗಂಗಮ್ಮನನ್ನು ಅಲ್ಲಿಯೇ ಇರುವ ಕರೆತಿಮ್ಮಪ್ಪನಿಗೆ ಪೂಜೆ ಮಾಡಿಸುತ್ತಾರೆಯೇ ಹೊರತು ಹರಕೆ ಮೀಸಲುಗಳಿಲ್ಲ. ತಮ್ಮ ಮಕ್ಕಳಿಗೆ ಗಂಗಮ್ಮ, ಗಂಗಪ್ಪ, ಗಂಗಾಧರ, ಗಂಗಾಧರಿ (ಹೆಣ್ಣು ಮಗುವಿಗೆ) ಮುದ್ದುಗಂಗಮ್ಮ, ಮುದ್ದುಗಂಗಪ್ಪ ಹೀಗೆ ಹೆಸರುಗಳನ್ನಿಡುವವರೇ ಹೆಚ್ಚು. ಕರೆತಮ್ಮಪ್ಪ / ತಿಮ್ಮಕ್ಕನೆಂಬ ಹೆಸರುಗಳು ತೀರ ಅಪರೂಪ. ಅಂತೆಯೇ ಮುದುಗಾನಕುಂಟೆಗೂ-ಗಂಗಮ್ಮನಿಗೂ-ಕರೆತಿಮ್ಮಪ್ಪನಿಗೂ ಸಂಬಂಧಿಸಿದಂತೆ ಐತಿಹ್ಯಗಳಿವೆ.

ದಾರಿನಾಯಕನ ಪಾಳ್ಯದ ಪಾಳೆಯಗಾರನು ಕೆರೆಯನ್ನು ಕಟ್ಟಿಸಿದ. ಆದರೆ ಕೆರೆಯಕಟ್ಟೆ ನಿಲ್ಲುತ್ತಿರಲಿಲ್ಲ. ಕುರುಬರ ಮುದ್ದಗಾನಿಗೆ ಗಂಗೆ ಕನಸಿನಲ್ಲಿ ಕಾಣಿಸಿಕೊಂಡು ಕುರಿಯ ಮಾಸನ್ನು ಹಾಕಿದರೆ ಕಟ್ಟೆ ನಿಲ್ಲುವುದಾಗಿ ಸೂಚಿಸಿದಳು. ಅದರಂತೆ ಕುರಿಗಳ ಮಾಸನ್ನು (ಕಸವನ್ನು) ಕಟ್ಟೆಗೆ ಹಾಕಿ ಕಟ್ಟಿದಾಗ ಅದು ಭದ್ರವಾಯಿತೆಂದು ಐತಿಹ್ಯವಿದೆ. ಮತ್ತೊಂದು ಐತಿಹ್ಯದ ಪ್ರಕಾರ, ದಾರಿನಾಯಕ ಪಾಳ್ಯದ ಪಾಳೆಯಗಾರನು ಕಾಶಿಯಿಂದ ತೀರ್ಥವನ್ನು ತಂದು ಮುದುಗಾನಕುಂಟೆಯಲ್ಲಿ ಗಂಗೆಯನ್ನು ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ.

ಇನ್ನೊಂದು ಐತಿಹ್ಯದಲ್ಲಿ ಯಾವುದೋ ಕಾರಣಕ್ಕೆ ಗಂಗೆಯ ಕುಟುಂಬ ಮನುಷ್ಯರಾಗಿ ಬದುಕುತ್ತಿದ್ದರು. ಸುಂದರ ಯುವತಿ ಗಂಗೆಯ ಮೇಲೆ ದುಷ್ಟ ಶ್ರೀಮಂತ ಫರಂಗಿಯವನ ಕಣ್ಣು ಬಿತ್ತು. ಮದುವೆಯಾಗುವಂತೆ ಪೀಡಿಸತೊಡಗಿದ ಅವನ ಉಪಟಳವನ್ನು ತಾಳಲಾರದೆ ಗಂಗೆಯ ಬಳಗ ಅವಳನ್ನು ಕರೆದುಕೊಂಡು ದೇಶಾಂತರ ಹೊರಟರು. ಏಳು ಬಂಡಿಗಳನ್ನು ಕಟ್ಟಿಕೊಂಡು ಹೊರಡುತ್ತಿರುವ ವಿಷಯ ದುಷ್ಟನಿಗೆ ತಿಳಿಯಿತು. ಅವನೂ ಪರಿವಾರ ಸಮೇತ ಬೆನ್ನುಹತ್ತಿದ. ಗಂಗೆಯ ಸಂಬಂಧಿ ದೇವಗಣ ಗೌರೀಬಿದನೂರಿನ ಉತ್ತರ ಪಿನಾಕಿನಿ ನದಿಯನ್ನು ದಾಟಿದರು. (ಇವರಿಗೆ ನದಿಯೇ ದಾರಿ ಮಾಡಿಕೊಟ್ಟಿತು.) ದುಷ್ಟಪರಿವಾರ ನದಿಯನ್ನು ದಾಟಲು ದಡಕ್ಕೆ ಹೆಜ್ಜೆ ಇಡುವಷ್ಟರಲ್ಲಿ ಉತ್ತರ ಪಿನಾಕಿನಿ ನದಿಯು ತುಂಬಿ ಹರಿಲಾರಂಭಿಸಿತು. ದಾಟಲಾರದೆ ಹಿಂದಿರುಗಿದರು. ಪರಂಗಿಯವರ ಪರಿವಾರ ಗೌರೀಬಿದನೂರು ದಾಟಿದ ನಂತರ ದೇವತೆಗಳು ಹತ್ತಿದ್ದ ಒಂದೊಂದು ಬಂಡಿಯ ಚಕ್ರವೂ (ಗಾಲಿಯೂ) ಮುರಿಯತೊಡಗಿದವು. ಯಾವ ಯಾವ ಜಾಗದಲ್ಲಿ ಗಾಲಿ ಮುರಿಯುತ್ತದೆಯೋ ಅಲ್ಲಲ್ಲಿಯೇ ಸಂಬಂಧಿಸಿದ ಗಾಡಿಯಲ್ಲಿ ಕುಳಿತಿದ್ದ ದೇವತೆಗಳು ನೆಲೆಸಲಾರಂಭಿಸಿದರು. ಮುದುಗಾನಕುಂಟೆಗೆ ಬರುವಾಗ ಗಂಗೆಯ ಗಾಡಿಯ ಚಕ್ರ (ಗಾಲಿ) ಮುರಿಯಿತು. ಅವಳು ಅಲ್ಲಿಯೇ ಉಳಿದಳು. ಸ್ವಲ್ಪ ಹೆಜ್ಜೆಗಳಷ್ಟು ದೂರದಲ್ಲಿ ಅವಳ ಅಣ್ಣ ಕರೆತಿಮ್ಮಪ್ಪನ ಗಾಡಿಯ ಗಾಲಿಯು ಉರುಳಿದ್ದರಿಂದ ಆತನೂ ಅಲ್ಲಿಯೇ ನೆಲೆಸಿದ. ಇಲ್ಲಿ ಶಾಂತರೂಪದಲ್ಲಿ ನೆಲೆಸಿದ್ದರಿಂದ ಗಂಗೆ ಪ್ರಾಣಿ ಬಲಿಯನ್ನು ಅಪೇಕ್ಷಿಸುವುದಿಲ್ಲ. ಇದೇ ಗಂಗೆಯು ಮದನಪಲ್ಲಿ ಸಮೀಪದ ಬೋಯಕೊಂಡ ಬೆಟ್ಟದಲ್ಲಿ ಉಗ್ರರೂಪದಲ್ಲಿರುವುದರಿಂದ ಪ್ರಾಣಿಬಲಿ ನೀಡುತ್ತಾರೆ.

ಬ್ರಿಟಿಷರ ಕಾಲದಲ್ಲಿ ಸೈನಿಕರು ಕೆರೆಯ ಬಯಲಿನಲ್ಲಿ ಡೇರೆಗಳನ್ನು ಹಾಕಿಕೊಂಡಿದ್ದರು. ಸಂಜೆಯ ಸಮಯದಲ್ಲಿ ಅವರು ಪಕ್ಕದ ಊರಾದ ಗಂಗಸಂದ್ರದ ಚರ್ಚ್‌ಗೆ ಪ್ರಾರ್ಥನೆಗೆಂದು ಹೋಗುತ್ತಿದ್ದರು. ಆಗ ಅವರು ಹಿಂತಿರುಗಿ ಬರುವಲ್ಲಿ ಅವರ ಎಲ್ಲ ಡೇರೆಗಳೂ ಮುಗುಚಿಕೊಂಡು ಗಾಳಿಗೆ ಹಾರಿ ಚರ್ಚಿನ ಮೇಲೆ ಬಿದ್ದಿರುತ್ತಿದ್ದವು. ಇದನ್ನು ಪರಿಹರಿಸಲೆಂದು ಬ್ರಿಟೀಷ ಸೇನಾಧಿಕಾರಿ ಇಂಗ್ಲೆಂಡ್‌ನಿಂದ ದೋಣಿಯಲ್ಲಿ ಬರುತ್ತಿದ್ದ. ಸಮುದ್ರ ಮಧ್ಯದ ಪ್ರಯಾಣದಲ್ಲಿ ಅವನಿಗೆ ಪಟ್ಟಂತ ಕೆನ್ನೆಗೆ ಹೊಡೆದಂತಾಯಿತು.

ನೋಡುತ್ತಾನೆ. ಸಮುದ್ರದಲ್ಲಿ ಬೆಂಕಿ ಬಿದ್ದಿದೆ. ಇದೆಲ್ಲ ಗಂಗೆಯ ಮಹಿಮೆಯೆಂದು ತಿಳಿದ ಅವನು ತನ್ನ ತಪ್ಪನ್ನರಿತು ಹಿಂದಿರುವುದಾಗಿ ಹರಕೆಹೊತ್ತ ಬೆಂಕಿ ಮಾಯಾವಾಯಿತು. ಆತ ತಕ್ಷಣವೇ ಎದುರಿಗೇ ಬರುತ್ತಿದ್ದ ದೋಣಿಗೆ ಹಾರಿ ತನ್ನ ದೇಶಕ್ಕೆ ಹಿಂದಿರುಗಿದನಲ್ಲದೆ ಆ ಸೀಮೆಯಲ್ಲಿದ್ದ ತನ್ನೆಲ್ಲ ಸೈನಿಕರನ್ನು ಹಿಂದಕ್ಕೆ ಕರೆಸಿಕೊಂಡ. ತಪ್ಪು ಹರಕೆಯನ್ನು ಸಲ್ಲಿಸಿದ ಆಗ ತಪ್ಪು ಕಾಣಿಕೆಯಾಗಿ ಹಾಕಿರುವ ಬ್ರಿಟೀಷರ ನಾಣ್ಯಗಳು ಕಲ್ಯಾಣಬಾವಿಯಲ್ಲಿ ಆಗಾಗ ಸಿಗುತ್ತಿರುತ್ತವೆಂದು ಐತಿಹ್ಯವಿದೆ. ಮುದುಗಾನಕುಂಟೆಯಲ್ಲಿ ನೆಲೆಸಿದ ಗಂಗೆಯು ತನಗೆ ಬಯಲು ಬೇಕು. ವಿಗ್ರಹ ದೇವಾಲಯ ಜಾತ್ರೆ ರಥೋತ್ಸವ ಇತ್ಯಾದಿ ಮಾಡಬಾರದೆಂದು ನಿರ್ಧರಿಸಿದ್ದಾಳೆ. ಇದನ್ನು ಮೀರಿ ಮಾಡುವುದಾದರೆ ಅಂಥವರಿಗೆ ಬರಬಾರದ ತೊಂದರೆಗಳು ಬರುತ್ತವೆ. ದೇವಾಲಯದ ಕಟ್ಟಡ ನಿಲ್ಲುವುದಿಲ್ಲ. ವಿಗ್ರಹಗಳು ಉಳಿಯುವುದಿಲ್ಲ. ಭಕ್ತಾಧಿಗಳು ಸಣ್ಣ ೫ ಕಲ್ಲುಗಳನ್ನು ನಿಲ್ಲಿಸಿ ತಮಗೆ ಇಷ್ಟವಾದ ರೀತಿಯಲ್ಲಿ ಪೂಜೆ ಮಾಡುತ್ತಾರೆ. ಯಾವುದೇ ಜಾತಿಯ ಅರ್ಚಕರು ಇಲ್ಲಿ ಇಲ್ಲ. ಸ್ವಲ್ಪವೇ ದೂರದಲ್ಲಿರುವ ಆದಿತಿಮ್ಮಪ್ಪನ ದೇವಾಲಯಕ್ಕೆ ಬ್ರಾಹ್ಮಣ ಅರ್ಚಕರು ಇದ್ದಾರೆ.

ಆಚರಣೆಯ ದಿನವಾದ ಸೋಮವಾರದ ಹಗಲಿನ ಅವಧಿಯನ್ನು ಹೊರತುಪಡಿಸಿ ಉಳಿದಂತೆ ಯಾರೂ ಅಲ್ಲಿಗೆ ಸುಳಿಯಬಾರದೆಂಬ ನಿಷೇಧವಿದೆ. ಏಕೆಂದರೆ ಸುತ್ತಮುತ್ತಲಿನ ದೇವತೆಗಳೆಲ್ಲ ಸೇರಿ ಅವರದೇ ಆದ ಕಾರ್ಯಕ್ರಮಗಳನ್ನು ಬೇರೆ ದಿನಗಳಲ್ಲಿ ನಡೆಸುತ್ತಿರುತ್ತಾರೆ. ಅದನ್ನು ನೋಡಿದ ಮನುಷ್ಯರು ರಕ್ತಕಾರಿ ಸಾಯುತ್ತಾರೆಂದು ನಂಬಿಕೆಯಿದೆ. ಒಮ್ಮೆ ಸೋಮವಾರ ಜಾತ್ರೆ ಮುಗಿದ ನಂತರ ಬಳೆಗಾರನು ರಾತ್ರಿ ಅಲ್ಲಿಯೇ ಉಳಿದ ಅರ್ಧರಾತ್ರಿ ಹನ್ನೆರಡು ಗಂಟೆಯ ವೇಳೆಗೆ ದೇವತೆಗಳ ಆಟಪಾಠಗಳನ್ನು ನೋಡಲಾರದೆ ಎದೆಯೊಡೆದು ರಕ್ತಕಾರಿ ಸತ್ತನೆಂದು ಐತಿಹ್ಯವಿದೆ. ಕರಿತಿಮ್ಮಪ್ಪ ಮತ್ತು ಮುದ್ದುಗಂಗಮ್ಮ ಎಂಬ ಅಣ್ಣತಂಗಿಯರು ಬೇಸಿಗೆಯ ಕಾಲದಲ್ಲಿ ಯಾತ್ರೆ ಹೊರಟಿದ್ದರು. ದಾರಿಯಲ್ಲಿ ಬಾಯಾರಿಕೆಯಾಯಿತು. ಬರಿ ಮಣ್ಣಿನ ಹೆಂಟೆಗಳಿದ್ದ ಜಾಗದಲ್ಲಿ ಚಿಲುಮೆ ತೋಡಿದರು. ನೀರು ದೊರೆಯಿತು. ಅದೇ ಮುದುಗಾನಕುಂಟೆ ಎಂದು ಕೆಲವರು ಹೇಳುತ್ತಾರೆ.

**ಕರಗ :** ಕರಗದ ಆಚರಣೆಗೆ ಸಂಬಂಧಿಸಿದಂತೆ ಗುರುತಿಸುವ ಪ್ರಧಾನ ದೇವಾಲಯಗಳನ್ನು ಧರ್ಮರಾಯನ ಗುಡಿಗಳೆಂದು ಕರೆಯುತ್ತಾರೆ. ಇಂಥ ದೇವಾಲಯಗಳ ಮೂಲವಿಗ್ರಹ ಸಾಮಾನ್ಯವಾಗಿ ಸ್ತ್ರೀ ದೇವತೆಯದ್ದಾಗಿರುತ್ತದೆ. ಉಳಿದಂತೆ ಪಂಚಪಾಂಡವರು ಹಾಗೂ ದ್ರೌಪದಿಯ ವಿಗ್ರಹಗಳು ಲೋಹದವಾಗಿರುತ್ತವೆ. ಕರಗ ಆಚರಣೆಗೆ ಪೂರಕವಾಗಿ ದ್ರೌಪದಿ-ಧರ್ಮರಾಯನ ಸಂಬಂಧದ ಕಥೆ, ಐತಿಹ್ಯಗಳು ಪ್ರಚಲಿತವಿದ್ದರೂ ಕರಗವು ಗ್ರಾಮದೇವತೆಯ ಆಚರಣೆಯ ಆರಾಧನೆಯ ಸ್ವರೂಪದಲ್ಲಿ ಇರುತ್ತದೆ.

ತಿಗಳರ ನಂಬಿಕೆಯಂತೆ ತಿಮಿರಾಸುರನೆಂಬ ರಾಕ್ಷಸನನ್ನು ಸಂಹಾರ ಮಾಡಿದ ಸಲುವಾಗಿ ವಿಶೇಷ ಶಕ್ತಿಯನ್ನು ಪಡೆದ ದ್ರೌಪದಿಯು ತನ್ನ ತಲೆಯ ಮೇಲೆ ಕುಂಭ ಧರಿಸಿ ನರ್ತಿಸಿದಳು. ಆ ಕುಂಭವೇ ಕರಗ ಕುಣಿತವೇ ಉತ್ಸವವಾಗಿ ಮುಂದುವರೆಯಿತು. ಮತ್ತೊಂದು ಕಥೆಯ ಪ್ರಕಾರ ದ್ರೌಪದಿಯ ಸ್ವಯಂವರದಲ್ಲಿ ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸುವ ಸಾಹಸದಲ್ಲಿ ವಿಜಯಿಯಾಗಿ ದ್ರೌಪದಿಯನ್ನು ಗೆಲ್ಲುತ್ತಾನೆ. ಈ ಮೂಲಕ ಅರ್ಜುನನ್ನು ವರಿಸಿದ ದ್ರೌಪದಿಯು ಹೂಮಾಲೆ ಹಾಕುತ್ತಾಳೆ. ಅರ್ಜುನನೊಂದಿಗೆ ಅರಮನೆಗೆ ಬಂದ ನಂತರ ಅರ್ಜುನನ ತಾಯಿ ಕುಂತಿದೇವಿಗೆ ಈ ವಿಷಯ ಗೊತ್ತಾಗುತ್ತದೆ. ಅವಳು ಪಾಂಡವರೈವರೂ ಅವಳನ್ನು ಮದುವೆಯಾಗಲು ಸೂಚಿಸುತ್ತಾಳೆ. ತಾಯಿಯ ಇಷ್ಟದಂತೆಯೇ ಪಂಚಪಾಂಡವರು ದ್ರೌಪದಿಯ ಪತಿಗಳಾಗುತ್ತಾರೆ. ವೀರರಾದ ಐದುಜನ ಪಾಂಡವರಿಗೆ ತಾನು ಹೆಂಡತಿಯಾದೆನೆಂಬ ಸಂತೋಷ ದ್ರೌಪದಿಯದು. ಆ ಸಂತೋಷಕ್ಕಾಗಿಯೇ ತಲೆಯ ಮೇಲೆ ಕಳಸವನ್ನು ಹೊತ್ತು ಕುಣಿದಾಡಿದಳು. ಅಂದಿನಿಂದ ಕಳಸ ಹೊತ್ತು ಆರಾಧಿಸುವ ಆಚರಣೆ ಸಂಪ್ರದಾಯವಾಗಿ ಕರಗೋತ್ಸವವಾಯಿತು. ಒಟ್ಟಾರೆ ಕಳಸ ಹೊತ್ತು ನರ್ತಿಸುವ ಆರಾಧನೆ ಕರಗ ಸಂಪ್ರದಾಯಕ್ಕೆ ಮೂಲವೆನ್ನಬಹುದು.

ಕಳಸದ ಆರಾಧನೆ ಪ್ರಾಚೀನ ಕಾಲದಿಂದಲೂ ಪ್ರಚಲಿತವಿರುವ ಆಚರಣೆಯಾಗಿದೆ. ಶಿಷ್ಟ ಮತ್ತು ಜನಪದ ಪರಂಪರೆಗಳೆರಡರಲ್ಲಿಯೂ ಕಳಸ ಇಲ್ಲವೇ ಕುಂಭದ ಪೂಜೆ ಕಂಡುಬರುತ್ತದೆ. ಈ ಆರಾಧನೆಯಲ್ಲಿ ಕಳಶ ಅಥವಾ ಕುಂಭವು ಸ್ತ್ರೀಯ ಗರ್ಭಾಶಯದ ಸಂಕೇತವೆಂದೂ ಈ ಸಂಪ್ರದಾಯವು ಸಂತಾನಾಭಿವೃದ್ಧಿ ಫಲದ ಸಮೃದ್ಧತೆಯ ಸಂಕೇತವೆಂದು ತಿಳಿಯಬಹುದು. ಆದರೆ ಇಲ್ಲಿ ಕರಗ ಸಂಪ್ರದಾಯಕ್ಕೂ ದ್ರೌಪದಿಗೂ ಸಂಬಂಧ ಕಟ್ಟಿಸುವ ಮೂಲಕ ಕರಗದ ಮಹತ್ವವನ್ನು ಹೆಚ್ಚಿಸುವ ಮನಃಸ್ಥಿತಿಗಳನ್ನು ಕಾಣಬಹುದು. ಕರಗ ಸಂಬಂಧಿ ಎಲ್ಲ ಆಚರಣೆಗಳಲ್ಲಿಯೂ ದ್ರೌಪದಿಯು ಕಳಶವನ್ನು ಇಲ್ಲವೇ ಕರಗವನ್ನು ಹೊತ್ತು ಕುಣಿದಾಡಿದ ಪ್ರಸಂಗಳು ಬರುತ್ತವೆ. ಅವುಗಳ ಹಿಂದೆ ಸಂತೋಷ ಇಲ್ಲವೇ ಆವೇಷದ ಕಾರಣವಿರುವುದಾಗಿ ಕಂಡುಬರುತ್ತದೆ.

**ಕರಗದ ಪವಾಡ ಸಂಬಂಧಿ ಐತಿಹ್ಯಗಳು** : ಅತಿಮಾನುಷ ಶಕ್ತಿಯ ಪ್ರದರ್ಶನಗಳಾಗಿ ಕರಗದ ಆಚರಣೆಯಲ್ಲಿ ಪವಾಡಗಳು ನಡೆಯುತ್ತವೆ. ದೇವಿಯ ಮಹಿಮೆಯನ್ನು ತಿಳಿಸುವುದಕ್ಕಾಗಿಯೇ ಪವಾಡಗಳು ಜರುಗುತ್ತವೆಂದು ನಂಬಿಕೆ. ಮೈ ತುಂಬುವುದು, ಅಲಗು ಸೇವೆ, ಕರಗ ಹೊತ್ತು ಊರೆಲ್ಲ ಸುತ್ತುವುದು ಇತ್ಯಾದಿ ಪವಾಡಗಳನ್ನು ಮಾಡುವವರಿಗೆ ತಮಗೆ ಯಾವ ರೀತಿಯ ನೋವು ಅಥವಾ ಹಿಂಸೆ ಆಗುವುದಿಲ್ಲವೆಂದು ಹೇಳುತ್ತಾರೆ. ಈ ಪವಾಡಗಳಲ್ಲಿ ನಿರತವಾಗುವ ವ್ಯಕ್ತಿಗಳ ಧೈರ್ಯ ಮನೋಬಲ ಹಾಗೂ ಭಕ್ತಿನಿಷ್ಠೆಗಳನ್ನು ಗುರುತಿಸಬಹುದು. ಇಂಥ ಪವಾಡಗಳನ್ನು ಸಮರ್ಥಿಸುವ ಐತಿಹ್ಯಗಳು

ಇಂತಿವೆ: ಟಿಪ್ಪು ಸುಲ್ತಾನನ ಕಾಲದಲ್ಲಿ ವೀರಕುಮಾರರ ಅಲಗು ಸೇವೆಯನ್ನು ಕಂಡ ಬ್ರಿಟಿಷರು ಇವೆಲ್ಲ ನಟನೆ ಎಂದು ಅಪಹಾಸ್ಯ ಮಾಡುತ್ತಾರೆ. ಅಲ್ಲದೆ ವೀರಕುಮಾರರನ್ನು ಪರೀಕ್ಷಿಸಲು ಚೂಪಾದ ಖಡ್ಗಗಳನ್ನು ನೀಡುತ್ತಾರೆ. ವೀರಕುಮಾರರು ಆ ಖಡ್ಗಗಳಿಂದ ಎದೆಗೆ ಒಡೆದುಕೊಳ್ಳುತ್ತಾರೆ. ಆದರೆ ಅವರಿಗೆ ಸ್ವಲ್ಪವೂ ಗಾಯಗಳಾಗುವುದಿಲ್ಲ. ಇದನ್ನು ಕಂಡ ಬ್ರಿಟಿಷರು ತಮ್ಮಿಂದ ತಪ್ಪಾಯಿತೆಂದು ಕ್ಷಮೆ ಯಾಚಿಸುತ್ತಾರೆ. ಮತ್ತೊಮ್ಮೆ ಒಂದು ಕರಗವು ಸಂಚರಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಕರಗ ಹೋಗಿ ಮರದ ಮೇಲೆ ಕುಳಿತು ಬಿಟ್ಟಿತು. ಅಲ್ಲಿ ಸೇರಿದ್ದ ಭಕ್ತರು, ಕರಗ ವ್ಯಕ್ತಿ ವ್ರತಭಂಗ ಮಾಡಿದ್ದಾನೆಂದು ಆತನನ್ನು ಅನುಮಾನಿಸುತ್ತಾರೆ. ಕರಗ ವ್ಯಕ್ತಿಯು ದೇವಿಯನ್ನು ಸ್ಮರಿಸಿ ತನ್ನ ತೊಡೆಯನ್ನು ಅಲಗಿನಿಂದ ಸೀಳಿ ಮೂರು ಬೊಗಸೆ ರಕ್ತವನ್ನು ಕರಗದ ಮೇಲೆ ಎರಚಿದ. ಆನಂತರ ಕರಗ ಅವನ ತಲೆಯ ಮೇಲೆ ಬಂದು ಕುಳಿತುಕೊಂಡಿತು.

ಕರಗ ಉತ್ಸವದ ಆಚರಣೆಯ ಪವಾಡಗಳ ಬಗ್ಗೆ ಇಂಥ ಕಥೆ ಐತಿಹ್ಯಗಳು ಹುಟ್ಟಿಕೊಳ್ಳುತ್ತವೆ. ಆಚರಣೆಯ ಬಗ್ಗೆ ಇರುವ ನಂಬಿಕೆ ಪವಾಡಗಳಿಗೆ ಮತ್ತು ಅವುಗಳಿಗೆ ಸಂಬಂಧಿಸಿದ ಕಥೆಗಳಿಗೆ ಮುಖ್ಯ ಕಾರಣವಾಗುತ್ತದೆ. ಆದ್ದರಿಂದ ಪವಾಡಗಳು ಭಕ್ತಿ, ನಂಬಿಕೆ, ದೈವದ ಮಹಿಮೆಗಳಿಗೆ ಸಂಬಂಧಿಸಿದ ದೃಢತೆಯನ್ನು ಸಂದೇಶದ ರೂಪದಲ್ಲಿ ಸಾರುತ್ತದೆ.

**ಕರಗ-ಪೋತರಾಜು-ಪಾಂಡವರ ಸಂಬಂಧ ನಿರೂಪಿಸುವ ಪುರಾಣ :** ಶಿವಲಿಂಗಪಟ್ಟಣದ ಮಹಾರಾಜ ಶಿವಲಿಂಗರಾಜನೆಂಬುವವನು ತನಗೆ ಮಕ್ಕಳಿಲ್ಲದ ಕಾರಣ ಶಿವನನ್ನು ಕುರಿತು ತಪಸ್ಸು ಮಾಡುತ್ತಾನೆ. ಶಿವನು ಪ್ರತ್ಯಕ್ಷನಾಗಿ ವರ ನೀಡಿದ್ದರಿಂದ ಒಂದು ಗಂಡು, ಒಂದು ಹೆಣ್ಣು ಮಕ್ಕಳಾಗುತ್ತವೆ. ಗಂಡು ಮಗುವಿಗೆ 'ಪೋತರಾಜು'ವೆಂದು ಹೆಣ್ಣು ಮಗುವಿಗೆ ಮುದ್ದುನಾಗಮ್ಮನೆಂದು ಹೆಸರಿಸುತ್ತಾರೆ. ಪೋತರಾಜು ಹನ್ನೆರಡು ಸಿಂಹಗಳ ಬಲದೊಂದಿಗೆ ಬೆಳೆದು ದೊಡ್ಡವನಾಗುತ್ತಾನೆ. ಅತಿಬಲಾಢ್ಯನು, ಅಹಂಕಾರಿಯೂ ಎಲ್ಲರ ಮಾತನ್ನು ಧಿಕ್ಕರಿಸುವವನೂ ಆಗಿರುತ್ತಾನೆ. ನಿತ್ಯವೂ ಕಾಡಿನ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುತ್ತಿರುತ್ತಾನೆ. ಊರ ಹೊರಗಿನ ಏಳುಸುತ್ತಿನ ಕೋಟೆಯಲ್ಲಿ ವಾಸ ಮಾಡುತ್ತಿರುತ್ತಾನೆ.

ಪಾಂಡವರು ಅರಣ್ಯ ವಾಸ ಮಾಡುತ್ತಿದ್ದ ಸಂದರ್ಭದಲ್ಲಿ ಹೊಟ್ಟೆಪಾಡಿಗಾಗಿ ಸೌದೆ ಮಾರುತ್ತಿರುತ್ತಾರೆ. ಭೀಮನು ಶಿವಲಿಂಗಪಟ್ಟಣಕ್ಕೆ ಸೌದೆ ಮಾರಲು ಬರುತ್ತಾನೆ. ಆದರೆ ಯಾರೂ ಸೌದೆಯನ್ನು ಕೊಂಡುಕೊಳ್ಳದೆ ಇರುವುದರಿಂದ ಬೇಸರಗೊಂಡು ಊರ ಹೊರಗಿನ ಪೋತರಾಜನ ಕೋಟೆಗೆ ಸೌದೆ ಹೊರೆಯನ್ನು ಆನಿಸಿ ಅಲ್ಲಿಯೇ ಆಯಾಸ ಪರಿಹರಿಸಿಕೊಳ್ಳುತ್ತಿರುತ್ತಾನೆ. ಆದರೆ ಭೀಮನು ಕಟ್ಟಿದ್ದ ಸೌದೆಹೊರೆಯ ಭಾರಕ್ಕೆ ಕೋಟೆಯ ಬಾಗಿಲು ಮುರಿದು ಬೀಳುತ್ತದೆ. ಒಳಗೆ ನಿದ್ರಿಸುತ್ತಿದ್ದ ಪೋತರಾಜನಿಗೆ ನಿದ್ರಾಭಂಗವಾಗುತ್ತದೆ. ಆದ್ದರಿಂದ ಅವನು ಎದ್ದು ಬಂದು ಭೀಮನ ಮೇಲೆ ಯುದ್ಧ ಮಾಡುತ್ತಾನೆ. ಯುದ್ಧದಲ್ಲಿ ಭೀಮನನ್ನು ಸೋಲಿಸಿ ಬಂಧಿಸುತ್ತಾನೆ.

ಭೀಮನನ್ನು ಬಿಡಿಸಿ ತರಲು ಕೃಷ್ಣಾರ್ಜುನರಿಬ್ಬರೂ ಬರುತ್ತಾರೆ. ಆದರೆ ಪೋತರಾಜುವಿಗೆ ಹನ್ನೆರಡು ಸಿಂಹದ ಬಲವಿರುವುದರಿಂದ ಮೊದಲು ಅದನ್ನು ಕ್ಷೀಣಿಸಬೇಕೆಂದು ಯೋಚಿಸುತ್ತಾರೆ. ಅದರಂತೆ ಕೃಷ್ಣನು ಅರ್ಜುನನನ್ನು ಕೊರವಂಜಿಯ ವೇಷಕ್ಕೆ ಪರಿವರ್ತಿಸುತ್ತಾನೆ. ತಾನು ಮುದುಕನ ವೇಷ ಧರಿಸುತ್ತಾನೆ. ಕೊರವಂಜಿಯು ಕೋಟೆಯ ಬಾಗಿಲ ಬಳಿ ನಿಂತು ಜೋರಾಗಿ ರೋಧಿಸುತ್ತಿರುತ್ತಾಳೆ. ಪೋತರಾಜು ಬಂದು ಏನಾಯಿತೆಂದು ಕೇಳುತ್ತಾನೆ. ಅದಕ್ಕೆ ಅವಳು ತನ್ನ ಗಂಡನ ತಲೆಯನ್ನು ಯಾರೋ ಕಡಿದು ಹಾಕಿದ್ದಾರೆಂದು ತಿಳಿಸುತ್ತಾಳೆ. ಇದನ್ನು ಕೇಳಿದ ಪೋತರಾಜನು ನಿನ್ನ ಗಂತ ಸತ್ತರೆ ಏನಾಯಿತು, ನಾನು ನಿನ್ನನ್ನು ಮದುವೆಯಾಗುತ್ತೇನೆಂದು ಪೀಡಿಸತೊಡಗುತ್ತಾನೆ. ಅಲ್ಲಿಗೆ ಬಂದ ವೇಷಧಾರಿ ಮುದುಕನು ವಿಷಯವೇನೆಂದು ಕೇಳುತ್ತಾನೆ. ಆಕೆಯನ್ನು ಪೋತರಾಜು ಮದುವೆಯಾಗಬೇಕಾದರೆ, ತಂಗಿ ಮುದ್ದುನಾಗಮ್ಮನನ್ನು ಧರ್ಮರಾಯನಿಗೆ ಕೊಟ್ಟು ಮದುವೆ ಮಾಡುವಂತೆಯೂ ಬಂಧಿಸಿರುವ ಭೀಮನನ್ನು ಬಿಡುಗಡೆಗೊಳಿಸುವಂತೆಯೂ ಹೇಳುತ್ತಾನೆ. ಇದಕ್ಕೊಪ್ಪಿದ ಪೋತರಾಜು ಭೀಮನನ್ನು ಬಂಧಮುಕ್ತನನ್ನಾಗಿ ಮಾಡುತ್ತಾನೆ. ತನ್ನ ತಂಗಿಯನ್ನು ಕರೆತರಲು ಹೋಗುತ್ತಾನೆ. ಅವನ ತಂದೆತಾಯಿಗಳು ಮಗಳನ್ನು ಕಳುಹಿಸಲು ಒಪ್ಪುವುದಿಲ್ಲವಾದ್ದರಿಂದ ತಂದೆತಾಯಿಯ ತಲೆಕಡಿದು ತಂಗಿಯನ್ನು ಬಲತ್ಕಾರವಾಗಿ ಹೊತ್ತು ತರುತ್ತಾನೆ.

ಹಿಂದೊಮ್ಮೆ ಗರ್ಭವತಿಯಾಗಿದ್ದ ಕುಂತಿಯ ಗರ್ಭಪಾತವಾದಾಗ ಅದು ಹೆಣ್ಣು ಪಿಂಡವಾಗಿರುತ್ತದೆ. ಕೃಷ್ಣನು ಅದನ್ನು ಶಂಖದಲ್ಲಿಟ್ಟು ಗಂಗೆಯ ಕೈಗೆ ಒಪ್ಪಿಸಿರುತ್ತಾನೆ. ಗಂಗೆಯು ಅದಕ್ಕೆ ಜೀವಕೊಟ್ಟು ಬೆಳೆಸಿರುತ್ತಾಳೆ. ಅವಳು ಶಂಕೋಜಮ್ಮನಾಗಿ ಹದಿನಾರರ ಪ್ರಾಯದಲ್ಲಿರುತ್ತಾಳೆ. ಅವಳು ಅರ್ಜುನನ ಹೋಲಿಕೆಗೆ (ಕೊರವಂಜಿ ವೇಷದ ಅರ್ಜುನನಿಗೆ) ಸಮವಾಗಿದ್ದಳು. ಅವಳನ್ನು ಪೋತರಾಜುವಿಗೆ ಕೊಟ್ಟು ಮದುವೆ ಮಾಡುವುದೆಂದು ನಿರ್ಧರಿಸಿದರು. ಕೃಷ್ಣನು ಪೋತರಾಜುವಿನ ಕೋಟೆಯ ಬಳಿ ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು ಇರಿಸಿ ಆ ಸೈನ್ಯವನ್ನು ಸೋಲಿಸುವುದಾದರೆ ಶಂಕೋಜಮ್ಮನನ್ನು ಮದುವೆ ಮಾಡಿಕೊಡುವುದಾಗಿ ಶರತ್ತು ಹಾಕುತ್ತಾನೆ. ಸೈನ್ಯವನ್ನು ಸೋಲಿಸಿದ ನಂತರ ನನಗೇನು ಕೊಡುತ್ತೀಯ ಎಂದು ಪೋತರಾಜು ಕೇಳುತ್ತಾನೆ. ಅದಕ್ಕೆ ಕೃಷ್ಣನು ಒಂದು ತಾಳೆಮರದ ಮೇಲೆ ಹೋತವನ್ನು, ಬೆಟ್ಟದ ಮೇಲೆ ಅನ್ನವನ್ನು ನೀಡುವುದಾಗಿ ಹೇಳುತ್ತಾನೆ. ಪಂದ್ಯದ ಪ್ರಕಾರ ಪೋತರಾಜು ಸೈನ್ಯವನ್ನು ಸೋಲಿಸಿ ಶಂಕೋಜಮ್ಮನನ್ನು ಮದುವೆಯಾಗುತ್ತಾನೆ. ತನಗೆ ತಾಳೆಯ ಮರದಷ್ಟು ಉದ್ದದ ಹೋತವನ್ನು ಬೆಟ್ಟದಷ್ಟು ಅನ್ನವನ್ನು ನೀಡುವಂತೆ ಕೇಳುತ್ತಾನೆ.

ಕೃಷ್ಣನು ತಾನು ತಾಳೆಯ ಮರದ ಮೇಲೆ ಹೋತವನ್ನು, ಬೆಟ್ಟದ ಮೇಲೆ ಅನ್ನವನ್ನು ನೀಡುವುದಾಗಿ ಹೇಳಿದ್ದೆ ಎನ್ನುತ್ತಾನೆ. ಇದರಿಂದ ನಿರಾಶೆಗೊಂಡ ಪೋತರಾಜು ಎರಡು ಬಾರಿ 'ಅಯ್ಯೋ ಅಯ್ಯೋ ನಾನು ಮೋಸ ಹೋದೆ' ಎನ್ನುತ್ತಾನೆ. ಹೀಗೆ ಎರಡು ಸಲ ಅನ್ನುವಾಗಲೂ ಎರಡೆರಡು

ನಾಲ್ಕು ಸಿಂಹಗಳ ಬಲ ಕುಗ್ಗಿ ಹೋಗುತ್ತದೆ. ಇನ್ನು ಕೇವಲ ಎಂಟು ಆನೆಗಳ ಬಲವಿದ್ದು ಭೀಮನ ಬಲಕ್ಕೆ ಸಮಾನವಾಗುತ್ತದೆ. ಮುದುಕ ವೇಷಧಾರಿ ಕೃಷ್ಣನು ನಿಜಸ್ವರೂಪವನ್ನು ತೋರಿಸುತ್ತಾನೆ. ಪೋತರಾಜು ತನ್ನ ತಪ್ಪನ್ನು ತಿದ್ದಿಕೊಂಡು ಕ್ಷಮೆ ಯಾಚಿಸುತ್ತಾನೆ. ಕರಗ ಸಂಪ್ರದಾಯದೊಂದಿಗೆ ಸಂಬಂಧ ಪಡೆಯುವ ಈ ಪೋತರಾಜುವಿನ ಪುರಾಣವು ಶಿಷ್ಟಪುರಾಣ ಮಹಾಭಾರತವನ್ನು ಆಧರಿಸಿದರೂ ನಂತರ ಅದು ಜನಪದ ಆಶಯಗಳ ಹಿನ್ನೆಲೆಯಲ್ಲಿ ಸ್ವಂತಿಕೆಯನ್ನು ಗಟ್ಟಿಗೊಳಿಸಿಕೊಳ್ಳುತ್ತದೆ.

**ದ್ರೌಪದಿ-ಪೋತರಾಜು ಸಂಬಂಧದ ಬಗ್ಗೆ ಪುರಾಣ :** ಭೀಮನು ಬಕಾಸುರನನ್ನು ಕೊಂದಿದ್ದರಿಂದ ಬಕಾಸುರನ ಮೊಮ್ಮಗ ಅಚಲಮ್ಮ ಎಂಬುವವನು (ಭೀಮ ದ್ರೌಪದಿಯರ ಮಗ?) ಜನಮೇಜಯ ರಾಜನ ಮೊಮ್ಮಗನಾದ ಸುನೀತನ ಮೇಲೆ ಸೇಡು ತೀರಿಸಿಕೊಳ್ಳಲು ಹವಣಿಸುತ್ತಿದ್ದನು. ಪದೇ ಪದೇ ಇವನ ರಾಜ್ಯದ ಮೇಲೆ ದಂಡೆತ್ತಿ ಬಂದು ಕಿರುಕುಳವನ್ನು ನೀಡುತ್ತಿದ್ದನು. ಇದರಿಂದ ಬಿಡುಗಡೆ ಹೊಂದಲು ಸುನೀತನು ಹಿಮಾಲಯಕ್ಕೆ ಹೋಗಿ ಅಲ್ಲಿ ದ್ರೌಪದಿಯನ್ನು ಕುರಿತು ತಪಸ್ಸು ಮಾಡಲು ತೆರಳುತ್ತಾನೆ. ಈ ಸಮಯದಲ್ಲಿ ಸುನೀತನ ರಾಜ್ಯದ ಮೇಲೆ ಅಚಲಮ್ಮನು ದಾಳಿ ನಡೆಸುತ್ತಾನೆ. ವಿಷಯ ತಿಳಿದ ಸುನೀತನು ಅಪಮಾನವನ್ನು ಸಹಿಸಲಾರದೆ ಅಗ್ನಿಕುಂಡದಲ್ಲಿ ಬೀಳಲು ಸಿದ್ಧನಾಗುತ್ತಾನೆ. ಅಗ್ನಿಕುಂಡದಲ್ಲಿ ದ್ರೌಪದಿಯು ಪ್ರತ್ಯಕ್ಷಳಾಗಿ ತಾನು ಅಚಲಮ್ಮ ರಾಕ್ಷಸನನ್ನು ಸಂಹರಿಸುವುದಾಗಿ ಸುನೀತನಿಗೆ ಧೈರ್ಯ ತುಂಬುತ್ತಾಳೆ. ದ್ರೌಪದಿ ಮತ್ತು ಅಚಲಮ್ಮನ ನಡುವೆ ಯುದ್ಧ ನಡೆಯುತ್ತದೆ.

ಆದರೆ ಅಚಲಮ್ಮನು ಬ್ರಹ್ಮನಿಂದ ನೂರುತಲೆಗಳ ವರವನ್ನು ಪಡೆದಿರುತ್ತಾನೆ. ಆತನ ನೂರನೆಯ ತಲೆಯು ನೆಲಕ್ಕುರುಳಿದರೆ ವಿವಿಧ ಮನುಷ್ಯ ಹಾಗು ಪ್ರಾಣಿಗಳ ರೂಪ ಮತ್ತೆ ಆತನಿಗೆ ಶಕ್ತಿ ಬರುತ್ತಿರುತ್ತದೆ. ಆದ್ದರಿಂದ ಆತನ ನೂರನೆಯ ತಲೆಯನ್ನು ಕಡೆದಾಗ ಅದು ನೆಲಕ್ಕೆ ಉರುಳದಂತೆ ಕೈಗಳಲ್ಲಿ ಹಿಡಿದುಕೊಳ್ಳಲು ದ್ರೌಪದಿಯು ಪೋತರಾಜುವನ್ನು ನೇಮಿಸಿಕೊಳ್ಳುತ್ತಾಳೆ. ಅದರಂತೆ ಪೋತರಾಜು ದ್ರೌಪದಿಯು ಕತ್ತರಿಸಿದ ಅಚಲಮ್ಮರಾಕ್ಷಸನ ತಲೆಯನ್ನು ತನ್ನ ಕೈಗಳಲ್ಲಿ ಹಿಡಿದು ನೆಲಕ್ಕೆ ತಾಕುವುದನ್ನು ತಪ್ಪಿಸಿದ ಹೀಗೆ ದ್ರೌಪದಿಗೆ ಸಹಾಯ ಮಾಡಿದನೆಂಬ ಕಾರಣಕ್ಕಾಗಿ ಪೋತರಾಜುವಿಗೆ ಕರಗದ ಆಚರಣೆಯಲ್ಲಿ ಪೂಜೆ ಸಲ್ಲುತ್ತದೆ.

**ಪೋತರಾಜು ಗಾವು ಸಿಗಿಯುವುದರ ಕುರಿತು :** ಒಮ್ಮೆ ಶಿವನು ಮಲಗಿ ನಿದ್ರಿಸುತ್ತಿರುವಾಗ ಪಾರ್ವತಿಯು ಬೇಸರದಿಂದ ಕಾಲಕಳೆಯಲಾಗದೆ ಮರದ ಹಲಗೆಯ ಮೇಲೊಂದು ಕೋಟೆಯ ಚಿತ್ರವನ್ನು ಬರೆಯುತ್ತಾಳೆ. ಎಚ್ಚೆತ್ತ ಶಿವನು ಆ ಚಿತ್ರಕ್ಕೆ ಜೀವನೀಡಿ ಶಿವಾನಂದಪುರಿ ಎಂದು ಹೆಸರಿಸುತ್ತಾನೆ. ಅಲ್ಲದೆ ಅದು ಮರದಿಂದ ಮಾಡಿದ ಕೋಟೆಯಾದ್ದರಿಂದ ಮರದ ಕಟ್ಟಿಗೆಯಿಂದಲೇ ಹಾಳಾಗುತ್ತದೆಯೆಂಬ ಭವಿಷ್ಯವನ್ನು ನುಡಿದನು. ಶಿವಾನಂದಪುರಿಯ ಈ ಕೋಟೆಯಲ್ಲಿ ಶಿವಲಿಂಗನೆಂಬ ಶಿವಭಕ್ತನ ಮಗ

ಪೋತುಲಿಂಗ (ಪೋತುರಾಜ)ನು ವಾಸವಾಗಿದ್ದನು. ಪೋತರಾಜನ ತಂದೆ ಶಿವಲಿಂಗನು ಶಿವನನ್ನು ಕುರಿತು ತಪಸ್ಸನ್ನಾಚರಿಸಿ ವರಗಳನ್ನು ಪಡೆದಿದ್ದನು. ಸದಾ ಶಿವಲಿಂಗವು ತನ್ನ ತಲೆಯ ಮೇಲೆ ಇರಬೇಕೆಂದೂ ತನ್ನ ತಲೆಯನ್ನು ಯಾರಾದರೂ ಕತ್ತರಿಸಿದರೆ ಅದು ನೆಲದ ಮೇಲೆ ಬಿದ್ದ ತಕ್ಷಣ ಇಡೀ ಜಗತ್ತು ನಾಶವಾಗಲೆಂದು ವರಗಳನ್ನು ಬೇಡಿಕೊಂಡಿದ್ದನು. ಪಾಂಡವರು ತಮ್ಮ ವನವಾಸದ ಅವಧಿಯಲ್ಲಿದ್ದಾಗ ಒಮ್ಮೆ ಭೀಮನು ಕಟ್ಟಿಗೆ ಮಾರಲೆಂದು ಶಿವಾನಂದಪುರಿಗೆ ಬರುತ್ತಾನೆ. ಯಾರೂ ಸೌದೆಯನ್ನು ಖರೀದಿಸದೇ ಇರುವುದರಿಂದ ಕೋಟೆಯ ಬಳಿಗೆ ಬರುತ್ತಾನೆ. ನೆರಳಿನಲ್ಲಿ ಆಯಾಸವನ್ನು ಪರಿಹರಿಕೊಳ್ಳಲೆಂದು ಯೋಚಿಸಿ ಕೋಟೆಯ ಗೋಡೆಗೆ ತನ್ನ ಸೌದೆಯ ಹೊರೆಯನ್ನು ಆನಿಸುತ್ತಾನೆ. ಆ ಕಟ್ಟಿಗೆಯ ಭಾರಕ್ಕೆ ತಡೆಯಲಾಗದೆ ಮರದ ಕೋಟೆಯು ಮುರಿದು ಬೀಳುತ್ತದೆ. ಇದರಿಂದ ಕೋಟೆಯಲ್ಲಿ ವಾಸಿಸುತ್ತಿದ್ದ ಪೋತರಾಜು ಕುಪಿತಗೊಳ್ಳುತ್ತಾನೆ. ಕೋಟೆಯ ನಾಶಕ್ಕೆ ಕಾರಣನಾದ ಭೀಮನನ್ನು ಬಂಧಿಸುತ್ತಾನೆ. ಸುದ್ಧಿಯನ್ನು ತಿಳಿದ ಕೃಷ್ಣಾರ್ಜುನರು ಶಿವಾನಂದಪುರಿಗೆ ಬರುತ್ತಾರೆ.

ಕೃಷ್ಣನು ಒಂದು ಮುದುಕಿಯಾಗಿಯೂ ಅರ್ಜುನನು ಒಬ್ಬ ಯುವತಿಯಾಗಿಯೂ ವೇಷ ತಾಳಿ ಕೋಟೆಯ ಮುಂದೆ ಅಲೆದಾಡತೊಡಗುತ್ತಾಗೆ. ಪೋತರಾಜು ಇವರಿಬ್ಬರ ವಿಚಾರಣೆ ನಡೆಸುತ್ತಾನೆ. ಆಗ ತಾವಿಬ್ಬರೂ ಬಂಧಿತನಾದ ವ್ಯಕ್ತಿಯ ತಾಯಿ ಮತ್ತು ತಂಗಿಯೆಂದು ಹೇಳುತ್ತಾರೆ. ಪೋತರಾಜು ಯುವತಿಯ ಸೌಂದರ್ಯಕ್ಕೆ ಮರುಳಾಗಿ ತಾನು ಅವಳನ್ನು ಮದುವೆಯಾಗುವುದಾಗಿ ತಿಳಿಸುತ್ತಾನೆ. ಆಗ ಮುದುಕಿಯು ಬಂಧಿಸಿರುವ ತನ್ನ ಮಗನನ್ನು ಬಿಟ್ಟರೆ ಮಾತ್ರ (ಬಿಡುಗಡೆಗೊಳಿಸಿದರೆ) ತನ್ನ ಮಗಳನ್ನು ಮದುವೆ ಮಾಡಿಕೊಡುವುದಾಗಿ ಸೂಚಿಸುತ್ತಾಳೆ. ಅದರಂತೆ ಪೋತರಾಜು ಭೀಮನನ್ನು ಬಿಡುಗಡೆಗೊಳಿಸುತ್ತಾನೆ. ನಂತರ ಮುದುಕಿಯು ತಾನು ಯಾವುದೋ ಒಂದು ವ್ರತವನ್ನು ಮಾಡುತ್ತಿರುವುದಾಗಿಯೂ ಅದಕ್ಕೆ ಪೂಜಾ ಸಾಮಗ್ರಿಗಳು ಬೇಕೆಂದು ಹೇಳುತ್ತಾಳೆ. ಎಂಟು ದಿನಗಳವರೆಗೆ ತನ್ನ ಪೂಜೆಯು ಮುಂದುವರಿಯುವುದರಿಂದ ಪ್ರತಿದಿನವೂ ಪೂಜಾಸಾಮಗ್ರಿಗಳನ್ನು ಪೂರೈಸಬೇಕೆಂದೂ ಪೂಜೆಯು ಮುಗಿದ ನಂತರ ಮದುವೆ ಮಾಡಿಕೊಡುವುದಾಗಿಯೂ ತಿಳಿಸುತ್ತಾಳೆ.

ಪೋತರಾಜುವು ಪೂಜಾ ಸಾಮಗ್ರಿಗಳನ್ನು ತರಲೆಂದು ಹೊರಡುತ್ತಾನಾದರೂ ಮುದುಕಿಯ ಮಗಳು (ಯುವತಿ) ಅವನನ್ನು ತಡೆದು ತನ್ನ ಜೊತೆಯಲ್ಲಿಯೇ ಇರಲು ಹೇಳಿ ಉಳಿಸಿಕೊಳ್ಳುತ್ತಾಳೆ. ಎಂಟು ದಿನಗಳ ಗಡವು ಮುಗಿಯುತ್ತಿದ್ದಂತೆ ಮುದುಕಿಯು ತನ್ನ ಮಗಳೊಂದಿಗೆ ಊರಿಗೆ ಹಿಂದಿರುತ್ತಾಳೆ. ಅವರ ಹಿಂದೆಯೇ ಪೋತರಾಜು ಸಹ ಹೊರಟು ಮದುವೆಯ ಬಗ್ಗೆ ಪೀಡಿಸುತ್ತಾನೆ. ಆಗ ಕೃಷ್ಣಾರ್ಜುನರು ನಿಜ ರೂಪ ಧರಿಸಿ ಪೊತರಾಜುವು ತನ್ನ ತಂದೆಯ ತಲೆಯನ್ನು ಕಡಿದು ನೆಲದ ಮೇಲೆ ಇಡದಂತೆ ಹಾಗೆಯೇ ತಂದು ತಮಗೆ ಒಪ್ಪಿಸಿದರೆ ಮಾತ್ರ ಮದುವೆ ನೆರವೇರಿಸುವುದಾಗಿ ಹೇಳುತ್ತಾರೆ. ಅದರಂತೆ ಪೋತರಾಜು ತನ್ನ ತಂದೆಯ ಶಿರವನ್ನು ಕತ್ತರಿಸಿ ನೆಲಕ್ಕೆ ಸೋಕಿಸದಂತೆ ತೆಗೆದುಕೊಂಡು ಬರುತ್ತಾನೆ.

ಅಷ್ಟು ಹೊತ್ತಿಗಾಗಲೇ ಮಹಾಭಾರತದ ಕುರುಕ್ಷೇತ್ರ ಯುದ್ಧ ಪ್ರಾರಂಭವಾಗಿರುತ್ತದೆ. ಆದ್ದರಿಂದ ಯುದ್ಧ ಮುಗಿಯುವವರೆಗೂ ಕೋಟೆಯ ಬಾಗಿಲಲ್ಲಿ ನಿಂತಿರುವಂತೆ ಕೃಷ್ಣನು ಸೂಚಿಸುತ್ತಾನೆ. ಪೋತರಾಜು ತಂದೆಯ ತಲೆಯನ್ನು ಕೈಗಳಲ್ಲಿ ಹಿಡಿದುಕೊಂಡೇ ನಿಂತಿರುತ್ತಾನೆ.

ಕೃಷ್ಣನು ಪಾಂಡವರ ಪಕ್ಷದ ಸೇನಾಧಿಪತಿಯಾಗಿ ಕುರುಕ್ಷೇತ್ರವನ್ನು ಸಹಕರಿಸಿದರೆ ಮಾತ್ರ ತಮ್ಮ ಹೆಣ್ಣನ್ನು ಕೊಡುವುದಾಗಿ ಮತ್ತೆ ಶರತ್ತನ್ನು ಹಾಕುತ್ತಾನೆ. ಆದರೆ ಪೋತರಾಜು ತನಗೆ ತಾಳೆಯ ಮರದಷ್ಟು ಎತ್ತರದ ಹೋತ, ಬೆಟ್ಟದಷ್ಟು ಎತ್ತರದ ರಾಶಿ ಅನ್ನ (ಪೊಂಗಲ್) ಹಾಗೂ ತಿನ್ನುವಷ್ಟು ತಂಬಿಟ್ಟನ್ನು ನೀಡಿದರೆ ಆಗ ತಾನು ಸೇನಾಧಿಪತಿಯಾಗುವುದಾಗಿ ಕೋರುತ್ತಾನೆ. ಕೃಷ್ಣನು ಹೋತದ ಬದಲು ಒಂದು ಕೋಳಿಹುಂಜವನ್ನು ಪೋತರಾಜುವಿಗೆ ಎಸೆಯುತ್ತಾನೆ. ಪೋತರಾಜು ಹುಂಜದ ರಕ್ತ ಹೀರಿ ಅದನ್ನೂ ನೆಲದ ಮೇಲಿಡದೆ ಕೋಟೆಯ ಬಾಗಿಲಲ್ಲಿ ಸೇನಾಧಿಪತಿಯಾಗಿ ನಿಂತಿರುತ್ತಾನೆ. ಹೀಗೆ ಪಾಂಡವರಿಗೆ ಸಂಬಂಧಿಸಿದಂತೆ ಗಾವು ಸಿಗಿಯಲು ಸಿದ್ಧಗೊಂಡನೆಂಬ ಕತೆ ಇದೆ. ಇದು ಗ್ರಾಮದೇವತೆಗಳ ಸಹೋದರನೆಂದು ಕರೆಯಲ್ಪಡುವ ಪೋತರಾಜುವಿನ ಆಚರಣೆ ಕರಗ ಸಂಪ್ರದಾಯದಲ್ಲಿ ಉಳಿದಿದ್ದರೂ ಕರಗವು ಶಿಷ್ಟವಾಗುತ್ತಿರುವ ಸಂದರ್ಭದಲ್ಲಿ ಪೋತರಾಜು ಗಾವು ಸಿಗಿಯುವ ಜನಪದ ಆಚರಣೆಯನ್ನು ಶಿಷ್ಟದೊಂದಿಗೆ ಬೆಸೆಯಲು ಕಲ್ಪಿಸಿದ ಕತೆಯೆಂದು ಸ್ಪಷ್ಟವಾಗಿ ಹೇಳಬಹುದು.

**ಕರಗ-ಹೂವಿನ ಸಂಬಂಧ ಕುರಿತ ಐತಿಹ್ಯ :** ಹೂವಿನ ಕರಗವನ್ನು ಸಿದ್ಧಪಡಿಸುವಲ್ಲಿ ನಿರ್ದಿಷ್ಟವಾದ ಹೂವಿಗಷ್ಟೇ ಪ್ರಾಧಾನ್ಯತೆ ಇದೆ. ಕರಗೋತ್ಸವದಲ್ಲಿ ಮಲ್ಲಿಗೆಯ ಹೂವಿಗೆ ಮಾತ್ರ ಪ್ರಾಶಸ್ತ್ಯವಿದೆ. ಹಸಿಕರಗ ಮತ್ತು ಹೂವಿನ ಕರಗದ ಆಚರಣೆಯಲ್ಲಿ ಕರಗವನ್ನು ಅಲಂಕರಿಸಲು ಮಲ್ಲಿಗೆಯ ಮೊಗ್ಗನ್ನು ಬಳಸುತ್ತಾರೆ. ಇದಕ್ಕೆ ಕಾರಣವಾಗಿ ಪೌರಾಣಿಕ ಘಟನೆಯನ್ನು ಬಳಸಿಕೊಂಡು ಆಧಾರದ ಮೇಲೆ ಮಲ್ಲಿಗೆ ಹೂವಿಗೆ ಪ್ರಾಶಸ್ತ್ಯ ಕೊಡುವುದಾಗಿ ನಿರೂಪಿಸುತ್ತಾರೆ. ದ್ರೌಪದಿಯು ತನಗೆ ಸೌಗಂಧಿಕಾ ಪುಷ್ಪವನ್ನು ತಂದುಕೊಡುವಂತೆ ಭೀಮನಲ್ಲಿ ಬಯಸುತ್ತಾಳೆ. ಅದರಂತೆ ಭೀಮನು ಅವಳ ಆಸೆಯನ್ನು ನೆರವೇರಿಸುತ್ತಾನೆ. ದ್ರೌಪದಿಯು ಆ ಹೂವನ್ನು ಮುಡಿದು ಸಂತೋಷದಿಂದ ಈ ಹೂವು ಕಲಿಯುಗದಲ್ಲಿ ಮಲ್ಲಿಗೆಯಾಗಿ ವೃದ್ಧಿಸಲಿ ಎಂದು ವರದಾನ ಮಾಡುತ್ತಾಳೆ. ಅದರಂತೆ, ಸೌಗಂಧಿಕಾ ಪುಷ್ಪವು ಮಲ್ಲಿಗೆಯ ಹೂವಾಗಿ ಪರಿಮಳ ಬೀರುತ್ತದೆ. ಆದ್ದರಿಂದ ಅವಳಿಗೆ ಇಷ್ಟವಾದ ಸೌಗಂಧಿಕಾ ಮೂಲಕ ಮಲ್ಲಿಗೆಯನ್ನು ಕರಗಕ್ಕೆ ಅಲಂಕರಿಸುವುದೆಂದರೆ ದ್ರೌಪದಿಯ ಮುಡಿಗೆ ಅಲಂಕರಿಸಿದಂತೆ ಎಂದು ತಿಗಳರು ಹೇಳುತ್ತಾರೆ.

**ಕರಗ-ಬಣ್ಣದ ಬಟ್ಟೆಯ ಸಂಬಂಧದ ಐತಿಹ್ಯ :** ಕರಗೋತ್ಸವದ ಆಚರಣೆಯಲ್ಲಿ ತೊಡಗಿಸಿಕೊಳ್ಳುವ ವ್ಯಕ್ತಿಗಳು ಸಾಮಾನ್ಯವಾಗಿ ಬಿಳಿಯ ಬಣ್ಣದ ಇಲ್ಲವೇ ಹಳದಿಯ ಹಾಗೂ ಕೆಂಪು ಶಲ್ಯ ವಸ್ತ್ರಗಳನ್ನು ಧರಿಸುತ್ತಾರೆ. ಆದರೆ ಹಳದಿಯ ವಸ್ತ್ರಗಳನ್ನು ಧರಿಸುವುದಕ್ಕೆ ವಿಶೇಷ ಮಹತ್ವವಿದೆ. ದ್ರೌಪದಿಯ

ಆರಾಧನೆಗಳಲ್ಲಿ ಹಳದಿಯ ವಸ್ತ್ರಕ್ಕೆ ಹೆಚ್ಚು ಮಹತ್ವವಿದೆ. ಕಾರಣ ದ್ರೌಪದಿಯು ಹಳದಿಯ ಸೀರೆಯನ್ನು ಧರಿಸಿದ್ದಳೆಂಬ ನಂಬಿಕೆ ತಿಗಳರಲ್ಲಿದೆ. ಇದಕ್ಕೆ ಸಂಬಂಧಿಸಿದಂತೆ ಪುರಾಣ ಕತೆಯೊಂದು ನೀಡುವ ವಿವರಗಳು ಹೀಗಿವೆ: ಪಾಂಡವರ ವನವಾಸದ ಅವಧಿ ಮುಗಿದ ನಂತರ ಒಮ್ಮೆ ಧರ್ಮರಾಯನಿಗೆ ಜೀವನದ ಬಗ್ಗೆ ಜಿಗುಪ್ಸೆಯುಂಟಾಯಿತು. ತನಗೆ ಜೀವನದಲ್ಲಿ ಕಷ್ಟಗಳನ್ನು ಸಹಿಸಲು ಸಾಧ್ಯವಿಲ್ಲದ್ದರಿಂದ ಅಗ್ನಿಕುಂಡಕ್ಕೆ ಬಲಿಯಾಗುವುದಾಗಿ ನಿರ್ಧರಿಸುತ್ತಾನೆ. ಆಗ ದ್ರೌಪದಿಯೂ ಧರ್ಮಜನೊಂದಿಗೆ ಬೆಂಕಿಗೆ ಹಾರಲು ಸಿದ್ಧವಾದಳು. ಮೊದಲಿಗೆ ತಾನು ಉಟ್ಟಿದ್ದ (ಹಳದಿ ಬಣ್ಣದ) ಸೀರೆಯನ್ನು ಅಗ್ನಿಕುಂಡಕ್ಕೆ ಎಸೆದಳು. ತಕ್ಷಣವೇ ಕೆಂಡವೆಲ್ಲ ಮಲ್ಲಿಗೆಯಾಗಿ ಮಾರ್ಪಟ್ಟಿತು. ಇದರಿಂದ ಧರ್ಮರಾಯನು ಬಲಿಯಾಗುವುದು ತಪ್ಪಿತು. ಆದ್ದರಿಂದಲೇ ಕರಗದ ಕೊಂಡ ಹಾಯುವಾಗ ಭಕ್ತರು ಕೊಂಡಕ್ಕೆ ಮಲ್ಲಿಗೆಯ ಹೂವನ್ನು ಎರಚುತ್ತಾರೆ.

**ಕರಗ-ಅಗ್ನಿಪೂಜೆಯ ಮಹತ್ವ ಕುರಿತ ಐತಿಹ್ಯ :** ಕರಗ ಸಂಪ್ರದಾಯದಲ್ಲಿ ಅಗ್ನಿಪೂಜೆಗೆ ಮಹತ್ವವಿದೆ. ಇದು ದ್ರೌಪದಿಯ ಮೂಲಕ್ಕೆ ಸಂಬಂಧಿಸಿದಂತೆ ಬೆಂಕಿಯಲ್ಲಿ ಆಕೆ ಜನಿಸಿದಳೆಂಬ ನಂಬಿಕೆಗೆ ಪೂರಕವಾದದ್ದು. ಕರಗೋತ್ಸವದ ಆಚರಣೆಗಳ ಸಂದರ್ಭದಲ್ಲಿ ಯಜ್ಞ, ಹೋಮ ಮಾಡುವುದು ಈ ಹಿನ್ನೆಲೆಗೆ ಮಹತ್ವ ನೀಡುತ್ತದೆ. ದ್ರೌಪದಿಯು ತನ್ನ ಪರೀಕ್ಷೆಯನ್ನು ಸಾಬೀತುಪಡಿಸಿಕೊಂಡದ್ದು ಬೆಂಕಿಯಿಂದಲೇ ಎಂಬುದನ್ನು ಒಂದು ಜನಪದ ಪುರಾಣದ ಸಂದರ್ಭ ವಿವರಿಸುತ್ತದೆ. ಇದು ಕರಗದ ಆಚರಣೆಗೆ ಕಾರಣವಾದ ಐತಿಹ್ಯವೆನ್ನಬಹುದು. ಕುರುಕ್ಷೇತ್ರ ಯುದ್ಧವು ಮುಗಿದ ಬಳಿಕ ಪಾಂಡವರು ದ್ರೌಪದಿಯ ಶೀಲದ ಬಗ್ಗೆ ಅನುಮಾನ ವ್ಯಕ್ತಪಡಿಸಿದರು. ಪರಪುರುಷರಾದ ಕೀಚಕ, ಸೈಂದವ, ದುಶ್ಯಾಸನರು ಮುಟ್ಟಿದ್ದರಿಂದ ಪಾತಿವ್ರತ್ಯವನ್ನು ಕಳೆದುಕೊಂಡಂತಾಗಿದೆ. ಧರ್ಮರಾಯನ ಕಿರೀಟವನ್ನು ಹೊತ್ತು ಹಸ್ತಿನಾವತಿಯನ್ನು ಸುತ್ತಿಬಂದರೆ, ಆಗ ಅವಳನ್ನು ಪತಿವ್ರತೆಯೆಂದು ಒಪ್ಪುವುದಾಗಿ ಪರೀಕ್ಷೆಯನ್ನೊಡ್ಡುತ್ತಾರೆ.

ದ್ರೌಪದಿಯು ಸತ್ಯಸಂದನಾದ ಧರ್ಮರಾಯನ ಕಿರೀಟವು ಬೆಂಕಿಗೆ ಸಮಾನವಾದ್ದರಿಂದ ದೇವತೆಗಳೇ ಅದನ್ನು ಮುಟ್ಟಲು ಹೆದರುತ್ತಾರೆ. ಹೀಗಿರುವಾಗ ತಾನು ಅದನ್ನು ಹೊರಲಾರನೆಂದು ತಿಳಿಯುತ್ತಾಳೆ. ಅಲ್ಲದೆ ತಾನು ಅಗ್ನಿಕುಂಡದಲ್ಲಿ ಬಿದ್ದು ಸಾಯಬೇಕೆಂದು ನಿರ್ಧರಿಸುತ್ತಾಳೆ. ಆದ್ದರಿಂದ ಆಕೆಯು ಅಗ್ನಿಕುಂಡವನ್ನು ಪೂಜಿಸಿ ಪ್ರದಕ್ಷಿಣೆ ಹಾಕುವಷ್ಟರಲ್ಲಿ ಅವಳ ಬೆವರಿನಿಂದ ವೀರಕುಮಾರರು ಸೃಷ್ಟಿಯಾಗುತ್ತಾರೆ. ಅವರು ದ್ರೌಪದಿಗೆ ಸಾಯುವುದು ಬೇಡವೆಂದು ಹೇಳುತ್ತಾರೆ. ತಮ್ಮ ಪ್ರಾಣವನ್ನು ಬಲಿಕೊಟ್ಟಾದರೂ ಸಹಾಯ ಮಾಡುವುದಾಗಿ ಭರವಸೆ ನೀಡುತ್ತಾರೆ. ದ್ರೌಪದಿಯು ತನ್ನ ಮಕ್ಕಳನ್ನು ಬಲಿಕೊಟ್ಟು ಬದುಕುವುದಕ್ಕಿಂತ ಸಾಯುವುದೇ ಮೇಲೆಂದು ಅಗ್ನಿಕುಂಡಕ್ಕೆ ಹಾರುತ್ತಾರೆ. ಆದರೆ ಬೆಂಕಿಯು

ಅವಳನ್ನು ಸುಡುವುದಿಲ್ಲ. ಬದಲಿಗೆ ಅವಳ ಮುಡಿಗೆ ಹೂವಿನ ಕರಗವನ್ನು ಮುಡಿಸುತ್ತದೆ. ಈ ಮೂಲಕ ದ್ರೌಪದಿಯು ಪಾತಿವ್ರತ್ಯವನ್ನು ನಿರೂಪಿಸಿಕೊಳ್ಳುತ್ತಾಳೆ.

**ಕರಗದ ವಿಧಗಳು ಮತ್ತು ಆಚರಣೆಯ ಸಂದರ್ಭಗಳು** : ಕರಗ ಎಂಬ ಪದವು ತಮಿಳಿನ 'ಕರಕ' ಎಂಬುದರಿಂದ ಬಂದ ಶಬ್ದವೆಂದು ಹೇಳಬಹುದು. ಇದಕ್ಕೆ ಲೋಹದಲ್ಲಿ ಮಾಡಿದ 'ಕಳಸ'ವೆಂತಲೂ ಮಣ್ಣಿನಲ್ಲಿ ಮಾಡಿದ 'ಮಡಕೆ'ಯೆಂತಲೂ ಅರ್ಥಗಳಿವೆ. ಅಂದರೆ ಕಳಸ, ಗಡಿಗೆ, ಕುಂಭ, ಕೊಡ ಎಂಬುದಕ್ಕಿರುವ ಪರ್ಯಾಯ ಪದ. 'ಬೆಂಕಿಯನ್ನು ಪೂಜಿಸಲು ಇರಿಸಿದ ಗಡಿಗೆ' ಎಂದು ಹೇಳುತ್ತಾರೆ. ತಮಿಳುನಾಡಿನಲ್ಲಿ ಸಾಲ್‌ಕರಗಂ, ಪೂಕರಗಂ, ಶಕ್ತಿಕರಗಂ, ಅಲಗುಕರಗಂ ಎಂಬಿತ್ಯಾದಿ ಕರಗಗಳಿವೆ. ಕೆಲವು ಕರಗಗಳನ್ನು ಧಾರ್ಮಿಕ ಸಂಪ್ರದಾಯದ ಆರಾಧನೆಗಳಲ್ಲಿ ಆಚರಿಸಿದರೆ ಮತ್ತೆ ಕೆಲವನ್ನು ಮನರಂಜನಾ ಸಂದರ್ಭಗಳಲ್ಲಿ ಬಳಸಿಕೊಳ್ಳುತ್ತಾರೆ. ಆದರೆ ಕರ್ನಾಟಕದಲ್ಲಿ ಧಾರ್ಮಿಕ ಆಚರಣೆಗಳಲ್ಲಿ ಮಾತ್ರ ಕರಗದ ಆಚರಣೆ ಕಂಡುಬರುತ್ತದೆ. ಒನಕೆಕರಗ, ಚೊಂಬುಕರಗ ಮತ್ತು ಚಿತ್ರಗೋಪುರ ಕರಗ (ಹೂವಿನಕರಗ)ಗಳನ್ನು ಹೊರುತ್ತಾರೆ. ಒನಕೆಕರಗ ಮತ್ತು ಚೆಂಬುಕರಗಗಳು ಪ್ರದರ್ಶನಗಳಂತೆ ಕಂಡುಬಂದರೆ ಹೂವಿನಕರಗವು ಆಚರಣೆಯಾಗಿ ಮೂಡಿಬರುತ್ತದೆ. ಗೋಪುರಾಕಾರದ ಬುಟ್ಟಿಗೆ ಹೂವಿನಿಂದ ಅಲಂಕಾರ ಮಾಡಿ ತಲೆಯ ಮೇಲೆ ಹೊತ್ತು ಹಲವು ಭಾವ-ಭಂಗಿಗಳಲ್ಲಿ ಕುಣಿಯುತ್ತಾ ಭಕ್ತಿಯನ್ನು ಪ್ರದರ್ಶಿಸುವುದು ಧಾರ್ಮಿಕ ಮಹತ್ವವನ್ನು ತೋರಿಸುವುದು ಈ ಕರಗದ ಉದ್ದೇಶ.

ತಮಿಳುನಾಡಿನಲ್ಲಿ ದ್ರೌಪದಿಯನ್ನು ಶಕ್ತಿ, ದುರ್ಗೆ, ಮಾರಿ ಎಂದು ಭಾವಿಸುತ್ತಾರೆ. ಇಲ್ಲಿನ ಸೆಂಜಿಕೋಟೆ ಹಾಗೂ ಸುತ್ತಮುತ್ತಲೂ ದ್ರೌಪದಿಯ ದೇವಾಲಯಗಳಿದ್ದು ಇವು ವನ್ನಿಯಾರರು, ವೆಳ್ಳಾಳ್ ಮೊದಲಿಯಾರರು, ಕೋಣಾರ್ ಜಾತಿಯವರು ಈ ಮೂವರಲ್ಲಿ ಯಾರಾದರೊಬ್ಬರ ಹಿಡಿತದಲ್ಲಿರುತ್ತದೆ. ದ್ರೌಪದಿಯ ಉತ್ಸವಗಳಲ್ಲಿ ವನ್ನಿಯಾರರು ಹೆಚ್ಚು ಭಾಗವಹಿಸುತ್ತಾರೆ. ಕೋಣಾರ್ ಜಾತಿಯವರ ಪ್ರಕಾರ ಅವರ ವಂಶದ ಸಾಂಸ್ಕೃತಿಕ ವೀರನಾದ ಅನಂತಕೋಣನು ಸೆಂಜಿ ಮತ್ತು ಮಲಚೇರಿಯ ಮೇಲೆ ದಾಳಿ ಮಾಡಿ ಅವುಗಳನ್ನು ಗೆದ್ದು ಕೋಣಕುಂಭದ ಅಧಿಕಾರವನ್ನು ಸ್ಥಾಪಿಸಿದನು. ಅಲ್ಲದೆ ಇವರು ತಮ್ಮ ವಂಶದ ಮೂಲಪುರುಷ ಕೃಷ್ಣನೆಂದು ಹೇಳಿಕೊಳ್ಳುತ್ತಾ ತಾವು ಕೃಷ್ಣನ ಕುಲದ ಯಾದವರೆಂದು ಗುರುತಿಸಿಕೊಳ್ಳುತ್ತಾರೆ. ಇವರ ಪ್ರಕಾರ ದ್ರೌಪದಿಯ ಉತ್ಸವವು ಕೃಷ್ಣನಿಗೆ ಸೇರಿದ್ದು.

**ಮಾಲೂರಿನ ಕರಗ** : ಮಾಲೂರಿನಲ್ಲಿ ಸುಮಾರು ನೂರೈವತ್ತು ವರ್ಷಗಳಿಂದ ಕರಗದ ಆಚರಣೆ ಪ್ರಾರಂಭಗೊಂಡಿದೆ. ಸ್ಥಳೀಯವಾಗಿ ಹೆಸರುವಾಸಿಯಾಗಿರುವ ಹಿರ್ದೇರಾಂಸಿಂಗ್‌ನ ವಂಶದ ಒಂದು ಹೆಣ್ಣು ಮಗುವಿಗೆ ಖಾಯಿಲೆಯಾಗಿತ್ತು. ಮಾಲೂರಿನ ಸಮೀಪದ ದೊಡ್ಡಕಡತೂರಿನ ಕರಗ ಸಂಪ್ರದಾಯದವರು ನೀಡುವ ಕುಂಕುಮವನ್ನು ತಂದು ಹಚ್ಚಿದರೆ ಖಾಯಿಲೆಗಳು ನಿವಾರಣೆಯಾಗುತ್ತವೆಂದು

ನಂಬಿಕೆ. ಅದರಂತೆ ಕರಗದವರು ನೀಡಿದ ಕುಂಕುಮವನ್ನು ಮಗುವಿಗೆ ಹಚ್ಚುತ್ತಾರೆ. ತಕ್ಷಣ ಖಾಯಿಲೆಯಿಂದ ಮಗು ಗುಣಮುಖವಾಗುತ್ತದೆ. ಕರಗ ಸಂಪ್ರದಾಯದ ಮೇಲೆ ನಂಬಿಕೆಯಿಟ್ಟ ಆ ಕುಟುಂಬವು ತಮ್ಮ ಊರಿನಲ್ಲೂ ವರ್ಷಕೊಮ್ಮೆ ಕರಗ ಉತ್ಸವವನ್ನು ನಡೆಸುವಂತೆ ಹೇಳುತ್ತಾರೆ. ಅಂದಿನಿಂದ ಆಚರಣೆಯ ಖರ್ಚು ವೆಚ್ಚಗಳನ್ನು ತಾವೇ ನೋಡಿಕೊಳ್ಳುತ್ತಾರೆ.

**ಕರಗದ್ಯಾವರ :** ಶ್ರೀನಿವಾಸಪುರ ತಾಲ್ಲೂಕು ಬೈಯಪ್ಪನಹಳ್ಳಿಯಲ್ಲಿ ಕರಗದ್ಯಾವರ (ಗೆರಿಗಿದ್ಯಾವರ > ಗುರಿಗಿದ್ಯಾವರ) ಎಂಬ ಹೆಸರುಗಳಲ್ಲಿ ಒಂದು ಕರಗೋತ್ಸವವು ನಡೆಯುತ್ತದೆ. ಪಟಾಲಮ್ಮ, ಗಂಗಮ್ಮ ಮತ್ತು ತಿಪ್ಪದ್ಯಾವರ ದೈವಗಳಿಗೆ ಕರಗವನ್ನು ಏರ್ಪಡಿಸುತ್ತಾರೆ. ಈ ಆಚರಣೆಯಲ್ಲಿ ಮೊರಸು ಕಾಪುಲು (ಮೊರಸು ಒಕ್ಕಲಿಗರು) ಪಾಲ್ಗೊಳ್ಳುತ್ತಾರೆ. ಭೈರವೇಶ್ವರ ಹಾಗೂ ಚೌಡೇಶ್ವರಿ ಇವರ ಮನೆದೈವ ಹಾಗೂ ದೇವತೆ ಇವರು ಸ್ಥಳೀಯ ದೇವತೆಗಳಿಗೆ ನಡೆಸುವ ಕರಗವೆಂದರೆ, ಹೊಸ ಮಡಿಕೆ (ಗಡಿಗೆ)ಯನ್ನು ಕಳಸವನ್ನಾಗಿ ಪೂಜಿಸಿ, ಬಿಳಿಯ ಕಣಗಲೆ ಹೂವು ಮತ್ತು ವೀಳೆದೆಲೆಗಳಿಂದ ಅಲಂಕರಿಸುತ್ತಾರೆ. ಬಿಳಿಯ ಉಡುಪನ್ನು ಧರಿಸಿ, ಕೊರಳಿಗೆ ಹೂವಿನ ಹಾರವನ್ನು ಹಾಕಿಕೊಂಡು ಕಳಸವನ್ನು ಹೊತ್ತು ಮೆರವಣಿಗೆಗೆ ಹೊರಡುತ್ತಾರೆ. ಆಯಾ ದೇವತೆಯ ದೀಪದಾರತಿಯ ಸಂದರ್ಭದಲ್ಲಿ ಕರಗದ ಆಚರಣೆಯು ಪೂರಕವಾಗಿ ನಡೆಯುತ್ತದೆ. ಈ ಆಚರಣೆಯು ಜನಪದ ನೆಲೆಯ ಚೌಕಟ್ಟನ್ನು ದಾಟದೆ ಇರುವುದು ಇಲ್ಲಿನ ವಿಶೇಷತೆ.

ಇಲ್ಲಿ ಕರಗದ್ಯಾವರ (ಕರಗದ ಉತ್ಸವ) ಎಂದರೆ, ಕಳಸದ ಆರಾಧನೆ ಮಾತ್ರವಾಗಿದೆ. ಉತ್ಸವದ ದಿನದಂದು ಸೌದೆಒಲೆಯ ಮೇಲೆ ಎಣ್ಣೆಯನ್ನು ಕಾಯಿಸಿ ಅದರೊಳಕ್ಕೆ ಕೈಅದ್ದಿ ತೆಗೆಯುವ ಸಂಪ್ರದಾಯವಿದೆ. ಮಡಿಯನ್ನು ಪಾಲಿಸದೆ ಮೈಲಿಗೆಯನ್ನು ಮಾಡಿಕೊಂಡವರಿಗೆ ಮಾತ್ರ ಕೈಗಳು ಸುಡುತ್ತವೆಂದು ನಂಬಿಕೆ ಇದೆ. ಇಲ್ಲಿನ ಮೊರಸು ಒಕ್ಕಲಿಗರು ಭೂಮಿಯನ್ನು ಅಗೆಯುತ್ತಿದ್ದಾಗ ಅವರಿಗೆ ಒಂದು (ಗೆರಿಗಿ>ಗುರಿಗಿ : ಕುಡಿಕೆ>ಗಡಿಗೆ) ಸಿಕ್ಕಿದ್ದಿತೆಂದು ಆ ಹಿನ್ನೆಲೆಯಲ್ಲಿ ಕರಗದ್ಯಾವರ ನಡೆಯುವ ಪರಂಪರೆ ಬೆಳೆದಿದೆಯೆಂದು ಇಲ್ಲಿನ ಐತಿಹ್ಯ. ಕೋಲಾರದ ಸಮೀಪದಲ್ಲಿರುವ ಬನಹಳ್ಳಿಯ ಗ್ರಾಮದೇವತೆ ಕೋಲಾಳಮ್ಮನ ಕರಗಕ್ಕೂ ಮೊರಸು ಒಕ್ಕಲಿಗರಿಗೂ ಸಾಂಸ್ಕೃತಿಕ ಸಂಬಂಧವಿದೆ. ಸುಮಾರು ನಾನ್ನೂರು ಐನೂರು ವರ್ಷಗಳ ಹಿಂದೆ ಈಗಿನ ಪೂಜಾರಿಗಳ ಹಿರಿಯರು ಕಣಿವೆಯ ಕೆಳಗಿನಿಂದ ಗಾಡಿಯಲ್ಲಿ ಹೋಗುತ್ತಿದ್ದಾಗ ಗಾಡಿಯ ಅಚ್ಚು ಮುರಿಯಿತು. ಆ ಜಾಗದಲ್ಲಿ ಕೋಲಾಳಮ್ಮನ ಗುಡಿಯನ್ನು ಕಟ್ಟಿಸಿ ಕರಗ ಮಹೋತ್ಸವವನ್ನು ಆಚರಿಸುತ್ತಾ ಬಂದರೆಂಬ ಐತಿಹ್ಯವಿದೆ.

**ಮರಿಗೆಮ್ಮ-ಸಲ್ಲಾಪುರಮ್ಮನ ಕರಗ :** ಕೋಲಾರ ಜಿಲ್ಲೆಯ ಮರಿಗೆಮ್ಮನ ದೇವಾಲಯಗಳಲ್ಲೆಲ್ಲ ಕರಗದ ಉತ್ಸವವು ನಡೆಯುತ್ತದೆ. ಅವಳೊಂದಿಗೆ ಸಲ್ಲಾಪುರದಮ್ಮನೆಂಬ ಸೋದರಿಯೂ ಇರುತ್ತಾಳೆ. ದೈವದ ಹೆಸರಿನ ಬಗ್ಗೆ ವಿಚಾರಿಸಿದಾಗ ಮುರುಕದ ಅಧಿದೇವತೆ ಮರಿಗಮ್ಮನೆಂದು ತಂಪನ್ನು ನೀಡುವ

ಅಧಿದೇವತೆ ಸಲ್ಲಾಪುರಮ್ಮನೆಂದು ಹೇಳುತ್ತಾರೆ. ತೆಲುಗಿನಲ್ಲಿ 'ಸಲ್ಲ' ಎಂಬುದಕ್ಕೆ ತಂಪು, ಮಜ್ಜಿಗೆ ಎಂಬ ಅರ್ಥಗಳಿವೆ. ಹಾಗೆಯೇ 'ಮರಿಗಿ' ಎಂದರೆ ಕುಡಿಕೆ, ಗಡಿಗೆ ಎಂಬ ಅರ್ಥಗಳು ಬರುತ್ತವೆ. ಈ ಹಿನ್ನೆಲೆಯಲ್ಲಿ ಮರಿಗಿಯ ಅಮ್ಮನೆಂದರೆ ಕುಡಿಕೆಯ ಅಧಿದೇವತೆ, ಮಣ್ಣಿನ ಗಡಿಗೆಯು ಕರಗದ ಆಚರಣೆಯಲ್ಲಿ ಮಹತ್ವದ ಕೇಂದ್ರವಾಗುವುದರಿಂದ ಈಕೆಯು ಕರಗದ ಅಧಿದೇವತೆಯಾಗುತ್ತಾಳೆ.

ಕಳಶದ ಪೂಜೆಗೆ ಸಂಬಂಧಿಸಿದ ಆಚರಣೆಯಲ್ಲಿ ಕಳಶದಲ್ಲಿ ನೀರನ್ನು ತುಂಬಿರುತ್ತಾರೆ. ವೀಳ್ಯೆದೆಲೆ, ಹೂವು ಮತ್ತಿತರ ಪರಿಕರಗಳಿಂದ ಅಲಂಕರಿಸಿರುತ್ತಾರೆ. ಆದ್ಯತೆಗೆ ಬರುವ ಧಾನ್ಯಗಳ ಮೇಲೆ ಕಳಸವಿಟ್ಟು ಪೂಜಿಸುತ್ತಾರೆ. ಇದು ದೇವತೆಯನ್ನು ಶಾಂತಿಗೊಳಿಸುವ ಸಂಕೇತವಾಗಿರುತ್ತದೆ. ಇಂತಹ ಶಾಂತಿಯ ಅಧಿದೇವತೆ ಸಲ್ಲಾಪುರದಮ್ಮನಿರಬಹುದು. ಮಕ್ಕಳಿಗೆ ಸಂಬಂಧಿಸಿದ ರೋಗ ರುಜಿನಗಳಿಗೆ ಪರ್ಯಾಯವಾಗಿ ಅಮ್ಮನನ್ನು ನಿವಾಳಿಸುವ ಆಚರಣೆಯೊಂದಿದೆ. ರೋಗಪೀಡಿತ ಮಗುವಿಗೆ ನೀವಾಳಿಸಿದ ಎಲ್ಲ ಸಾಮಗ್ರಿಗಳನ್ನು ಒಂದು ಸಣ್ಣ ಕುಡಿಕೆಯಲ್ಲಿ ಹಾಕಿ ಕುಡಿಕೆಯನ್ನೊಮ್ಮೆ ನೀವಾಳಿಸಿ ತಂದು ಊರ ಹೊರಗಿನ ತಂಪಾದ ಜಾಗಗಳಲ್ಲಿ ಇಟ್ಟು ಹೋಗುತ್ತಾರೆ. ಇದು ಅಮ್ಮನನ್ನು ಸಲ್ಲಗೊಳಿಸುವ (ಶಾಂತಿಗೊಳಿಸುವ) ಆಚರಣೆ ಸಲ್ಲಾಪುರದಮ್ಮನನ್ನು ಈ ದೃಷ್ಟಿಯಿಂದ ಅವಲೋಕಿಸಬಹುದು.

ಕೋಲಾರ ಜಿಲ್ಲೆಯಲ್ಲಿ ಇಂಥದ್ದೇ ಮತ್ತೊಂದು ಆಚರಣೆಯಿದೆ. ಎರಡು ಹೊಸ ಮಡಿಕೆಗಳಿಗೆ ದಾರ ಸುತ್ತಿ ಬೇವಿನ ಸೊಪ್ಪನ್ನು ಕಟ್ಟಿ ಪೂಜೆ ಮಾಡಿ ಉಪ್ಪು ಹಾಕದೆ ಅಕ್ಕಿ ಹಾಗೂ ರಾಗಿಯ ಗಂಜಿಯನ್ನು ರಾತ್ರಿ ಮಾಡುವರು. ಬೆಳಿಗ್ಗೆ ಅದಕ್ಕೆ ಮೊಸರು ಹಾಕಿ ಎಲೆಯಲ್ಲಿ ಮಕ್ಕಳಿಗೆ ಹಂಚುವರು. ಅದರೊಂದಿಗೆ ಸ್ವಲ್ಪ ಬೇವಿನಸೊಪ್ಪನ್ನು ಅವರಿಗೆ ಕೊಡುವರು. ಈ ಗಂಜಿಗೆ ಸಲ್ಲಗಂಗಮ್ಮ ಎಂದೂ ಹೇಳುವರು. ಗಂಜಿಯನ್ನು ಕುಡಿದ ಮಕ್ಕಳು ಎಲೆಯನ್ನು ಕೈಯಲ್ಲಿ ಹಿಡಿದುಕೊಂಡು ಹಿಂತಿರುಗಿ ನೋಡದೆ ಬಾವಿಯ ಬಳಿಗೆ ಹೋಗಿ ಅದನ್ನು ಅಲ್ಲೇ ಬಿಟ್ಟು ಕೈತೊಳೆದುಕೊಂಡು ಬರುವರು. ಮನೆಯವರು ಆಗ ಅವರ ಹಿಂದೆ ನೀರು ಚಿಮುಕಿಸುವರು. ಇದಕ್ಕೆ 'ಅಮ್ಮನ್ನು ಸಾಗ್ ಕಳುಹಿಸುವುದು' ಎನ್ನುತ್ತಾರೆ. ಅನಂತರ ಕುಟುಂಬದ ಕೆಲವರು ಒಂದು ದೇವಸ್ಥಾನಕ್ಕೆ ಹೋಗಿ ಹರಕೆ ಸಲ್ಲಿಸಿಕೊಂಡು ಬರುವರು. ರೋಗಿಗಳಿಗೆ ಕೆಲವರು ಬೇವಿನ ಉಡಿಗೆಯನ್ನು ತೊಡಗಿಸಿಕೊಂಡು ದೇವಾಲಯಕ್ಕೆ ಬಂದು ಗಂಗೆಕಲ್ಲಿಗೂ ಬೇವಿನಸೊಪ್ಪು ಸುತ್ತಿ ಮೊಸರು ಹುಂಜ ಕುರಿ ಅಥವಾ ಕೋಳಿಯನ್ನು ಬಲಿಕೊಟ್ಟು ಮಾತ್ರ ಕೊಡುವರು. ಅನಂತರ ಮನೆಗೆ ಹೋಗಿ ಮಾಂಸದ ಅಡಿಗೆ ಮಾಡಿ ಊಟಮಾಡುವರು. ಕೋಲಾರ ತಾಲ್ಲೂಕಿನ ಮುದುವಾಡಿ ಎಂಬ ಗ್ರಾಮದಲ್ಲಿ ಸುಗ್ಗುಲಮ್ಮ ಎಂಬ ಗ್ರಾಮದೇವತೆ ಇದೆ. ಈಕೆ ಭೇದಿಯ ದೇವತೆ. ಮಕ್ಕಳಿಗೆ ಸುಕ್ಕು ಸುಕ್ಕಾಗಿ ಭೇದಿಯಾಗುತ್ತಿದ್ದರೆ ಈ ದೇವತೆಗೆ ಹರಕೆ ಹೊತ್ತರೆ ವಾಸಿಯಾಗುತ್ತದೆ ಎಂಬ ನಂಬಿಕೆಯಿದೆ. ಊರದೇವರ ಜಾತ್ರೆಯಾದಾಗ ಈಕೆಗೂ ತಂಬಿಟ್ಟಿನ ದೀಪ ಬೆಳಗಿ ಹರಕೆ ಸಲ್ಲಿಸುವರು. ಇವೆಲ್ಲವೂ ಸಲ್ಲಾಪುರಮ್ಮನಿಗೆ ಸಂಬಂಧಿಸಿದ ಆಚರಣೆಗಳಾಗಿವೆ.

**ಗ್ರಾಮದೇವತೆಗಳ ಕರಗ** : ಜಿಲ್ಲೆಯ ಕೆಲವು ಕಡೆ ಗ್ರಾಮದೇವತೆಗಳಿಗೆ ಕರಗ ಮಾಡಿಸುತ್ತಾರೆ. ಈ ದೇವತೆಗಳ ಸಹೋದರ ಪೋತರಾಜು ಮೈಮೇಲೆ ಬಂದು ದೇವತೆಗೆ ಬಲಿಕೊಡಬೇಕೆಂದು ಹೇಳುತ್ತಾನೆ. ಕೆಲವು ಊರುಗಳಲ್ಲಿ ಬಲಿಗೆ ಬದಲು ಕುಂಬಳಕಾಯಿ ಒಡೆದು ಶಾಂತಿ ಮಾಡುತ್ತಾರೆ. (ಗೌರಿಬಿದನೂರು ಮರಿಗಮ್ಮ-ಸಲ್ಲಾಪುರಮ್ಮ ಚಿಕ್ಕಬಳ್ಳಾಪುರದ ಗಂಗಮ್ಮ). ಮಾಲೂರಿನ ಮುತ್ಯಾಲಮ್ಮ ಮತ್ತು ಶಿಡ್ಲಘಟ್ಟ ಕೋಲಾರದ ಕರಗನ್ನು ಪ್ರಾಣಿಬಲಿ ರಹಿತ ಕರಗಗಳೆಂದು ಗುರ್ತಿಸಬಹುದು. ಹೊಸಕೋಟೆ ಕೆಂಗೇರಿ ದೊಡ್ಡಬಳ್ಳಾಪುರ ಮೊದಲಾದ ಬೆಂಗಳೂರು ಜಿಲ್ಲೆಯ ಕರಗಗಳು ಸಸ್ಯಾಹಾರದ ಬಲಿ (ನೈವೇದ್ಯ). ಇರುತ್ತದೆ.

ಕರಗ ಹೊರುವವರು ತಿಗಳರು (ವಹ್ನಿಕುಲ ಕ್ಷತ್ರಿಯರು). ಇವರು ಮೂಲತಃ ತಮಿಳು ದೇಶದವರು. ವಲಸೆ ಬಂದು ನಂದಿದುರ್ಗದ ಬಳಿ ನೆಲೆಸಿದರು. ಇವರು ರೈತರಾಗಿದ್ದು ಆ ಗುಂಪಿನ ನಾಯಕ ರಣಭೈರೇಗೌಡ ಎಂಬುವವರ ಅಕ್ರಮ ಸ್ತ್ರೀ ಸಂಬಂಧ? ಹೊಂದಿದ್ದ ಕಾರಣ ತನ್ನ ತಮ್ಮರೊಂದಿಗೆ ತಮಿಳುನಾಡಿನಿಂದ ಹೊರ ಬಂದ. ಇವರು ಬೆಂಗಳೂರು ಮತ್ತು ಕೋಲಾರದ ಕೆಲವು ಪ್ರದೇಶಗಳಲ್ಲಿ ಪಾಳೆಯಪಟ್ಟುಗಳನ್ನು ಸ್ಥಾಪಿಸಿಕೊಂಡರು ಎಂದು ಹೇಳುತ್ತಾರೆ. ಚಿಕ್ಕಬಳ್ಳಾಪುರ, ಕೋಲಾರ, ದೇವನಹಳ್ಳಿ, ಯಲಹಂಕ, ಬೆಂಗಳೂರು, ಮಾಗಡಿ, ಆನೆಕಲ್ಲು ಇಲ್ಲೆಲ್ಲಾ ನೆಲೆಸಿದ್ದರಿಂದ ಈ ಪ್ರದೇಶಗಳಲ್ಲಿ ಕರಗ ನಡೆಸುತ್ತಾರೆ. ಕರಗದಮ್ಮನ ಆರಾಧಕರಾದ ಮೊರಸು ಒಕ್ಕಲಿಗರು ಕರ್ನಾಟಕದ ಕೋಲಾರ ಮತ್ತು ಬೆಂಗಳೂರು ಪ್ರದೇಶಗಳಲ್ಲಿ ಪಾಳೆಯಪಟ್ಟುಗಳನ್ನು ಕಟ್ಟಿದ್ದರ ಹಿನ್ನೆಲೆಯಲ್ಲಿ ಕರಗ ಆರಾಧನೆಗೆ ಮತ್ತಷ್ಟು ಪ್ರಚಾರ ದೊರೆತಿದೆ.

**ಕರಗದ ಆಚರಣೆಯ ನಂಬಿಕೆ-ಐತಿಹ್ಯಗಳು** : ೧. ಕುರುಕ್ಷೇತ್ರ ಯುದ್ಧ ಮುಗಿದ ನಂತರ ಒಂದು ರಾತ್ರಿ ಭೀಮನನ್ನು ಕುರಿತು ಕೃಷ್ಣ ರಣರಂಗದ ಕಡೆಗೆ ನೋಡುವಂತೆ ಹೇಳಿದ. ಅಲ್ಲಿ ದ್ರೌಪದಿ ರಾಕ್ಷಸಿಯ ರೂಪ ತಾಳಿ ಸತ್ತು ಬಿದ್ದಿದ್ದ ಸೈನಿಕರ ಶವಗಳನ್ನು ತಿನ್ನುತ್ತಿದ್ದಳು. ಅದನ್ನು ಕಂಡ ಭೀಮ ಹೆದರಿದ. ಆಗ ದ್ರೌಪದಿಯು ಕರಗ ಹೊತ್ತು ನರ್ತಿಸಿ ಭೀಮನಿಗೆ ತಾನು ಮಹಾಶಕ್ತಿ ಎಂದು ಸಾಬೀತು ಪಡಿಸಿದಳು. ೨. ತನ್ನ ಐವರು ಗಂಡಂದಿರು ಮಹಾಪ್ರಸ್ಥಾನದಲ್ಲಿ ಇರುವಾಗ ದ್ರೌಪದಿ ಮಹಾಕಾಳಿಯ ರೂಪ ತಾಳಿ ತಿಮಿರಾಸುರ ರಾಕ್ಷಸನನ್ನು ಕೊಂದಳು. ೩. ಕರಗವು ದ್ರೌಪದಿಯ ಸಂತೋಷಕ್ಕೋಸ್ಕರ ಪಾಂಡವರು ಮಾಡಿದ ವ್ರತ. ಕರಗ ಹೊತ್ತ ದ್ರೌಪದಿಯು ರಭಸದಿಂದ ಸೆರಗನ್ನು ಕೊಡವಿದಾಗ ವೀರಕುಮಾರರು ಹುಟ್ಟಿದರು. ೪. ಗರ್ಭವತಿಯಾದ ದ್ರೌಪದಿ ಅಲಂಕಾರ ಮಾಡಿಕೊಂಡು ಸಂತೋಷದಿಂದ ಕುಣಿದಾಡಿದ್ದು ಕರಗ. ೫. ಯುದ್ಧದಲ್ಲಿ ಧರ್ಮರಾಯನಿಗೆ ಕೇಡುಂಟಾಗದಿರಲೆಂದು ದ್ರೌಪದಿಯು ಮಾಡಿದ ವ್ರತ ಕರಗ. ೬. ಧರ್ಮರಾಯ ಮತ್ತು ದ್ರೌಪದಿಯ ಸರಸಕ್ರಿಯೆಯನ್ನು ನೋಡಿದ್ದರಿಂದ ಅರ್ಜುನ ಪರಿಹಾರಕ್ಕಾಗಿ ಯಾತ್ರೆ ಹೊರಟ. ಅಲ್ಲಿ ಚಿತ್ರಾಂಗಿ-ಉಲೂಪಿಯರನ್ನು ಮದುವೆಯಾದ. ಉಲೂಪಿಗೆ ಮಗ ವೀರಾವಂತ

ಜನಿಸಿದ. ಇವನು ಕುರುಕ್ಷೇತ್ರ ಯುದ್ಧ ನಡೆದಾಗ ಪಾಂಡವರ ಪಕ್ಷದಲ್ಲಿ ಯುದ್ಧ ಮಾಡಲು ಸೈನ್ಯ ಸಮೇತ ಬಂದ. ದಾರಿಯಲ್ಲಿ ಒಂದು ಬೆಟ್ಟದ ಮೇಲೆ ಕುಳಿತು ಮತ್ತೊಂದು ಬೆಟ್ಟಕ್ಕೆ ಆಯುಧಗಳನ್ನು ಉಜ್ಜಿ ಮೊನಚು ಮಾಡುತ್ತಿದ್ದ. ಅವನನ್ನು ಕಂಡ ಕೃಷ್ಣನು "ನೀನು ತಲೆಗೆ ಕೆಂಪು ಮುಸುಕು ಕಟ್ಟಿಕೊಂಡು ಯುದ್ಧಭೂಮಿಯ ರಣಗಂಭವನ್ನು ನಡುರಾತ್ರಿಯ ಹೊತ್ತಿನಲ್ಲಿ ಕಿತ್ತು ಹಾಕು" ಎಂದು ಹೇಳಿದ. ಅವನು ಹಾಗೆ ಮಾಡುತ್ತಿರುವ ವೇಳೆಗೆ ಅದನ್ನು ಅರ್ಜುನನಿಗೆ ತೋರಿಸಿ ಅವನನ್ನು ಕೊಲ್ಲುವಂತೆ ಹೇಳಿದ. ಯಾರೆಂದು ತಿಳಿಯದ ಅರ್ಜುನ ಬಾಣದಿಂದ ಮಗನನ್ನೆ ಕೊಂದ. ಆಗ ದ್ರೌಪದಿಯು ಆವೇಷದಿಂದ ಕರಗ ಹೊತ್ತಳು. ವೀರಕುಮಾರರು ಅವಳನ್ನು ಅನುಸರಿಸಿದರು. ೭. ದ್ರೌಪದಿ ತನ್ನ ಐವರು ಗಂಡಂದಿರನ್ನು ವರ್ಷಕ್ಕೆ ಒಬ್ಬರಂತೆ ಬದಲಾಯಿಸುತ್ತಿದ್ದಳು. ಒಂದು ವರ್ಷದ ಅವಧಿ ಮುಗಿದು ಮತ್ತೊಬ್ಬ ಗಂಡನೊಂದಿಗೆ ಸೇರುವಾಗ ನದಿಯಲ್ಲಿ ಸ್ನಾನ ಮಾಡಿ ಮಡಿಯುಟ್ಟು ಅಲ್ಲೇ ಮಣ್ಣಿನಿಂದ ಹಸಿ ಮಡಿಕೆ ಮಾಡಿ, ಅದರಲ್ಲಿ ನೀರು ತುಂಬಿಸಿ ತಲೆಯ ಮೇಲೆ ಅದನ್ನು ಹೊತ್ತುಕೊಂಡು ಬರುತ್ತಿದ್ದಳು. ಆಗ ಅವಳು ನವಕನ್ಯೆಯೇ ಆಗಿ ಪರಿವರ್ತನೆಗೊಳ್ಳುತ್ತಿದ್ದಳು. ಈ ನೆನಪು ಕರಗದ ಆಚರಣೆ ಎಂಬುದು ದೇವನಹಳ್ಳಿಯ ಪರಿಸರದ ನಂಬಿಕೆ.

**ವಹ್ನಿಕುಲಕ್ಷತ್ರಿಯ ತಿಗಳರ ವೀರಕುಮಾರರು :** ಪುರಾಣದ ಪ್ರಕಾರ ಇವರು ಅಗ್ನಿವಂಶದವರು. ಬ್ರಹ್ಮನು ಯಾಗ ಮಾಡಿದಾಗ ಅಗ್ನಿಕುಂಡದಿಂದ ಭೃಗು, ಅಂಗೀರಸ, ಕವಿ ಎಂಬ ಮೂವರು ವ್ಯಕ್ತಿಗಳು ಹೊರಹೊಮ್ಮಿದರು. ಭೃಗುವನ್ನು ವರುಣನೂ, ಅಂಗೀರಸನನ್ನು ಅಗ್ನಿಯೂ, ಕವಿಯನ್ನು ಬ್ರಹ್ಮನೂ ತಂತಮ್ಮ ಸಂತಾನವಾಗಿ ಸ್ವೀಕರಿಸಿದರು. ಅಗ್ನಿಸಂತಾನವಾದ ಅಂಗೀರಸನ ಸಂತತಿಯವರೇ ಅಗ್ನಿಕುಲ ವಹ್ನಿಜರು. ಅಗ್ನಿಯಿಂದ ಕಿಡಿ ಕಿಡಿಯಾಗಿ ಸಿಡಿದೆದ್ದು ಬಂದವರು. ಇವರು ಹುಟ್ಟುವಾಗಲೇ ಕತ್ತಿ ಹಿಡಿದ ವೀರಕುಮಾರರಾಗಿ ಹುಟ್ಟಿದರು.

**ಮೊಹರಂ ಆಚರಣೆ :** ಪ್ರಧಾನ ಸಂಸ್ಕೃತಿಯ ದೈವಗಳು. ಸಾಮಾಜಿಕ ಅಸ್ತಿತ್ವವನ್ನು ಉಳಿಸಿಕೊಂಡು ರಾಷ್ಟ್ರೀಯ ಪ್ರೇರಣೆಗಳ ಹಿನ್ನೆಲೆಯಲ್ಲಿ ಅಸ್ತಿತ್ವವನ್ನು ಆಸ್ತಿಕ ವಲಯದಲ್ಲಿ ಬೇರೂರುವಾಗ ಜನಪದ ವಲಯದ ದೈವಗಳು ಪ್ರಾದೇಶಿಕವಾಗಿ ತಮ್ಮ ಮಹತ್ವವನ್ನು ಉಳಿಸಿಕೊಳ್ಳಲು ಹವಣಿಸಬೇಕಾಗುತ್ತದೆ. ಇಂಥ ದೈವಗಳು ನಂಬಿಕೆಯ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುವ ಬೆಳವಣಿಗೆ ಹಿಂದಿನಿಂದಲೂ ಇದ್ದದ್ದೆ. ಹೀಗೆ ದೈವಕ್ಕೆ ನಡೆದುಕೊಳ್ಳುವುದು ಶ್ರದ್ಧೆಯಲ್ಲಿ ಪ್ರಕಟವಾಗುತ್ತಿರುತ್ತದೆ. ತಿರುಪತಿಯ ದೇವರಿಗೆ ಮತಾತೀತರಾಗಿ ನಡೆದುಕೊಳ್ಳುವ ಪರಿಪಾಠ ಇಲ್ಲಿ ಸಾಮಾನ್ಯ ಸಂಗತಿ. ಅಂತೆಯೇ ದರ್ಗಾಗಳಿಗೆ ನಡೆದುಕೊಳ್ಳುವ ಪರಿಪಾಠವೂ ಇದೆ.

ಮೊಹರಂ ಹಬ್ಬವನ್ನು ಬಾಬಯ್ಯನ ಜಲ್ದಿ ಎಂದು ಸ್ಥಳೀಯವಾಗಿ ಕರೆಯುತ್ತಾರೆ. ಇದು ಹಿಂದೂ ಮುಸ್ಲಿಂರ ಭಾವೈಕ್ಯತೆಯ ಸಂಕೇತವಾಗಿ ಉಳಿದುಕೊಂಡು ಬೆಳೆಯುತ್ತಿದೆ. ಇದು ಗಡಿ, ಪ್ರಾದೇಶಿಕ ಪ್ರಭಾವಕ್ಕೊಳಪಟ್ಟ ಕರ್ನಾಟಕ ಆಂಧ್ರದ ಎಲ್ಲೆಡೆ ಏಕರೂಪದ ಆಚರಣೆಯಾಗಿದೆ. 'ಪೀರ್ಲುಹಬ್ಬ'ವೆಂದು ಕರೆಯುವುದು ಸಾಮಾನ್ಯ ವಾಡಿಕೆ. ಕೋಲಾರ ಜಿಲ್ಲೆಯಲ್ಲಿ ಪೀರ್ಲುಹಬ್ಬವು ಪಡೆಯುವ ಸಾಂಸ್ಕೃತಿಕ ಆಯಾಮಗಳು ವಿಶಿಷ್ಟವಾಗಿವೆ. ಎಲ್ಲ ಗ್ರಾಮದೇವತೆಗಳ ಹರಕೆಗಳಂತೆಯೇ ಬಾಬಯ್ಯನ ಹಬ್ಬಕ್ಕು ಹರಕೆಗಳನ್ನು ಕಟ್ಟಿರುತ್ತಾರೆ. ಮತ್ತೆ ಮುಂದಿನ ವರ್ಷದ ಹಬ್ಬಕ್ಕೆ ಹರಕೆಯನ್ನು ತೀರಿಸುತ್ತಾರೆ. ಸಂತಾನಕ್ಕಾಗಿ ಹರಕೆ ಹೊತ್ತರೆ ಮುಂದೆ ತಮ್ಮ ಮಕ್ಕಳಿಗೆ ಬಾಬಕ್ಕ/ಮ್ಮ, ಬಾಬಯ್ಯ, ಬಾಬುರೆಡ್ಡಿ/ಗೌಡ/ಆಚಾರ .... ಇತ್ಯಾದಿ ಹೆಸರುಗಳನ್ನು ಇಡುತ್ತಾರೆ. ಹಬ್ಬದ ಸಂದರ್ಭದಲ್ಲಿ ಕೆಂಡ ಹಾಯುವುದು, ಮೈ ತುಂಬಿ ದೈವವು ಆವಾಹನೆಗೊಳ್ಳುವುದು ಗಾಳಿ ದೆವ್ವ ಭೂತಗಳನ್ನು ಬಿಡಿಸುವುದು ಅನಾರೋಗ್ಯದಿಂದ ಪಾರು ಮಾಡುವುದು ಇತ್ಯಾದಿ ಆಶಯಗಳು ಕಂಡುಬರುತ್ತವೆ. ಕೆಲವು ಗ್ರಾಮಗಳಲ್ಲಿ ಮೊಹರಂ ಆಚರಣೆಯನ್ನು ಎರಡು ಬಾರಿ ಆಚರಿಸುತ್ತಾರೆ. ಮೊಹರಂ ಮುಗಿದ ಒಂದು ವಾರದ ನಂತರ ಮತ್ತೆ ಆಚರಿಸುವ ಈ ಹಬ್ಬವು 'ಮರಿಪೀರ್ಲು' (ಮತ್ತೇ ಪೀರ್ಲು) ಹಬ್ಬವಾಗಿ ಚಾಲ್ತಿಗೆ ಬರುತ್ತದೆ.

ಹರಕೆಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಮಾಡಿಸಿಕೊಡುವ ಪರಿಪಾಠವಿದೆ. ಯಾರು ಅಥವಾ ಯಾವ ಮನೆಯವರು ವಿಗ್ರಹವನ್ನು ನೀಡಿರುತ್ತಾರೊ ಅವರೇ ಆ ವಿಗ್ರಹದ ಅಲಂಕಾರ ಪೂಜೆ ಮತ್ತು ಉತ್ಸವದ ಖರ್ಚನ್ನು ಭರಿಸುತ್ತಾರೆ. ಇಂಥ ಎಲ್ಲ ವಿಗ್ರಹಗಳನ್ನು ಸಂಬಂಧಿಸಿದ ಗುಡಿಯಲ್ಲಿ ನಿಲ್ಲಿಸಿ ಪೂಜೆ ಮಾಡುತ್ತಾರೆ. ಇವು ರುಂಡದ ಆಕಾರದಲ್ಲಿದ್ದು ಕೋಲುಗಳನ್ನು ಚುಚ್ಚಿ ನಿಲ್ಲಿಸಿರುತ್ತಾರೆ. ವಿಗ್ರಹಗಳನ್ನು ದಾನವಾಗಿ ಕೊಟ್ಟಿರುವ ಕೆಲವು ಸಂದರ್ಭಗಳು ಐತಿಹ್ಯಗಳಿಗೆ ಎಡೆಮಾಡಿಕೊಡುತ್ತದೆ. ಮೆಟ್ಟಿಲಿನ ಬಾವಿಗೆ ಇಳಿದು ನೀರನ್ನು ಕುಡಿಯಲೆಂದು ಬೊಗಸೆಗೆ ತುಂಬಿಕೊಂಡಾಗ ನೀರಿನೊಂದಿಗೆ ಪೀರ್ಲುವಿಗ್ರಹವು ಕೈಗೆ (ಬೊಗಸೆಗೆ) ಏರಿದ್ದರಿಂದ ತಂದು ದಾನ ನೀಡಿದರೆಂದು ಹೇಳುವ ಐತಿಹ್ಯಗಳಿರುವುದು ಜಿಲ್ಲೆಯಲ್ಲಿ ಸಾಮಾನ್ಯವಾದ ಸಂಗತಿ. ಇಲ್ಲವೇ ಕೆರೆ ಬಾವಿಗಳಲ್ಲಿ ನೀರು ತುಂಬುವ ಕೊಡಗಳಲ್ಲಿ ಸೇರಿ ಪೀರ್ಲುವಿಗ್ರಹಗಳು ಸಿಕ್ಕಿದುವೆಂದು ಹೇಳುತ್ತಾರೆ. ಪೀರ್ಲು ಸಿಕ್ಕಿದ ನೆಲೆಗಳು ಸಾಮಾನ್ಯವಾಗಿ ನಿರ್ದಾಣಗಳಾಗಿರುತ್ತವೆ. ಇಂಥವುಗಳನ್ನು ಪೀರ್ಲುಕೆರೆ, ಪೀರ್ಲುಹಳ್ಳಿ, ಪೀರ್ಲುಬಾವಿಗಳೆಂದು ಕರೆಯುತ್ತಾರೆ. ಈ ನೆಲೆಗಳಲ್ಲಿ ದೊರೆತವೆಂದು ಹೇಳುವ ವಿಚಾರಗಳನ್ನು ಕಟ್ಟುಕತೆಗಳೆಂದು ತಳ್ಳಿ ಹಾಕುವಂತಿಲ್ಲ. ಏಕೆಂದರೆ ಕಳೆದ ಕಾಲದ ಯಾವುದೋ ದಿನಗಳಲ್ಲಿ ಪೀರ್ಲು ಸಂಬಂಧವಾಗಿ ನಡೆದ ಘರ್ಷಣೆಗಳಲ್ಲಿ ಕೆರೆ ಬಾವಿ ಹಳ್ಳಗಳಿಗೆ ಎಸೆದಿರುವ ಸಾಧ್ಯತೆಗಳಿರುತ್ತವೆ.

ಮತ್ತೆ ಕೆಲವು ಐತಿಹ್ಯಗಳ ಪ್ರಕಾರ ಕಣದಲ್ಲಿ ಕಾಳು ಒಕ್ಕುವ ಕೆಲಸ ನಡೆಯುತ್ತಿದ್ದಾಗ ಕಾಳಿನ ರಾಶಿಯ ಮೇಲೆ ಬಾಬಯ್ಯನ ಪೀರ್ಲು ವಿಗ್ರಹ ಕುಳಿತಿತ್ತು ಎಂದು ಹೇಳಿ ಪೀರ್ಲು ಹಬ್ಬಕ್ಕೆ ದಾನ

ನೀಡಿದರೆಂಬ ಘಟನೆಗಳು ಕಂಡುಬರುತ್ತವೆ. ಕೆಲವೊಮ್ಮೆ ಕಣದ ರಾಶಿಯನ್ನು ತೂರುವ ಮೊರದಲ್ಲಿ ಅಥವಾ ರಾಶಿಯನ್ನು ಅಳೆಯುವ ಸೇರಿನಲ್ಲಿ ವಿಗ್ರಹ ಅಡಗಿತ್ತೆಂಬ ವಿವರಣೆ ದೊರೆಯುತ್ತದೆ. ಇವೆಲ್ಲವೂ ಸಮೃದ್ಧವಾಗಿ ಫಸಲು ಬೆಳೆದ ಸಂತೋಷಕ್ಕೆಂದು ರೈತರು ದಾನ ಮಾಡಿದ ಉದ್ದೇಶ ಆಶಯಗಳನ್ನು ತಿಳಿಸುತ್ತದೆ. ತಾವು ಮಾಡಿಸಿಕೊಡುತ್ತಿರುವ ವಿಗ್ರಹಗಳಿಗೆ ಮಾನ್ಯತೆ ಸಿಗಲಿ ಎಂಬ ದೃಷ್ಟಿಯಿಂದ ಜನಪದರು ಕೆಲವು ಉತ್ಪ್ರೇಕ್ಷೆಗಳನ್ನು ಸೇರಿಸಿಕೊಳ್ಳುತ್ತಾರೆ. ನಂಬಲರ್ಹವಲ್ಲದ ಘಟನಾ ವಿವರಗಳನ್ನು ಒಳಗೊಂಡ ಪೀರ್ಲುಗಳು ಚಿನ್ನ ಬೆಳ್ಳಿಯವಾಗಿದ್ದು ಆಕಾರದಲ್ಲಿ ಸಣ್ಣದಾಗಿರುತ್ತವೆ. ಉಳಿದಂತೆ ಹರಕೆಗಳಿಗೆ ಅನುಗುಣವಾಗಿ ನೀಡುವಂಥವು ತಾಮ್ರ ಅಥವಾ ಹಿತ್ತಾಳೆಯಿಂದ ತಯಾರಿಸಿದಂಥವುಗಳು.

**ಪೀರ್ಲುಗಳನ್ನು ಕದ್ದ ಪ್ರಸಂಗಗಳ ಐತಿಹ್ಯಗಳು :** ಮೊಹರಂ ಹಬ್ಬದ ಕೊನೆಯ ದಿನ ನಡೆಯುವ ಪೀರ್ಲು ಉತ್ಸವ ಆಯಾ ಊರಿನ ಮೇರೆಗಳವರೆಗೂ ನಡೆದು ಹೋಗುತ್ತದೆ. ಪಕ್ಕದ ಊರಿನವರೂ ಅದೇ ರೀತಿ ತಮ್ಮ ಊರಿನ ಗಡಿಯಲ್ಲಿ ಕಾಯುತ್ತಿರುತ್ತಾರೆ. ಪರಸ್ಪರ ಎರಡು ಊರುಗಳ ಪೀರ್ಲುಗಳು ಅಪ್ಪಿಕೊಂಡು ಆಲಂಗಿಸಿಕೊಳ್ಳುವ ಸನ್ನಿವೇಶ ಪೀರ್ಲುಗಳನ್ನು ಹೊತ್ತು ಮೈತುಂಬಿದ ವ್ಯಕ್ತಿಗಳಿಂದ ಪೂರ್ಣಗೊಳ್ಳುತ್ತದೆ. ಇದು ಎರಡು ಊರುಗಳ ಸಾಮರಸ್ಯ ಭಾವೈಕ್ಯತೆಯ ಸಂಕೇತವೇನೋ ಸರಿ ಆದರೆ ಹೀಗೆ ಮೈತುಂಬಿ ಅಪ್ಪಿಕೊಳ್ಳುವ ಒಂದು ಊರಿನ ಚಿನ್ನದ ಪೀರ್ಲು ವಿಗ್ರಹವನ್ನು ಮತ್ತೊಂದು ಊರಿನವರು ಕದ್ದೊಯ್ದರೆಂಬ ಐತಿಹ್ಯಗಳು ಲಭಿಸುತ್ತವೆ. ಹೀಗೆ ಕದಿಯಲ್ಪಟ್ಟ ಪೀರ್ಲು ತನ್ನ ಸ್ವಂತ ಊರಿಗೆ ಸೇರಿಕೊಳ್ಳಲು ತವಕಿಸುವ ಪ್ರಸಂಗಗಳು ಪರಸ್ಪರ ಎರಡು ಊರುಗಳ ಪೀರ್ಲು ಭೇಟಿಯ ಸಂದರ್ಭದಲ್ಲಿ ಬೆಳಕಿಗೆ ಬರುತ್ತದೆ. ಕದ್ದೊಯ್ದ ಪೀರ್ಲುವನ್ನು ಹೊತ್ತ ವ್ಯಕ್ತಿಯು ಉತ್ಸವದಂದು ಮೈದುಂಬಿ ಪೀರ್ಲುವಿನ ಮೂಲನೆಲೆಯ ಊರಿನೆಡೆಗೆ ಓಡುವುದು ಊರಿನ ಜನರೆಲ್ಲ ಅವನನ್ನು ಹಿಡಿದು ಬಂಧಿಸುವುದು ಇಂಥ ಘಟನೆಗಳು ಆಚರಣೆಗಳಾಗಿ ಉಳಿದಿವೆ. ಪೀರ್ಲುಗಳನ್ನು ಬೇರೆ ಊರಿನವರು ಕದ್ದೊಯ್ದರೆಂಬ ಆರೋಪವನ್ನು ಎರಡು ಊರುಗಳ ಜನಸಮುದಾಯಗಳು ಒಪ್ಪಿಕೊಳ್ಳುತ್ತಾರೆ. ಹಾಗೆ ಕದ್ದಂದಿನಿಂದ ಆ ಊರಿಗೆ ಒಳ್ಳೆಯದಾಯಿತೆಂದೂ ಕಳೆದುಕೊಂಡ ಊರಿಗೆ ಕೇಡುಂಟಾಯಿತೆಂದೂ ನಂಬಿಕೆಗಳಿರುತ್ತವೆ. ಜನಪದ ಇತಿಹಾಸದಲ್ಲಿ ಈ ಕಳವಿನ ಪ್ರಸಂಗ ಕುತೂಹಲ ಭರಿತವಾದದ್ದಾಗಿರುತ್ತದೆ. ಎಂದೋ ನಡೆದ ಕಳವಿನ ಪ್ರಸಂಗದಿಂದ ಆಚರಣೆಗಳು ನಿಂತುಹೋಗದೆ ನಿರಂತರವಾಗಿ ನಡೆಯುತ್ತಿದ್ದು, ಕಳವಾಗಿ ಮತ್ತೊಂದು ಊರನ್ನು ಸೇರಿದ ಪೀರ್ಲು ತನ್ನ ಸ್ವಂತ ಊರನ್ನು ಸೇರಲು ತವಕಿಸುವ ಪ್ರಸಂಗ ಅನುಕರಣೀಯವಾಗಿರುತ್ತದೆ. ಎಂದೋ ನಡೆದ ಕಳುವಿನ ಘಟನೆ ಪ್ರಸ್ತುತ ಆಚರಣೆಯ ಸಂದರ್ಭದಲ್ಲೂ ಸಾಮರಸ್ಯವನ್ನು ಉಳಿಸಿಕೊಳ್ಳುವುದನ್ನು ಜಿಲ್ಲೆಯ ಪೀರ್ಲು ಹಬ್ಬದ ಆಚರಣೆಗಳಲ್ಲಿ ಕಾಣುತ್ತೇವೆ.

೧. ಚಿಕ್ಕಕುರುಗೋಡಿನ ಮಾದಿಗರ ಅಕ್ಕಮ್ಮನ ಮನೆಯವರು ಕಣದಲ್ಲಿ ಕಾಳು ಹೊಕ್ಕುತ್ತಿದ್ದಾಗ ಚಿನ್ನದ ಪೀರ್ಲೊಂದು ಮತ್ತೇ ಮತ್ತೇ ಮೊರದಲ್ಲಿ ಬಂದು ಕೂಡುತ್ತಿತ್ತೆಂದು ತಂದು ದಾನ ನೀಡಿದ್ದರು.

ಹಬ್ಬದ ಸಂದರ್ಭದಲ್ಲಿ ಪಕ್ಕದ ಊರಾದ ಗೊಲ್ಲಹಳ್ಳಿಯ ಪೀರ್ಲುಗಳೊಂದಿಗೆ ತಮ್ಮ ಊರಿನ ಪೀರ್ಲುಗಳನ್ನು ಭೇಟಿ ಮಾಡಿಸುವಾಗ ಗೊಲ್ಲಹಳ್ಳಿಯವರು ಬಂಗಾರ ಪೀರ್ಲನ್ನು ಕದ್ದುಕೊಂಡಿದ್ದರು. ಈಗಲೂ ಉತ್ಸವದ ಭೇಟಿಯ ಸಂದರ್ಭದಲ್ಲಿ ಚಿನ್ನದಪೀರ್ಲು ಚಿಕ್ಕಕುರುಗೋಡಿನ ಪೀರ್ಲುಗಳೊಂದಿಗೆ ಬರಲು ತವಕಿಸುವುದು ಗೊಲ್ಲಹಳ್ಳಿಯವರು ಬಲತ್ಕಾರವಾಗಿ ಎಳೆದೊಯ್ಯುವುದು ನಡೆಯುತ್ತದೆ. ೨. ಹಾಲಗಾನಹಳ್ಳಿಯ ಬಾವಿಯಲ್ಲಿ ನೀರು ಕುಡಿಯಲೆಂದು ಇಳಿದ ಚಿಕ್ಕಕುರುಗೋಡಿನ ವ್ಯಕ್ತಿಗೆ ಬಂಗಾರದ ಪೀರ್ಲು ಸಿಕ್ಕಿತ್ತು. ಅದನ್ನು ತಂದು ತನ್ನ ಊರಿಗೆ ಕೊಟ್ಟ. ಆದರೆ ಉತ್ಸವದಲ್ಲಿ ಮೈತುಂಬಿ ಅದು ತನ್ನ ಊರಿಗೆ ಓಡಿ ಹೋಗಿ ತನ್ನೂರಿನ ಪೀರ್ಲುಗಳನ್ನು ಸೇರಿಕೊಂಡಿತು. ಪೀರ್ಲು ಸಿಕ್ಕಿದ ವ್ಯಕ್ತಿಯ ಕ್ಷೌರಿಕನಾಗಿದ್ದು ಬೇರೆ ಊರಿನಲ್ಲಿ ದೊರೆತ ಪೀರ್ಲುವನ್ನು ತನ್ನೂರಿಗೆ ತಂದು ನೀಡಿದ್ದ. ಆದರೆ ಅದು ಓಡಿಹೋಗಿದ್ದರಿಂದ ಪ್ರತಿವರ್ಷದ ಪೀರ್ಲು ಉತ್ಸವದಲ್ಲಿ ಚಿಕ್ಕಕುರುಗೋಡಿನ ಕ್ಷೌರಿಕನ ಕುಟುಂಬದವರು ಹಾಲಗಾನಹಳ್ಳಿಯಲ್ಲಿ ಭಾಗವಹಿಸಬೇಕು. ಆ ಪೀರ್ಲುವನ್ನು ಹೊತ್ತು ಮೆರವಣಿಗೆ ಮಾಡಬೇಕು. ತಪ್ಪಿದರೆ ಆ ಪೀರ್ಲು ತನ್ನನ್ನು ಹೊತ್ತ ಇತರರ ಮೈಮೇಲೆ ಬಂದು ಅಳುತ್ತ ಉತ್ಸವದಲ್ಲಿ ಪಾಲ್ಗೊಳ್ಳದೆ ಕುಳಿತು ಬಿಡುತ್ತದೆ.

ಪೀರ್ಲು ಆಚರಣೆಯ ನೆಲೆಗಳು ತಮ್ಮ ಮೂಲಸ್ವರೂಪಕ್ಕಿಂತ ಭಿನ್ನವಾದ ಜನಪದ ಆಶಯಗಳಿಂದ ಕೂಡಿರುವುದು ಗಮನಾರ್ಹ. ಗೌರೀಬಿದನೂರು ಪಟ್ಟಣದಲ್ಲಿ 'ಭಾರಿಮಾಮ್ ಗುಡಿ'ಯಿದ್ದು ಪ್ರತಿದಿನ ಬಾಬಯ್ಯಗಳ ಪೂಜೆ ನಡೆಯುತ್ತದೆ. ಉತ್ಸವದಲ್ಲಿ ಹರಕೆ ಹೊತ್ತ ಭಕ್ತನೊಬ್ಬನು ಗುಡಿ ಕಟ್ಟಿಸಿ ದಿನನಿತ್ಯದ ಪೂಜಾ ಕೈಂಕರ್ಯಗಳಿಗಾಗಿ ಮುಸ್ಲಿಂ ಕುಟುಂಬದವರನ್ನು ನೇಮಿಸಿದನಂತೆ. ಉತ್ಸವ ರಹಿತ ದಿನಗಳಲ್ಲಿ ಸುತ್ತಮುತ್ತಲಿನ ಊರುಗಳವರು ಇಲ್ಲಿಗೆ ಹರಕೆ ಹೊತ್ತು ತೀರಿಸುತ್ತಾರೆ. ಯಾವುದೋ ದೇಶದ ಧರ್ಮಹೋರಾಟದಲ್ಲಿ ಹುತಾತ್ಮರಾದ ನೆನಪುಗಳನ್ನು ತಮ್ಮ ನೆಲದ ಜನಪದದೊಂದಿಗೆ ಬೆರೆಸಿಕೊಳ್ಳುವ ಪರಂಪರೆ ಜಿಲ್ಲೆಯ ಮೊಹರಂ ಆಚರಣೆಯಾಗಿದೆ.

ಗ್ರಾಮೀಣ ವಲಯ ಹಾಗೂ ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ನಾಯಕರು ಐತಿಹಾಸಿಕ ವ್ಯಕ್ತಿಗಳಾಗಿದ್ದರೂ ಅವರ ವ್ಯಕ್ತಿತ್ವವು ಪೌರಾಣಿಕ, ಧಾರ್ಮಿಕ ಆವರಣಗಳವರೆಗೆ ವ್ಯಾಪಿಸುವುದು ಐತಿಹ್ಯಗಳಲ್ಲಿ ಕಂಡುಬರುವ ಮುಖ್ಯ ಆಶಯ. ಜನಪದರಲ್ಲಿ ಇವರು ದೈವಾಂಶಸಂಭೂತವಾಗಿ ಚಿತ್ರಿಸಲ್ಪಟ್ಟಿರುತ್ತಾರೆ. ಇಂಥವರು ತಮ್ಮ ಸಮುದಾಯ ಅಥವಾ ಬುಡಕಟ್ಟಿನ ವ್ಯಾಪ್ತಿಯ ಆಚೆಗೂ ಪ್ರಸಿದ್ಧರಾಗಿರುತ್ತಾರೆ. ಕೆಲವೊಮ್ಮೆ ಇವರು ಧರ್ಮಾತೀತರಾಗಿಯೂ ಪ್ರಚಲಿತಗೊಳ್ಳುತ್ತಾರೆ. ಉದಾ: ಮೊಹರಂ ಆಚರಣೆಗೆ ಹಿನ್ನೆಲೆಯಾಗಿರುವ ಸಾಂಸ್ಕೃತಿಕ ವೀರ ಪೌರಾಣಿಕ ಅಥವಾ ಧಾರ್ಮಿಕ ಆಶಯಗಳು ಐತಿಹ್ಯಗಳಲ್ಲಿ ಕಂಡುಬರುತ್ತವೆ. ಸಾಂಸ್ಕೃತಿಕ ನಾಯಕರಿಗೆ ಕೆಲವು ಸಾರಿ ಭಕ್ತ ಸಮೂಹವೂ ಇರುವುದುಂಟು. ಇವರು ತಮ್ಮ ನಾಯಕನ ಮಹಿಮೆಯನ್ನು ಪ್ರಚಾರ ಮಾಡುತ್ತಾರೆ. ಆದರೆ ಐತಿಹಾಸಿಕ ನೆಲೆಯು

ಸಾಂಸ್ಕೃತಿಕ ನಾಯಕನಿಗೆ ಇಂಥ ಪ್ರಚಾರಗಳು ಕಡಿಮೆ. ಆದ್ದರಿಂದ ಐತಿಹಾಸಿಕ ವೀರರಗಿಂತ ಧಾರ್ಮಿಕ ಪುರುಷರು ಹೆಚ್ಚು ಜನಪ್ರಿಯರಾಗಿರುತ್ತಾರೆ. ಜನಪದ ಇಲ್ಲವೇ ಬುಡಕಟ್ಟುಗಳ ಸಾಂಸ್ಕೃತಿಕ ನಾಯಕರ ಬಗ್ಗೆ ಐತಿಹಾಸಿಕ ದಾಖಲೆಗಳು ಸಿಗುವುದಿಲ್ಲ.

ಧಾರ್ಮಿಕ ವಲಯದ ನಾಯಕರಿಗೆ ಮರುಹುಟ್ಟಿನ ಆಶಯವೊಂದನ್ನು ಐತಿಹ್ಯಗಳು ಹೇಳುತ್ತಿರುತ್ತವೆ. ಇವರು ಧ್ಯಾನಕ್ಕೆಂದು ಕುಳಿತ ಸ್ಥಳದಲ್ಲಿ ಹುತ್ತ ಬೆಳೆದಿರುತ್ತದೆ. ಪ್ರತಿದಿನವೂ ಆ ಹುತ್ತಕ್ಕೆ ಹಸುವೊಂದು ಬಂದು ಹಾಲು ಕರೆಯುತ್ತಿರುತ್ತದೆ. ಅದನ್ನು ಕಂಡ ಹಸುವಿನ ಮಾಲಿಕ ಅದರ ತಲೆಗೆ ಕೊಡಲಿಯಿಂದ ಹಾಕುತ್ತಾನೆ ಅಥವಾ ಕಲ್ಲಿನಿಂದ ಹೊಡೆಯುತ್ತಾನೆ. ತಕ್ಷಣವೇ ಹುತ್ತದಿಂದ ಎದ್ದ ಪುರುಷನಿಗೆ ಆ ಪೆಟ್ಟು ತಾಕಿದ್ದು ಅವನ ತಲೆಯಿಂದ ರಕ್ತ ಸುರಿಯುತ್ತಿರುತ್ತದೆ. ಅವನು ದೈವಾಂಶ ಸಂಭೂತವೆಂದು ಅರಿತ ಮಾಲಿಕನು ಅವನಿಗೆ ಶರಣಾಗುವುದಲ್ಲದೆ, ಅಲ್ಲಿನ ಇಡೀ ಸಮುದಾಯವು ಅವನ ಶಿಷ್ಯರಾಗುತ್ತಾರೆ. ಹುತ್ತದ ಹಾಲು ಕರೆಯುವ ಹಸುವಿನ ಆಶಯವು ಪಶುಪಾಲಕ ಸಮುದಾಯವೊಂದು ಪ್ರಾದೇಶಿಕವಾಗಿ ತಮ್ಮ ಸಾಂಸ್ಕೃತಿಕ ನಾಯಕನನ್ನು ಪಡೆದುಕೊಂಡಿದ್ದನ್ನು ಹೇಳುತ್ತದೆ.

ಒಂದು ಕಾಲಕ್ಕೆ ಐತಿಹಾಸಿಕ ವ್ಯಕ್ತಿಗಳಾಗಿ ಬದುಕಿದ್ದ ಸಾಂಸ್ಕೃತಿಕ ನಾಯಕರು ತಮ್ಮ ಆದರ್ಶಗಳಿಂದ ಕೆಲಕಾಲನಂತರ ಇತಿಹಾಸದ ನೆಲೆಯಿಂದ ಮರೆಯಾಗಿ ಪೌರಾಣಿಕ ವಲಯವನ್ನು ಸೇರಿ ಆರಾಧನಾ ದೇವತೆಗಳಾಗಿ ಎಲ್ಲ ವರ್ಗಗಳ ಜನರಿಂದ ಪೂಜಿಸಲ್ಪಡುತ್ತಾರೆ. ಜನಪದ ಹಾಗೂ ಬುಡಕಟ್ಟು ನಾಯಕರು ತಮ್ಮ ಪರಂಪರೆಯನ್ನು ಜಾತ್ರೆ ಆಚರಣೆ ಮತ್ತು ಹಲವು ಸಂಪ್ರದಾಯಗಳ ಮೂಲಕ ತಮ್ಮ ನಿರಂತರ ನೆನಪನ್ನು ಉಳಿಸಿಹೋಗಿರುತ್ತಾರೆ. ಇವರ ಬದುಕು ಎರಡು ಸಂಗತಿಗಳಿಂದ ನಿಚ್ಚಳವಾಗಿರುತ್ತದೆ. ಇವರು ಐತಿಹಾಸಿಕ ವೀರರಾಗಿದ್ದರೆ ಒಂದು ಸಮೂಹ ಅಥವಾ ಜನಾಂಗದ ಒಳಿತಿಗಾಗಿ ಮಡಿದಿರುತ್ತಾರೆ. ಅಥವಾ ಯಾರನ್ನಾದರೂ ರಕ್ಷಿಸಲು ನಡೆಸಿದ ಹೋರಾಟದಲ್ಲಿ ಮಡಿದಿರುತ್ತಾರೆ. ಇವರ ಹೋರಾಟವು ರಾಜ್ಯ ಸ್ಥಾಪನೆಗಾಗಿ ಮಾಡಿದ್ದಲ್ಲ. ತಮಗೆ ಎದುರಾದ ಅಪಾಯವನ್ನು ಎದುರಿಸುವುದಾಗಿರುತ್ತದೆ. ಒಳ್ಳೆಯದರ ಪರವಾದ ನಿಷ್ಠೆ ಇವರಲ್ಲಿರುತ್ತದೆ. ಇವರು ಯಾವುದೇ ಧರ್ಮದ ವಕ್ತಾರರಂತೆ ಕಂಡುಬರುವುದಿಲ್ಲ. ಆದರೆ ಬುಡಕಟ್ಟು ಇಲ್ಲವೇ ಜನಪದ ಸಮುದಾಯಗಳು ಅನಿವಾರ್ಯವಾಗಿ ಆಯಾ ಕಾಲಕ್ಕೆ ಪ್ರಭಾವ ಬೀರಿದ ಧಾರ್ಮಿಕ ಅಂಶಗಳನ್ನು ಸ್ವೀಕರಿಸಿ ತಮ್ಮದಾಗಿಸಿಕೊಳ್ಳುತ್ತದೆ.

## ಇತಿಹಾಸ ಮತ್ತು ಐತಿಹ್ಯ

ಚರಿತ್ರೆ ಮತ್ತು ಇತಿಹಾಸ ಎಂಬ ಶಬ್ದಗಳನ್ನು ಲಿಖಿತ ದಾಖಲೆಯೆಂಬ ನಿಟ್ಟಿನಲ್ಲಿ ಇಲ್ಲಿ ಪರಿಗಣಿಸಲಾಗಿದೆ. ಐತಿಹ್ಯವನ್ನು ಮೌಖಿಕ ಪರಂಪರೆಯಲ್ಲಿ ಉಳಿದುಬಂದಿರುವ ಘಟನೆಗಳ ಗದ್ಯ ರೂಪದ ನಿರೂಪಣೆಯೆಂದು ಹೇಳುತ್ತಾ ಇವುಗಳನ್ನು ಅಧ್ಯಯನಕ್ಕೆ ಒಳಪಡಿಸುತ್ತಿದ್ದೇನೆ. ಇತಿಹಾಸವೆಂದರೆ

ಹಿಂದೆ ನಡೆದ ಘಟನೆಗಳ ನಿರೂಪಣೆ. ಹೀಗೆ ನಡೆಯಿತು ಎಂದು ಹೇಳುವಾಗ ಲಿಖಿತ ಆಧಾರಗಳ ದಾಖಲೆಗಳನ್ನು ಒದಗಿಸುವುದು ಇದರ ಕ್ರಮ. ಸಾಹಿತ್ಯ ಗ್ರಂಥಗಳು, ಶಾಸನಗಳು, ವಿದೇಶೀ ಪ್ರವಾಸಿಗರ ಬರಹಗಳು, ನಾಣ್ಯಗಳು, ಅವಶೇಷಗಳು, ಪಳೆಯುಳಿಕೆಗಳು ಮುಂತಾದವು ಲಿಖಿತ ನಿರೂಪಣೆಯ ಇತಿಹಾಸಕ್ಕೆ ಬೆಳಕು ಚೆಲ್ಲಿ ಒತ್ತುಕೊಡುತ್ತವೆ. ಚರಿತ್ರೆಗೆ ಸಂವಾದಿಯಾಗಿ ಇತಿಹಾಸವೆಂಬ ಪದವನ್ನು ಬಳಸುತ್ತಾರೆ. ಆದರೆ ಇತಿಹಾಸವು ಭೂತಕಾಲಕ್ಕೆ ಸಂಬಂಧಿಸಿದ ನಿರೂಪಣೆಯಾಗಿ ಉಳಿದು ಬಿಡುತ್ತದೆ. ಚರಿತ್ರೆಯು ಭೂತಕಾಲವನ್ನು ವರ್ತಮಾನದಲ್ಲಿದ್ದು ಗ್ರಹಿಸುವುದಿಲ್ಲದೆ ವರ್ತಮಾನದೊಂದಿಗೆ ಅದನ್ನು ಕಟ್ಟುವುದೂ ಆಗಿರುತ್ತದೆ. ಭವಿಷ್ಯತ್‌ಕಾಲಕ್ಕಾಗಿ ಅನುವು ಮಾಡಿಕೊಡುವುದೂ ಆಗಿರುತ್ತದೆ. ಹೀಗಾಗಿ ಚರಿತ್ರೆಯ ಭಾಗವಾಗಿ ಇತಿಹಾಸವು ಉಳಿದುಕೊಳ್ಳುತ್ತದೆ. ಇಂದಿನ ಚರಿತ್ರೆ ನಾಳೆಗೆ ಇತಿಹಾಸವಾಗಿ ಬಿಡುತ್ತದೆ. ಆದರೆ ನಾಳಿನ ಚರಿತ್ರೆ ಇಂದಿಗೆ ನೆನ್ನೆಗೆ ಇತಿಹಾಸವಾಗುವುದಿಲ್ಲ. ಆದ್ದರಿಂದ ಚರಿತ್ರೆ ನಿರಂತರವಾದದ್ದು ಆದಿ-ಅನಾದಿಯವರೆಗೂ ವ್ಯಾಪಿಸುವಂಥದ್ದು. ಆದರೆ ಇತಿಹಾಸವು ಆದಿಯನ್ನು ಅದರ ಬೆಳವಣಿಗೆಯನ್ನು ಕುರಿತದ್ದು ಆಗಿರುತ್ತದೆ. ಆದ್ದರಿಂದ ಚರಿತ್ರೆಗೆ ಸೇರುತ್ತಾ ಹೋಗುತ್ತದೆ. ಈ ಹಿನ್ನೆಲೆಯಲ್ಲಿ "ಇತಿಹಾಸವನ್ನು ರಚಿಸುವವರು" 'ಇತಿಹಾಸವನ್ನು ಉಳಿಸಿಕೊಳ್ಳಬೇಕಾಗಿದೆ', 'ನಮಗೆ ಬೇಕಾದ ಚರಿತ್ರೆಯನ್ನು ನಾವೇ ನಿರ್ಮಾಣ ಮಾಡಿಕೊಳ್ಳಬೇಕಾಗಿದೆ' ಇತ್ಯಾದಿ ಮಾತುಗಳು ಕೇಳಿಬರುತ್ತವೆ.

**ಲಿಖಿತ ಚರಿತ್ರೆ :** ಕಳೆದುಹೋದ ಘಟನೆಗಳನ್ನು ಬೌದ್ಧಿಕ ವಸ್ತುನಿಷ್ಠ ಸಾಕ್ಷ್ಯಾಧಾರಗಳಿಂದ ನಿರೂಪಿಸುತ್ತದೆ. ಲಿಖಿತ ರೂಪದಲ್ಲಿ ಉಳಿಯುವ ಇದರ ವಿವರಗಳು 'ನಿಜರೂಪ'ವೆಂದು ಸಾಬೀತಾಗುತ್ತವೆ. ಶಾಸನಗಳು, ದೇವಾಲಯ ಶಿಲ್ಪಗಳು, ತಾಮ್ರಪಟಗಳು, ನಾಣ್ಯಗಳು, ಕೈಫಿಯತ್ತುಗಳು, ಸಾಹಿತ್ಯದ ಲಿಖಿತ ರೂಪಗಳು, ವಿದೇಶಿಯರ ಲೇಖನಗಳ ನಿದರ್ಶನಗಳು ಇತ್ಯಾದಿಗಳು ಲಿಖಿತ ಚರಿತ್ರೆಯ ನಿರ್ಮಾಣಕ್ಕೆ ಸಾಕ್ಷ್ಯಾಧಾರಗಳನ್ನು ಒದಗಿಸುವ ನಿದರ್ಶನಗಳಾಗಿರುತ್ತವೆ. ಇದು ವರದಿಯ ಸ್ವರೂಪದ ನಿರೂಪಣೆ ಯಾಗಿರುತ್ತದೆ. ವ್ಯಕ್ತಿನಿಷ್ಠತೆಗಿಂತ ವಸ್ತುನಿಷ್ಠವಾಗಿರುತ್ತದೆ.

ಜನಪದ ಪರಂಪರೆಯ ಮೌಖಿಕ ಸ್ವರೂಪದ ಇತಿಹಾಸವು ವ್ಯಕ್ತಿನಿಷ್ಠವಾಗಿಯೂ ಸಂಸ್ಕೃತಿ ನಿಷ್ಠವಾಗಿಯೂ ರೂಪಿತವಾಗಿ ಕಥೆಯ ಸ್ವರೂಪದಲ್ಲಿ ನಿರೂಪಿತವಾಗುತ್ತದೆ. ಇದರ ಉದ್ದೇಶ ಲಿಖಿತ ಇತಿಹಾಸದ ಉದ್ದೇಶಕ್ಕಿಂತ ಭಿನ್ನವಾಗಿರುತ್ತದೆ. ಏಕೆಂದರೆ ಮೌಖಿಕ ಪರಂಪರೆಗೆ ಜನಪದರ ಬದುಕು ಕೇಂದ್ರಬಿಂದುವಾಗಿರುತ್ತದೆ. ಆದ್ದರಿಂದ ಬದುಕಿನಲ್ಲಿ ಕಂಡದ್ದು (ನೋಡಿದ್ದು), ಕೇಳಿದ್ದು (ಗ್ರಹಿಸಿದ್ದು) ಇಷ್ಟೇ ಮುಖ್ಯವಾಗದೆ, ಆ ಮೂಲಕ ಗಟ್ಟಿಗೊಂಡ ಅನುಭವ ಮುಖ್ಯವಾಗುತ್ತದೆ. ಅಲ್ಲದೆ ಅನುಭವ ವನ್ನು ಪುಷ್ಟಿಗೊಳಿಸುವ ವಿಚಾರಗಳು ಕಲ್ಪನೆಗಳು ಗರಿಗೆದರುತ್ತವೆ. ಈ ಹಿನ್ನೆಲೆಯಲ್ಲಿ ಮೌಖಿಕ ಇತಿಹಾಸವು ವೈವಿಧ್ಯಮಯವಾಗಿರುತ್ತದೆ. ಸುಖದ ವಿವರಣೆಯಾಗಿ, ದುರಂತದ ವರ್ಣನೆಯಾಗಿ ಸಹೃದಯರ

ರಂಜಕ ಶೈಲಿಯಾಗಿ ಅನುಭವ ಸಾಮಗ್ರಿಯು ವಿಶ್ಲೇಷಣೆಗೆ ಮತ್ತೆ ಮತ್ತೆ ಗುರಿಯಾಗುತ್ತಿರುತ್ತದೆ. ಹೀಗೇಕೆ ಎಂದರೆ ಇದು ಜನಪದರ ಜ್ಞಾನ (ಜನಪದ ಇತಿಹಾಸ) ಹಾಗೂ ವೈವಿಧ್ಯತೆ ಜನಪದದ ಲಕ್ಷಣ ಕೂಡ.

ಐತಿಹಾಸಿಕ ಸತ್ಯಗಳು ವಿಚಾರಗಳು ಮತ್ತು ಘಟನೆಗಳಿಗೆ ಸಾಹಿತ್ಯ ಕೃತಿಗಳಿಂದಲೂ ನಿದರ್ಶನಗಳು ದೊರೆಯುತ್ತವೆ. ಕೆಲವೊಮ್ಮೆ ಇಂಥವು ಮೌಖಿಕ ಪರಂಪರೆಯಿಂದ ಕೃತಿಕಾರನು ಗ್ರಹಿಸಿ ನಂತರ ಲಿಖಿತ ಸ್ವರೂಪದಲ್ಲಿ ದಾಖಲಿಸಿದ್ದಾಗಿರುತ್ತದೆ. ಅಥವಾ ಪ್ರಚಲಿತ ಲಿಖಿತ ದಾಖಲೆಗಳು ಜನಪದರವರೆಗೂ ಪರಿಚಲನಗೊಳ್ಳುವಾಗ ಮೌಖಿಕ ಸ್ವರೂಪದ ಸಂವಹನವಾಗಿ ಮಾರ್ಪಡುತ್ತದೆ. ಹೀಗೆ ಸಾಹಿತ್ಯದ ಶಿಷ್ಟ ಹಾಗೂ ಜನಪದ ಆಯಾಮಗಳೆರಡೂ ಕಟ್ಟಿಕೊಡುವ ಇತಿಹಾಸವು ಸೃಜನಾತ್ಮಕ ಪರಿಕಲ್ಪನೆಯೂ ಪ್ರಕ್ರಿಯೆಯೂ ಆಗಿ ಪ್ರವಹಿಸುತ್ತದೆ. ಉದಾ : ಪ್ರಭುತ್ವ ಹಾಗೂ ಧರ್ಮವನ್ನು ವಚನ ಚಳುವಳಿಯ ಭಿನ್ನ ಆಯಾಮಗಳು. ಶಿಷ್ಟ ಮತ್ತು ಜನಪದ ಸಾಹಿತ್ಯ ಪರಂಪರೆ ಹಾಗೂ ಚರಿತ್ರೆ ಇವುಗಳನ್ನು ಪಡೆದುಕೊಳ್ಳುವ ಹಲವು ಸಾಧ್ಯತೆಗಳು ಬೇರೆಯೇ ಆಗಿರುತ್ತವೆ. ಬಿಜ್ಜಳ-ಬಸವಣ್ಣ, ಕೌಶಿಕ-ಅಕ್ಕಮಹಾದೇವಿ ಇವರ ನಡುವಿನ ಸಂಬಂಧ-ಸಂಘರ್ಷಗಳ ಮೂಲಕ ಅಂದಿನ ಸಾಂಸ್ಕೃತಿಕ ಚರಿತ್ರೆಯ ಚಹರೆಗಳನ್ನು ಹಲವು ನೆಲೆಗಳಿಂದ ಗುರುತಿಸಬಹುದು.

ಐತಿಹ್ಯವು 'ಇತಿ' 'ಇತಿಹ' ಎಂಬ ಸಂಸ್ಕೃತ ರೂಪದಿಂದ ನಿಷ್ಪನ್ನಗೊಂಡುದೆಂದು ಹೇಳುತ್ತಾರೆ. 'ಇತಿ' ಎಂದರೆ ಹೀಗೆ 'ಇತಿಹ' ಎಂದರೆ ಹೀಗಿತ್ತು, ಹೀಗೆ ನಡೆದದ್ದು ಎಂಬ ಅರ್ಥಗಳಿಗೆ ಅನ್ವಯ ವಾಗುತ್ತದೆ. ಹಿಂದೆ ವಾಸ್ತವವಾಗಿ ನಡೆದದ್ದು ಎಂದು ಹೇಳುವ ಮೌಖಿಕ ಪರಂಪರೆಯ ಗದ್ಯ ನಿರೂಪಣೆ ಐತಿಹ್ಯವೆನಿಸುತ್ತದೆ. ಈ ನಿರೂಪಣೆಯಲ್ಲಿ ಬರುವ ಘಟನೆಗಳು ವ್ಯಕ್ತಿಗಳು ಸ್ಥಳಾಧಾರಗಳು ಎಲ್ಲವೂ ಸತ್ಯವೆಂದು ನಂಬಿಕೆ ಏರ್ಪಟ್ಟಿರುತ್ತದೆ. ಇಲ್ಲಿ ನಿರೂಪಣೆಯ ಬಗ್ಗೆ ಹೇಳುಗ-ಕೇಳುಗರಿಬ್ಬರೂ ಅದು ಸತ್ಯವೆಂದು ಭರವಸೆ ಹೊಂದುವುದಲ್ಲದೆ ಪ್ರಸಾರಕರಾಗಿ ನಿರ್ವಾಹಕರಾಗಿ ಮುಂದುವರಿಯುತ್ತಾರೆ. ಆದ್ದರಿಂದ ಇದು ಜನಪದರು ಕಟ್ಟಿಕೊಡುವ ಇತಿಹಾಸ ಕೆಲವೊಮ್ಮೆ ಚರಿತ್ರೆಯಾಗಿಯೂ ಬೆಳವಣಿಗೆಯನ್ನು ಪಡೆಯುತ್ತದೆ. ಹೇಗೆಂದರೆ ಗತಕಾಲದಲ್ಲಿ ನಡೆದಿದೆಯೆಂದು ನಂಬುವ ಸಂಗತಿಯನ್ನು ಪರಂಪರೆಯು ತನ್ನೊಂದಿಗೆ ಉಳಿಸಿಕೊಳ್ಳುತ್ತಾ ಮುಂದಿನ ತಲೆಮಾರಿಗೂ ಹೊತ್ತೊಯ್ಯುತ್ತದೆಯೆನ್ನುವಾಗ ಐತಿಹ್ಯವು ಚರಿತ್ರೆಯ ನಿರಂತರ ಪ್ರಕ್ರಿಯೆಯಾಗಿ ಬೆಳೆಯುತ್ತಿರುತ್ತದೆ. ಉದಾ : ಕೆಲವೊಮ್ಮೆ ಐತಿಹ್ಯದ ಅನುಕರಣೆಯು ಸಂಪ್ರದಾಯ ಆಚರಣೆಗಳ ಮೂಲಕ ಪುನರ್ ಸೃಷ್ಟಿಯನ್ನು ಪಡೆಯುತ್ತಿರುತ್ತದೆ.

ಕೆಲವು ಸಮುದಾಯಗಳ ಮದುವೆಗಳಲ್ಲಿ ಗಂಡು-ಹೆಣ್ಣಿನ ಕಡೆಯವರು ಅಣಕ ಯುದ್ಧವನ್ನು ಮಾಡುತ್ತಾರೆ. ಪ್ರಸ್ತುತ ಅದು ಗೇಲಿ-ತಮಾಷೆ ಹಾಸ್ಯವೆನಿಸಬಹುದು. ಆದರೆ ಹಿಂದೆ ಯಾವುದೋ ಕಾಲದಲ್ಲಿ ಎರಡು ಗುಂಪುಗಳಲ್ಲಿ ವಿವಾಹ ಸಂಬಂಧ ನಡೆದ ಹೋರಾಟದಲ್ಲಿ ಹೆಣ್ಣನ್ನು ಜೈಸಿದ್ದರ

ಹೆಗ್ಗುರುತುಗಳಾಗಿರುತ್ತವೆ. ಸಂಸ್ಕೃತಿಯ ಇಂತಹ ಅತಿ ಸೂಕ್ಷ್ಮ ವಿವರಗಳನ್ನು ಮೌಖಿಕ ಪರಂಪರೆಯಿಂದ ಗ್ರಹಿಸಬಹುದು.

ಕೆಲವು ಐತಿಹ್ಯಗಳಿಂದ ಘಟನೆಗಳ ನೆನಪು ಪುನರ್ ಮರುಕಳಿಸುವುದಲ್ಲದೆ ಪುನರ್ ಸ್ಥಾಪಿಸಿಕೊಳ್ಳುತ್ತದೆ. ಆ ಘಟನೆಯನ್ನು ತಮ್ಮ ಪರಿಸರದ - ಜನಜೀವನದ ಭಾಗವಾಗಿ ಸ್ವೀಕರಿಸುತ್ತಾರೆ. ಉದಾ : ರಾವಣನು ಸೀತೆಯನ್ನು ಅಪಹರಿಸುವಾಗ ಅವಳು ರಾಮಾ ಲಕ್ಷ್ಮಣಾ ಎಂದು ಚೀರಿದಳು. ಇಂದಿಗೂ ಆ ಧ್ವನಿಯು ಗುಹೆಯ ಸಂಧಿಯಿಂದ ಕೇಳಿಬರುತ್ತದೆ ಎಂದು ಹೇಳುತ್ತಾರೆ. ಕೇಳುಗನು ಗುಹೆಯ ಸಂದಿಗೆ ಕಿವಿಯಿಟ್ಟು ಕೇಳುತ್ತಾನೆ. ಗುಹೆಯ ಒಳಗಿನಿಂದ ಸಂದಿಗೆ / ಕಿಂಡಿಗೆ ಸುಳಿದು ಬರುವ ಗಾಳಿಯ ಶಬ್ದವು ಅನುಕರಣೆಯಾಗಿ ಕೇಳಿ ಬರುತ್ತದೆ. ಸೀತೆಯಂಥ ಅಸಹಾಯಕರ ಬಗ್ಗೆ ಮಿಡಿದ ಮನಸುಗಳು ಭೂತ, ವರ್ತಮಾನ-ಭವಿಷತ್ತುಗಳಿಗೆ ತಮ್ಮ ಆಶಯವನ್ನು ಹೊತ್ತೊಯ್ಯುವ ಮೂಲಕ ಪುರಾಣ ಲೇಪನದೊಂದಿಗೆ ಚರಿತ್ರೆಯನ್ನು ಪ್ರಕ್ರಿಯೆಯನ್ನಾಗಿಸುತ್ತಾರೆ. ಹಿಂದೆ ಸಪ್ತರ್ಷಿಗಳು ಇಲ್ಲಿ ನಾರಾಯಣನನ್ನು ಸ್ತುತಿಸುತ್ತಿದ್ದರೆಂಬ ಐತಿಹ್ಯವು ವಿಷ್ಣುವಿನ ಅದರಲ್ಲೂ ನಾರಾಯಣನೆಂಬ ಹೆಸರನ್ನು ಪಡೆದ ದೇವಾಲಯಗಳ ಸ್ಥಳಪುರಾಣಗಳು ಹೇಳುತ್ತವೆ. ಹೌದೆಂದು ನಿರೂಪಿಸಲು ಒಂದು ನಿರ್ದಿಷ್ಟ ಕಿಂಡಿಗೆ ಕಿವಿಗೊಟ್ಟು ಕೇಳುವಂತೆ ಹೇಳುತ್ತಾರೆ. ಇದರ ಶಬ್ದವನ್ನು ಆಲಿಸುವುದರ ಮೂಲಕ ಇಂದಿಗೂ ಸ್ತುತಿಸುತ್ತಿದ್ದಾರೆ ಎಂಬ ನಂಬಿಕೆಯನ್ನು ಮೂಡಿಸುತ್ತಾರೆ. ಹೀಗೆ ಕೆಲವೊಮ್ಮೆ ಧಾರ್ಮಿಕ ಇಲ್ಲವೇ ಸಾಂಸ್ಕೃತಿಕ ಚರಿತ್ರೆಗೆ ಪೂರಕವಾದ ಆಶಗಳು ಇಂಥ ಐತಿಹ್ಯಗಳಲ್ಲಿ ಇರುತ್ತವೆ.

ಒಂದು ದೃಷ್ಟಿಯಿಂದ ಐತಿಹ್ಯವು ಜನಪದ ಇತಿಹಾಸವೆನಿಸುತ್ತದೆ. ಇಲ್ಲಿ ಲಿಖಿತ ದಾಖಲೆಗಳೇನೂ ಇರುವುದಿಲ್ಲ. ಇತರ ಲಿಖಿತ ದಾಖಲೆಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ವಿಚಾರಗಳಿಗೂ ಕೆಲವೊಮ್ಮೆ ಸಾಮ್ಯ ಸಂಬಂಧ ಕಂಡುಬರಬಹುದು. ಇನ್ನು ಕೆಲವು ಬಾರಿ ಇವೆರಡು ತೀರಾ ವ್ಯತ್ಯಾಸ್ತವೇ ಆಗಿ ಕಾಣಬಹುದು. ಅಂದರೆ 'ಐತಿಹ್ಯ'ವೆಂದು ನಾವಿಂದು ತಿಳಿಯುವ ಈ ಜನಪದ ಇತಿಹಾಸವು ನೈಜ ನಿರೂಪಣೆಯಾಗಿರಲೂಬಹುದು ಅಥವಾ ಕಲ್ಪಿತ ಅಂಶಗಳ ನಿರೂಪಣೆಯಾಗಿರಲೂಬಹುದು. ಇಂಥ ಕೆಲವು ಐತಿಹ್ಯಗಳಲ್ಲಿ ನೈಜ ಘಟನೆಯ ಸಣ್ಣ ಎಳೆಯೊಂದು ಮಾತ್ರವಿದ್ದು ಅದರ ಸುತ್ತ ಕಲ್ಪಿತಾಂಶಗಳು ಹಬ್ಬಿಕೊಂಡಿರುತ್ತವೆ. ಎಂತಿದ್ದರೂ ಈಗ ಐತಿಹ್ಯವನ್ನು ಜನಪದ ಸಾಹಿತ್ಯದ ಒಂದು ಪ್ರಕಾರವಾಗಿ ಪರಿಗಣಿಸಲಾಗುತ್ತದೆ; ಜೊತೆಗೆ ಜನಪದ ಇತಿಹಾಸವೆಂದೂ ತಿಳಿಯಲಾಗುತ್ತದೆ. ಒಂದು ದೃಷ್ಟಿಯಿಂದ ನೋಡಿದರೆ ಇತಿಹಾಸ ಮತ್ತು ಸಾಹಿತ್ಯ-ಇವೆರಡರ ಅಂಶಗಳೂ ಇದರೊಳಗಿರುತ್ತವೆ. ಹಿಂದೆ ನಡೆದ, ನಡೆದಿರಬಹುದಾದ, ಕೇಳಿದ ಘಟನೆಯೊಂದರ ಪುನರ್‌ಸೃಷ್ಟಿ ಇದಾಗಿದ್ದರೂ ಇಂದು ಇದಕ್ಕೂ ಇತಿಹಾಸ ರಚನೆಗೆ ಒಂದು ಆಕರವಾಗಿ ಬಳಕೆಯಾಗುವ ಸ್ಥಾನ ದೊರೆತಿದೆ.[೨] ಏಕೆಂದರೆ ಇದು ಮೌಖಿಕ ಪರಂಪರೆಯಲ್ಲಿ ಉಳಿದು ಬಂದ ಜನಪದರ ರಚನೆ.

ಪ್ರಭಾವ ಬೀರಿದ ಸ್ಥಳ, ವ್ಯಕ್ತಿ-ಘಟನೆಗಳು ವಿಶಿಷ್ಟವೆನಿಸಿದ್ದರ ಹಿನ್ನೆಲೆಯಲ್ಲಿ ಜನಪದ ಇತಿಹಾಸವು ಸೃಷ್ಟಿಯಾಗುತ್ತದೆ. ಇದು ಲಿಖಿತ ಇತಿಹಾಸದಂತೆ ಶಿಷ್ಟಪರಂಪರೆಯ ಆಗು-ಹೋಗುಗಳನ್ನಷ್ಟೇ ದಾಖಲಿಸುವುದಿಲ್ಲ ಒಳಗೊಂಡಿರುತ್ತದೆ. ಅದರ ಹಿನ್ನೆಲೆಯಲ್ಲಿ ಅಡಗಿರುವ ಜನಸಾಮಾನ್ಯರ ಜನಪದ ಪರಂಪರೆಯ ಬದುಕಿನ ನೆಲೆಗಳನ್ನು ಕಟ್ಟಿಕೊಡುತ್ತದೆ. ಅಂದರೆ ಲಿಖಿತ ಇತಿಹಾಸವು ಆಳುವವರ ಪರವಾಗಿದ್ದು ನೆಲೆಯ ಮೂಲಕವೇ ಎಲ್ಲ ಸ್ತರಗಳನ್ನು ಗುರುತಿಸುತ್ತಿರುತ್ತದೆ. ಆದರೆ ಜನಪದ ಇತಿಹಾಸವು ಆಳುವವರ ಸಫಲತೆ-ವಿಫಲತೆಗಳನ್ನು ಜನಸಾಮಾನ್ಯ ಅಂದರೆ ಪ್ರಜೆಗಳ ದೃಷ್ಟಿಯಿಂದ ವಿಮರ್ಶಿಸುತ್ತದೆ. ಆದ್ದರಿಂದ ಲಿಖಿತ ಇತಿಹಾಸ ಹಾಗೂ ಜನಪದ ಇತಿಹಾಸಗಳೆರಡೂ ಚರಿತ್ರೆಗೆ ಅನಿವಾರ್ಯ. ನಾಣ್ಯದ ಎರಡು ಮುಖಗಳಿದ್ದಂತೆ.

ಐತಿಹ್ಯವು ಗದ್ಯಪ್ರಕಾರದ ಬಂಧವಾದ್ದರಿಂದ ಇದನ್ನು ಸಾಹಿತ್ಯದ ಪ್ರಕಾರವೆಂದು ಪರಿಗಣಿಸಲಾಗಿದ್ದರೂ ಇತಿಹಾಸ ಮತ್ತು ಸಾಹಿತ್ಯದ ಗುಣಾಂಶಗಳನ್ನು ಒಳಗೊಂಡಿದೆ. ಜನಪದ ಸಾಹಿತ್ಯದಲ್ಲಿ ಪ್ರಮುಖವಾಗಿ ಗದ್ಯಪ್ರಕಾರದಲ್ಲಿ ನಿರೂಪಣೆಯಾಗುವ ಐತಿಹ್ಯಗಳಲ್ಲಿ ಕೆಲವು ಪದ್ಯ ಮಾಧ್ಯಮದ ಮೂಲಕವೂ ಪ್ರಸರಣವಾಗುವುದುಂಟು. ಇಂಥ ಸಂದರ್ಭಗಳಲ್ಲಿ ಗದ್ಯ-ಪದ್ಯ ಪ್ರಕಾರಗಳೆರಡರಲ್ಲಿಯೂ ನಿರೂಪಣೆ ಯಾಗುತ್ತದೆ. ಕಾವ್ಯ ಕಟ್ಟುವ ಸಾಮರ್ಥ್ಯವಿರುವ ಜನಪದರು ಐತಿಹ್ಯದ ವೃತ್ತಾಂತಕ್ಕೆ ಅನುಗುಣವಾಗಿ ಲಾವಣಿ, ಕಥನಕಾವ್ಯ ಇಲ್ಲವೇ ಖಂಡಕಾವ್ಯಗಳಲ್ಲಿ ಅಭಿವ್ಯಕ್ತಿಸುತ್ತಾರೆ. ಶಿಷ್ಟ ಸಾಹಿತ್ಯಕ್ಕೂ ಐತಿಹ್ಯಗಳು ಆಕರಗಳಾಗಿರುವುದುಂಟು. ಶಿಷ್ಟ ಕವಿಯ ಲೇಖನಿಯ ಮೂಲಕ ಹರಿದು ಬರುವಾಗ ಬರಹದ ರೂಪದಲ್ಲಿ ದಾಖಲಾಗುತ್ತದೆ. ಬರವಣಿಗೆಯಲ್ಲಿ ದಾಖಲಾದ ನಂತರ ಅದು ಕವಿಯ/ಲೇಖಕನ ಕರ್ತೃತ್ವದ ಮುದ್ರೆಯ ಮೂಲಕವೇ ಶಿಷ್ಟ ಪರಂಪರೆಯಲ್ಲಿ ಸಂವಹನಗೊಳ್ಳುತ್ತದೆ. ಈ ಪರಿವರ್ತನೆಗೆ ಮೌಖಿಕತೆಯ ಸ್ಮೃತಿ ಯಲ್ಲಿ ದಾಖಲಾಗುವ ಅನಿವಾರ್ಯತೆ ಬರುವುದಿಲ್ಲ. ಇದು ಓದು-ಬರಹ ಬಲ್ಲಂಥವರಲ್ಲಿ ಓದುವಿಕೆಯ ಮೂಲಕ ಮನನವಾಗುತ್ತದೆಯೇ ಹೊರತು ವಿವರಣೆಯನ್ನು ಕೇಳಿ ಸಾಬೀತಾಗಿ ಕಂಡುಬರುವ ಆಧಾರವನ್ನು ನೋಡಿ ಗ್ರಹಿಸಬೇಕೆಂದಿಲ್ಲ. ಆದರೆ ಶಿಷ್ಟ-ಜನಪದರ ಅಭಿವ್ಯಕ್ತಿಯ ಕೊಡು-ಕೊಳುಗೆಗಳು ನಿರಂತರವಾಗಿರುತ್ತವೆ. ಏಕೆಂದರೆ ಶಿಷ್ಟ ಕವಿಯ ಕಲ್ಪನೆ ಮತ್ತು ಭಾವನೆಗಳ ಅಭಿವ್ಯಕ್ತಿ ವಾಚಕ ರೂಪದಲ್ಲಿ ಜನಪದ ಪರಿವಲಯವನ್ನೂ ಪ್ರವೇಶಿಸಿ ಅಲ್ಲಿ ಮೌಖಿಕ ಪರಂಪರೆಯ ಜ್ಞಾನವಲಯದ ಅಭಿವ್ಯಕ್ತಿ ಯಾಗಿದ್ದುಂಟು. ಈ ನೆಲೆಯಲ್ಲಿ ಐತಿಹ್ಯದ ಪ್ರಭಾವಶಾಲಿ ಗುಣವು ಅತಿ ವಿಶಿಷ್ಟವೆನಿಸಿದ್ದು ಲಿಖಿತ ಪರಂಪರೆಗೂ ರವಾನೆಯಾಗುವ ಮೂಲಕ ಒಟ್ಟು ಜ್ಞಾನಪರಂಪರೆಗೆ ಪೂರಕವಾಗುತ್ತದೆ.

ಸಂದರ್ಭಕ್ಕೆ ಅನುಗುಣವಾಗಿ ಘಟನಾತ್ಮಕವಾಗಿ ಸೃಷ್ಟಿಯಾದ ಐತಿಹ್ಯಗಳು ಆಯಾ ಸಂದರ್ಭದ ಪರಿವಲಯಗಳನ್ನು ಮೀರಿ ನಂತರದ ಕಾಲಘಟ್ಟಗಳಿಗೂ ಮೌಖಿಕ ಸ್ವರೂಪದಲ್ಲಿ ಪ್ರವಹಿಸುತ್ತದೆ. ಇದು ಮೌಖಿಕ ಪರಂಪರೆಯಾದ್ದರಿಂದ ನಿರೂಪಣೆಯಲ್ಲಿ ಸಣ್ಣಪುಟ್ಟ ವ್ಯತ್ಯಾಸಗಳು ಆಗಬಹುದು. ಆದರೆ

ಐತಿಹ್ಯದ ಮುಖ್ಯ ತಿರುಳಿನಲ್ಲಿ ಖಚಿತತೆಯಿರುತ್ತದೆ. ನಿರೂಪಕ ನಡೆದಿದೆಯೆಂದು ನಂಬುವ ಕೇಳುಗರಲ್ಲಿ ನಂಬಿಕೆ ತರಿಸುವ ಗುಣ ಐತಿಹ್ಯಗಳಲ್ಲಿ ಮುಖ್ಯವಾದದ್ದು. ಐತಿಹ್ಯದ ಮೂಲಕ ಹೆಣೆಯಲ್ಪಟ್ಟ ಘಟನೆಯ ನಿರೂಪಣೆ ಸಂಕ್ಷಿಪ್ತವೂ, ಸರಳವೂ ಆಗಿರುವುದಲ್ಲದೆ ಒಂದು ಸಂಪೂರ್ಣ ವಿವರಣೆಯನ್ನು ನೀಡುತ್ತದೆ. ಹಿಂದೆ ನಡೆದಿರಬಹುದಾದ ಘಟನೆ, ಆ ಘಟನೆಗಳ ದಾಖಲಾತಿ - ನಿರೂಪಣೆಯು ಇತಿಹಾಸ ಅಥವಾ ಚರಿತ್ರೆಯೆನಿಸುತ್ತದೆ. ಘಟನೆಗಳು ಹಿಂದೆ ಎಷ್ಟೋ ನಡೆದಿರಬಹುದು. ಇಂದೂ ನಡೆಯುತ್ತಿವೆ. ಆದರೆ ನಡೆದಿರಬಹುದಾದ ಎಲ್ಲ ಘಟನೆಗಳಲ್ಲಿ ನಾವಿಂದು ಇತಿಹಾಸವನ್ನು ಪಡೆದುಕೊಂಡ, ಜನಜೀವನದ ಮಹತ್ತರ ತಿರುವಿಗೆ ಕಾರಣವಾದ, ಇಂದಿನ ಸಮಾಜದ ರಚನಾತ್ಮಕ ಬೆಳವಣಿಗೆಗೆ ಪ್ರೇರಕವಾಗಬಲ್ಲ ಘಟನೆಗಳನ್ನಷ್ಟೆ ನಾವು ಇತಿಹಾಸವೆಂದು ಪರಿಗಣಿಸುತ್ತಿದ್ದೇವೆ.[೪] ಇಂಥ ಲಿಖಿತ ಪರಂಪರೆಗೆ ಪರ್ಯಾಯವಾದ ಮೌಖಿಕ ನಿರೂಪಣೆಯ ದೃಢತೆಯನ್ನು ಲಿಖಿತ ದಾಖಲೆಯಾದ ಇತಿಹಾಸಕ್ಕೆ ಪೂರಕವಾದದ್ದೆಂದು ಪರಿಗಣಿಸಬೇಕಾಗುತ್ತದೆ. ಆದ್ದರಿಂದ ಐತಿಹ್ಯವು ಜನಪದ ಸಾಹಿತ್ಯದ ಒಂದು ಗದ್ಯ ನಿರೂಪಣೆಯಾಗಿಯೂ ಲಿಖಿತ ಇತಿಹಾಸಕ್ಕೆ ಪರ್ಯಾಯವಾದ ಮತ್ತೊಂದು ಮಾದರಿಯಾಗಿಯೂ ಸ್ವೀಕರಿಸಬೇಕಾಗುತ್ತದೆ.

ಐತಿಹ್ಯದಿಂದ ಚಾರಿತ್ರಿಕ ಸತ್ಯಗಳನ್ನು ಮತ್ತಷ್ಟು ಅರ್ಥೈಸಿಕೊಳ್ಳುವ ಅಂಶಗಳು ದೊರೆಯಬಹುದು. ದೊರೆಯದೆಯೂ ಇರಬಹುದು. ಹಾಗೆಂದ ಮಾತ್ರಕ್ಕೆ ಆ ಐತಿಹ್ಯವು ವ್ಯರ್ಥವಾದದ್ದೆಂದು ಹೇಳುವಂತಿಲ್ಲ. ಅದು ಸೃಜನಾತ್ಮಕ ಮನಸ್ಸಿನ ಸಂವೇದನೆಯೋ, ಪೌರಾಣಿಕ ಒಲುಮೆಯೋ, ಧಾರ್ಮಿಕ ಶ್ರದ್ಧೆಯೋ, ಪ್ರಕೃತಿಗೆ ಪ್ರತಿಕ್ರಿಯಿಸಿದ ರೀತಿಯೋ ನಿಗೂಢವೆಂದು ಕಾಡಿದ ಪ್ರಶ್ನೆಗೆ ಕಂಡುಕೊಂಡ ಉತ್ತರವೋ, ಭಯ ಅದ್ಭುತ-ಆಶ್ಚರ್ಯಗಳಿಗೆ ಸ್ಪಂದಿಸಿದ ಬಗೆಯೋ ಹೀಗೆ ಏನಾದರೊಂದು ಆಗಿಯೇ ಇರುತ್ತದೆ. ಇಂಥದ್ದನ್ನು ಕಲ್ಪನೆ, ಹುರುಳಿಲ್ಲದ ವಿವರಣೆ ಎಂದು ತಳ್ಳಿಹಾಕುವಂತಿಲ್ಲ. ಏಕೆಂದರೆ ಯಾವುದೇ ಸಾಹಿತ್ಯವನ್ನು ಅವಲೋಕಿಸಿದರೂ ಶಿಷ್ಟ-ಜನಪದವೆಂಬ ಭೇದವಿಲ್ಲದೆ ಕಲ್ಪನೆ-ವರ್ಣನೆಗಳಿಂದ ಕೂಡಿರುತ್ತವೆ. ಸಾಹಿತ್ಯದಲ್ಲಿ ಸ್ವಾನುಭವ - ಲೋಕಾನುಭವಗಳಿಗೆ ಹೊಳಹು ಸಿಗುವುದೆ. ಏಕೆಂದರೆ ಲೋಕಸತ್ಯದಲ್ಲಿ ವಾಸ್ತವವೆಂಬ ಅಂಶವನ್ನು ಗುರುತಿಸಲು ಪ್ರಯತ್ನಿಸುವ ಬುದ್ಧಿಭಾವಗಳಿಗೆ ವಾಸ್ತವವು ಏಕರೂಪದ ಚೌಕಟ್ಟನ್ನು ದಾಟಿ ಹಲವು ವಾಸ್ತವಗಳಾಗಿ ತೋರುತ್ತದೆ. ಆ ಸಂದರ್ಭ ಮತ್ತು ಮಾನಸಿಕ ಹಿನ್ನೆಲೆಯಲ್ಲಿನ ಗ್ರಹಿಕೆಗಳು 'ವಾಸ್ತವ'ಗಳಾಗುತ್ತವೆ. ಇದು ಸಾಹಿತ್ಯದ ಲಕ್ಷಣ ಹಾಗೂ ವ್ಯಕ್ತಿ ಸಹಜ ಗುಣ. ಆದ್ದರಿಂದ ಕೆಲವು ಐತಿಹ್ಯಗಳು ಮನಃಶಾಸ್ತ್ರದ ಸೂಕ್ಷ್ಮತೆಗಳನ್ನೋ, ಮಾನವಶಾಸ್ತ್ರದ ನಡವಳಿಕೆಯನ್ನೋ ಹೇಳುತ್ತಿರುತ್ತವೆ.

ಉದಾ : ನಗರಗೆರೆ ಕೆರೆಗೆ ಬಲಿಯಾದ ಭೈಯಮ್ಮನ ಐತಿಹ್ಯವು ಹೀಗಿದೆ. ಗುಂಡ್ಲುಕೊತ್ತೂರು ಗ್ರಾಮದ ಒಕ್ಕಲಿಗರ ಸೊಸೆ ಗರ್ಭಿಣಿ ಭೈಯ್ಯಮ್ಮನು ಮನೆಯಲ್ಲಿ ಜಗಳವಾಡಿಕೊಂಡು ಮನೆಬಿಟ್ಟು ನಡೆದು ಬಂದು ನಗರಗೆರೆಯ ತುಂಬಿದ ಕೆರೆಗೆ ಹಾರಿ ಪ್ರಾಣ ಬಿಡುತ್ತಾಳೆ. ಇಂದಿಗೂ ಸಮಾಜದಲ್ಲಿ

ಅಸಹಾಯಕತೆಯಿಂದಲೋ, ಭಿನ್ನತೆಯಂದಲೋ ಆತ್ಮಹತ್ಯೆ ಮಾಡಿಕೊಳ್ಳುವವರಿಗೆ ಕೆರೆ ಕುಂಟೆ ಬಾವಿಗಳಂಥ ನಿರ್ದಾಣಗಳು ಮನಸ್ಸಿಗೆ ಬರುತ್ತವೆ. ಸಾಮಾನ್ಯವಾಗಿ ಬದುಕನ್ನು ಎದುರಿಸಲಾಗದ ಅಸಹಾಯಕ ಸ್ಥಿತಿಯನ್ನು 'ಕೆರೆಯೋ ಬಾವಿಯೋ ಗತಿ' ಎಂದೋ ಕೆರೆಗೋ ಬಾವಿಗೋ ಬೀಳುತ್ತೇನೆಂದೂ ಅಥವಾ ಬೀಳು ಎಂದೋ ಮೌಖಿಕ ಉದ್ಗಾರಗಳು ಕಂಡುಬರುತ್ತವೆ. ಇಂಥ ಸಂದರ್ಭದಲ್ಲಿ ಭೈಯ್ಯಮ್ಮನು ಕೆರೆಗೆ ಹಾರಿದಳೆಂಬುದರ ಜೊತೆಗೆ ಆಕೆ ಗರ್ಭಿಣಿಯಾಗಿದ್ದಳು ಎಂಬುದು ಮತ್ತೊಂದು ತಿರುವು ಪಡೆಯುತ್ತದೆ. ಹೆರಿಗೆಗೆ ಸಾಮಾನ್ಯವಾಗಿ ತೌರನ್ನು ಆಶ್ರಯಿಸಬೇಕಾದ ಆಕೆ ಐದು-ಆರು ಮೈಲುದೂರದ ಕೆರೆಗೆ ಬಂದು ಹಾರಲು ಹವಣಿಸಿದಾಗ ಕೆರೆಯ ನೀರಗಂಟಿಯು ತಡೆದನೆಂದು ಹೇಳುತ್ತಾರೆ. ಕೆರೆಯಲ್ಲಿ ಮುಳುಗುತ್ತಿದ್ದ ಆಕೆಯನ್ನು ರಕ್ಷಿಸಲೆಂದು ತಾನೂ ಹಾರಿ ಸಾಧ್ಯವಾಗದೆ ಆತನೂ ಮುಳುಗಿ ಹೋಗುತ್ತಾನೆ. ಇವರಿಬ್ಬರನ್ನು ರಕ್ಷಿಸಲೆಂದು ಕೆರೆಯ ಮೇಲೆ ನಿಂತಿದ್ದ ನೀರಗಂಟಿಯ ನಾಯಿಯು ತಾನೂ ಧುಮುಕಿ ಸಾಯುತ್ತದೆ.

ಚರಿತ್ರೆ ಮತ್ತು ಐತಿಹ್ಯಕ್ಕೆ ಸಂಬಂಧಿಸಿದಂತೆ ಎರಡು ವೈರುಧ್ಯಗಳನ್ನೂ ಗಮನಿಸಬೇಕಾಗುತ್ತದೆ. ಚರಿತ್ರೆ ಎಂಬುದು ಪ್ರಕ್ರಿಯೆಯಾಗಿ ಮುಂದುವರೆಯುತ್ತದೆಯೇ ಹೊರತು ಮುಗಿಯುವಂಥದ್ದಲ್ಲ. ಆದರೆ ಇತಿಹಾಸ ಮುಗಿದ ಘಟನೆಗಳ ದಾಖಲೆಯಾಗುತ್ತದೆ. ಇತಿಹಾಸವನ್ನು ವಿವಿಧ ಆಯಾಮಗಳಿಂದ ಪುನರ್ ರಚನೆ ಮಾಡುವ ಸಾಧ್ಯತೆಗಳಿರುತ್ತವೆ. ಈ ಮೂಲಕ ಚಾರಿತ್ರಿಕ ಬೆಳವಣಿಗೆಗೆ ಒತ್ತು ಕೊಟ್ಟಂತಾಗುತ್ತದೆ. ಉದಾ : ವಿಜಯನಗರ ಸಾಮ್ರಾಜ್ಯದ ಮೇಲೆ ವಿದೇಶಿಯರು ಮತ್ತು ಸುಲ್ತಾನರು ನಡೆಸಿದ ದಾಳಿಗಳ ಹಿನ್ನೆಲೆಯಲ್ಲಿ ಸಾಮ್ರಾಜ್ಯದ ಅಧಃಪತವನ್ನು ಲಿಖಿತ ಇತಿಹಾಸ ನೀಡುತ್ತದೆ. ಇದನ್ನು ಪುಷ್ಟಿಗೊಳಿಸಲು ದೇವಾಲಯಗಳನ್ನು ಧ್ವಂಸ ಮಾಡಿದ, ಶಿಲ್ಪಗಳನ್ನು ಭಗ್ನಗೊಳಿಸಿದ ಆಧಾರಗಳನ್ನು ನೀಡುತ್ತಾರೆ. ಇದು ಆ ಸಾಮ್ರಾಜ್ಯದ ಅಧಃಪತನವನ್ನು ಹೇಳುವ ಒಂದು ಆಯಾಮ. ಇದನ್ನು ಹೊರತುಪಡಿಸಿ ಆ ಕಾಲದ ಧಾರ್ಮಿಕ ಸಂಘರ್ಷಗಳತ್ತ ಗಮನಹರಿಸಿದಾಗ ಕೇವಲ ಮುಸ್ಲಿಂ ಧರ್ಮವೊಂದೇ 'ಹಿಂದೂ' ಅಥವಾ 'ವೈದಿಕ' ಧರ್ಮಗಳಿಗೆ ಎದುರಾಳಿಯಾಗಿರಲಿಲ್ಲವೆಂದು ತಿಳಿದುಬರುತ್ತದೆ. ಜೈನ-ಶೈವ-ವೈಷ್ಣವ ಧರ್ಮಗಳಲ್ಲಿಯೂ ಅಸಮಾಧಾನಗಳಿದ್ದುದು ಸ್ಪಷ್ಟವೆನಿಸುತ್ತದೆ. ಅಲ್ಲದೆ 'ಶಿಷ್ಟ'ವೆನಿಸಿಕೊಂಡ ಎಲ್ಲ ಧರ್ಮಗಳೂ ಜನಪದ ದೈವ-ಆಚರಣೆಗಳನ್ನು ಕಡೆಗಣಿಸಿದ್ದಕ್ಕೆ ಕನ್ನಡ ಸಾಹಿತ್ಯದಲ್ಲಿ ಆಧಾರಗಳು ಲಭಿಸುತ್ತವೆ. ಈ ಹಿನ್ನೆಲೆಯಲ್ಲಿ ಹಂಪಿಯಲ್ಲಿ ಭಗ್ನಗೊಂಡ ವೈಷ್ಣವ ದೇವಾಲಯಗಳು ಮತ್ತು ಶಿಲ್ಪಗಳನ್ನು ಯಾರು ಧ್ವಂಸ ಮಾಡಿರಬಹುದೆಂಬುದಕ್ಕೆ ಜನಪದ ಇತಿಹಾಸದಲ್ಲಿ ಉತ್ತರವನ್ನು ಹುಡುಕಬಹುದಾದ ಸಾಧ್ಯತೆಗಳೂ ಇವೆ. ಇಂಥ ಸಂದರ್ಭದಲ್ಲಿ ಐತಿಹ್ಯಗಳು ಚರಿತ್ರೆಯ ಪುನರ್ ಮೌಲ್ಯೀಕರಣಕ್ಕೆ ಆಕರಗಳಾಗುವ ಸಾಧ್ಯತೆಗಳಿವೆ.

ಐತಿಹ್ಯದ ಉದ್ದೇಶ ಕೇವಲ ಇತಿಹಾಸವನ್ನಷ್ಟೇ ಕಟ್ಟಿಕೊಡುವುದಲ್ಲ. ಬದುಕಿನಲ್ಲಿ ಕಂಡದ್ದನ್ನು, ಕೇಳಿದ್ದನ್ನು, ಅನುಭವಿಸಿದ್ದನ್ನು, ಕಲ್ಪಿಸಿಕೊಂಡದ್ದನ್ನು ಮೌಖಿಕ ಆಧಾರದ ಸಮೇತ ಸಾಬೀತುಗೊಳಿಸುವುದಾಗಿದೆ. ಇಂಥ ಸಂದರ್ಭಗಳಲ್ಲಿ ಐತಿಹ್ಯವು ಗದ್ಯ-ಕಥನದ ಪ್ರಕಾರವನ್ನೇ ಅವಲಂಬಿಸುತ್ತದೆಂದು ಹೇಳಲಾಗುವುದಿಲ್ಲ. ಅದು ಗೀತೆಯಾಗಿಯೋ ಖಂಡಕಾವ್ಯ ಮಹಾಕಾವ್ಯಗಳಾಗಿಯೋ ಲಾವಣಿಗಳಾಗಿಯೋ ಕವಲೊಡೆಯುವ ಸಾಧ್ಯತೆ ಇದೆ. ಅಥವಾ ಚುಟುಕಾಗಿ ಮೊಟಕಾಗಿ ಗಾದೆ ಒಗಟುಗಳಲ್ಲಿಯೂ ಸೇರಿಕೊಳ್ಳುತ್ತದೆ. ಈ ಪ್ರಕಾರಗಳ ಕೆಲವು ಸನ್ನಿವೇಶಗಳಿಗೆ ಐತಿಹ್ಯವು ವಸ್ತುಗಳಾಗಿರುತ್ತದೆ. ಆದ್ದರಿಂದ ಐತಿಹ್ಯವು ಹೀಗೆ ಪ್ರಕಟಗೊಳ್ಳುತ್ತದೆ.

೧. ಜನಪದ ಸಾಹಿತ್ಯದ ಒಂದು ಪ್ರಕಾರವಾಗಿ. ೨. ಜನಪದ ಸಾಹಿತ್ಯದ ಇತರೆ ಪ್ರಕಾರಗಳಲ್ಲಿ ಕೆಲವೊಮ್ಮೆ ವಸ್ತುವಾಗಿ. ೩. ಜನಪದ ಇತಿಹಾಸವಾಗಿ - ಚರಿತ್ರೆಯಾಗಿ ಮುಂದುವರಿಯುತ್ತದೆ. ೪. ಕೆಲವೊಮ್ಮೆ ಲಿಖಿತಇತಿಹಾಸಕ್ಕೆ ಆಕರವಾಗುತ್ತದೆ. ಅಲ್ಲದೆ ಏಕಕಾಲಕ್ಕೆ ಮೌಖಿಕ ಸಾಹಿತ್ಯವಾಗಿಯೂ ಪ್ರವಹಿಸುತ್ತಿರುತ್ತದೆ. ೫. ಐತಿಹ್ಯದ ಹಲವು ಉದ್ದೇಶಗಳಲ್ಲಿ ಇತಿಹಾಸದ ಹೊಳಹೂ ಒಂದು. ಆದರೆ ಇತಿಹಾಸದ ಹುಡುಕಾಟವೊಂದೇ ಐತಿಹ್ಯದ ಉದ್ದೇಶವಲ್ಲ. ೬. ಕೆಲವೊಮ್ಮೆ ಐತಿಹ್ಯಗಳಲ್ಲಿ ಭಾವುಕತೆ ರಂಜಕ ಶೈಲಿ, ಕಲ್ಪನೆಯ ಅಂಶಗಳು ಎದ್ದು ಕಾಣಬಹುದು. ಏಕೆಂದರೆ ಅದು ಸಾಹಿತ್ಯದ ಒಂದು ಗುಣ. ೭. ನೆನಪಿನ ಶಕ್ತಿ, ಪುನರ್ ಉಚ್ಚರಿಸುವ ಸಾಮರ್ಥ್ಯ ಹಾಗೂ ಮೌಖಿಕ ಆಧಾರ ಐತಿಹ್ಯದಲ್ಲಿ ಎದ್ದು ಕಾಣುವ ಅಂಶಗಳು. ೮. ಐತಿಹ್ಯಗಳು ಹೇಳುವ ಜನಪದ ಇತಿಹಾಸ ಕಾಲಾತೀತವಾದುದು. ಲಿಖಿತ ಇತಿಹಾಸದಂತೆ ಕಾಲನಿರ್ಣಯ (ಇಸವಿ) ಇರುವುದಿಲ್ಲ. ಐತಿಹ್ಯವು ಪೀಳಿಗೆಯಿಂದ ಪೀಳಿಗೆಗೆ ಸಾಗುವಾಗ ವ್ಯಕ್ತಿ ಹಾಗೂ ಘಟನೆ ಕುರಿತಂತೆ ಅನೇಕ ವರ್ಣನೆಗಳು ಸೇರಿಕೊಳ್ಳುತ್ತವೆ.

ಇತಿಹಾಸ, ಐತಿಹ್ಯ ಇವೆರಡೂ ಒಂದೇ ಮೂಲದ ಸಂಸ್ಕೃತ ಪದಗಳು. ಹೀಗೆ ಇತ್ತು ಎಂಬ ಭೂತಕಾಲಕ್ಕೆ ಸಂಬಂಧಿಸಿದ ಅರ್ಥ ಇವೆರಡಕ್ಕೂ ಸಂಬಂಧಿಸಿದ್ದು. ಭೂತಕಾಲದಲ್ಲಿ ಇದ್ದದ್ದು ನಿರೂಪಣೆಯ ಕಾಲದಲ್ಲಿ ಸಾಕಷ್ಟು ಕಲ್ಪನಾಂಶಗಳನ್ನು ಸೇರಿಸಿಕೊಂಡು ವೈಭವದಿಂದ ಇದ್ದದ್ದು ಎಂಬುದಾಗಿ ಮಾರ್ಪಾಡಾಗುತ್ತದೆ. Englishನ Historyಗೆ ಸಮವಾಗಿರುವ ಪದ ಚರಿತ್ರೆ. ಇದನ್ನು ಇತಿಹಾಸಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. ಇತಿಹಾಸ ರಚನೆಗೆ ದಾಖಲೆಗಳಿಂದ ಕೂಡಿದ ಮಾಹಿತಿಗಳು ಆಧಾರ. ಇಂಥವುಗಳಲ್ಲಿ ಐತಿಹ್ಯವೂ ಒಂದು ದಾಖಲೆಯಾಗುತ್ತದೆ. ಚರಿತ್ರೆಯು ಬರವಣಿಗೆಯಲ್ಲಿದ್ದು ವೈಜ್ಞಾನಿಕ ದೃಷ್ಟಿಕೋನದಿಂದ ಕೂಡಿರುವುದರಿಂದ ಅತಿರಂಜಕತೆ ಇರುವುದಿಲ್ಲ. ತರ್ಕಬದ್ಧ ಪ್ರಮೇಯಗಳಿರಬಹುದು.

ಭಾರತೀಯ ಚಿಂತನಾಪರಂಪರೆಯಲ್ಲಿ ಐತಿಹ್ಯವು ಚರಿತ್ರೆ ಅಥವಾ ಇತಿಹಾಸಕ್ಕೆ ಪೂರಕವಾಗುತ್ತದೆ. ಪರಂಪರೆಯಿಂದ ಬಂದ ತಿಳುವಳಿಕೆಯ ಹಿನ್ನೆಲೆಯಲ್ಲಿ ಸೃಷ್ಟಿಯಾದ ಚರಿತ್ರೆಯಾಗಿರುತ್ತದೆ. ನಿರೂಪಿಸುವವನ ದೃಷ್ಟಿಯಲ್ಲಿ ಅದು ನಿಜವೇ ಆಗಿರುತ್ತದೆ. ಅವನ ಪ್ರಕಾರ ಅದು ನಡೆದ ಘಟನೆಗಳ ನಿರೂಪಣೆ. ಇದು ಮೌಖಿಕ ಪರಂಪರೆಯಲ್ಲಿ ಮುಂದುವರೆಯುತ್ತಿರುವ ಇತಿಹಾಸ. ಐತಿಹ್ಯವು ಇತಿಹಾಸಕ್ಕೆ ಹತ್ತಿರವಾದುದು. ಭೌತಿಕ ಆಧಾರವೊಂದನ್ನು ಮೂಲಸ್ವರೂಪದಂತೆಯೇ ಉಳಿಸಿಕೊಂಡು ನಂಬಿಕೆಗಳ ಕಲ್ಪನೆಗಳ ಆಧಾರದಿಂದ ಅದನ್ನು ಬೆಳೆಸಲಾಗುವುದು. ಎಲ್ಲೋ ಯಾವಾಗಲೋ ಘಟಿಸಿದ ಒಂದು ಘಟನೆ ಅದು ವ್ಯಕ್ತಿ ಅಥವಾ ಸ್ಥಳಕ್ಕೆ ಸಂಬಂಧಿಸಿದ ವೈಶಿಷ್ಟ್ಯಗಳಿಂದ ಕೂಡಿದ್ದು ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರುತ್ತದೆ. ಇದರ ಪರಿಣಾಮವಾಗಿ ವೈಭವೀಕರಣದ ಅಂಶಗಳು ಜನಪದರಿಂದ ಸೇರಿಸಲ್ಪಡುತ್ತವೆ. ಹೀಗೆ ಐತಿಹ್ಯಗಳುಂಟಾಗುತ್ತವೆ. ಐತಿಹ್ಯಗಳಲ್ಲಿ ಉಪಲಬ್ಧ ದಾಖಲೆಗಳ ಜೊತೆಗೆ ಕಲ್ಪನೆಯ ಅಂಶಗಳು ಸೇರಿಕೊಳ್ಳುತ್ತವೆ. ಅವು ಭಾವುಕ ಅಂಶಗಳಾಗಿರುತ್ತವೆ. ಕಾವ್ಯದ ದಾಟಿಯಲ್ಲಿ ನಿರೂಪಣೆ ಇರುತ್ತದೆ. ಈ ಅಂಶಗಳು ನಡೆದಿರಬಹುದಾದ ಘಟನೆಯನ್ನು ವಸ್ತುನಿಷ್ಠತೆ ಮತ್ತು ವೈಜ್ಞಾನಿಕ ದೃಷ್ಟಿಕೋನದಿಂದ ದೂರಸರಿಯುವಂತೆ ಮಾಡುತ್ತವೆ. ಆದರೂ ಘಟನೆಯ ನೈಜತೆ ರೂಪಾಂತರಗೊಳ್ಳುವುದಿಲ್ಲ. ಮೂಲಸತ್ಯ ನಾಶವಾಗುವುದಿಲ್ಲ. ಸಂಭಾವ್ಯ ಅಂಶಗಳು ಮತ್ತೆ ಮತ್ತೆ ಸೇರುತ್ತಿರುತ್ತವೆ. ಚಾರಿತ್ರಿಕ ಸಂಗತಿಯೊಂದು ಕಲ್ಪನೆಯಲ್ಲಿ ಹೇಗೆ ಬೇಕೋ ಹಾಗೆ ರೂಪು ತಳೆಯುತ್ತದೆ. ಮಾನವನ ಆಲೋಚನೆಗಳ ಮಿತಿಗಳನ್ನು ಪರೋಕ್ಷವಾಗಿ ಧ್ವನಿಸುತ್ತವೆ. 'ಕಲ್ಪನೆ' ಎಂದರೆ 'ಸತ್ಯಕ್ಕೆ ವಿರುದ್ಧವಾದ ಸುಳ್ಳು' ಎಂದೇನೂ ಅಲ್ಲ. ಈ ಅರ್ಥದಲ್ಲಿ ಐತಿಹ್ಯಗಳು ವಾಸ್ತವ ಜೀವನದಲ್ಲಿ ಮನುಕುಲವು ಅನುಭವಿಸುವ ಹರಕೆಗಳನ್ನು ಧ್ವನಿಸುತ್ತವೆ'.[೫]

ಭೌತಿಕ ಆಧಾರದ ಮೇಲೆ ರೂಪುಗೊಂಡ ಕಥನಗಳು ಐತಿಹ್ಯಗಳೆಸಿಕೊಳ್ಳುತ್ತವೆ. ವಸ್ತುನಿಷ್ಠ ವೈಜ್ಞಾನಿಕ ನಿರೂಪಣೆ ಇತಿಹಾಸವೆನಿಸಿಕೊಳ್ಳುತ್ತದೆ. ರಂಜನಾತ್ಮಕ ಅಂಶಗಳನ್ನು ದಾಟಿ ಸತ್ಯವೆಂಬ ಭಾವದಲ್ಲಿ ಐತಿಹ್ಯಗಳು ನಂಬಲ್ಪಡುತ್ತವೆ. ಕತೆಗಳಲ್ಲಿ ರಂಜನೆ ಪ್ರಧಾನವಾದುದು. ಐತಿಹ್ಯಗಳಲ್ಲಿ ನಿರೂಪಣೆ ಪ್ರಧಾನ. ಪುರಾಣದಲ್ಲಿ ಸಾರ್ವಕಾಲಿಕತೆ ಮುಖ್ಯ. ಆದರೆ ಪುರಾಣ ಸೃಷ್ಟಿಗೆ ಭೌತಿಕ ಆಧಾರಗಳ ಅಗತ್ಯವಿಲ್ಲ. ಆದರೆ ಸಸ್ಯ ಪ್ರಾಣಿ ಹಾಗೂ ಮಾನವ ವರ್ಗದ ಸಮನ್ವಯ ತಾತ್ವಿಕತೆ ಪುರಾಣದ ಹುಟ್ಟಿಗೆ ಕಾರಣವಾಗುತ್ತದೆ. ಐತಿಹ್ಯಗಳ ನಿರೂಪಣೆಯಲ್ಲಿ ಭೌತಿಕ ಆಧಾರವು ಕಣ್ಣಿನ ಎದುರೇ ಇರುವಂಥದ್ದು. ಆದರೆ ವೈಜ್ಞಾನಿಕವಲ್ಲ. ಕಲ್ಲಿನಲ್ಲಿ ಗೆರೆಗಳಿದ್ದರೆ ಅದು ಸೀತೆಯ ಸೆರಗಿನ ಗುರುತೆಂದು ದೊಡ್ಡ ಕಲ್ಲಿದ್ದರೆ ಮಾತ್ರ ಭೀಮನ ಕಲ್ಲೆಂದೂ, ಕೆರೆಯಿದ್ದರೆ ಜಟಾಯುತೀರ್ಥ, ಗುಹೆಯಿದ್ದರೆ ಪಾಂಡವರ ಗುಹೆ ಎಂದೂ ಕತೆಗಳು ಸಿದ್ಧಗೊಳ್ಳುತ್ತವೆ. 'ಈ ನಂಬಿಕೆ ಶ್ರದ್ಧೆ ನಡುವಳಿಕೆ ಮೌಲ್ಯವ್ಯವಸ್ಥೆ, ಆದರ್ಶಗಳು ಪುರಾಣವನ್ನು ಸೃಷ್ಟಿಸುತ್ತವೆ'.

ಕತೆಗಳಲ್ಲಿ ಮೂಲವಸ್ತುಗಳು ಹೊಸ ಆಕೃತಿಯೊಂದನ್ನು ಪಡೆದುಕೊಂಡು ನಿರ್ದಿಷ್ಟ ತಾತ್ವಿಕತೆಯೊಂದನ್ನು ಅವು ಪ್ರಕಟಿಸುತ್ತವೆ. ಕತೆಗಳು ಐತಿಹ್ಯದತ್ತ ಸುಳಿದಾಡಿದರೆ, ಐತಿಹ್ಯಗಳು ಚರಿತ್ರೆಯತ್ತ ವಾಲುತ್ತವೆ. ಭೌತಿಕ ಸತ್ಯಗಳು ಸಾಮಾನ್ಯ ಜೀವನ ಶಿಷ್ಟಕ್ಕಿಂತ ಭಿನ್ನವಾಗಿದ್ದು ವಿಶಿಷ್ಟವಾಗಿ, ಅಸಾಮಾನ್ಯವಾಗಿ, ವಿಶೇಷವಾಗಿದ್ದು ಜನರ ಮೇಲೆ ಪ್ರಭಾವ ಬೀರಲು ಸಮರ್ಥವಾಗಿರುತ್ತವೆ. ವ್ಯಕ್ತಿ, ಸ್ಥಳ, ಕಾಲವೆಂಬ ಮೂರು ವಿಂಗಡಣೆಗಳಲ್ಲಿ ಅಸಾಮಾನ್ಯತ್ವವನ್ನು ಹೊಂದಿದ್ದು, ಐತಿಹ್ಯಗಳಲ್ಲಿ ಸ್ಥಾನ ಪಡೆಯುತ್ತವೆ. ಪುರಾಣಗಳು ಐತಿಹ್ಯಗಳಿಗಿಂತ ಪ್ರಾಚೀನ. ಐತಿಹ್ಯದ ನಿರೂಪಕನು ತನ್ನ ನಿರೂಪಣೆಯ ಮಧ್ಯೆ ಮತ್ತೆ ಮತ್ತೆ ಭೌತಿಕ ಆಧಾರವನ್ನು ತರುತ್ತಾನೆ. ಅದರ ಪಳೆಯುಳಿಕೆಯನ್ನು ತೋರಿಸಿ ನಂಬಿಕೆಯನ್ನು ದೃಢೀಕರಿಸುತ್ತಾನೆ.

ಇತಿಹಾಸದ ವಿಶಿಷ್ಟ ಅಸಾಮಾನ್ಯತ್ವವನ್ನು ವರ್ತಮಾನಕ್ಕೆ ಒಗ್ಗಿಸಿಕೊಳ್ಳುವ ಅವಸರದಲ್ಲಿ ವರ್ತಮಾನಕ್ಕೂ ಇತಿಹಾಸಕ್ಕೂ ಇರುವ ಅಂತರ ಕುಗ್ಗಿಹೋಗುತ್ತದೆ. ಇಲ್ಲವೇ ಪೂರ್ಣವಾಗಿ ಕುಸಿಯುತ್ತದೆ. ಈಗ ಇದನ್ನು ವ್ಯಕ್ತಿಯೊಬ್ಬನು ತನ್ನನ್ನು ಪರಂಪರೆಯೊಂದಿಗೆ ಗುರುತಿಸಿಕೊಳ್ಳಲು ಮಾಡಿದ ಪ್ರಯತ್ನವೆಂದೂ ಹೇಳಬಹುದು.[೬] ಕಾಲಮಾನದ ದೃಷ್ಟಿಯಿಂದ ಸಾಕಷ್ಟು ದೂರವನ್ನು ಕಾಪಾಡಿಕೊಂಡಿರುವ ಪುರಾಣಗಳನ್ನು ವರ್ತಮಾನಕ್ಕೆ ಒಗ್ಗಿಸಿಕೊಳ್ಳುವ ಅವಸರದಲ್ಲಿಯೂ ಐತಿಹ್ಯಗಳು ಸೃಷ್ಟಿಯಾಗುತ್ತವೆ. ಐತಿಹ್ಯಗಳಲ್ಲಿ ಪುರಾಣ ವ್ಯಕ್ತಿಗಳು ನಾಡಾಡಿಗಳಾಗಿರುತ್ತಾರೆ. ವರ್ತಮಾನದ ಸ್ಪರ್ಶ ಇರುವುದೇ ಅದಕ್ಕೆ ಬಲವಾದ ಕಾರಣ. ಜೊತೆಗೆ ಪುರಾಣ ಸಹಜವಾದ ಪಾವಿತ್ರ್ಯವೂ ಐತಿಹ್ಯದಲ್ಲಿ ಕಡಿಮೆಯಾಗುತ್ತದೆ.

ಐತಿಹ್ಯಗಳು ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗಿರುತ್ತವೆ. ಗಾಢವಾದ ಸ್ಥಳೀಕರಣ ಗುಣವನ್ನು ಹೊಂದಿದ ಐತಿಹ್ಯಗಳು ಆ ಸ್ಥಳದ ಕಾಲ ಮತ್ತು ವ್ಯಕ್ತಿಗಳೊಂದಿಗೆ ಒಂದು ಸೂಕ್ಷ್ಮ ಸಂಬಂಧವನ್ನು ಹೊಂದುವುದೂ ಅನಿವಾರ್ಯ. ಇದರಿಂದಾಗಿ ಪ್ರತಿ ಐತಿಹ್ಯಗಳಿಗೆ ಸ್ಥಳೀಯದೇ ಆದ ಒಂದು ಶೈಲಿಯೂ ಲಭ್ಯವಾಗುತ್ತದೆ. ಸ್ಥಳದ ಬದಲಾವಣೆಯೊಂದಿಗೆ ಐತಿಹ್ಯದ ಸ್ವರೂಪವೂ ಬದಲಾಗಬಹುದು. ಹಾಗೆ ಒಂದು ನಿರ್ದಿಷ್ಟ ಸ್ಥಳದಲ್ಲಿನ ಉತ್ಪಾದನಾ ವಿಧಾನಗಳಲ್ಲಾದ ಮಾರ್ಪಾಡು ಅಥವಾ ಆ ಸಮಾಜದ ಆರ್ಥಿಕ ರಚನೆಯಲ್ಲಾದ ಮಾರ್ಪಾಡು ಐತಿಹ್ಯದ ಸ್ವರೂಪದ ಮೇಲೆ ಗಾಢಪರಿಣಾಮ ಉಂಟುಮಾಡುತ್ತದೆ. ಒಂದು ಕಾಲದ ವರ್ತಮಾನದ ಅವಶ್ಯಕತೆಗಳಿಗೆ ಅನುಗುಣವಾಗಿ ಹುಟ್ಟಿ ಬೆಳೆದ ಐತಿಹ್ಯವೊಂದು, ಅನಂತರ ತಾನು ಹುಟ್ಟಿ ಬೆಳೆದ ಪರಿಸರವನ್ನೇ ನಿಯಂತ್ರಿಸುವಷ್ಟು ಪ್ರಬಲವಾಗಿ ಬೆಳೆಯಬಹುದು. ಆ ಮೂಲಕ ಸಮಾಜದ ಆರ್ಥಿಕ ರಚನೆಗಳಲ್ಲಿ ಮಾರ್ಪಾಡುಗಳಾಗದಂತೆ ತಡೆಗೋಡೆಯಾಗಬಹುದು. ಚರಿತ್ರೆಯ ಕೊಡುಗೆಯಾದ ಐತಿಹ್ಯಗಳು ಮುಂದೆ ಚರಿತ್ರೆಯ ನೆಲೆಗಳು ಆಗಿಬಿಡಬಹುದು.[೭]

ಚತುರ್ವರ್ಣದ ವ್ಯವಸ್ಥೆಯ ಮೇಲ್ತುದಿಯು ಮಡಿ ಎನಿಸಿಕೊಂಡರೆ ಕೆಳಸ್ತರಗಳು ಮೈಲಿಗೆಯ ಮೆಟ್ಟಿಲುಗಳಾಗುತ್ತವೆ. ಪಂಚಮರು ಪೂರ್ತಿ ಮೈಲಿಗೆ ಅಥವಾ ಅಶುದ್ಧರು ಎನಿಸಿಕೊಳ್ಳುತ್ತಾರೆ. ಶೂದ್ರವರ್ಗವು ತಮಗಿಂತ ಮೇಲುಜಾತಿಗಳ ದೃಷ್ಟಿಯಲ್ಲಿ ಮೈಲಿಗೆಯಾದರೆ, ಕೆಳಜಾತಿಗಳಿಗೆ ಮಡಿ ಎನಿಸಿಕೊಳ್ಳುತ್ತಾರೆ. ಈ ಶ್ರೇಣೀಕರಣದ ಮೇಲ್ವರ್ಗದಿಂದ ಸೃಷ್ಟಿಯಾದಂಥ ಐತಿಹ್ಯಗಳಿಗೆ ಮಾನ್ಯತೆ ಸಿಗುತ್ತದೆ. ಕೆಳಜಾತಿಯ ಜನರಿಂದ ಸೃಷ್ಟಿಗೊಂಡಂಥವು ಮೇಲಿನ ಜನರಿಂದ ಕಟ್ಟುಕತೆಗಳೆಂಬ ಹಣೆಪಟ್ಟಿಯನ್ನು ಕಟ್ಟಿಕೊಳ್ಳುತ್ತವೆ. ಮೇಲ್ವರ್ಗ ಅಥವಾ ಮೇಲ್ಜಾತಿಯವರು ನಿರ್ಮಾಣ ಮಾಡಿದ ಐತಿಹ್ಯಗಳು ಸಾಮಾಜಿಕ ಶ್ರೇಣೀಕರಣವನ್ನು ಉಳಿಸುವ ಮತ್ತಷ್ಟು ಬಲಪಡಿಸುವ ಉದ್ದೇಶವನ್ನು ಹೊಂದಿರುತ್ತವೆ. ಒಂದು ಐತಿಹ್ಯವು ತಾನು ಬದುಕುಳಿದ ಸಾಂಸ್ಕೃತಿಕ ವಾತಾವರಣದ ಒಳಗಿನ ಅಪಾಯಗಳ ವಿರುದ್ಧ ಜನರನ್ನು ಹೋರಾಟಕ್ಕೆ ಸಿದ್ಧಗೊಳಿಸುತ್ತದೆ.[೮] ಲಿಖಿತ ಇತಿಹಾಸವು ರಾಜ-ಸಾಮ್ರಾಜ್ಯಗಳ ಚಿತ್ರಣವನ್ನು ನೀಡಿದರೆ ಐತಿಹ್ಯವು ಸ್ಥಳೀಯರ ನಡುವೆ ಪ್ರಾದೇಶಿಕವಾಗಿ ಗುರುತಿಸಲ್ಪಟ್ಟ ಪಾಳೆಯಗಾರರಂಥವರ ನೆನಪುಗಳನ್ನು ಒಳಗೊಂಡಿರುತ್ತದೆ. ಉದಾ: ಆವತಿ, ಗುಮ್ಮನಾಯಕನಹಳ್ಳಿ ಹಾಗೂ ಸಗಟೂರು ಪಾಳೆಯಗಾರರ ಐತಿಹ್ಯಗಳು ಹೀಗಿವೆ :

**ಆವತಿ ಪಾಳೆಯಗಾರರು ಅಥವಾ ಅವತಿ ನಾಡಪ್ರಭುಗಳು :** ಕೋಲಾರ, ತುಮಕೂರು ಹಾಗೂ ಬೆಂಗಳೂರು ಜಿಲ್ಲೆಗಳ ಪ್ರದೇಶದಲ್ಲಿ ಆಡಳಿತ ನಡೆಸಿದ ಆವತಿಯ ಪಾಳೆಯಗಾರರು ನಂದಿಮಂಡಳದ ವ್ಯಾಪ್ತಿಯಲ್ಲಿನ ಸುತ್ತಮುತ್ತಲಿನ ಪ್ರದೇಶವನ್ನು ಆಳಿದರು. ಅಂದರೆ ಕೋಲಾರ ಜಿಲ್ಲೆಯ ನಂದಿಗಿರಿದುರ್ಗದ ಸುತ್ತಮುತ್ತಲ ಪ್ರದೇಶಗಳು ಇವರ ಆಳ್ವಿಕೆಗೆ ಒಳಪಟ್ಟಿದ್ದವು. ಈ ನಂದಿಮಂಡಲದ ವ್ಯಾಪ್ತಿಯಲ್ಲಿ ಇವರ ಶಾಸನಗಳು ಕಂಡುಬಂದು ಅವುಗಳಲ್ಲಿ ಹೊನಊರನಾಡು, ಮೂಲೆಗಾಸಿನ ಸೀಮೆ, ಹಣಬೆಪ್ಪೂರು ಸೀಮೆ ಮುಂತಾದ ಪ್ರದೇಶಗಳ ಹೆಸರುಗಳು ಉಕ್ತವಾಗಿವೆ. ಚಿಕ್ಕಬಳ್ಳಾಪುರ ತಾಲ್ಲೂಕು ಕುಡುವಿತಿ ಸ್ಥಳದ ತಾಮ್ರಶಾಸನ್ (ಕ್ರಿ.ಶ.ಸು. ೧೪೩೮) ಇವರ ಪೂರ್ವಿಕರ ಬಗ್ಗೆ ಬೆಳಕು ಚೆಲ್ಲುತ್ತದೆ. ಮರಿಭೈರೇಗೌಡ ಮತ್ತು ಆತನ ಮಗ ಮಾದೇಗೌಡ ತಮ್ಮ ಕುಲದೈವ ಭೈರವನೆಂದು, ಮನೆದೇವರು ಕಳಗದಮ್ಮನೆಂದು ಹೇಳಿಕೊಂಡಿರುವುದು ಈ ಶಾಸನದಲ್ಲಿ ಕಂಡುಬರುವ ಅಂಶ. ಈ ಮರಿಭೈರೇಗೌಡ ಮತ್ತು ಈತನ ಮಗ ಮಾದೇಗೌಡರನ್ನು ಆವತಿ ಪ್ರಭುಗಳ ಪೂರ್ವಜರೆಂದೂ ಇವರು ಕ್ರಿ.ಶ. ೧೪೩೮ಕ್ಕಿಂತಲೂ ಮುಂಚಿನವರೆಂದೂ ಶಾಸನದ ಆಧಾರದ ಮೇರೆಗೆ ನಿರ್ಣಯಿಸಲಾಗಿದೆ.

**ಐತಿಹ್ಯ :** ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಸ್ಥಳೀಯವಾಗಿ ಆಳ್ವಿಕೆ ನಡೆಸಿದ ಮೊರಸು ಮನ್ನೆಯರೆಂದು ಖ್ಯಾತರಾಗಿದ್ದ ಆವತಿನಾಡು, ಎಲಹಂಕನಾಡು, ಸಗಟೂರುನಾಡು ಮತ್ತು ಮಹಾನಾಡ ಪ್ರಭುಗಳೆಲ್ಲರೂ ಒಂದೇ ಮೂಲದವರೆಂದು ಅವರು ಕಂಚಿಯ ಸಮೀಪದ ಪುತ್ತೂರಿಗೆ

ಸೇರಿದವರೆಂದು, ಈ ವಂಶದ ಮೂಲಪುರುಷ ರಣಭೈರೇಗೌಡನೆಂದು, ಅವನು ಮತ್ತು ಅವನ ಸೋದರರು ದುಷ್ಟನಾದ ಸ್ಥಳೀಯ ಪಾಳೆಯಗಾರನಿಗೆ ತಮ್ಮ ಪುತ್ರಿಯಾದ ಭೈಯಮ್ಮ ಎಂಬುವವಳನ್ನು ವಿವಾಹ ಮಾಡಿಕೊಡಲು ನಿರಾಕರಿಸಿ ಊರನ್ನು ಬಿಟ್ಟು ಪಾಲಾರ್ ನದಿಯನ್ನು ದಾಟಿ ಪೂರ್ವಕ್ಕೆ ಸಾಗಿ ಆವತಿ ಎಂಬಲ್ಲಿ ಬಂದು ನೆಲೆಸಿದರೆಂದು, ಕಾಲಾನಂತರದಲ್ಲಿ ಅವರಿಗೆ ಗುಪ್ತನಿಧಿ ದೊರಕಲು ಕೋಟೆ ಕೊತ್ತಲುಗಳನ್ನು ಕಟ್ಟಿಕೊಂಡು ನೆರೆಹೊರೆಯ ಪ್ರದೇಶಗಳ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಿದರೆಂದು ಅನಂತರದಲ್ಲಿ ಆ ಸೋದರರು ಯಲಹಂಕ, ಸಗಟೂರು, ಆವತಿ ಮುಂತಾದೆಡೆಗಳಲ್ಲಿ ಪ್ರತ್ಯೇಕ ರಾಜ್ಯಗಳನ್ನು ಕಟ್ಟಿಕೊಂಡು ಆಳತೊಡಗಿದರು.[೧೦]

ಅಲ್ಲದೆ ರಾಜನಾಗುವ ವ್ಯಕ್ತಿಯು ಮಲಗಿರುವಾಗ ಆತನ ತಲೆಗೆ ನೆರಳಾಗಿ ಸರ್ಪವೊಂದು ಹೆಡೆಯೆತ್ತಿರುವುದು, ಬೇಟೆ ನಾಯಿಯನ್ನು ಮೊಲ ಓಡಿಸಿಕೊಂಡು ಹೋಗುವುದು, ಇವರು ಹೊಳೆಯನ್ನು ದಾಟುವುದು ಮುಂತಾದ ಜಾನಪದ ಆಶಯಗಳು ಸೇರಿಕೊಂಡು, ರಾಜ, ರಾಜಧಾನಿ ವಲಸೆ ಮುಂತಾದ ಪ್ರಕ್ರಿಯೆಗಳಿಗೆ ಸಂಕೇತಗಳನ್ನು ಒದಗಿಸುತ್ತವೆ. ಇವರು ಮೊರಸುಮನ್ನೆಯರೆಂದು ಖ್ಯಾತರಾಗಿದ್ದು ಕರಗದಮ್ಮನನ್ನು ಮನೆದೇವತೆಯನ್ನಾಗಿಯೂ ಭೈರವನನ್ನು ಕುಲದೇವರನ್ನಾಗಿಯೂ ಪಡೆದಿದ್ದ ಕೃಷಿಕ ಒಕ್ಕಲಿಗರೆಂದು ಹೇಳಲಾಗುತ್ತದೆ. ದೇವತೆಗಳಿಗೆ ಅದರಲ್ಲೂ ಭೈರವನಿಗೆ ಪ್ರಾಣಿ ಬಲಿ ನೀಡುವುದು, ಕೆಂಡ ತುಳಿಯುವುದು ಮುಂತಾದ ಆಚರಣೆಗಳಿಂದ ಆರಾಧನೆ ನಡೆಸುತ್ತಿದ್ದರೆಂದು ಅಧ್ಯಯನಗಳಲ್ಲಿ ತಿಳಿದುಬರುತ್ತದೆ. ಕಾಲಕ್ರಮೇಣ ಇವರ ಆಚರಣೆಗಳಲ್ಲಾದ ರೂಪಾಂತರಗಳನ್ನು ಗಮನಿಸಬಹುದು.

**ಗುಮ್ಮನಾಯಕನಹಳ್ಳಿ ಪಾಳೆಯಗಾರರು :** ಗುಮ್ಮನಾಯಕನಹಳ್ಳಿ ಅಥವಾ ಗುಮ್ಮನಾಯಕನ ಪಾಳ್ಯ ಎಂಬ ಹೆಸರುಗಳಿಂದ ಕರೆಯಲ್ಪಡುವ ಈ ಐತಿಹಾಸಿಕ ಸ್ಥಳವು ಕೋಲಾರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿಗೆ ಸೇರಿದೆ. ಬಾಗೇಪಲ್ಲಿಯಿಂದ ಸುಮಾರು ಹತ್ತು ಮೈಲಿಗಳ ದೂರದಲ್ಲಿ ಐತಿಹಾಸಿಕ ಹಾಳುಕೋಟೆಯೊಂದಿದ್ದು ಗುಮ್ಮನಾಯಕನ ಪಾಳ್ಯದ ಗತವೈಭವವನ್ನು ಸಾರುವ ಸಾಕ್ಷಿಯಾಗಿದೆ. ಗುಮ್ಮನಾಯಕನ ಪಾಳ್ಯವು ಕ್ರಿ.ಶ. ೧೮೮೨ರ ವರೆಗೆ ಬಾಗೇಪಲ್ಲಿ ತಾಲ್ಲೂಕುಕೇಂದ್ರವಾಗಿದ್ದು ಮುಂದೆ ಆಡಳಿತಾತ್ಮಕ ಸ್ಥಾನವನ್ನು ಕಳೆದುಕೊಂಡಿತು. ದೊಂಗಲಕೊಂಡ ಎಂಬ ಹೆಸರಿನ ಬೆಟ್ಟಗಳಿಂದ ಸುತ್ತುವರೆಯಲ್ಪಟ್ಟಿರುವುದು ಗುಮ್ಮನಾಯಕನ ಪಾಳ್ಯದ ವೈಶಿಷ್ಟ್ಯ. ಗುಮ್ಮನಾಯಕನೆಂಬುವವನು ಕಟ್ಟಿದ ಪಾಳೆಯವಾದ್ದರಿಂದ ಗುಮ್ಮನಾಯಕನ ಪಾಳ್ಯವೆಂಬ ಹೆಸರು ಪಡೆದಿದೆಯೆಂಬುದು ಐತಿಹ್ಯ ಸಾರುವ ಸಂಗತಿ. ಗುಮ್ಮನಾಯಕನು ಬೇಡರ ವಂಶದವನೆಂಬುದು ಮತ್ತೊಂದು ಮುಖ್ಯ ಅಂಶ. ಇದರ ಜೊತೆಗೆ 'ದೊಂಗಲು ಕೊಂಡ'ದೊಂದಿಗೆ ಪಾಳೆಯಗಾರರ ಸಂಬಂಧ ವಿವರಿಸುವಂಥದ್ದು ಮುಖ್ಯವಾದ ಅಂಶ.

ಬೇಡ - ನಾಯಕ ಪಾಳೆಯಗಾರರಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಸಂಗತಿಯೆಂದರೆ ಇವರು ಮೊದಲಿಗೆ ಕಾಡುಗಳಲ್ಲಿ ಬೇಟೆಯಾಡುವುದಲ್ಲದೆ, ದಾರಿಹೋಕರ ತಲೆಗಳನ್ನು ಹೊಡೆದು ದೋಚುತ್ತಿದ್ದರೆಂಬುದು. ಬೆಟ್ಟಗುಡ್ಡಗಳ ರಹಸ್ಯ ಸ್ಥಳಗಳಲ್ಲಿ ವಾಸಿಸುವುದರೊಂದಿಗೆ, ಕಾಡಿನ ದಾರಿಗಳಲ್ಲಿ ಓಡಾಡುವವರನ್ನು ಹಿಡಿದು ನಿಲ್ಲಿಸಿ ಅವರೊಂದಿಗಿನ ವಸ್ತುಗಳನ್ನು, ದ್ರವ್ಯವನ್ನು ದರೋಡೆ ಮಾಡುವುದನ್ನು ರೂಢಿಸಿಕೊಂಡಿದ್ದರು. ಹೀಗೇ ಕೊಲೆ ಸುಲಿಗೆ ದರೋಡೆಗಳನ್ನು ನಿರಂತರವಾಗಿ ಮುಂದುವರೆಸಿಕೊಂಡು ಹೋಗುತ್ತಿದ್ದ ಬೇಡರ ಗುಂಪುಗಳನ್ನು ರಾಜನಾದವನು ಎದುರುಹಾಕಿಕೊಳ್ಳದೆ ಅವರಿಗೆ ತನ್ನ ಆಡಳಿತದಲ್ಲಿ ಹುದ್ದೆ, ಸ್ಥಾನ ಇಲ್ಲವೆ ಕರ್ತವ್ಯದ ಜವಾಬ್ದಾರಿಯನ್ನು ನೀಡುವುದರೊಂದಿಗೆ ನಿಯಂತ್ರಿಸುತ್ತಿದ್ದ. ಅಲ್ಲದೆ ಅರಣ್ಯವಾಸಿಗಳಾದ ಇವರು ದಷ್ಟಪುಷ್ಟರಾಗಿದ್ದು, ಬೇಟೆಗಾರಿಕೆಯಲ್ಲಿ ಚಾಕಚಕ್ಯತೆಯುಳ್ಳವರಾಗಿದ್ದರಿಂದ ಸೈನಿಕರಾಗಿ ನೇಮಿಸಿಕೊಳ್ಳುತ್ತಿದ್ದ. ದಳವಾಯಿ ಸೇನಾಧಿಪತಿಗಳಾಗಿ ತಮ್ಮ ಸೇನಾಗುಂಪುಗಳ ನಾಯಕ ಮುಖಂಡರಾಗಿ ಮುಂದುವರೆದವರು ಸಹಜವಾಗಿಯೇ ತಮ್ಮ ನಿರ್ದಿಷ್ಟ ಪ್ರದೇಶವನ್ನು ಪಾಳೆಯವನ್ನಾಗಿಸಿ ಕೊಂಡು ಪಾಳೆಯಗಾರರೆನಿಸಿಕೊಳ್ಳುತ್ತಿದ್ದರು. ಇವರು ತಮ್ಮ ರಾಜನ ಆಶ್ರಯಿಗಳಾಗಿದ್ದು ಪೊಗದಿ ಕಪ್ಪಗಳನ್ನು ಕಾಣಿಕೆಯಾಗಿ ಸಲ್ಲಿಸುತ್ತ ರಾಜತ್ವವನ್ನು ಸಮರ್ಥಿಸುತ್ತಿದ್ದರು. ಕೆಲವು ವೇಳೆ ರಾಜನ ಯುದ್ಧಗಳಲ್ಲಿ ಸಹಕರಿಸುತ್ತಾ ರಾಜನ ಪರವಾಗಿ ಹೋರಾಟಗಳನ್ನು ಮಾಡುತ್ತಿದ್ದರು. ಹಾಗೆಯೇ ಆಗೊಮ್ಮೆ ಈಗೊಮ್ಮೆ ಕೆಲವು ಪಾಳೆಯಗಾರರು ತಮ್ಮ ರಾಜ ದುರ್ಬಲನಾದಾಗ ಅವನ ಮೇಲೆ ದಂಡೆತ್ತಿ ಹೋಗಿ ಮುತ್ತಿಗೆ ಹಾಕಿ ಸೋಲಿಸಿ ತಾವೇ ಸ್ವತಂತ್ರ ರಾಜರೆಂದು ಘೋಷಿಸಿಕೊಂಡ ಸಂದರ್ಭಗಳೂ ಇವೆ. ಇಂಥ ಯುದ್ಧಗಳಲ್ಲಿ ಅಕಸ್ಮಾತ್ ಸೋಲುಂಟಾಗುವ ಸೂಚನೆಗಳಿದ್ದರೆ ಮತ್ತೆ ಓಡಿ ಹೋಗಿ ಕಾಡು ಸೇರಿ ಮತ್ತು ಸೈನ್ಯವನ್ನು ಕಟ್ಟಿ ಒಮ್ಮೆಗೆ ಆಕ್ರಮಣ ಮಾಡುತ್ತಿದ್ದರೆಂದು ಜನಪದರು ಹೇಳುತ್ತಾರೆ. ಧೈರ್ಯ ಮತ್ತು ಸಾಹಸಗಳಿಗೆ ಹೆಸರಾದ ಇಂಥ ಕಾಡಿನ ಜನರನ್ನು ಯಾವುದೇ ರಾಜನು ತನ್ನ ರಾಜ್ಯದ ರಕ್ಷಣೆಗೆ ಬಳಸಿಕೊಳ್ಳದೆ ಬಿಡಲಾರನಾದ್ದರಿಂದ ಅವರಿಗೆ ಸಣ್ಣ ಸಣ್ಣ ಪಾಳೆಪಟ್ಟುಗಳನ್ನು ನೀಡಿ ಅಲ್ಲಿನ ಆಡಳಿತಕ್ಕೆ ಹೊಣೆಗಾರರನ್ನಾಗಿ ಮಾಡುತ್ತಿದ್ದ. ಈ ಮೂಲಕ ರಾಜನು ಶತ್ರುಗಳಿಂದ ರಕ್ಷಿಸಿಕೊಳ್ಳುವುದರ ಜೊತೆಗೆ ಕಳ್ಳಕಾಕರ ಭೀತಿಯಿಂದಲೂ ಬಿಡುಗಡೆ ಪಡೆಯುತ್ತಿದ್ದ. ಇಂಥ ಆಶಯಗಳಿಗೆ ಉದಾಹರಣೆಯಾಗಿ ಗುಮ್ಮನಾಯಕನಹಳ್ಳಿಯ ಪಾಳೆಯಗಾರರ ಐತಿಹ್ಯಗಳು ನಿಲ್ಲುತ್ತವೆ.

**ಐತಿಹ್ಯಗಳು :** ೧. ಗುಮ್ಮನಾಯಕನಹಳ್ಳಿಯ ಪಾಳೆಯಗಾರರು ಮೊದಲಿಗೆ ಪಾತಪಾಳ್ಯವನ್ನು ಆಳುತ್ತಿದ್ದರು. ಸಮೀಪದ ದೊಂಗಲುಕೊಂಡದಲ್ಲಿ (ಕಳ್ಳರ ಬೆಟ್ಟ) ಅನೇಕ ಕಳ್ಳರು ನೆಲೆಸಿ, ಕೊಲೆ ಸುಲಿಗೆ ದರೋಡೆಗಳನ್ನು ಮಾಡುತ್ತಿದ್ದರು. ಇದರಿಂದ ಚೇತರಿಸಿಕೊಳ್ಳಲು ಪಾತಪಾಳ್ಯವನ್ನು ಬಿಟ್ಟು ಬೇರೆ ಕಡೆಗೆ ಬಂದು ನೆಲೆಸಿದರು. ಇವರೆಲ್ಲಾ ಗುಮ್ಮನಾಯಕನೆಂಬುವವನು ಬಂದು ನೆಲೆಸಿದ ಹಳ್ಳಿಗೆ ಗುಮ್ಮನಾಯಕನ ಹಳ್ಳಿ ಎಂದು ಹೆಸರಾಗಿದ್ದಲ್ಲದೆ ಅಲ್ಲಿಯೇ ಅವನು ಪಾಳೆಯವನ್ನು ಕಟ್ಟಿಕೊಂಡಿದ್ದರಿಂದ ಗುಮ್ಮನಾಯಕನ

ಪಾಳ್ಯ ಎಂಬ ಹೆಸರು ಬಂತು. ಗುಮ್ಮನಾಯಕನ ಪಾಳ್ಯದ ಪಾಳೆಯಗಾರರು ಮೂಲಭೂತವಾಗಿ ಆಂಧ್ರಪ್ರದೇಶದವರು. ಚಿತ್ತೂರು ಜಿಲ್ಲೆಯ ಮದನಪಲ್ಲಿ ಪ್ರದೇಶದವರು. ಪೆದ್ದಪಾಳ್ಯ ಇವರ ಮೂಲ ಸ್ಥಳ. ಗುರಂಕೊಂಡ ಪ್ರದೇಶದಲ್ಲಿ ಬೇಟೆಯಾಡಿಕೊಂಡಿದ್ದ ಜನಾಂಗದವರು ಇವರು. ಪೆದ್ದಪಾಳ್ಯದ ಪಾಳೆಯಗಾರರಾಗಿದ್ದರು. ಖಾದ್ರಿಪತಿ ನಾಯಕನೆಂಬುವವನು ಪೆದ್ದಪಾಳ್ಯ (ಹಳೆಯ ಪಾಳ್ಯ)ದಿಂದ ದೊಂಗಲಕೊಂಡಕ್ಕೆ ಬಂದು ನೆಲೆಸಿದ. ಅಲ್ಲದೆ ಅಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿದ. ಆದ್ದರಿಂದ ಇವನನ್ನು ಗುಮ್ಮನಾಯಕನ ಪಾಳ್ಯದ ಮೂಲಪುರುಷನೆಂದು ಕರೆಯಬಹುದು.

೨. ಮತ್ತೊಂದು ಮಾಹಿತಿಯ ಪ್ರಕಾರ ಉತ್ತರ ಆರ್ಕಾಟು ಜಿಲ್ಲೆಯ ಚೋಳರ ಸಾಮಂತಿಕೆಯನ್ನು ಪಡೆದಿದ್ದ ಮಂಬಾ? ಎಂಬುವನ ಸಂಬಂಧಿಕರಾಗಿದ್ದರು. ಇವನು ಸರಿಸುಮಾರು ಹತ್ತನೇ ಶತಮಾನ ದಲ್ಲಿದ್ದನೆಂದು ತಮಿಳು ಶಾಸನಗಳು ಹೇಳುತ್ತವೆ. ನಂತರ ವೈದುಂಬಾ ದಾಯಾದಿಯಾದ ಖಾದ್ರಿಪತಿನಾಯಕ ದಿಲೀಪನ ಸಾಮಂತವಾಗಿ ಭೈರವಕೊಂಡ ಮತ್ತು ದೊಂಗಲಕೊಂಡ ಪ್ರಾಂತ್ಯಗಳ ನಾಯಕನಾದನು.[೧೧]
೩. ಪಾಪನಾಯಕನೆಂಬುವವನು ಪಾತಪಾಳ್ಯವನ್ನು ಆಳುತ್ತಿದ್ದನು. ಇವನು ಮಹಾಕ್ರೂರಿಯೂ, ದೊಡ್ಡ ದರೋಡೆಕೋರನೂ ಆಗಿದ್ದನು. ಸ್ನೇಹಿತನಾದ ಗುಮ್ಮನಾಯಕನು ಇವನ ದುಷ್ಕೃತ್ಯಗಳನ್ನು ಸಹಿಸಲಾರದೆ, ಪಾತಪಾಳ್ಯವನ್ನು ಬಿಟ್ಟು ಗುಮ್ಮನಾಯಕನಹಳ್ಳಿಯಲ್ಲಿ ನೆಲೆಸುತ್ತಾನೆ. ಅಲ್ಲಿಗೂ ಪಾಪನಾಯಕನ ಕ್ರೌರ್ಯವು ವ್ಯಾಪಿಸಲು ತನ್ನ ತಮ್ಮ ಲೊಕ್ಕನಾಯ್ಕನೊಂದಿಗೆ ದೇವರಾಜಹಳ್ಳಿಗೆ ವಲಸೆ ಬಂದು ನೆಲೆಸುತ್ತಾನೆ. ಅಲ್ಲಿ ತನ್ನ ಮೂಲವೃತ್ತಿ ಬೇಟೆಯನ್ನು ಮುಂದುವರಿಸುತ್ತಾ ಜೀವನವನ್ನು ಸಾಗಿಸುತ್ತಿರುತ್ತಾನೆ.

ಒಮ್ಮೆ ಗುಮ್ಮನಾಯಕನ ಕನಸಿನಲ್ಲಿ ಅವನ ಕುಲದೈವ ಪ್ರತ್ಯಕ್ಷಗೊಂಡು ಇನ್ನು ಕೆಲವೇ ದಿನಗಳಲ್ಲಿ ನೀನು ರಾಜನಾಗುತ್ತೀಯ ಎಂದು ಹೇಳುತ್ತದೆ. ಅಂತೆಯೇ ಕೆಲವು ದಿನಗಳಲ್ಲಿ ಪಾಪನಾಯಕನನ್ನು ಯಾರೋ ಕೊಲೆ ಮಾಡಿರುತ್ತಾರೆ. ಅದೇ ಸಮಯಕ್ಕೆ ಸರಿಯಾಗಿ ದೇವರಾಜನಹಳ್ಳಿಯಲ್ಲಿ ಮನೆಗೆ ಪಾಯ ಹಾಕಿಸಲು ಅಗೆಸುತ್ತಿರುವಾಗ ಗುಮ್ಮನಾಯಕನಿಗೆ ಏಳು ಕೊಪ್ಪರಿಗೆ ನಿಧಿ ದೊರೆಯುತ್ತದೆ. ಇದರ ಪ್ರಭಾವದಿಂದ ದೊಡ್ಡ ಸೈನ್ಯವನ್ನು ಕಟ್ಟಿದ ಗುಮ್ಮನಾಯಕ ಹಾಗೂ ಲೊಕ್ಕನಾಯಕ ಸುತ್ತಮುತ್ತಲಿನ ಪ್ರಾಂತ್ಯಗಳನ್ನು ಜೈಸುತ್ತಾ ಒಡೆತನವನ್ನು ಸ್ಥಾಪಿಸುತ್ತಾರೆ. ಹಾಗೆ ಗುಮ್ಮನಾಯಕನ ಹಳ್ಳಿಯ ಕೋಟೆಯನ್ನು ನಿರ್ಮಿಸುತ್ತಾರೆ. ಇದೇ ಸಮಯಕ್ಕೆ ಸರಿಯಾಗಿ ಆಂಧ್ರದ ಕಡಪ ಪ್ರಾಂತ್ಯದ ದರೋಡೆಕೋರರ ಗುಂಪೊಂದು ಗುಮ್ಮನಾಯಕನಿಗೆ ಸಿಕ್ಕಿ ಬೀಳುತ್ತದೆ. ಅವರು ಬೇರೆ ಬೇರೆ ಪ್ರದೇಶಗಳಲ್ಲಿ ಕೊಳ್ಳೆ ಹೊಡೆದ ಕಳ್ಳಮಾಲಿನಲ್ಲಿ ಅರ್ಧದಷ್ಟು ಗುಮ್ಮನಾಯಕನಿಗೆ ಸಲ್ಲಿಸುತ್ತಾ ಬಂದರು. ಹೀಗೆ ಪ್ರಬಲನಾಗುತ್ತಾ ಬಂದ ಗುಮ್ಮನಾಯಕ ಬೇಟೆಗಾರಿಕೆ ಹಾಗೂ ಕಳ್ಳತನಗಳನ್ನು ಕೈಬಿಟ್ಟು ಆದರ್ಶದ ಜನನಾಯಕನಾಗುತ್ತಾ ಹೋಗುತ್ತಾನೆ. ನಂತರ ಅವನ ಸಂತತಿಯವರು ಮುಂದುವರೆಯುತ್ತಾರೆ. ಹೀಗೆ ಐತಿಹ್ಯಗಳು ಪಾತಪಾಳ್ಯ

ದೊಂಗಲಕೊಂಡ ಮತ್ತು ಗುಮ್ಮನಾಯಕನಹಳ್ಳಿಯಲ್ಲಿ ಪಾಳೆಗಾರಿಕೆಗೆ ಕಾರಣರಾದ ದಾಯಾದಿಗಳ ಸುಳಿವುಗಳನ್ನು ಅವರ ವೃತ್ತಿ ಸೂಕ್ಷ್ಮಗಳನ್ನು ಪರಿಚಯಿಸುತ್ತದೆ.

**ಸುಗಟೂರಿನ ಪಾಳೆಯಗಾರರು :** ಸುಗಟೂರು ಜಿಲ್ಲೆಯ ಶಿಡ್ಲಘಟ್ಟ ತಾಲ್ಲೂಕಿನ ಜಂಗಮಕೋಟೆ ಸಮೀಪದ ಗ್ರಾಮ. ಬೆಂಗಳೂರು ಜಿಲ್ಲೆಯ ಹೊಸಕೋಟೆ ತಾಲ್ಲೂಕಿನ ಉತ್ತರಕ್ಕೆ ಇರುವ ಹೊಸಕೋಟೆಯಿಂದ ಸುಮಾರು ಹದಿನೈದು-ಹದಿನಾರು ಕಿ.ಮೀ.ಗಳ ದೂರದಲ್ಲಿದೆ. ಸುಗಟೂರು ಮತ್ತು ಹೊಸಕೋಟೆಗಳ ಸಂಬಂಧದ ವಿಶೇಷತೆಯೆಂದರೆ ಸುಗಟೂರನ್ನು ಕೇಂದ್ರವನ್ನಾಗಿಸಿಕೊಂಡ ಪಾಳೆಯಗಾರರ ವಂಶವು ಭದ್ರವಾದ ಕೋಟೆಯನ್ನು ಕಟ್ಟಿದ ಸ್ಥಳವೇ ಹೊಸಕೋಟೆಯೆಂಬ ಕೇಂದ್ರವಾದದ್ದು. ಹೀಗೆ ಹೊಸಕೋಟೆ ಎಂಬ ಸ್ಥಳನಾಮಕ್ಕೆ ಕಾರಣೀಭೂತರಾದವರು ಸುಗಟೂರು ಪಾಳೆಯಗಾರರು. ಇವರನ್ನು ಸುಗಟೂರು ಪ್ರಭುಗಳು ಎಂದೂ ಕರೆಯುತ್ತಾರೆ. ಹೊಸಕೋಟೆಯನ್ನು ಸ್ಥಾಪಿಸಿದ ನಂತರ ಆ ಮೂಲಕ ತಮ್ಮ ಆಳ್ವಿಕೆಯನ್ನು ಕೋಲಾರ, ಮುಳಬಾಗಿಲಿನ ಮೂಲಕ ಆಂಧ್ರಪ್ರದೇಶದ ಪುಂಗನೂರಿನವರೆಗೆ ಪೂರ್ವ ದಿಕ್ಕಿನ ಗಡಿಸೀಮೆಯಾಗಿಯೂ, ದಕ್ಷಿಣಕ್ಕೆ ಬೆಂಗಳೂರಿನ ಬಿಲಗೊಂಡನಹಳ್ಳಿ (ಈಗಿನ ಸರ್ಜಾಪುರ), ಆನೆಮಲೆ (ಆನೇಕಲ್)ವರೆಗೆ ಹಾಗೂ ಉತ್ತರಕ್ಕೆ ಕೋಲಾರ ಜಿಲ್ಲೆಯ ಶಿಡ್ಲಘಟ್ಟ ತಾಲ್ಲೂಕು ಪ್ರದೇಶಗಳವರೆಗೆ ಆಡಳಿತವನ್ನು ವಿಸ್ತರಿಸಿದ್ದರು. ಇವರ ಆಡಳಿತಕ್ಕೆ ಸಂಬಂಧಿಸಿದಂತೆ ಐತಿಹ್ಯಗಳು ಹೀಗಿವೆ : ಈ ವಂಶಸ್ಥರು ಕೋಲಾರ ಪ್ರದೇಶಕ್ಕೆ ವಲಸೆ ಬಂದ ತಮಿಳು ಮೂಲದವರು. ಪ್ರದೇಶದಲ್ಲಿ ನೆಲೆ ನಿಂತು ಮೊದಲು ಕೃಷಿಯನ್ನು ರೂಢಿಸಿಕೊಂಡರು. ಕಾಲಕ್ರಮೇಣ ಸಾಮಾಜಿಕವಾಗಿ ಗಣ್ಯಸ್ಥಾನವನ್ನು ಪಡೆದುಕೊಂಡರು. ಮುಂದುವರಿದಂತೆ ತಮ್ಮ ನೆಲೆಯವರೆಗೂ ವ್ಯಾಪಿಸಿದ್ದ ವಿಜಯನಗರ ಸಾಮ್ರಾಜ್ಯದಿಂದ ಗುರ್ತಿಸಲ್ಪಟ್ಟು ಸೈನಿಕರಾಗಿ ಸೇನಾಧಿಪತಿಯವರೆಗೂ ಕರ್ತವ್ಯ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡರು. ವಿಜಯನಗರದ ಅರಸರಲ್ಲಿ ಮೆಚ್ಚುಗೆ ನಂಬುಗೆಗಳನ್ನು ಉಳಿಸಿಕೊಂಡು, ಪ್ರಾದೇಶಿಕ ಒಡೆತನವನ್ನು ಪಡೆದು ಪಾಳೆಯಗಾರರಾಗಿ ಆಡಳಿತ ನಡೆಸಿದರು ಎಂಬಿತ್ಯಾದಿ ಅಂಶಗಳು.

ಇವರಂಥ ಅನೇಕ ಪಾಳೆಯಪಟ್ಟುಗಳ ಸ್ಥಾಪನೆಗೆ ಸಂಬಂಧಿಸಿದಂತೆ ಮೌಖಿಕ ಪರಂಪರೆಯಲ್ಲಿ ಮತ್ತೆ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ. ಅವುಗಳೆಂದರೆ, ಚೆಲುವೆಯಾದ ಮಗಳನ್ನು ಹೊಂದಿದ ಸಾಮಾನ್ಯ ವ್ಯಕ್ತಿ ಹಾಗೂ ಪರಿವಾರವಿರುತ್ತದೆ. ರಾಜನೊಬ್ಬ ಚೆಲುವೆಗೆ ಮನ ಸೋಲುವುದರೊಂದಿಗೆ ವಿವಾಹವಾಗ ಬಯಸುತ್ತಾನೆ. ಜಾತಿಯ ಕಾರಣದಿಂದ ಚೆಲುವೆಯ ಕುಟುಂಬ ವೈವಾಹಿಕ ಸಂಬಂಧಕ್ಕೆ ಆದ್ಯತೆ ನೀಡಿರುವುದಿಲ್ಲ. ರಾಜ ಅಧಿಕಾರದ ಒತ್ತಡವನ್ನೇರುತ್ತಾನೆ. ಅರಸನಿಂದ ತಪ್ಪಿಸಿಕೊಂಡು ಪರಿವಾರ ಸಮೇತ ಬೇರೆಡೆಗೆ ಪ್ರಯಾಣ ಬೆಳೆಸುತ್ತಾರೆ. ಪ್ರಯಾಣದಲ್ಲಿ ಇವರಿಗೆ ಹರಿಯುವ ನದಿ ಅಡ್ಡವಾಗುತ್ತದೆ. ಚೆಲುವೆಯಾದ ಕನ್ಯೆಯು ಪ್ರವಾಹದಿಂದ ಕೂಡಿದ ನದಿಯನ್ನು ಪ್ರಾರ್ಥಿಸುತ್ತಾಳೆ. ಸಂಕಷ್ಟವನ್ನರಿತ

ನದಿಯು ಕೊರಗಿ ಇಬ್ಭಾಗವಾಗಿ ನಡುವೆ ಈ ಪರಿವಾರಕ್ಕೆ ನಡೆಯಲು ದಾರಿ ಮಾಡಿಕೊಡುತ್ತದೆ. ಹಿಂಬಾಲಿಸಿ ಬಂದ ರಾಜ ಪರಿವಾರ ಹಾಗೂ ಅವನ ಸೈನ್ಯಕ್ಕೆ ಹರಿವ ನದಿಯ ಪ್ರವಾಹಕ್ಕೆ ಇದಿರಾಗಿ ಈಜುತ್ತಾ ದಾಟಲೂ ಸಾಧ್ಯವಾಗದೆ ಅವರು ಹಿಂದಿರುಗುತ್ತಾರೆ. ಪ್ರಯಾಣವನ್ನು ಮುಂದುವರೆಸಿದ ಕುಟುಂಬ ವರ್ಗವು ಒಂದೆಡೆ ನೆಲೆಯೂರುತ್ತದೆ. ನೆಲೆಯೂರಿದ ಸ್ಥಳದಲ್ಲೇ ಊರು ಸ್ಥಾಪನೆಯಾಗುವುದು, ಊರಿಗೊಂದು ಅಧಿಕೃತ ಹೆಸರು ಬರುತ್ತದೆ. ಆಲದ ಮರದ ಕೆಳಗೆ ಮಲಗಿ ನಿದ್ರಿಸುತ್ತಿರುವ ಮಗನ ತಲೆಯ ಮೇಲೆ ಸರ್ಪ ಹೆಡೆ ತೆರೆದು ನೆರಳು ನೀಡುತ್ತಿರುತ್ತದೆ. ಇದು ಅವನು ರಾಜನಾಗುತ್ತಾನೆಂಬ ಸೂಚನೆ ಇದಾಗಿದೆ. ಮುಂದೆ ನಿಧಿ ದೊರೆಯುವುದು ಆ ಮೂಲಕ ಆರ್ಥಿಕ ಭದ್ರತೆ ಲಭಿಸಿ ರಾಜ್ಯ ಸ್ಥಾಪಿಸುವುದು, ಸುತ್ತಮುತ್ತಲ ಜನಪ್ರಿಯ ಪಾಳೆಯಗಾರರೊಂದಿಗೆ ಸಂಬಂಧವನ್ನು ಕಟ್ಟಿಕೊಳ್ಳುವುದು. ಆಶ್ರಯದಾತ ಪ್ರಭುವಿನ ಋಣವನ್ನು ಶತ್ರುನಾಶದ ಮೂಲಕ ತೀರಿಸುವುದು, ವಲಸೆ ಬಂದವರು ಏಳು ಜನ ಅಣ್ಣತಮ್ಮಂದಿರು ಇಲ್ಲವೇ ಏಳು ಕುಟುಂಬ ವರ್ಗಗಳು ವಿವಿಧೆಡೆಗಳಿಗೆ ಚದುರಿ ತಮ್ಮ ನೆಲೆಗಳಲ್ಲಿ ಭಿನ್ನರಾಗಿ ಸಂಬಂಧಗಳನ್ನು ಮುಂದುವರೆಸುವುದು ಹೀಗೆ ರಾಜ್ಯ ಇಲ್ಲವೆ ಪಾಳೆಯಪಟ್ಟು ಸ್ಥಾಪಿಸಿದರೆಂಬ ಅಂಶಗಳು ವ್ಯಕ್ತವಾಗುತ್ತವೆ.

ಸುಗಟೂರಿನ ಪಾಳೆಯಗಾರರು ಮೂಲತಃ ತಮಿಳುನಾಡಿನ ಕಂಚಿ (ಕಂಜೀವರಂ) ಪ್ರದೇಶದ ಯಣಮಂಜಿ ಪುತ್ತೂರು ಇಲ್ಲವೇ ಮದ್ದಾಪುರ ಅಥವಾ ಆಲಕೂರವಡೇರಹಳ್ಳಿ ಎಂಬ ಸ್ಥಳವಾಸಿಗಳಿವರು. ಕಾಂಜೀವರಂ ಸಮೀಪದಲ್ಲಿ ಯಣಮಂಜಿ ಪುತ್ತೂರು ಮುದ್ದಾಪುರ ಅಥವಾ ಆಲಕೂರ ವಡೇರಹಳ್ಳಿ ಎಂಬ ಸ್ಥಳಗಳಾವುವೂ ಇದ್ದಂತೆ ತೋರುತ್ತಿಲ್ಲ. ಆದರೆ ಕೋಲಾರ ಜಿಲ್ಲೆಯ ಮುಳುಬಾಗಿಲು ಹಾಗೂ ಬಂಗಾರಪೇಟೆ ತಾಲೂಕುಗಳ ಪ್ರದೇಶವನ್ನು ಇಳವಂಜಿನಾಡು ಎಂದು ಕರೆದಿರುವ ಅಂಶ ಶಾಸನಗಳಿಂದ ತಿಳಿದುಬರುತ್ತದೆ.[೨] ಅಲ್ಲದೆ ಈ ಪ್ರದೇಶ ಪಾಲಾರ್ ನದಿಯ ಪೂರ್ವಕ್ಕೆ ಬರುತ್ತದೆ. ಈ ನಾಡಿಗೆ ಸೇರಿದ್ದ ಮುಳಬಾಗಿಲು ತಾಲೂಕಿನ ಉತ್ತೂರು ಗ್ರಾಮ ಹಾಗೂ ಮುಡಿಯನೂರು ಗ್ರಾಮಗಳು ಆ ಕಾಲದಲ್ಲಿ ಪುತ್ತೂರು, ಮುದ್ದಾಪುರಗಳಾಗಿರುವ ಸಾಧ್ಯತೆಯಿರಬಹುದು. ಆಲಕೂರ ವಡೇರಹಳ್ಳಿ ಎಂಬುವು ಈ ಸಮೀಪದ ಊರುಗಳಾಗಿರಬೇಕು. ಹಾಗೆಯೇ ಈ ವಲಸೆಗಾರರು ಒಂದು ಊರಿನವರಾಗದೆ, ಪಾಲಾರ್ ನದಿಯ ಇನ್ನೊಂದು ದಡದ ಅಕ್ಕಪಕ್ಕದ ಗ್ರಾಮಗಳಲ್ಲಿ ವಾಸಿಸುತ್ತಿದ್ದ ಒಂದೇ ಕುಲಾಚಾರದ ಬಂಧುಗಳ ಕುಟುಂಬಗಳೆಂದು ಹೇಳಬಹುದು. ಕೋಲಾರ ಮತ್ತು ಕಂಚಿಯ ಪ್ರಾಚೀನ ಮಾರ್ಗದಲ್ಲಿ ಇಳವಂಜಿ ನಾಡಿಗೆ ಸೇರಿದ ಪಾಲಾರ್ ನದಿಯಾಚೆಗಿನ ಗ್ರಾಮಗಳವರೆಂದು ಊಹಿಸಬಹುದು.

ಯಾವುದೇ ರಾಜವಂಶ ಅಥವಾ ಪಾಳೆಯಗಾರರ ಅಧಿಕಾರ ಸ್ಥಾಪನೆ ಅಥವಾ ಆಡಳಿತಾರಂಭಕ್ಕೆ ಮೂಲವೆಂಬ ವಿವರಗಳನ್ನು ಒದಗಿಸುವ ಐತಿಹ್ಯಗಳಲ್ಲಿ ಏಕರೂಪದ ಸಾಮ್ಯತೆಗಳು ಕಂಡುಬರುತ್ತವೆ. ಅವುಗಳ ಆಶಯಗಳ ಮುಖ್ಯಾಂಶಗಳು ಹೀಗಿವೆ : ವಲಸೆ ಬಂದವರು ನೆಲೆ ಕಂಡುಕೊಂಡದ್ದು - ನೆಲೆಸಿದ

ಪ್ರದೇಶದಲ್ಲಿ ಕಾಡನ್ನು ಕಡಿದು ಕೃಷಿಯನ್ನು ರೂಢಿಸಿಕೊಳ್ಳುತ್ತಾರೆ. ನೆಲೆಸಿದ ನೆಲೆಯಲ್ಲಿ ಬೇಟೆಯಾಡುತ್ತಿದ್ದಾಗ ನಾಯಿಯನ್ನು ಮೊಲ ಅಟ್ಟಿಸಿಕೊಂಡು ಬಂದದ್ದು. ಇದು ಆ ಭೂಮಿ ರಾಜ್ಯ ಕಟ್ಟಲು ಅರ್ಹವೆಂಬುದರ ಸೂಚನೆಯಾಗಿದೆ. ಕನಸಿನಲ್ಲಿ ದೇವರು ಕಾಣಿಸಿಕೊಂಡು ರಾಜ್ಯ ಕಟ್ಟಲು ಆಶೀರ್ವಾದ ಮಾಡುವುದು. ನಿಧಿ ದೊರಕುವುದು - ಇದರಿಂದ ಕೋಟೆ ಕೊತ್ತಲಗಳನ್ನು ಕಟ್ಟಿ ಸೈನ್ಯವನ್ನು ವೃದ್ಧಿಸಿಕೊಂಡದ್ದು. ಇದು ಆರ್ಥಿಕ ಭದ್ರತೆಯನ್ನು ಸಾರುತ್ತದೆ. ಸರ್ಪ ನೆರಳು ನೀಡುವುದು-ಮುಂದೆ ರಾಜ್ಯ ಕಟ್ಟುವ ವ್ಯಕ್ತಿ ಮಲಗಿ ನಿದ್ರಿಸುವಾಗ ಅವನ ತಲೆಯ ಬಳಿ ಸರ್ಪ ಹೆಡೆಬಿಚ್ಚಿ ನೆರಳು ಕೊಟ್ಟಿರುತ್ತದೆ. ಈ ವ್ಯಕ್ತಿಯು ಮಧ್ಯಾಹ್ನದ ದುಡಿಮೆಯ ಆಯಾಸ ಪರಿಹಾರಕ್ಕೆಂದು ಮರದಡಿ ಮಲಗಿದ್ದಾಗ ನೆರಳು ಸರಿದು ಬಿಸಿಲು ಬೀಳುವ ಸಂದರ್ಭದಲ್ಲಿ ಸರ್ಪವು ಬಿಸಿಲಿನಿಂದ ರಕ್ಷಿಸುತ್ತದೆ. ಇದು ರಾಜತ್ವದ ಸೂಚನೆ.

**ಟಿಪ್ಪಣಿಗಳು**

೧. ಪುರುಷೋತ್ತಮ ಬಿಳಿಮಲೆ, ೧೯೯೭, ಪು.೬೫

೨. ಅದೇ ಪು.,

೩. ಸುಬ್ಬಣ್ಣ ರೈ, ೧೯೯೪, ಪು.೧೦-೧೧

೪. ಅದೇ ಪು.೮೩

೫. ಪುರುಷೋತ್ತಮ ಬಿಳಿಮಲೆ, ೧೯೯೭, ಪು.೨೯

೬. ಅದೇ ಪು.೩೨

೭. ಅದೇ ಪು.೩೩

೮. ಅದೇ.,

೯. ಎ.ಕ.ಸಂ. ೧೦, ಚಿಕ್ಕಬಳ್ಳಾಪುರ ೪೦

೧೦. ಕೃಷ್ಣಮೂರ್ತಿ ಪಿ.ವಿ., ವಸು ಎಂ.ವಿ. (ಸಂ), ೨೦೦೪

೧೧. ಕೃಷ್ಣ ಬಿ.ಆರ್. ೧೯೭೦, ಪು.೯೫

೧೨. ಎ.ಕ.ಸಂ.೧೦, ಮಾಲೂರು, ೧೮೮

## ಅಧ್ಯಾಯ ೪

# ಸ್ಥಳೈತಿಹ್ಯಗಳು

ಸ್ಥಳವೊಂದರ ವಿಶಿಷ್ಟತೆಯನ್ನು ಕುರಿತಂತೆ ನಿರೂಪಿತವಾಗುವ ಐತಿಹ್ಯಗಳಿಗೆ ಸ್ಥಳೈತಿಹ್ಯಗಳು ಅಥವಾ ಸ್ಥಳೀಯ ಐತಿಹ್ಯಗಳು. ಸ್ಥಳದ ವಿಶಿಷ್ಟತೆ ಆಕರ್ಷಕವಾಗಿ ಮನಮುಟ್ಟುವಂತೆ ವರ್ಣಿತವಾಗುವುದು ಇಂಥ ಐತಿಹ್ಯಗಳ ವೈಶಿಷ್ಟ್ಯ. ಸಾಮಾನ್ಯವಾಗಿ ಐತಿಹ್ಯಗಳು ಘಟನಾ ಪ್ರಧಾನವಾದ ನಿರೂಪಣೆಗಳಾಗಿರುತ್ತವೆ. ಪ್ರಾದೇಶಿಕವಾಗಿ ಒಂದು ಸ್ಥಳದ ಪ್ರಾಕೃತಿಕ ವೈಶಿಷ್ಟ್ಯವು ಐತಿಹ್ಯ ಸೃಷ್ಟಿಗೆ ಕಾರಣವಾಗಿರಬಹುದು ಅಥವಾ ಸ್ಥಳದ ಭೌಗೋಳಿಕ ಗುಣವೂ ಆಗಿರಬಹುದು. ಇವು ಹೀಗೇಕೆ ಎಂಬ ಕುತೂಹಲ ತಾಳುವಾಗ ಇಲ್ಲವೇ ಪ್ರಶ್ನೆ ಉದ್ಭವಿಸುವಾಗ ಅವುಗಳಿಗೆ ಉತ್ತರ ರೂಪದಲ್ಲಿ ಕಂಡುಕೊಂಡ ರಚನೆಗಳಿವು. ಹಾಗೆ ಉತ್ತರಿಸಲು ಪ್ರಯತ್ನಿಸುವಾಗ ಜನಪದರು ತಮ್ಮ ಸ್ವ-ಅನುಭವಗಳನ್ನೋ ಲೋಕಾನುಭವಗಳನ್ನೋ ಆಧರಿಸುತ್ತಾರೆ. ಇವು ಈ ಹಿಂದೆ ನಡೆದಿರಬಹುದಾದ ಚಾರಿತ್ರಿಕ ಘಟನೆಗಳನ್ನಾಗಲಿ ನಡೆದಿವೆ ಎಂದು ನಂಬುವ ಪೌರಾಣಿಕ ಅಂಶಗಳನ್ನಾಗಲಿ ನೆನಪಿನಲ್ಲಿಡುವಂಥವುಗಳಾಗಿರುತ್ತವೆ.

ಪ್ರಾಕೃತಿಕ ವೈಚಿತ್ರ್ಯಗಳಿಗೆ ಸಂಬಂಧಿಸಿದಂತೆ ಸೀತೆಯ ಸೆರಗು, ಭೀಮನ ಬಂಡೆ, ರಾಮನು ಸ್ಥಾಪಿಸಿದ ಲಿಂಗ ಇತ್ಯಾದಿ ಐತಿಹ್ಯಗಳು ಸಾಮಾನ್ಯ. ಇಲ್ಲೆಲ್ಲ ಪುರಾಣ ಹೇಳಿಕೆಗಳ ಘಟನೆಗಳ ಪ್ರಭಾವ ಕಂಡುಬರುತ್ತದೆ. ಪೌರಾಣಿಕ ವ್ಯಕ್ತಿಗಳ ಸಾಮರ್ಥ್ಯ, ಗುರಿ, ಸಾಧನೆ ಕಟ್ಟುಪಾಡು ಇಟ್ಟ ಹೆಜ್ಜೆ ಎಲ್ಲವೂ ಮುಖ್ಯವಾಗುತ್ತವೆ. ಪುರಾಣ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಜನಪದರಿಗೆ ಮನಮಿಡಿಯುವ ಘಟನೆಗಳನ್ನು ವಿಶಿಷ್ಟವೆನಿಸುವ ಸ್ಥಳವೈಚಿತ್ರ್ಯಕ್ಕೆ ಅನ್ವಯಿಸಿರುತ್ತಾರೆ. ಈ ಮೂಲಕ ಆ ಸ್ಥಳದ ಘನತೆ ಲೌಕಿಕ ಮತ್ತೇ ಅಲೌಕಿಕ ನೆಲೆಗಳೆರಡನ್ನೂ ಕಟ್ಟಿಕೊಂಡು ವಿಸ್ತೃತವಾಗಿರುತ್ತದೆ. ರಾಮಸೀತೆಯರ ವನವಾಸ, ಪಾಂಡವರ ವನವಾಸಗಳು ಜನರ ಮನಸ್ಸನ್ನು ಎಷ್ಟರ ಮಟ್ಟಿಗೆ ಮಿಡಿಯುವಂತೆ ಮಾಡಿವೆಯೆಂದರೆ, ಪೌರಾಣಿಕ ಘಟನೆಗಳನ್ನು ಚಾರಿತ್ರಿಕ ಘಟನೆಗಳಾಗಿ ಪರಿಭಾವಿಸಿದ್ದಾರೆ. ಆದ್ದರಿಂದಲೇ ತಮ್ಮ ಭೌಗೋಳಿಕ ಪರಿಸರದ ನೆಲೆಗಳಲ್ಲಿ ಅವುಗಳನ್ನು ಪುನರ್‌ಸ್ಥಾಪಿಸಿ ಸದಾ ತಮ್ಮೊಂದಿಗೆ ಉಳಿಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಎಲ್ಲೆಲ್ಲೂ ರಾಮನ ವನವಾಸದ ಎಡೆಗಳು ಪಾಂಡವರ ಗುಹೆಗಳು ಕಂಡುಬರುತ್ತವೆ. ಆದರೆ ಪಾಂಡವರ ಗುಡಿಗಳೆಂದು ಹೇಳುವ ಐತಿಹ್ಯಗಳು ಬೇರೆಯಾಗುತ್ತವೆ. ಅವು ಕಟ್ಟಿಕೊಡುವ ವಿವರಗಳು ಭಿನ್ನವಾಗುತ್ತವೆ. ಇಂಥವು ಪ್ರಾಚೀನ ಸಂಸ್ಕೃತಿ ಸಂಪ್ರದಾಯಗಳು ನಂಬಿಕೆ ಆಚರಣೆಗಳ ಕುರುಹುಗಳಾಗಿವೆ.

ಕೆಲವೊಮ್ಮೆ ಲೋಕಾನುಭವಗಳು ಆರೋಪಿತವಾಗುವಲ್ಲಿ ಲೋಕಜ್ಞಾನದ ತಿಳುವಳಿಕೆ ಮೂಡಿಸುವ ಅಂಶಗಳು ಐತಿಹ್ಯಗಳಲ್ಲಿರುತ್ತವೆ. ತಲೆಯ ಭಾರ ಹೊತ್ತ ವ್ಯಕ್ತಿಯನ್ನು ಹೋಲುವ ಬಂಡೆಗಲ್ಲಿನ ಬಗ್ಗೆ ಹೇಳುವ ಐತಿಹ್ಯ (ಡಿ.ಪಾಳ್ಯ, ಗೌರೀಬಿದನೂರು ತಾ.) : ಒಬ್ಬ ಬದುಕಿದ್ದಾಗ ಅತೀವ ಸಾಲ ಮಾಡಿದ್ದ ಅವನು ಸಾಯುವ ಕಾಲಕ್ಕೆ ಸಾಲವನ್ನು ತೀರಿಸಲಾಗಲಿಲ್ಲ. ಸತ್ತು ಸಾಲದ ಭಾದೆಯಿಂದ ತಪ್ಪಿಸಿಕೊಳ್ಳಲು ಬಂಡೆಕಲ್ಲಾದ. ಅವನ ಸಾಲದ ರಾಶಿಯು ಮತ್ತೆ ಬಂಡೆಯಾಗಿ ತಲೆಯ ಮೇಲೆ ಉರುಳಿ ಅಲ್ಲೇ ನಿಂತಿತು. ಇದು ಎತ್ತರವಾದ ಬಂಡೆಯ ಮೇಲೆ ದುಂಡಗಿನ ಕಲ್ಲೊಂದು ಭದ್ರವಾಗಿ ಕುಳಿತಿರುವ ಎರಡು ಗುಂಪು ಕಲ್ಲುಗಳ ಕುರಿತಂಥ ನಿರೂಪಣೆ. ಇದರ ನಿದರ್ಶನವು ಸಾಲದ ಹೊರೆಯಿಂದ ವಿಮುಕ್ತಿ ದೊರೆಯದ ಜನಪದರ ಲೋಕಾನುಭವವನ್ನು ಹೇಳುತ್ತದೆ. ಬೃಹತ್‌ಗಾತ್ರದ ಬೆಟ್ಟ ಗುಡ್ಡ, ಬಂಡೆ, ಗುಹೆ, ತೋಡು, ನದಿ, ಹಳ್ಳ, ಕೆರೆ, ಕೋಟೆ ಇತ್ಯಾದಿಗಳೆಲ್ಲವೂ ಸ್ಥಳೈತಿಹ್ಯಗಳಿಗೆ ನೆಲೆಗಳಾಗುತ್ತವೆ. ಇಂಥಲ್ಲಿ ಸಹಜ ಕಲ್ಪನೆಯಿಂದ ಜನಪದರು ಐತಿಹ್ಯಗಳನ್ನು ಕಟ್ಟಿದ್ದರೂ ಹಲವು ನೈಜ ಸಂಗತಿಗಳಿಂದಲೂ ತುಂಬಿರುತ್ತವೆ. ಮನುಷ್ಯ ನಿರ್ಮಿತ ಎಡೆಗಳಿಗೆ ಸಂಬಂಧಿಸಿದ ಐತಿಹ್ಯಗಳಲ್ಲಿ ಸಹಜ ಸಂಗತಿಗಳ ಸುಳಿವುಗಳಿರುತ್ತವೆ. ಅನೇಕ ಬಾರಿ ಅವು ಪರೋಕ್ಷವಾಗಿ ಬಿಂಬಿತವಾಗಿರಬಹುದು. ಕಾಕತಾಳೀಯವಾಗಿ ಸಂಬಂಧ ಬೆಸುಗೆಯಾಗ ಬಹುದು. ಉದಾ: ಕೆರೆಗಳಲ್ಲಿ ನೀರು ನಿಲ್ಲದೆ ಇರುವುದಕ್ಕೆ ಅನೇಕ ಕಾರಣಗಳೂ ನಂಬಿಕೆಗಳು ಇವೆ. ಇವುಗಳಿಗೆ ಸಂಬಂಧಿಸಿದಂತೆ ಐತಿಹ್ಯಗಳೂ ರೂಪಿತವಾಗಿರುತ್ತವೆ. ಆದರೆ "ಕೆರೆಯನ್ನು ಕಟ್ಟಿದ ವಡ್ಡನಿಗೆ ನಿಗದಿಪಡಿಸಿದ ಸಂಭಾವನೆಯನ್ನು ಕೊಡದ ಕಾರಣ ಅವನು ಈ ಕೆರೆಯಲ್ಲಿ ನೀರು ನಿಲ್ಲದೆ ಹೋಗಲಿ ಎಂದು ಶಾಪ ಹಾಕಿದನೆಂಬ" ನಿರೂಪಣೆ ಬರುತ್ತದೆ. ಇಲ್ಲಿ ಕೆಲಸಗಾರರಿಗೆ ಕೂಲಿ ಕೊಡುವಲ್ಲಿ ಮೋಸ ಮಾಡುವ, ಅವರು ಶಪಿಸುವುದರ ಮೂಲಕ ಪ್ರತಿಭಟಿಸುವ, ಅಸಹಾಯಕರಾಗಿ ಸ್ಥಿತಿವಂತರ ನಾಶ ಬಯಸುವ ಆಶಯಗಳೆಲ್ಲವುಗಳ ಜೊತೆಗೆ ಕಾಕತಾಳೀಯವಾಗಿ ಕೆರೆಯಲ್ಲಿ ಕಾರಣಾಂತರಗಳಿಂದ ನೀರು ನಿಲ್ಲದೆ ಸದಾ ಬತ್ತಿಹೋಗುವ ವಾಸ್ತವ ಚಿತ್ರಣವೂ ಇದೆ.

**ಪವಾಡಗಳು**

ಪವಾಡವನ್ನು ಇಂಗ್ಲೀಷಿನಲ್ಲಿ Miracle ಎನ್ನುತ್ತಾರೆ. Miracle ಲ್ಯಾಟಿನ್ ಭಾಷೆಯ Miraculuulನಿಂದ ಬಂದಿದೆ. ಅತಿಮಾನುಷ ಘಟನೆ ಅಥವಾ ಕಾರ್ಯಗಳು ಆಶ್ಚರ್ಯಕರವಾಗಿ ನಡೆಯುವುದನ್ನು ಪವಾಡವೆನ್ನುತ್ತಾರೆ. ಸಂಸ್ಕೃತದ ಪ್ರವಾದ ಎಂಬುದರಿಂದ ಪವಾಡವೆಂಬ ಶಬ್ದವು ಬಂದಿರಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ. ತಮಿಳು ಮತ್ತು ಮರಾಠಿಯಲ್ಲೂ 'ಪವಾಡಾ' ಎಂಬ ಮಾತು ಇದೆ ಎಂಬುದಾಗಿ ಕಿಟ್ಟೆಲರು ಅಭಿಪ್ರಾಯ ಪಡುತ್ತಾರೆ. ianativak, Marvellous words or acts, The talent of Scholar, The virtues of a person.[9] ಪವಾಡ ಮಾಡುವವನು

ಪ್ರವಾದಿ ಆಗುತ್ತಾನೆ. ತಾನು ಹೇಳುತ್ತಿರುವುದು ಸರಿ ಎಂಬುದನ್ನು ಮಾಡಿ (ಪ್ರಯೋಗ ಮಾಡಿ) ತೋರಿಸುವವನು ಇವನು. ಈತ ತಾನು ಹೇಳಿದ್ದನ್ನು, ಮಾಡಿ ತೋರಿಸುವುದನ್ನು, ಸಾಬೀತುಪಡಿಸುವ ಕ್ರಿಯೆಯನ್ನು ಸೃಷ್ಟಿ ಮಾಡುತ್ತೇನೆ ಎಂದು ಹೇಳುತ್ತಾನೆ. ಹೇಳುವುದು, ಹೇಳಿದ್ದನ್ನು ಸಾಬೀತು ಮಾಡಿ ತೋರಿಸುವುದು ಇವೆರಡೂ ಕೆಲಸಗಳನ್ನು ತಾನೇ ಮಾಡಿ ತೋರಿಸುತ್ತಾನೆ. ಈ ಹಿನ್ನೆಲೆಯಲ್ಲಿ ಪವಾಡ ಎಂಬ ಅರ್ಥಗಳಿಗೆ ಸಮೀಪವಾಗುತ್ತದೆ. ಒಬ್ಬರ ಮಾತಿಗೆ ವಿಶೇಷ ಶಕ್ತಿ ಅಥವಾ ಪುಷ್ಟಿ ದೊರೆತಾಗ, ಆಧಾರ ದೊರೆತಾಗ ಆತನ ವಾದ ಪ್ರವಾದವೆನಿಸುತ್ತದೆ.

ನಿರ್ದಿಷ್ಟ ಮೂಲದಿಂದ ಹುಟ್ಟಿ ಕೆಲವು ಬದಲಾವಣೆಗಳೊಂದಿಗೆ ಕಾಲದೇಶಗಳನ್ನು ದಾಟಬಲ್ಲ ವರ್ತಮಾನದ ಘಟನೆಗಳಾಗಿರುತ್ತವೆ. ಸಾಮಾನ್ಯರಿಗೆ ಪವಾಡ ಮಾಡಲು ಸಾಧ್ಯವಾಗುವುದಿಲ್ಲ. ಅಸಾಮಾನ್ಯರು ಯೋಗಿಗಳು, ಋಷಿಗಳು, ಪವಿತ್ರರು, ಅದ್ಭುತ ಅತಿಮಾನುಷ ಶಕ್ತಿಗಳನ್ನು ವಶಪಡಿಸಿಕೊಂಡವರು ಪವಾಡಗಳನ್ನು ಮಾಡುತ್ತಾರೆಂದು ನಂಬಿಕೆ. ಪವಾಡಗಳಲ್ಲಿ ನಂಬಿಕೆ ಮುಖ್ಯವಾಗಿ ಕೆಲಸ ಮಾಡುತ್ತದೆ. ನಂಬಿದರೆ ಮನಸ್ಸಿಗೆ ನಿಜವೆನಿಸುತ್ತದೆ. ನಂಬಿಕೆ ಅಥವಾ ಭರವಸೆ ಇಡದಿದ್ದರೆ ಪವಾಡಕ್ಕೆ ಮಹತ್ವವಿರುವುದಿಲ್ಲ. ಏಕೆಂದರೆ ಪವಾಡದಲ್ಲಿ ಚಾರಿತ್ರಿಕ ಅಂಶಗಳು ಗೌಣವಾಗಿದ್ದು ಸಾಂಕೇತಿಕ ಮತ್ತು ಲಕ್ಷ್ಯಾರ್ಥಗಳು ಹೆಚ್ಚಾಗಿರುತ್ತವೆ. ವೈಚಾರಿಕ ನೆಲೆಗಟ್ಟಿನಲ್ಲಿ ಪವಾಡಕ್ಕೆ ಆಧಾರಗಳು ಇರುವುದಿಲ್ಲ. ಕೇವಲ ಮನರಂಜನೆ ಪವಾಡಗಳ ಉದ್ದೇಶವೇ ಹೊರತು ಚಿಂತನ ಮತ್ತು ವಿವೇಚನೆಗೆ ಆಸ್ಪದವಿಲ್ಲ. ಆದರೂ ಪವಾಡಗಳು ಐತಿಹ್ಯ ಮತ್ತು ಪುರಾಣಗಳಿಗೆ ಪೋಷಕವಾಗುವ ಕೆಲವು ವಸ್ತುಗಳನ್ನು ಒಳಗೊಂಡಿರುತ್ತವೆ. ಉದಾಹರಣೆಗೆ ಬಾಲನಾಗಮ್ಮನನ್ನು ಮಾಯಲಮರಾಠಿಯು ನಾಯಿಯನ್ನಾಗಿ ಮಾಡಿಕೊಂಡು ಕರೆದೊಯ್ದನೆಂಬ ಪವಾಡ ಐತಿಹ್ಯವನ್ನಾಗಿಸಬಹುದು. ನಗರಗೆರೆಯ ಕೋಡೀರ್ಲಪ್ಪನು ಶತ್ರುಗಳಿಂದ ಪಾರಾಗಲು ಕುದುರೆಯೇರಿ ದೊಡ್ಡ ಗುಂಡುಕಲ್ಲಿನಲ್ಲಿ ತೂರಿ ಹೋದನೆಂಬ ಪವಾಡ ಐತಿಹ್ಯವಾಗಿದೆ. ಐತಿಹ್ಯಗಳಲ್ಲಿನ ಪವಾಡಗಳು ಸಂಬಂಧಿಸಿದ ವ್ಯಕ್ತಿಯ ಸಾಮರ್ಥ್ಯವನ್ನು ಅತಿಮಾನುಷವೆಂದು ವೈಭವೀಕರಿಸುವ ಆಶಯದಿಂದ ಕೂಡಿರುತ್ತದೆ.

ವ್ಯಕ್ತಿಯ ಪ್ರತಿಷ್ಠೆ, ವರ್ಚಸ್ಸು, ಸಾಮರ್ಥ್ಯಗಳನ್ನು ಪವಾಡಗಳು ಅತಿಮಾನುಷವೆಂದು ಕಟ್ಟಿಕೊಡುವ ಮೂಲಕ ಸಿದ್ಧಪುರುಷ ಅಥವಾ ಪವಾಡ ಪುರುಷ ಎಂಬ ಕಲ್ಪನೆಯನ್ನು ಜನರಲ್ಲಿ ಮೂಡಿಸುತ್ತವೆ. ಈ ಮೂಲಕ ಅತಿಮಾನುಷ ಶಕ್ತಿಗಳಲ್ಲಿ ನಂಬಿಕೆ ಮೂಡಿಸುವುದು ಧರ್ಮ ಅಥವಾ ಮತ ಪ್ರಚಾರ ಮಾಡುವುದು ದುಷ್ಟ ನಿಗ್ರಹ ಶಿಷ್ಟ ಸಂರಕ್ಷಣೆಯನ್ನು ವ್ಯಕ್ತಪಡಿಸುವುದು. ಈ ಮೂಲಕ ಸಮಾಜವನ್ನು ಸನ್ಮಾರ್ಗಕ್ಕೆ ತರುವುದು ಉದ್ಧರಿಸುವುದು ಇದೇ ಮೊದಲಾದ ಆಶಯಗಳನ್ನು ಪವಾಡಗಳಿಂದ ಕೂಡಿದ ಐತಿಹ್ಯಗಳಲ್ಲೂ ಕಾಣಬಹುದು.

ಯಾವುದೇ ಧರ್ಮಸ್ಥಾಪಕ ಅಥವಾ ಧಾರ್ಮಿಕ ಮುಖಂಡರ ಕುರಿತು ಪವಾಡಗಳು ಸೃಷ್ಟಿಯಾಗುತ್ತವೆ. ಹೀಗೆ ಪ್ರಭಾವಿಯಾದಂತೆ ಆತನ ನಡೆನುಡಿಗಳು ಸಾಧನೆಗಳು ಐತಿಹ್ಯದ ಹಂತವನ್ನು ಪಡೆಯುತ್ತವೆ. ಕೆಲವೊಮ್ಮೆ ಆತನನ್ನು ಪೌರಾಣಿಕ ವ್ಯಕ್ತಿಯಾಗಿಯೂ ಮಾಡಿಬಿಡುತ್ತಾರೆ. ಉದಾ: ಬಾಬಾಗಳ ಪರಂಪರೆ -ಇವರು ವ್ಯಕ್ತಿ ಬದುಕಿನಲ್ಲಿ ಹೇರಳವಾಗಿ ಪವಾಡಗಳನ್ನು ಮಾಡುತ್ತಾ ಜನಮನದಲ್ಲಿ ಸ್ಥಾನ ಪಡೆಯುತ್ತಾರೆ. ಇಂಥವರ ವ್ಯಕ್ತಿತ್ವ ಮುಂದೆ ದಂತಕತೆ ಐತಿಹ್ಯಗಳ ರೂಪಗಳನ್ನು ದಾಟಿ ಪುರಾಣದ ಅಂತಿಮ ಗುರಿಗೆ ತಲುಪಿಸುತ್ತದೆ. ಉದಾ: ಬಸವಣ್ಣ ವೀರಶೈವ ಧರ್ಮದ ಸ್ಥಾಪಕ-ಮುಖಂಡನಾದ ಬಸವಣ್ಣನನ್ನು ಕುರಿತು ಜನಪದರು ಧಾರ್ಮಿಕ ವಲಯದಲ್ಲಿ ಪವಾಡಗಳನ್ನು ಕಟ್ಟಿಕೊಟ್ಟಿದ್ದಾರೆ. ಅಷ್ಟೇ ಅಲ್ಲದೆ ೧೨ನೆಯ ಶತಮಾನದ ಚಾರಿತ್ರಿಕ ವ್ಯಕ್ತಿಯಾದ ಬಸವಣ್ಣನವರು ಹರಿಹರನ ಕೃತಿ ಬಸವರಾಜದೇವರ ರಗಳೆಯಲ್ಲಿ ಪವಾಡ ಪುರುಷನಾಗಿ ಪೌರಾಣಿಕ ವ್ಯಕ್ತಿಯಾಗಿ ಕಂಡುಬರುತ್ತಾರೆ. ಅಲ್ಲಮಪ್ರಭು, ಅಕ್ಕಮಹಾದೇವಿ ಇತ್ಯಾದಿ ಶಿವಶರಣರೂ ಹರಿಹರನ ಕೃತಿಗಳಲ್ಲಿ ಪುರಾಣ ವ್ಯಕ್ತಿಗಳಾಗಿದ್ದಾರೆ.

ಬೆರಣಿಕೆಯಷ್ಟು ಪವಾಡಗಳನ್ನು ಮಾಡಿದ ವ್ಯಕ್ತಿಯು ಐತಿಹ್ಯ ವ್ಯಕ್ತಿಯಾಗಬಲ್ಲನು. ವೈಜ್ಞಾನಿಕ ದೃಷ್ಟಿಯಿಂದ ಪವಾಡಗಳನ್ನು ನಂಬದೆ ಇರಬಹುದು; ಪ್ರಶ್ನಿಸಬಹುದು. ಆದರೆ ಅವುಗಳು ಜನಪದರಲ್ಲಿ ನಂಬಿಕೆಗಳಾಗಿ ಅಸ್ಥಿತ್ವದಲ್ಲಿರುವುದರಿಂದ ಜನಪದರಲ್ಲಿ ಅವಿಭಾಜ್ಯ ಅಂಗವಾಗಿವೆ. ಇಲ್ಲಿ ನಂಬುಗೆ ವಿವರಣೆಗಳು ಮುಖ್ಯವೇ ಹೊರತು ಪ್ರಶ್ನೋತ್ತರಗಳಿಗೆ ಆದ್ಯತೆ ಅಥವಾ ಸಮಾಧಾನ ನೀಡಲಾಗುವುದಿಲ್ಲ. ಯಾವುದೇ ಒಂದು ಸಮುದಾಯದ ಸಾಂಸ್ಕೃತಿಕ ವಲಯದಲ್ಲಿ ಆಯಾ ಸಂಸ್ಕೃತಿಯ ಮೂಲಕ್ಕೆ ಸಂಬಂಧಿಸಿದಂತೆ, ವೀರರಿಗೆ ಸಂಬಂಧಿಸಿದಂತೆ ಪವಾಡಗಳು ಇದ್ದೇ ಇರುತ್ತವೆ. ಉದಾ : ಬೇಡರ ಮೂಲಪುರುಷ ಬೊಮ್ಮಣ್ಣನವರು ಹುಟ್ಟುವಾಗಲೇ ಕೋರಿ ಲಂಗೋಟಿ, ನಾರಿನ ಉಡುದಾರ, ಕೈಯಲ್ಲಿ ಬೇಟೆಯ ಬಡಿಗೆ, ಕೆನ್ನೆಗೆ ಬೊಗಸೆಯಷ್ಟು ಬೆಳ್ಳಿಯ ಮಲ್ಲಿಗೆ, ಕಾಲಿಗೆ ಚರ್ಮದ ಗಿರಚ್ ಚಪ್ಪಲಿ- ಹೀಗೆ ಸಿದ್ಧ ವೇಷಭೂಷಣಗಳಿಂದ ಭೂಮಿಯನ್ನು ಸೀಳಿಕೊಂಡು ಹುಟ್ಟಿದನೆಂಬ ಪವಾಡವನ್ನೊಳಗೊಂಡ ಐತಿಹ್ಯವಿದೆ. ಇದನ್ನು ಪ್ರಶ್ನಿಸುವ ಬದಲು ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಮಾಡಿದರೆ ಇವು ಆ ಸಮುದಾಯದ ಬುಡಕಟ್ಟಿನ ವೇಷಭೂಷಣಗಳೆಂದು ಇವುಗಳನ್ನು ಸಮರ್ಥಿಸಿಕೊಳ್ಳುವ ರೀತಿ ಇದೆಂದೂ ಹೇಳಬಹುದು.

ಜನಪದ ಮೂಲದ ಐತಿಹ್ಯ ಪುರಾಣ ಕಥೆ ದಂತಕಥೆಗಳಲ್ಲಿ ವಾಸ್ತವಾಂಶ ಇರಲೂಬಹುದು. ಇಲ್ಲದಿರಲೂಬಹುದು. ವಾಸ್ತವಾಂಶ, ನೈಜ ಘಟನೆ, ಇತಿಹಾಸದ ಎಳೆ ಹೆಚ್ಚಿನ ಪ್ರಮಾಣದಲ್ಲಿ ಇರುವ ಗದ್ಯ ನಿರೂಪಣೆಯ ಪ್ರಕಾರವನ್ನು ನಾವು ಐತಿಹ್ಯವೆಂದು ಗುರುತಿಸುತ್ತೇವೆ. ಅಲ್ಲಿ ಸಾಕಷ್ಟು ಘಟನೆಗೆ ಆಧಾರಗಳು ಇರಬಹುದು. ಇಲ್ಲವೇ ಪವಾಡಗಳಿರಬಹುದು. ಜನಪದ ಸಾಹಿತ್ಯ ಪ್ರಕಾರವೆಂದ ಮೇಲೆ

ಕಂಡೊಡನೆಯೇ ಅವಳು ಭಿಕ್ಷೆ ತರಲು ಒಳಗೆ ನಡೆದಳು. ತಕ್ಷಣವೇ ಈ ಸನ್ಯಾಸಿಯು ಯಾವುದೋ ಎಲೆಯ ರಸವನ್ನು ಅವಳು ತಲೆಗೆ ಹಚ್ಚಿಕೊಳ್ಳುತ್ತಿದ್ದ ಎಣ್ಣೆಯ ಬಟ್ಟಲಿಗೆ ಸುರಿದ. ಅವನ ಪ್ರಕಾರ ತಲೆಗೆ ಆ ಎಣ್ಣೆಯನ್ನು ಇಟ್ಟುಕೊಂಡ ಬಳಿಕ ಅವಳು ನಡುರಾತ್ರಿಗೆ ಸರಿಯಾಗಿ ಅವನನ್ನು ಹುಡುಕುತ್ತಾ ಹೊರಡುತ್ತಾಳೆಂದು ಎಣಿಕೆ ಇತ್ತು. ಅವಳಿಗೆ ಈ ಸಂಚು ಏನೂ ತಿಳಿಯದಿದ್ದರೂ ಯಾಕೋ ಅಂದು ತಲೆಗೆ ಎಣ್ಣೆ ಹಚ್ಚಲಿಲ್ಲ. ಅವಳ ಅಣ್ಣಂದಿರು (೭ ಮಂದಿ) ಆ ಎಣ್ಣೆಯನ್ನು ಕೀಲಿ ಎಣ್ಣೆಗೆ ಬೆರೆಸಿ ಸಂಜೆ ಬಂಡಿಗಳ ಚಕ್ರಗಳಿಗೆ ಹಚ್ಚಿದರು. ನಡುರಾತ್ರಿಯ ಸಮಯಕ್ಕೆ ಅಣ್ಣಂದಿರ ಬಂಡಿಗಳೆಲ್ಲವೂ ಸನ್ಯಾಸಿ ಇದ್ದ ಬೆಟ್ಟಕ್ಕೆ ನುಗ್ಗಿ ಅವನು ನೆಲೆಸಿದ್ದ ಗುಹೆಯನ್ನು ಮುತ್ತಿ ಗುದ್ದತೊಡಗಿದವು. ಊರ ಜನ ಸನ್ಯಾಸಿಯನ್ನು ಹಿಡಿದು ಹೊಡೆದು ಶಪಿಸಿದರು. ಈ ಐತಿಹ್ಯದ ಪವಾಡವು ಗುಹೆಯ ರಚನೆಗೆ ಸಂಬಂಧಿಸಿದ್ದಲ್ಲದೆ, ಅಲ್ಲಿನ ಔಷಧಿಯುಕ್ತ ಸಸ್ಯ ಸಮೂಹಗಳ ಮಹತ್ವವನ್ನು ಮನದಟ್ಟು ಮಾಡುವುದಾಗಿದೆ.

ಕೆಲವೊಮ್ಮೆ ದೈವ ಸಂಬಂಧಿ ಆಚರಣೆಗಳ ಸಂದರ್ಭದಲ್ಲಿ ಕಂಡುಬರುವ ಪವಾಡಗಳು ಪುರಾಣ ಸಂಬಂಧದ ಐತಿಹ್ಯಗಳಾಗಿ ಉಳಿದು ಬರುತ್ತಿರುತ್ತವೆ. ಉದಾ: ವಿದುರಾಶ್ವತ್ಥದ ಅಶ್ವತ್ಥನಾರಾಯಣಸ್ವಾಮಿ ಜಾತ್ರೆಯ ದಿನದಂದು ರಥವನ್ನು ಎಳೆಯಬೇಕಾದರೆ ಬೆಂಗಳೂರಿನ ಧರ್ಮರಾಯನ ಕರಗದ ತೀರ್ಥವನ್ನು ತಂದು ತೇರಿನ ಮೇಲೆ ಹಾಕುತ್ತಾರೆ. ಇಲ್ಲದಿದ್ದರೆ ರಥವನ್ನು ಎಳೆಯಲಾಗುವುದಿಲ್ಲ. ಅದೇ ಸಂದರ್ಭಕ್ಕೆ ಗರುಡ ಬಂದು ಮೂರು ಪ್ರದಕ್ಷಿಣೆ ಹಾಕುತ್ತದೆ. ನಂತರ ರಥೋತ್ಸವ ಪ್ರಾರಂಭವಾಗುತ್ತದೆ. ಇಲ್ಲಿ ಬೆಂಗಳೂರಿನ ಕರಗದಂಥ ದೊಡ್ಡ ಜಾತ್ರೆ, ಉತ್ಸವದ ಪ್ರಭಾವವನ್ನು ಗುರುತಿಸುವುದಲ್ಲದೆ, ಪಾಂಡವರ ಪಕ್ಷಪಾತಿಯೂ ಬಂಧುವೂ ಆದ ವಿದುರನು ನೆಲೆಸಿದನೆನ್ನಲಾದ ಐತಿಹ್ಯದಿಂದ ವಿದುರಾಶ್ವತ್ಥದ ಜಾತ್ರೆಗೂ ಧರ್ಮರಾಯನ ಕರಗಕ್ಕೂ ಸಂಬಂಧವೇರ್ಪಡುವುದನ್ನು ಜನಪದರು ಉಳಿಸಿಕೊಳ್ಳುತ್ತಾ ಬಂದಿದ್ದಾರೆ. ಗರುಡ ಪಕ್ಷಿಯು ರಥಕ್ಕೆ ಪ್ರದಕ್ಷಣೆ ಹಾಕುವುದೆಂದರೆ, ವಿದುರಾಶ್ವತ್ಥದ ಅಶ್ವತ್ಥ ವೃಕ್ಷದ (ಅರಳೀಮರ: ವಿದುರ ನೆಟ್ಟನೆಂದು ಪ್ರತೀತಿ) ಜೊತೆಯಲ್ಲಿ ನೆಲೆಸಿರುವ ನಾರಾಯಣಸ್ವಾಮಿಯ ವಾಹನವು ಬಂದು ಹೊತ್ತು ಒಯ್ದುದ್ದರ ಸಂಕೇತ ವಿಷ್ಣುವಿನ ವಾಹನ ಗರುಡನೆಂಬುದನ್ನು ನೆನಪಿಸುತ್ತದೆ.

ಕೆಲವು ಆಚರಣೆ, ಜಾತ್ರೆ, ಉತ್ಸವಗಳ ದಿನ ಮಳೆ ಬಂದೇ ಬರುತ್ತದೆಂಬ ನಂಬಿಕೆ ಇದೆ. ಅಂಥ ದಿನಗಳಲ್ಲಿ ಶಾಸ್ತ್ರಕ್ಕಾಗಿ ನಾಲ್ಕೈದು ಹನಿ ಪಟಪಟನೆ ಬೀಳುತ್ತದೆಂದು ಭಕ್ತಸಮೂಹ ಕಾತರದಿಂದ ಎದುರು ನೋಡುತ್ತಿರುತ್ತಾರೆ. ಆ ಆಚರಣೆಯಲ್ಲಿ ಪಾಲ್ಗೊಂಡ ಕೃಷಿಕರಿಗೆ ಮಳೆ ಬಂದೇ ಬರುವುದಾಗಿ ಮಾತುಕೊಟ್ಟಿದೆ ಎಂಬ ಭರವಸೆ ಇರುತ್ತದೆ. ಉದಾ: ಉತ್ತರೆ ಮಳೆಯು ತಾನು ತಪ್ಪದೆ ಬಂದು ಸುರಿಯುವುದಾಗಿ ಒಕ್ಕಲಿಗನಿಗೆ ಭಾಷೆ ಕೊಟ್ಟಿದೆಯೆಂಬ ಐತಿಹ್ಯ ನಂಬಿಕೆಗಳಲ್ಲಿ ದೊರೆಯುತ್ತದೆ. ಇಂಥವುಗಳೆಲ್ಲವೂ ಪವಾಡಗಳ ಸಾಲಿಗೆ ಸಮೀಪವಾಗುತ್ತದೆ. ಕೆಲವು ದೇವತಾ ಸಂಬಂಧಿ ಆಚರಣೆಗಳಲ್ಲಿ

ಪವಾಡಗಳು ಆಕರ್ಷಣೆಯಾಗಿರುತ್ತದೆ. ಉರುಸ್‌ಗಳಲ್ಲಿ ನೀರಿನ ದೀಪ ಉರಿಸುವುದು ಒಂದು ಪವಾಡ. ಗೌರೀಬಿದನೂರಿನ ಮಾಸಾದಮ್ಮನ ಉರುಸಿನಲ್ಲಿ ನೀರು ತುಂಬಿದ ಮಣ್ಣಿನ ಮುಚ್ಚಳದಲ್ಲಿ, ಶಬರಿಮಲೆಯ ಅಯ್ಯಪ್ಪನ ಆರಾಧನೆಯ ದಿನ ಜ್ಯೋತಿ ಕಂಡುಬರುತ್ತದೆಯೆಂದು ಭಕ್ತಾದಿಗಳು ಕಿಕ್ಕಿರಿದಿರುತ್ತಾರೆ. ಇವುಗಳ ಹಿನ್ನೆಲೆಯಾಗಿ ಐತಿಹ್ಯಗಳಿರುತ್ತದೆ.

### ಸ್ಥಳೈತಿಹ್ಯಗಳು-ಸ್ಥಳಪುರಾಣಗಳು

ಪ್ರತಿಯೊಂದು ಸ್ಥಳವೂ ತನ್ನದೇ ಆದ ಸ್ಥಳೈತಿಹ್ಯ ಅಥವಾ ಸ್ಥಳಪುರಾಣವನ್ನು ಹೊಂದಿರುತ್ತದೆ. ಸ್ಥಳೈತಿಹ್ಯವು ಪುರಾಣದ ನೆಲೆಯ ಅಂಶಗಳನ್ನು ಒಳಗೊಂಡಂತೆ, ಮನೋಶಾಸ್ತ್ರ, ಮಾನವಶಾಸ್ತ್ರ ಇತಿಹಾಸ ಜಾನಪದ ಇತ್ಯಾದಿ ಯಾವುದೇ ಅಂಶಗಳನ್ನು ಒಳಗೊಂಡಿರುತ್ತದೆ. ಆದರೆ ಸ್ಥಳಪುರಾಣವು ಯಾವುದಾದರೂ ಪೌರಾಣಿಕ ಘಟನೆಯೊಂದಿಗೆ ತನ್ನ ಸಂಬಂಧವನ್ನು ಗುರುತಿಸಿಕೊಂಡಿರುತ್ತದೆ. ಐತಿಹಾಸಿಕ ವಿವರಗಳು ಇಲ್ಲವೇ ಜಾನಪದ ಅಂಶಗಳು ಮೌಖಿಕ ಪರಂಪರೆಯಲ್ಲಿ ಉಳಿದಿದ್ದು ಬೆಳವಣಿಗೆಯನ್ನು ಪಡೆಯುವ ಪ್ರತಿ ಹಂತದಲ್ಲೂ ಅಲ್ಪಸ್ವಲ್ಪ ವ್ಯತ್ಯಾಸವಾಗುವುದು ಸಹಜ. ಇಂಥ ಸಂದರ್ಭದಲ್ಲಿ ಜನಪದರು ತಾವು ಕೇಳಿದ ಇಲ್ಲವೇ ನೋಡಿದ ಘಟನೆಗಳೊಂದಿಗೆ ತಮ್ಮ ನಿರೂಪಣೆಗಳನ್ನು ಮೇಳೈಸಿಕೊಳ್ಳುತ್ತಾರೆ. ಕುಮಾರರಾಮನೆಂಬ ಚಾರಿತ್ರಿಕ ವ್ಯಕ್ತಿಗೆ ಪರನಾರಿಸೋದರನೆಂಬ ಜನಪದ ಸಾಮಾಜಿಕ ಆಶಯದ ಮೌಲ್ಯ ಹಾಗೂ ಆತ ಅರ್ಜುನನ ಅವತಾರವೆಂಬ ಪುರಾಣದ ಸಂಬಂಧ ಇತ್ಯಾದಿ ಭೂಷಣಗಳು ಜನಪದವಲಯವು ಆತನನ್ನು ತಮ್ಮ ಮೂರ್ತ, ಅಮೂರ್ತ ಭಾವನೆಗಳ ಅನುಭವಗಳ ಹಾಗೂ ಆಶಯಗಳ ಜೊತೆಗೆ ಚಿತ್ರಿಸಿಕೊಂಡಿದ್ದನ್ನು ಸಾರುತ್ತವೆ. ಅಲ್ಲದೆ ತಮ್ಮ ಅನುಭವದ ಮೂಲಕ ವ್ಯಕ್ತಿತ್ವವನ್ನು ವ್ಯಕ್ತಿಯನ್ನು ಅರ್ಥೈಸಿಕೊಳ್ಳುವ ರೀತಿಗೆ ಸಾಟಿಯಾಗುತ್ತದೆ.

ಯಾವುದೇ ಸ್ಥಳಕ್ಕೆ ಸಂಬಂಧಿಸಿದ ವೈಶಿಷ್ಟ್ಯಗಳು ಚಾರಿತ್ರಿಕ ಘಟನೆಗಳೊಂದಿಗೆ ಇಲ್ಲವೇ ಪೌರಾಣಿಕ ಘಟನೆಗಳೊಂದಿಗೆ ಹೆಣೆದುಕೊಂಡಿರುತ್ತದೆ. ಲೌಕಿಕ ಜಗತ್ತಿನಲ್ಲಿ ನಡೆದ ವಾಸ್ತವಾಂಶಗಳು ಚಾರಿತ್ರಿಕ ಘಟನೆಗಳಾದರೆ, ಅಲೌಕಿಕ ಜಗತ್ತಿನ ಅತಿಮಾನವ ಅಂಶಗಳು ಪೌರಾಣಿಕ ಘಟನೆಗಳಾಗುತ್ತವೆ. ಕೆಲವೊಮ್ಮೆ ಸ್ಥಳೀಯವಾದ ಪ್ರಕೃತಿಯ ನಿಗೂಢತೆಗೆ ಜನಪದರು ಸ್ಪಂದಿಸಿದ ಬಗೆಯೂ ಆಗಿರುತ್ತದೆ. ಹೀಗೆ ಕೋಲಾರ ಪ್ರದೇಶಕ್ಕೂ ಸಹ ತನ್ನವೇ ಆದ ಪುರಾಣ ಕಲ್ಪನೆ ಜನಪದ ತಿಳುವಳಿಕೆ ಹಾಗೂ ನಾಮವಿವೇಚನೆ ಇದೆ. ವಿಶೇಷವಾಗಿ ಕೋಲಾರ ಪ್ರದೇಶದ ಜಿಲ್ಲೆಯ ಬಹುತೇಕ ಸ್ಥಳಗಳಿಗೆ ರಾಮಾಯಣ ಇಲ್ಲವೇ ಮಹಾಭಾರತದ ಘಟನೆಗಳೊಂದಿಗೆ ಸಂಬಂಧ ಪಡೆದುಕೊಂಡ ಐತಿಹ್ಯಗಳು ಸೃಷ್ಟಿಯಾಗಿವೆ.

ಕೋಲಾರದ ರಾಜಕೀಯ ಚರಿತ್ರೆಯ ಸಂಘರ್ಷ ಹಾಗೂ ಸಾಮರಸ್ಯಗಳನ್ನು ಜನಜೀವನದ ಸಾಮಾಜಿಕ ಸಂಸ್ಕೃತಿಯ ಅಂದಂದಿನ ಸ್ಥಿತ್ಯಂತರಗಳನ್ನು ಐತಿಹ್ಯಗಳು ಕಟ್ಟಿಕೊಡುತ್ತವೆ. ಇವು ಸೃಷ್ಟಿಯಾದ ಕಾಲ ಸಮಾಜ ಹಾಗೂ ಸಂಸ್ಕೃತಿಯ ಸ್ವರೂಪವನ್ನು ಹೇಳುತ್ತವೆ. ರಾಮ ಸೀತೆಯರು ವನವಾಸ ಕಾಲದಲ್ಲಿ ಕೋಲಾರ ಜಿಲ್ಲೆಯಲ್ಲಿ ಸಂಚರಿಸಿದ್ದರೆಂದೂ ಮಹಾಭಾರತದ ಪಾಂಡವರ ಪರಿವಾರವು ಜಿಲ್ಲೆಯ ಹಲವು ಪ್ರದೇಶಗಳಲ್ಲಿ ವನವಾಸ ಮಾಡಿದರೆಂದು ಐತಿಹ್ಯಗಳು ರಚನೆಯಾಗಿವೆ. ರಾಮಾಯಣ-ಮಹಾಭಾರತಗಳ ವನವಾಸದ ಘಟನೆಗಳನ್ನು ತಮ್ಮ ನೆಲದ ನೆಲೆಯ ಮೂಲಕ ಅನುಭವಕ್ಕೀಡು ಮಾಡುವ ಉದ್ದೇಶ ಜನಪದರದಾಗಿದೆ. ಇದಕ್ಕೆ ಪೂರಕವಾಗಿ ಜಿಲ್ಲೆಯ ರಾಜಕೀಯ ಚರಿತ್ರೆಯಲ್ಲಿ ವಿಷ್ಣು ಆರಾಧನೆಗೆ ಧಾರ್ಮಿಕ ಪ್ರೋತ್ಸಾಹ ದೊರೆತಿರುವುದು ಮುಖ್ಯ ಕಾರಣವಾಗುತ್ತದೆ.

ರಾಮಾಯಣಕ್ಕೆ ಸಂಬಂಧಿಸಿದ ಸ್ಥಳಪುರಾಣಗಳು ರಾಮಸೀತೆಯರ ವನವಾಸದ ಸಂದರ್ಭದಲ್ಲಿ ಬಾಯಾರಿಕೆಯನ್ನು ನೀಗಿಸಿಕೊಳ್ಳಲು ರಾಮ ಲಕ್ಷ್ಮಣರು ಚಿಲುಮೆಗಳನ್ನು ತೋಡುತ್ತಿದ್ದಾಗ, ಅವುಗಳಲ್ಲಿ ಶಿವಲಿಂಗ ದೊರೆತಿದ್ದು ರಾಮ ಈ ಕಾರಣಗಳಿಗಾಗಿಯೇ ರಾಮಲಿಂಗೇಶ್ವರ ಲಕ್ಷ್ಮಣತೀರ್ಥಗಳು ಉಳಿದು ಕೊಂಡಿದ್ದರ ವಿವರಗಳು ಸಾಮಾನ್ಯವಾಗಿ ಐತಿಹ್ಯಗಳಲ್ಲಿ ವ್ಯಕ್ತವಾಗುತ್ತಿರುತ್ತವೆ. ಇಂಥವು ಬೆಟ್ಟ ಗುಡ್ಡಗಳ ಪ್ರದೇಶದಲ್ಲಿ ಸಹಜವಾಗಿ ಜನಪದರಿಂದ ಸೃಷ್ಟಿಯಾಗುತ್ತಿರುತ್ತವೆ. ಬೆಟ್ಟದ ಮೇಲೆ ಶಿವಲಿಂಗ (ಇತ್ತೀಚೆಗೆ ದೇವಾಲಯಗಳೂ ಆಗಿವೆ.) ತಪ್ಪಲಿನ ಪ್ರದೇಶದಲ್ಲಿ ನೀರಿನ ಒರತೆ ಅಥವಾ ಚಿಲುಮೆಗಳು ಇದ್ದೇ ಇರುತ್ತವೆ. ಬೆಟ್ಟ ಗುಡ್ಡದಲ್ಲಿ ಒರತೆಯಾಗುವುದು ಪ್ರಾಕೃತಿಕ ಸಹಜತೆ. ಅಲ್ಲದೆ ಹೀಗೆ ಒರತೆಯಲ್ಲಿ ಇರುವ ನೀರು ಮಣ್ಣಿನ ಹಲವು ಪದರಗಳಲ್ಲಿ ಶೋಧಿಸಿಲ್ಪಟ್ಟಿರುವುದರಿಂದ ಅದು ಶುದ್ಧವೂ ಆಗಿರುತ್ತದೆ. ಕೆಲವೊಮ್ಮೆ ಔಷಧೀಯ ಗುಣಗಳಿಂದಲೂ ಕೂಡಿರುತ್ತದೆ. ಇದರ ಮಹತ್ವವನ್ನು ಸಾರಲು ಪೌರಾಣಿಕ ಸನ್ನಿವೇಶಗಳನ್ನು ಅನ್ವಯಿಕವಾಗಿ ಬಳಸಿಕೊಂಡವರು ನಮ್ಮ ಜನಪದರು. ಏಕೆಂದರೆ ಪುರಾಣದ ಬಗ್ಗೆ ಇರುವ ಭಯ, ಭಕ್ತಿ, ಗೌರವ ಕಾಳಜಿಗಳಿಂದ ಇಂಥ ನೆಲೆಗಳನ್ನು ಸಂರಕ್ಷಿಸುವ ಉಪಾಯವಿದು.

ಬೆಟ್ಟಗುಡ್ಡಗಳಲ್ಲಿನ ಶಿವಲಿಂಗಗಳು ದೇವಾಲಯಗಳು ಶೈವಧರ್ಮ ಪ್ರಚಲಿತವಿದ್ದ ಹಲವು ಪಂಥಗಳ ಆರಾಧನಾ ನೆಲೆಗಳು, ಈಗ ಆ ಪರಂಪರೆಗಳು ಕಣ್ಮರೆಯಾಗಿದ್ದರೂ ಅವುಗಳ ನೆನಪುಗಳಾಗಿ ಶಿವಲಿಂಗಗಳು ದೇವಾಲಯಗಳು ಉಳಿದುಕೊಂಡಿವೆ. ವಿವಿಧ ಪಂಥಗಳ ಅಂದಿನ ಪ್ರೇರಣೆ ಪ್ರಭಾವ ಮತ್ತು ಪ್ರಚಲಿತಗಳ ಹಿನ್ನೆಲೆಯಾಗಿಯೂ ಸ್ಥಳಪುರಾಣಗಳು ಸೃಷ್ಟಿಯಾಗಿ ಜನಪದ ವಲಯದಲ್ಲಿ ಬೆಳವಣಿಗೆಯನ್ನು ಪಡೆದಿದೆ. ಉದಾ: ಗೌರೀಬಿದನೂರು ಸಮೀಪದ ಕಳಂತರಾಯನ ಗುಡ್ಡದ ಮೇಲೆ ಶಿವನ ದೇವಾಲಯವಿದೆ. ಗುಡ್ಡದ ಕೆಳಗೆ ಲಕ್ಷ್ಮಣನು ತೋಡಿದನೆಂದು ಹೇಳುವ ಒರತೆ ಲಕ್ಷ್ಮಣ ತೀರ್ಥವಿದೆ. ಸೀತೆಯ ನೀರಡಿಕೆಯನ್ನು ಪೂರೈಸಲು ಚಿಲುಮೆಯನ್ನು ತೋಡುತ್ತಿದ್ದಾಗ ಸಿಕ್ಕಿದ

ಶಿವಲಿಂಗವನ್ನು ರಾಮನು ಬೆಟ್ಟದ ಮೇಲೆ ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ. ದೇವಾಲಯ ಮುಂಭಾಗದಲ್ಲಿನ ವಿಶಾಲವಾದ ಬಂಡೆಯನ್ನು ಸೀತೆಯ ಸೆರಗು ಎಂದು ಗುರ್ತಿಸುತ್ತಾರೆ. (ಇತ್ತೀಚೆಗೆ ಈ ಬಂಡೆಯನ್ನು ಒಡೆದು ಸೀಳಿ ಒಡ್ಡರು ಕಲ್ಲು ಸಾಗಾಣಿಕೆ ಮಾಡುತ್ತಿದ್ದಾರೆ.)

ರಾವಣನು ಸೀತೆಯನ್ನು ಇಲ್ಲಿಂದ ಅಪಹರಿಸಿದ. ಮೂರ್ಛೆ ತಪ್ಪಿ ಬಿದ್ದ ಅವಳನ್ನು ದರದರನೆ ಎಳೆದೊಯ್ದುದ್ದರ ಜಾಡು ಬಂಡೆಯ ಮೇಲೆ ಇರುವುದೆಂದು ನಿರೂಪಿಸುತ್ತಾರೆ. ಇದೇ ಜಾಗದಿಂದ ರಾವಣನನ್ನು ಜಟಾಯು ಪಕ್ಷಿಯು ತಡೆಯುತ್ತಾ ಹೋಯಿತೆಂದೂ, ಮುಂದೆ ಲೇಪಾಕ್ಷಿಯಲ್ಲಿ ರಾವಣನು ತನ್ನ ರಥಕ್ಕೆ ಎದುರಾಗಿ ತಡೆಯಲು ಬಂದ ಜಟಾಯುವಿನ ರೆಕ್ಕೆ ಕತ್ತರಿಸಿ ಮುಂದೆ ಹೋದನೆಂದು ಹೇಳುತ್ತಾರೆ. ಇದರಂತೆ ರಾಮನ ಹೆಸರಿನಿಂದ ಆರಂಭವಾಗುವ ಎಲ್ಲಾ ಊರುಗಳೂ ರಾಮನ ವನವಾಸದ ಘಟನೆಗಳಿಗೆ ಅಂಟಿಕೊಂಡ ಐತಿಹ್ಯಗಳನ್ನು ಹೊಂದಿವೆ. ಉದಾ: ರಮಾಪುರ, ರಾಮಪುರ, ರಾಮಚಂದ್ರಪುರ, ರಾಮನಹಳ್ಳಿ ಹೀಗೆ. ಗುಡಿಬಂಡೆ ತಾಲ್ಲೂಕಿನ ರಾಮಪುರವೆಂಬ ಒಂದು ಊರನ್ನು ಪರದೇಶಿಪುರವೆಂದು ಕರೆಯುತ್ತಾರೆ. ಇದು ಹಿಂದೆ ರಾಮಪಟ್ಟಣವೆಂಬ ಹೆಸರಿನಿಂದ ಕೂಡಿತ್ತು. ಸನ್ಯಾಸಿಯೊಬ್ಬನು ಈ ಹೆಸರಿಗೆ ಮನಸೋತು ತಪಸ್ಸು ಮಾಡಲು ಇಲ್ಲಿಗೆ ಬಂದ. ಆದರೆ, ಯಾವ ರಾಮಾಯಣದ ಕುರುಹುಗಳನ್ನೂ ಕಾಣದೆ ಇದೊಂದು 'ಪರದೇಶಿ ಪಟ್ಟಣ' ಎಂದನಂತೆ. ಅಂದಿನಿಂದ ಇದೇ ಹೆಸರು ಉಳಿಯಿತೆಂದು ಹೇಳುತ್ತಾರೆ. ಲೇಪಾಕ್ಷಿಯು ಗೌರೀಬಿದನೂರಿನಿಂದ ಸಮೀಪ ೨೫ ಕಿ.ಮೀಟರ್‌ಗಳ ದೂರದಲ್ಲಿದೆ. ಇದು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಗೆ ಸೇರುತ್ತದೆ. ಇಲ್ಲಿನ ದುರ್ಗಮ್ಮನ ದೇವಾಲಯ ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಸಿದ್ಧವಾದುದು. ಬೇಲೂರು, ಹಳೆಬೀಡುಗಳ ಶಿಲ್ಪ ಕೆತ್ತನೆ ಮಾಡಿದ ಡಂಕಣ ಡಕ್ಕಣರು ಇಲ್ಲಿನ ದೇವಾಲಯ ಹಾಗೂ ಶಿಲ್ಪಗಳನ್ನು ನಿರ್ಮಿಸಿದರೆಂದು ಇಲ್ಲಿನ ಐತಿಹ್ಯಗಳು ಹೇಳುತ್ತವೆ. ಲೇಪಾಕ್ಷಿಯ ಸ್ಥಳನಾಮ ಸೂಚಕ ಐತಿಹ್ಯವು ಹೀಗಿದೆ :

ಸೀತೆಯನ್ನು ತನ್ನ ಅಪಹರಣದಿಂದ ತಡೆಯಲು ಯತ್ನಿಸಿದ ಜಟಾಯುವನ್ನು ರಾವಣನು ಹೊಡೆಯುತ್ತಾನೆ. ರಥಕ್ಕೆ ಎದುರಾಗಿ ತಡೆಯೊಡ್ಡುತ್ತಿದ್ದ ಜಟಾಯುವಿಗೆ ಕತ್ತಿಯಿಂದ ಹೊಡೆದಾಗ ಜಟಾಯುವಿನ ರೆಕ್ಕೆ ಕತ್ತರಿಸಿದ್ದರಿಂದ ಅದು ನೆಲಕ್ಕೆ ಉರುಳಿ ರಾಮ ಜಪ ಮಾಡುತ್ತಿತ್ತು. ಸೀತೆಯನ್ನು ಹುಡುಕುತ್ತಾ ಹೊರಟ ರಾಮನು ಜಟಾಯುವಿನ ಸ್ಥಿತಿಯನ್ನು ನೋಡಿ ಲೇ ಪಕ್ಷಿ ಎಂದನಂತೆ. (ಇದು ತೆಲುಗು ಭಾಷೆಯಲ್ಲಿದೆ. ಲೇ ಪಕ್ಷಿ ಎಂದರೆ ಎದ್ದೇಳು ಪಕ್ಷಿ ಎಂದರ್ಥ) ಅಂದಿನಿಂದ ಲೈಪಕ್ಷಿ ಎಂಬ ಊರು ಲೇಪಾಕ್ಷಿಯಾಗಿ ಗುರ್ತಿಸಲ್ಪಟ್ಟಿದೆಯೆಂದು ಐತಿಹ್ಯ.

ಹಾಗೆಯೇ ರಾಮ ಸೀತೆಯರು ವನವಾಸದ ಕಾಲದಲ್ಲಿ ಕೋಲಾರ ಪ್ರದೇಶ ಬಂದಿರುವುದರ ಕುರಿತಂತೆ ಇರುವ ಐತಿಹ್ಯಗಳು ಪುರಾಣದ ಅಂಶಗಳನ್ನು ಒಳಗೊಂಡಿವೆ. ಮುಳಬಾಗಿಲು ತಾಲೂಕಿನ

ಆವನಿಯನ್ನು ಕುರಿತು ಸ್ಥಳಪುರಾಣ ಹೀಗಿದೆ : ಪುಣ್ಯಕ್ಷೇತ್ರವಾಗಿರುವ ಆವನಿಯು ಪುರಾಣ ಪ್ರಸಿದ್ಧವಾದ ಆವಂತಿಕ ಕ್ಷೇತ್ರವಾಗಿತ್ತು. ಇದನ್ನು ಆವನ್ಯ, ಆವನಿ ಎಂದೆಲ್ಲ ಕರೆಯಲಾಗಿದೆ. ವಾಲ್ಮೀಕಿ ಋಷಿಯ ಆಶ್ರಮವಿದ್ದ ಜಾಗ ಇದೇ ಆಗಿತ್ತು. ರಾಮನು ಲಂಕೆಯನ್ನು ಗೆದ್ದು ಅಯೋಧ್ಯೆಗೆ ಹಿಂದಿರುಗುವ ಮಾರ್ಗದಲ್ಲಿ ಇಲ್ಲಿನ ವಾಲ್ಮೀಕಿ ಆಶ್ರಮಕ್ಕೆ ಬಂದಿದ್ದನಂತೆ. ಸೀತೆಯು ರಾಮನಿಂದ ತ್ಯಜಿಸಲ್ಪಟ್ಟು ಕಾಡನ್ನು ಸೇರಿದಾಗ ಇದೇ ವಾಲ್ಮೀಕಿ ಆಶ್ರಮದಲ್ಲಿ ಆಶ್ರಯ ಪಡೆದಳು. ಅಲ್ಲದೆ ಕುಶ ಲವರಿಗೆ ಇಲ್ಲಿಯೇ ಜನ್ಮವಿತ್ತಳು. ರಾಮನ ಯಾಗದ ಅಶ್ವವನ್ನು ಲವಕುಶರು ಕಟ್ಟಿಹಾಕಿದ್ದು ಬಿಡಿಸಿಕೊಳ್ಳಲು ಬಂದ ಲಕ್ಷ್ಮಣ ಇತ್ಯಾದಿ ಜನ ಕುಳಿತ ಓಡಾಡಿದ ಸ್ಥಳಗಳು ಇಲ್ಲಿನವೇ ಎಂದು ಹೇಳುತ್ತಾರೆ. ಇದೇ ರೀತಿ ಕೈವಾರದ ಲಕ್ಷ್ಮಣ ತೀರ್ಥ, ಚಿಕ್ಕಬಳ್ಳಾಪುರದ ನಂದಿಬೆಟ್ಟ ಕೋಲಾರದ ಸೀತಿಬೆಟ್ಟಗಳ ಐತಿಹ್ಯಗಳು ಒಂದಕ್ಕೊಂದು ಪೂರಕವಾಗಿವೆ. ಆದರೆ ಆಂಧ್ರಪ್ರದೇಶದ ನೆಲ್ಲೂರು ಜಿಲ್ಲೆಗೆ ಸೇರಿದ ತಲಕಾಯಿಲಬೆಟ್ಟ ಹಾಗೂ ಗಂಗಮ್ಮನಕೆರೆ ಕೋಲಾರಕ್ಕೆ ಸಮೀಪವಿದ್ದು ಈ ಐತಿಹ್ಯಗಳೊಂದಿಗೆ ಸಂಬಂಧ ಬೆಸೆದುಕೊಂಡಿದೆ. ವಾಲ್ಮೀಕಿಯ ಋಷಿಯಾಗುವುದಕ್ಕಿಂತ ಮೊದಲು ಬೇಟೆಗಾರನಾಗಿ ದಾರಿಗಳ್ಳನಾಗಿ ಕೊಲೆ ಸುಲಿಗೆಗಳನ್ನು ಮಾಡುತ್ತಿದ್ದ ತಾಣವೆಂದು ಅದನ್ನು ತಲಕಾಯಿಲಕೊಂಡ (ತಲೆಕಾಯಿಗಳ ಬೆಟ್ಟ)ವೆಂದು ಕರೆಯುತ್ತಾರೆ. ಈತನು ಮಾಡಿದ ಕೊಲೆ-ಬಲಿಗಳ ರಕ್ತವನ್ನು ತೊಳೆಯಲೆಂದು ಗಂಗೆಯು ಕೈಲಾಸದಿಂದ ಬಂದು ಅಲ್ಲಿ ಹರಿದಳೆಂದು ಕೆರೆಯ ಬಗ್ಗೆ ಐತಿಹ್ಯವಿದೆ. ಗೌರೀಬಿದನೂರು ತಾಲೂಕಿನ ಮುದುಗಾನಕುಂಟೆ ಗಂಗಮ್ಮನ ಐತಿಹ್ಯವು ತಲಕಾಯಿಲಬೆಟ್ಟದ ಗಂಗಮ್ಮನೊಂದಿಗೆ ಸಂಬಂಧ ಪಡೆದಿದೆ. ಗಂಗೆಯು ರಕ್ತ ತೊಳೆದು ರುದ್ರರೂಪದಲ್ಲಿ ಆ ಬೆಟ್ಟದಡಿ ನೆಲೆಸಿರುವುದರಿಂದ ಶಾಂತರೂಪದಲ್ಲಿ ನೆಲೆಸಲು ನಿರ್ಧರಿಸಿ ಮುದುಗಾನಕುಂಟೆಗೆ ಬಂದಳೆಂದು ಹೇಳುತ್ತಾರೆ.

ಮಹಾಭಾರತದ ಕಾಲದಲ್ಲಿ ಪಾಂಡವರು ವನವಾಸಕ್ಕೆಂದು ಕೋಲಾರ ಪ್ರದೇಶಕ್ಕೆ ಬಂದಿರುವುದರ ಕುರಿತಾಗಿ ಜಿಲ್ಲೆಯಾದ್ಯಂತ ಕಂಡುಬರುವ ಐತಿಹ್ಯಗಳು ಹಲವು ಏಕರೂಪದ ಆಶಯವನ್ನು ಹೊಂದಿವೆ. ಅದೆಂದರೆ ಪಾಂಡವರು ವನವಾಸಕ್ಕೆಂದು ಅಲ್ಲಲ್ಲಿನ ಸ್ಥಳಗಳಿಗೆ ಬಂದಿದ್ದರೆಂದು, ಕುಂತಿಗೆ ಬಾಯಾರಿಕೆ ಯಾದ್ದರಿಂದ ಭೀಮನು ಚಿಲುಮೆಯನ್ನು ತೋಡುತ್ತಿರುವಾಗ ಶಿವಲಿಂಗವೊಂದು ಲಭಿಸಿತು, ಅದನ್ನು ಧರ್ಮರಾಯನು ಬೆಟ್ಟದ ಮೇಲೆ ಪ್ರತಿಷ್ಠಾಪಿಸಿದ ಎಂದು ಹೇಳುತ್ತಾರೆ. ಬೆಟ್ಟ ಅಥವಾ ಗುಡ್ಡದ ಮೇಲೆ ಶಿವಲಿಂಗ ಅಥವಾ ಶಿವನ ದೇವಾಲಯವಿದ್ದು ತಪ್ಪಲಲ್ಲಿ 'ತೀರ್ಥ'ವೆಂದು ಕರೆಯುವ ಚಿಲುಮೆಯ ತೋಡು ಇರುವುದು ಸಾಮಾನ್ಯ. ಕೋಲಾರ ಜಿಲ್ಲೆಯಾದ್ಯಂತ ಲಭಿಸುವ ಪಾಂಡವ ಸಂಬಂಧಿ ಐತಿಹ್ಯ ಗಳಲ್ಲಿ ಕುಂತಿಯೊಂದಿಗೆ ಪಾಂಡವರು ವನವಾಸ ಮಾಡಿದ್ದನ್ನು ಹೇಳುವುದು ಸಾಮಾನ್ಯ ಅಂಶವಾಗಿದೆ. ಈ ವನವಾಸವು ದುರ್ಯೋಧನನು ಧರ್ಮರಾಯನನ್ನು ಜೂಜಿನಲ್ಲಿ ಸೋಲಿಸಿ ಹದಿಮೂರು ವರ್ಷ

ವನವಾಸ ಮತ್ತೆ ಒಂದು ಅಜ್ಞಾತವಾಸವೆಂದು ಪರತ್ತೊಡ್ಡಿ ಕಾಡಿಗೆ ಕಳುಹಿಸಿದ ವನವಾಸವಲ್ಲವೆಂದು ಸ್ಪಷ್ಟಪಡಿಸಬೇಕಾಗುತ್ತದೆ. ಏಕೆಂದರೆ ಪಾಂಡವರು ಕಳೆದ ಈ ವನವಾಸ ಅಜ್ಞಾತವಾಸಗಳಲ್ಲಿ ದ್ರೌಪದಿಯು ಅವರೊಂದಿಗೆ ಇರುತ್ತಾಳೆ. ಆಗ ಪಾಂಡವರ ತಾಯಿಯಾದ ಕುಂತಿಯು ವಿದುರನ ಮನೆಯಲ್ಲಿ ಉಳಿಯುತ್ತಾಳೆ. ಅರ್ಜುನನ ಹೆಂಡತಿಯಾದ ಸುಭದ್ರೆಯನ್ನು ಅವಳ ಸಹೋದರನಾದ ಕೃಷ್ಣ ಬಲರಾಮರು ತಮ್ಮ ಮನೆಗೆ ಕರೆದೊಯ್ಯುತ್ತಾರೆ. ಹೀಗೆ ಅವಳು ತೌರಿನಲ್ಲಿರುತ್ತಾಳೆ. ಅರ್ಜುನನ ಇತರೆ ಹೆಂಡತಿಯರಾದ ಚಿತ್ರಾಂಗದೆ ಉಲೂಫಿಯರು ಅವನು ಭೂಪ್ರದಕ್ಷಿಣೆ ಕೈಗೊಂಡ ಸಂದರ್ಭದಲ್ಲಿ ವಿವಾಹವಾದವರಾದ್ದರಿಂದ ಅವರುಗಳು ತೌರಿನಲ್ಲಿಯೇ ಉಳಿದಿರುತ್ತಾರೆ. (ಇವರದು ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಅನಿಸುತ್ತದೆ.) ಆದ್ದರಿಂದ ದ್ರೌಪದಿಯು ಮಾತ್ರ ಪಾಂಡವರೊಂದಿಗೆ ವನವಾಸ ಅಜ್ಞಾತವಾಸಗಳನ್ನು ಕಳೆಯುವಲ್ಲಿ ಜೊತೆಯಾದವಳೆಂದರೆ ತಪ್ಪಾಗಲಾರದು. ಈ ವನವಾಸಕ್ಕೆ ಸಂಬಂಧಿಸಿದ ಐತಿಹ್ಯಗಳು ಜಿಲ್ಲೆಯಲ್ಲಿ ಗಮನಕ್ಕೆ ಬಾರದೇ ಇರುವುದು ಕುತೂಹಲದ ಸಂಗತಿ. ಆದರೆ ಅರಗಿನಮನೆಯ ದುರಂತದಿಂದ ಪಾರಾಗಿ ಕುಂತಿಯೊಂದಿಗೆ ಪಾಂಡವರು ಕಾಡಿನಲ್ಲಿ ದಿನಗಳನ್ನು ಕಳೆದು ಸಂಚರಿಸುತ್ತಾ ತಮ್ಮ ಊರುಗಳಿಗೂ ಬಂದಿದ್ದರೆಂದು ಹೇಳುವ ವಿವರಗಳು ಐತಿಹ್ಯದಲ್ಲಿ ಕಂಡುಬರುತ್ತದೆ. ಇಂಥ ಐತಿಹ್ಯಗಳಲ್ಲಿ ಭೀಮ ಮತ್ತು ಕುಂತಿಯ ಪ್ರಸ್ತಾಪದ ವಿವರಗಳು ಪುಷ್ಟಿಗೊಂಡಿವೆ. ಕೈವಾರ, ಗೌರೀಬಿದನೂರಿನ ಸಮೀಪದ ಭೀಮೇಶ್ವರ ಬೆಟ್ಟ, ಇಡಗೂರಿನ ಐತಿಹ್ಯಗಳು ಪಾಂಡವರ ವನವಾಸವೆಂದು ಪ್ರಸ್ತಾಪಿತವಾದರೂ ವಿವರಿಸುವ ಘಟನೆಗಳು ಮಹಾಭಾರತದಲ್ಲಿ ಅರಗಿನಮನೆ ಸುಟ್ಟ ನಂತರದವು.

ದುರ್ಯೋಧನನು ನಡುರಾತ್ರಿಯಲ್ಲಿ ಪಾಂಡವರ ಅರಗಿನ ಮನೆಗೆ ಬೆಂಕಿ ಇಟ್ಟು ಅದರಲ್ಲಿ ಪಾಂಡವರು ತಮ್ಮ ತಾಯಿ ಕುಂತಿಯೊಂದಿಗೆ ಸುಟ್ಟುಹೋಗಿದ್ದಾರೆಂದು ತಿಳಿದುಕೊಂಡ. ಆದರೆ ಭೀಮನು ಮಲಗಿ ನಿದ್ರಿಸುತ್ತಿದ್ದ ತನ್ನ ತಾಯಿ ಹಾಗೂ ಸಹೋದರರನ್ನು ಎತ್ತಿಕೊಂಡು ಕಾಡಿಗೆ ನಡೆದಿದ್ದ. ಕಾಡಿನಲ್ಲಿ ಒಂದು ಮರದಡಿ ಎಲ್ಲರನ್ನು ಮಲಗಿಸಿ, ನಿದ್ರಿಸುತ್ತಿದ್ದವರಿಗೆ ತಾನು ಕಾವಲು ಕಾಯುತ್ತಿದ್ದ. ಆಗ ಕಾಡಿನಲ್ಲಿದ್ದ ಹಿಡಿಂಬಾಸುರನೆಂಬ ರಾಕ್ಷಸ ಹಾಗೂ ಅವನ ತಂಗಿ ಹಿಡಿಂಬೆಯು ಇವರನ್ನು ಭಕ್ಷಿಸಲು ಬರುತ್ತಾರೆ. ಮಹಾಭಾರತದ ಈ ಘಟನೆಗೆ 'ಇಡಗೂರು' ಸ್ಥಳನಾಮದ ಐತಿಹ್ಯದಲ್ಲಿ ಭೀಮನು ಇವಳನ್ನು ಇಲ್ಲಿಯೇ ಮದುವೆಯಾದ ಇದಕ್ಕೆ ಹಿಡಿಂಬೆಯೂರು, ಹಿಡಿಂಬಾಪುರ ಎಂಬ ಹೆಸರುಗಳಿದ್ದವು ಎನ್ನುತ್ತಾರೆ. ಸಮೀಪದ ಭೀಮೇಶ್ವರನ ಬೆಟ್ಟದಲ್ಲಿ ಭೀಮನು ಹಿಡಿಂಬನನ್ನು ಸಂಹರಿಸಿದನೆಂದು ಐತಿಹ್ಯವಿದೆ. ಅಲ್ಲದೆ ಭೀಮನು ಶಿವಲಿಂಗವನ್ನು ಬೆಟ್ಟದ ಮೇಲೆ ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ.

ಕೈವಾರದ ಸ್ಥಳನಾಮವು ಬಕಾಸುರನ ಸಂಹಾರದಿಂದ ಸಂತೋಷಗೊಂಡ ದೇವತೆಗಳೆಲ್ಲರೂ ಮಹಾನಾರಾಯಣನನ್ನು (ವಿಷ್ಣುವನ್ನು) ಕುರಿತು ಕೈವಾರ ನಡೆಸಿದ್ದರಿಂದ (ಸ್ತುತಿಸಿದ್ದರಿಂದ) ಕೈವಾರವೆಂಬ

ಹೆಸರನ್ನು ಪಡೆಯಿತೆಂದು ಹೇಳುತ್ತಾರೆ. ಆಕಾಶದಲ್ಲಿ ಸಂಚರಿಸುತ್ತಿದ್ದ ಸೂರ್ಯನು ಆ ಸ್ತುತಿಯನ್ನು ನೋಡಲು ಕ್ಷಣಕಾಲ ತನ್ನ ರಥವನ್ನು ನಿಲ್ಲಿಸಿದನಂತೆ. ಆಗ ಅದರ ಒಂದು ಚಕ್ರದ ನೆರಳು ದೇವಾಲಯದ ಬಾಗಿಲಿನ ಮೇಲೆ ಕ್ಷಣಕಾಲ ಆವರಿಸಿದ್ದರಿಂದ ಏಕಚಕ್ರಪುರವೆಂದು ಹೆಸರಾಯಿತು ಎಂಬುದಾಗಿ ಸ್ಥಳ ಪುರಾಣವಿದೆ. ಇಲ್ಲಿನ ಅಮರನಾರಾಯಣ ಸ್ವಾಮಿಯ ದೇವಾಲಯವು ಪ್ರಸಿದ್ಧವಾದದು. ಈ ಹಿನ್ನೆಲೆಯಿಂದ ಸ್ಥಳನಾಮಕ್ಕೆ ಐತಿಹ್ಯದ ಮೂಲಕ ಆಯಾಮವನ್ನು ಒದಗಿಸುವ ಪ್ರಯತ್ನವನ್ನು ಮಾಡಲಾಗಿದೆ. ಅಲ್ಲದೆ ಮತ್ತೊಂದು ಐತಿಹ್ಯವು ಬೇರೆಯದೇ ಆದ ವಿವರಣೆಯನ್ನು ಕೊಡುತ್ತದೆ. ಅದೆಂದರೆ, ಅರಗಿನ ಮನೆಯಿಂದ ತಪ್ಪಿಸಿಕೊಂಡು ಬಂದ ಪಾಂಡವರು ಕೈವಾರದಲ್ಲಿ ಬಂದು ನೆಲೆಸಿದರು. ಜನರಿಗೆ ಮುಖ್ಯವಾಗಿ ದುರ್ಯೋಧನನಿಗೆ ತಮ್ಮ ಸುಳಿವು ದೊರೆಯದಿರಲೆಂದು ಬ್ರಾಹ್ಮಣರ ವೇಷದಲ್ಲಿರುತ್ತಾರೆ. ಇಲ್ಲಿಗೆ ಸ್ವಲ್ಪವೇ ದೂರದ ಬೆಟ್ಟದಲ್ಲಿ ಬಕಾಸುರನೆಂಬ ಹೆಸರಿನ ರಾಕ್ಷಸನಿದ್ದು ದಿನಾಲೂ ಊರಿಗೆ ನುಗ್ಗಿ ಕೈಗೆ ಸಿಕ್ಕಿದ ಮಕ್ಕಳನ್ನು ಹಿಡಿದು ತಿನ್ನುತ್ತಿದ್ದನಂತೆ. ಇದರಿಂದ ಬೇಸತ್ತ ಊರಿನ ಜನ ರಾಕ್ಷಸನೊಂದಿಗೆ ಒಂದು ಒಪ್ಪಂದ ಮಾಡಿಕೊಂಡರು. ಅದರ ಪ್ರಕಾರ ಪ್ರತಿದಿನ ಸರದಿಯಂತೆ ಮನೆಗೊಬ್ಬನನ್ನು ಗುಡ್ಡದಲ್ಲಿ ಬಲಿಕೊಟ್ಟಿದ್ದರು.

ಒಂದು ದಿನ ಬ್ರಾಹ್ಮಣ ಗೃಹಿಣಿಯೊಬ್ಬಳು ಅಂದಿನ ಸರದಿಯಲ್ಲಿ ಅಂದು ತನಗಿರುವ ಏಕೈಕ ಪುತ್ರನನ್ನು ಹೇಗೆ ಬಲಿಕೊಡುವುದೆಂದು ಅಳುತ್ತಿದ್ದಳು. ಕುಂತಿಯು ಅವಳನ್ನು ಸಮಾಧಾನಪಡಿಸಿ ಅವಳ ಮಗನಿಗೆ ಬದಲಾಗಿ ತನ್ನ ಮಗ ಭೀಮನನ್ನು ಬಲಿಕೊಡಲು ಕಳುಹಿಸುವುದಾಗಿ ಹೇಳಿದಳು. ಅದರ ಪ್ರಕಾರ ಭೀಮನನ್ನು ಬಲಿಕೊಡಲು ರಾಕ್ಷಸನಿರುವ ಗುಡ್ಡಕ್ಕೆ ಕಳುಹಿಸಿದಳು. ಭೀಮ ತಾನು ಬಲಿಯಾಗುವ ಬದಲು ರಾಕ್ಷಸನನ್ನು ಕೊಂದು ಗುಹೆಯೊಳಕ್ಕೆ ತುರುಕಿ ಹಿಂದಿರುಗಿದನೆಂದು ಐತಿಹ್ಯವಿದೆ. ಈಗಲೂ ಆ ರಾಕ್ಷಸನ ಕೊಳೆತ ಕೀವು ರಕ್ತ ಸೋರುತ್ತಿರುತ್ತದೆಯೆಂದು ಬಂಡೆಯ ಮೇಲಿನ ಗುರುತುಗಳನ್ನು ತೋರಿಸುತ್ತಾರೆ. ಹೀಗೆ ಪಾಂಡವರಿಗೆ ಸಂಬಂಧಿಸಿದ ಐತಿಹ್ಯಗಳು ಮಹಾಭಾರತದ ಅರಗಿನ ಮನೆಯ ದಹನದ ಪ್ರಸಂಗದ ನಂತರದ ಘಟನೆಗಳ ಪಾಂಡವರ ಓಡಾಟವನ್ನು ಕುರಿತಂಥವುಗಳಾಗಿವೆ. ದ್ರೌಪದಿಯ ಸ್ವಯಂವರವಾಗಲಿ, ಅವಳನ್ನು ಪಾಂಡವರೈವರು ಮದುವೆಯಾದ ಪ್ರಸಂಗವಾಗಲಿ ಅಥವಾ ಪಾಂಡವರ ವನವಾಸ, ಅಜ್ಞಾತವಾಸಗಳಾಗಿ ಇಲ್ಲಿನ ಐತಿಹ್ಯಗಳಲ್ಲಿ ಕಂಡುಬರುವುದಿಲ್ಲ. ಆದರೆ ಜಿಲ್ಲೆಯಾದ್ಯಾಂತ ಎಲ್ಲ ಕಡೆಯೂ ಪಾಂಡವರು ಇಲ್ಲಿ ನೆಲೆಸಿದ್ದರೆನ್ನುತ್ತಾರೆ.

ಕೋಲಾರ ಜಿಲ್ಲೆಯ ಪಾಲಾರ್, ಪೆನ್ನಾರ್, ಉತ್ತರ ಪಿನಾಕನಿ, ಪಾಪಾಗ್ನಿ ಇತ್ಯಾದಿ ನದಿ ಬಯಲುಗಳ ಪ್ರದೇಶ ಮತ್ತಿತರ ಬೆಟ್ಟಪ್ರದೇಶಗಳ ಸುತ್ತಮುತ್ತಲಿನ ಸ್ಥಳಗಳಲ್ಲಿ ಜನಪದರು ಹೇಳುವ ಹಾಗೂ ತೋರಿಸುವ ಪಾಂಡವರ ನೆಲೆಗಳು ಪ್ರಾಕ್ತನ ಹಾಗೂ ಪುರಾತತ್ವ ಅನ್ವೇಷಣೆಯ ಪ್ರಕಾರ

ಯಾವುದಾದರೊಂದು ಶಿಲಾಯುಗದ ಸಂಸ್ಕೃತಿಯ ಪಳೆಯುಳಿಕೆಗಳಾಗಿವೆ. ಕೋಲಾರದ ಸಾದಲಿ, ಬೂದಿಗಡ್ಡ, ಗರುಡನಹಳ್ಳಿ ಮುಂತಾದ ಕಡೆಗಳಲ್ಲಿ ಈ ಕುರಿತು ಶೋಧಗಳು ನಡೆದು ಯಾವ ಶಿಲಾಯುಗದ ಸಂಸ್ಕೃತಿಯ ಅವಶೇಷಗಳೆಂದು ಗುರುತಿಸಿದ್ದಾರೆ. ಆದರೆ ಸಂಸ್ಕೃತಿಗಳು ಸಾಮಾವೇಶವಾಗಿರುವ ಸ್ಥಳಗಳನ್ನು ಜನಪದರು ಪಾಂಡವರ ನೆಲೆಗಳೆಂದೇ ಹೇಳುವುದು ವಿಶೇಷವೆನಿಸುತ್ತದೆ. ಬೂದಿಮಣ್ಣಿನ ಗುಡ್ಡ ಪ್ರದೇಶಗಳೆಲ್ಲವೂ ಸಂಸ್ಕೃತಿಯೊಂದು ಸುಟ್ಟುಹೋದದ್ದರ ಪಳೆಯುಳಿಕೆಯೆನಿಸುತ್ತದೆ. ಅಂಥ ಕಡೆ ನೆಲದಲ್ಲಿ ಕಾಣಸಿಗುವ ಕಟ್ಟಡದ ಅವಶೇಷಗಳನ್ನು ಪಾಂಡವರ ಗುಡಿಗಳೆಂದು ಹೇಳುತ್ತಾರೆ. ಪಾಂಡವರನ್ನು ಆರಾಧಿಸುತ್ತಿದ್ದ ಯಾವುದೋ ಸಮುದಾಯ ಅಲ್ಲಿ ನಶಿಸಿರಬಹುದೇ ಎಂಬಂತೆ ಸಂಶಯ ಮೂಡುತ್ತದೆ.

ಗೌರೀಬಿದನೂರಿನ ಉತ್ತರ ಪಿನಾಕಿನಿ ನದಿಯ ದಡಗಳು ಪಾಂಡವರ ಗುಡಿಗಳ ಐತಿಹ್ಯಗಳನ್ನು ಹೊಂದಿವೆ. ಚಿಕ್ಕಕುರುಗೋಡು, ಕಲ್ಲೂಡಿ, ಹುದುತಿನಾಗಸಂದ್ರ, ವಿದುರಾಶ್ವತ್ಥ ಈ ಪ್ರದೇಶವನ್ನು ಪಾಂಡವರು ಯಾಗ ಮಾಡಿದ ಸ್ಥಳವೆಂದು ಹೇಳುತ್ತಾರೆ. ಇಲ್ಲಿನ ಬೂದಿಗುಡ್ಡಗಳಲ್ಲಿ ಸಿಗುವ ಮಣ್ಣಿನ ಮಡಕೆ-ಕುಡಿಕೆಗಳ ಪಳೆಯುಳಿಕೆಗಳನ್ನು ಪಾಂಡವರು ಬಳಸುತ್ತಿದ್ದರು ಎನ್ನಲಾಗುತ್ತದೆ. ನೆಲದ ಒಳಗೆ ಕಂದರಗಳಲ್ಲಿ ಸಿಗುವ ಇದ್ದಿಲು ಇತ್ಯಾದಿಗಳನ್ನು ಪಾಂಡವರು ಯಾಗ-ಯಜ್ಞಗಳಲ್ಲಿ 'ಹೋಮಸುಟ್ಟದ್ದು' ಎನ್ನುತ್ತಾರೆ. ಅಲ್ಲದೆ ಯಜ್ಞಭೂಮಿಯಾದ್ದರಿಂದ ಕೃಷಿಗೆ ಯೋಗ್ಯವಲ್ಲದ ಭೂಮಿಯಾಗಿದೆಯೆಂದು ಎಂದು ಈ ಬಗ್ಗೆ ವಿವರಿಸುತ್ತಾರೆ. ನಶಿಸಿದ ಸಂಸ್ಕೃತಿಯ ಬಗ್ಗೆ ಜನಪದರು ತಾಳಿದ ನಿಲುವುಗಳು ಇಂಥವುಗಳಾಗಿವೆ. ಇದಕ್ಕೆ ಪೂರಕವೆಂಬಂತೆ ವಿದುರಾಶ್ವತ್ಥ ಸ್ಥಳನಾಮದ ಐತಿಹ್ಯವು ಮಹಾಭಾರತದ ಮತ್ತೊಂದು ಘಟನೆಯನ್ನು ಒಳಗೊಂಡಿದೆ. ವಿದುರನು ಭೂಪ್ರದಕ್ಷಿಣೆ ಹೊರಟ ಸಂದರ್ಭದಲ್ಲಿ ಈ ಕ್ಷೇತ್ರಕ್ಕೆ ಬಂದಿದ್ದನೆಂದೂ ಇಲ್ಲಿ ಹರಿಯುವ ಉತ್ತರ ಪಿನಾಕಿನಿಯ ನದಿಯಲ್ಲಿ ಸ್ನಾನ ಮಾಡುತ್ತಿದ್ದಾಗ ನೀರಿನಲ್ಲಿ ತೇಲಿ ಬರುತ್ತಿದ್ದ ಅರಳಿ ಗಿಡದ ಮೊಳಕೆಯೊಂದು (ಅಶ್ವತ್ಥ) ದೊರೆಯಿತೆಂದೂ ಹೇಳುತ್ತಾರೆ. ಅದನ್ನು ಅವನು ನದಿ ದಡದಲ್ಲಿ ನೆಟ್ಟು ಬೆಳೆಸಿದನೆಂದು ಅಲ್ಲಿನ ಹೆಮ್ಮರವನ್ನು ತೋರಿಸುತ್ತಾರೆ. ಈ ಮರದ ಕಾರಣದಿಂದಾಗಿಯೇ ಇಲ್ಲಿನ ನಾರಾಯಣಸ್ವಾಮಿಯ ದೇವಾಲಯ ವಿದುರಾಶ್ವತ್ಥ ನಾರಾಯಣ ಸ್ವಾಮಿಯದೆಂದು ಹೆಸರಾಗಿದೆ. ಈ ದೇವಾಲಯದ ಮೂರ್ತಿಯನ್ನು ವಿದುರನು ಪೂಜಿಸಿದ್ದರಿಂದ ಹಾಗೂ ದೇವಾಲಯದ ಮುಂದೆ ಆತನು ಅಶ್ವತ್ಥವೃಕ್ಷವನ್ನು ನೆಟ್ಟು ಪೋಷಿಸಿದ್ದರಿಂದ ಈ ಕ್ಷೇತ್ರಕ್ಕೆ ವಿದುರಾಶ್ವತ್ಥ ವೆಂದೂ ಇಲ್ಲಿನ ದೇವಾಲಯದ ದೈವ ನಾರಾಯಣನನ್ನು ಅಶ್ವತ್ಥನಾರಾಯಣನೆಂದೂ ಕರೆಯುತ್ತಾರೆ. ಇಲ್ಲಿ ಸಪ್ತಋಷಿಗಳು ತಪಸ್ಸನ್ನಾಚರಿಸಿದರೆಂಬ ವಿವರಗಳನ್ನೊಳಗೊಂಡ ಸ್ಥಳಪುರಾಣವು ಶಿಷ್ಟ ಆಯಾಮ ಗಳಿಂದ ಪುಷ್ಟಿಗೊಳ್ಳುತ್ತದೆ.

ಕೋಲಾರಕ್ಕೆ ಸಂಬಂಧಿಸಿದಂತೆ ಸ್ಥಳನಾಮ ಸೂಚಕ ಐತಿಹ್ಯಗಳು ಪುರಾಣ ಮೂಲ ಇತಿಹಾಸದ ಘಟನೆಗಳನ್ನು ಕಟ್ಟಿಕೊಡಲು ಯತ್ನಿಸುತ್ತದೆ. "ದ್ವಾಪರಯುಗದಲ್ಲಿ ಅರ್ಜುನನ ಮಗನಾದ ಕಾರ್ತಿವೀರ್ಯಾರ್ಜುನ ಎಂಬುವನು ಸಾವಿರ ತೋಳ್ಬಲ ಹೊಂದಿದ್ದು, ಮಹಾಋಷಿ ದತ್ತಾತ್ರೇಯರಿಂದ ವರಸಿದ್ಧಿ ಗಳಿಸಿದನು. ಮತ್ತು ಕೋಲಾರ ಪ್ರದೇಶವನ್ನು ಆಡಳಿತ ಮಾಡುತ್ತಿದ್ದಾಗ ಅದೇ ಪ್ರದೇಶದಲ್ಲಿ ಜಮದಗ್ನಿ ಮಹಾಋಷಿ ಮತ್ತು ಆತನ ಪತ್ನಿಯಾದ ರೇಣುಕಾದೇವಿ ಹಾಗೂ ಅವರ ಪುತ್ರನಾದ ಪರಶುರಾಮನೊಂದಿಗೆ ವಾಸಮಾಡುತ್ತಿದ್ದನು. ಒಮ್ಮೆ ಕಾರ್ತಿವೀರ್ಯರ್ಜುನನು ಅವರ ಆಶ್ರಮಕ್ಕೆ ಭೇಟಿ ನೀಡಿ ಅವರಲ್ಲಿದ್ದ ದೇವತಾ ಸಹೃದಯಿಯಾದ ಸುರಭಿ ಎಂಬ ಹಸುವನ್ನು ಕೇಳಿ ಅದನ್ನು ಪಡೆಯಲು ವಿಫಲನಾದಾಗ ಪರಶುರಾಮನೊಂದಿಗೆ ಕಾದಾಡಿ ಸಾವಿಗೀಡಾದ. ನಂತರ ಕಾರ್ತಿವೀರ್ಯಾಜನನ ಮಕ್ಕಳು ರೋಷಗೊಂಡು ಜಮದಗ್ನಿ ಮಹರ್ಷಿಯನ್ನು ಕೊಂದರು. ಆಗ ರೇಣುಕಾದೇವಿ ಸಹಗಮನ ಪದ್ಧತಿ ಅನುಸರಿಸಿದಳು. ಇದನ್ನು ತಿಳಿದ ಪರಶುರಾಮ ಕಾರ್ತೀವೀರ್ಯಾಜುನನ ಕುಟುಂಬವನ್ನು ಕೊಲೆಗೈಯಲು ಕೋಲಾರ ಪ್ರದೇಶದ ಶತಶೃಂಗ ಪರ್ವತದಲ್ಲಿ ಕೋಲಾಹಲ ಎಬ್ಬಿಸಿದ ಅದನ್ನು ಕಂಡ ಜನರು ಈ ಪ್ರದೇಶಕ್ಕೆ ಕೋಲಾಹಲಪುರ ಎಂದೇ ನಾಮಕರಣ ಮಾಡಿದರು."[೪]

ಸಮಾಜಘಾತುಕನಾದ ಮಹಿಷಾಸುರ ಎಂಬ ರಾಕ್ಷಸನನ್ನು ಸಂಹಾರ ಮಾಡುವಾಗ ಉಂಟಾದ ಕೋಲಾಹಲವು ಆ ಪ್ರದೇಶಕ್ಕೆ ಕೋಲಾಹಲಪುರವಾಗಿದೆ ಎಂದು ಮಹಿಷಾಸುರ ಮರ್ದಿನಿ ಅಂದರೆ ರೇಣುಕಾದೇವಿ ಕತೆಯನ್ನು ಹೇಳಿದ್ದಾರೆ.[೫] "ಚೋಳರು ಕೋಲಾರ ಪ್ರದೇಶವನ್ನು ಆಳುತ್ತಿದ್ದಾಗ ಕೋಲ ಎಂಬ ಗೊಲ್ಲನು ಆ ಪ್ರದೇಶದಲ್ಲಿ ಉಳುಮೆ ಮಾಡುತ್ತಿದ್ದ. ಒಮ್ಮೆ ಅವನ ನೇಗಿಲಿಗೆ (ಹಲ) ನಿಧಿ ಯೊಂದು ದೊರೆಯಿತು. ಆ ವಿಷಯ ಉತ್ತಮ ಚೋಳನಿಗೆ ತಿಳಿದು ಮತ್ತು ಅವನಿಗೆ ಕೋಲಾರಮ್ಮ ದೇವಿ (ರೇಣುಕಾದೇವಿ) ಕನಸಿನಲ್ಲಿ ಬಂದು ಅಲ್ಲಿ ಗುಡಿ ನಿರ್ಮಾಣಕ್ಕೆ ಕೇಳಿದಾಗ, ಅಲ್ಲಿ ಗುಡಿ ನಿರ್ಮಿಸಿ ಕೋಲನ ಹೆಸರಿನಲ್ಲಿಯೇ ಆ ಪ್ರದೇಶವನ್ನು ಕರೆಯಲಾರಂಭಿಸಿದರು. (ಕೋಲ+ಹಲ=ನಿಧಿ) ಕೋಲಾಹಲ ಎಂಬುದಾಗಿ ಹೆಸರಿಸಲಾಗಿದೆ."[೬]

ಮೇಲಿನ ಐತಿಹ್ಯಗಳಲ್ಲಿ ಕಾರ್ತೀವೀರ್ಯಾಜುನನ ಪ್ರಸ್ತಾಪವಿರುವ ಐತಿಹ್ಯವು ದ್ವಾಪರಯುಗದಲ್ಲಿ ನಡೆದಿದೆಯೆಂದು ಆರಂಭಗೊಳ್ಳುವುದರೊಂದಿಗೆ ಅರ್ಜುನ ಮಗ ಕಾರ್ತಿವೀರ್ಯಾರ್ಜನ ಎಂಬುದನ್ನು ಹೇಳುತ್ತದೆ. ಈ ಐತಿಹ್ಯದ ವಸ್ತು ವಿಷಯಗಳು ಶಿಷ್ಟ ಸ್ವರೂಪವನ್ನು ಪಡೆದಿರುವುದು ಗಮನಕ್ಕೆ ಬರುವಂಥ ಅಂಶ. ಜನಪದ ನೆಲೆಯ ಐತಿಹ್ಯಗಳು ಯಲ್ಲಮ್ಮನಿಗೆ ಸಂಬಂಧಿಸಿದಂಥವು ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಮತ್ತು ಪ್ರಾಧಾನ್ಯತೆಗಳ ಸಂಘರ್ಷವನ್ನು ಸಾರುತ್ತವೆ. ಅಲ್ಲದೆ ಬ್ರಾಹ್ಮಣ ಮತ್ತು ಕ್ಷತ್ರಿಯರ ಸಂಘರ್ಷವೂ ಹೌದು. ಏಕಕಾಲಕ್ಕೆ ಸಂಪತ್ತಿನ ಮೇಲೆ ಪ್ರಭುತ್ವ ಹಿಡಿತ ಸಾಧಿಸುವುದರ

ದ್ಯೋತಕ ಕೂಡ ಆಗಿದೆ. ಯಲ್ಲಮ್ಮನ ಇತರೆ ಐತಿಹ್ಯಗಳಲ್ಲಿ ಆಕೆ ಕ್ಷತ್ರೀಯ ವಂಶಸ್ಥಳು, ಜಮದಗ್ನಿ ಋಷಿ ಬ್ರಾಹ್ಮಣ. ಇವನ ಹೆಂಡತಿಯಾಗಿ ಕಟ್ಟುನಿಟ್ಟಿನ ಶೀಲದ ಪರಿಕಲ್ಪನೆಯ ಆಚೆಗೆ ಅವಳು ಕ್ಷತ್ರಿಯನನ್ನು ಕಂಡು ಚಂಚಲಗೊಳ್ಳುತ್ತಾಳೆ. ಅಂತರಿಕ್ಷದಲ್ಲಿ ಚಲಿಸುತ್ತಿದ್ದ ರಾಜ ಕಾರ್ತಿವೀರ್ಯನನ್ನು ನೋಡುತ್ತಾಳೆ. ಈ ವಿಷಯದಲ್ಲಿ ಜಮದಗ್ನಿ ಮತ್ತು ಯಲ್ಲಮ್ಮ ಇಲ್ಲವೇ ರೇಣುಕೆಯಲ್ಲಿ ವಿರಸವುಂಟಾಗಿ ಅವಳನ್ನು ತೊರೆದುಬಿಡುತ್ತಾನೆ ಅಥವಾ ಮಗ ಪರಶುರಾಮನಿಂದ ಕೊಲ್ಲಿಸುತ್ತಾನೆ. ಮಗ ಮತ್ತೆ ತಂದೆಯಿಂದ ತಾಯಿಯನ್ನು ಬದುಕಿಸುವ ವರ ಪಡೆಯುತ್ತಾನೆ. ಕೆಲವು ಐತಿಹ್ಯಗಳಲ್ಲಿ ಜಮದಗ್ನಿಯ ಪ್ರಸ್ತಾಪಕ್ಕಿಂತ ಪರುಶರಾಮನು ಅವಿವಾಹಿತೆ ಯಲ್ಲಮ್ಮನ ಮಗನಾಗಿದ್ದ, ಯುವಕನಾಗಿ ಬೆಳೆದ ನಂತರ ತಂದೆಯ ಬಗ್ಗೆ ಕೇಳುತ್ತಾನೆ. ಸರಿಯಾದ ಉತ್ತರ ದೊರೆಯದೇ ತಾಯಿಯ ಶಿರಚ್ಛೇದನ ಮಾಡಲು ಮುಂದಾಗುತ್ತಾನೆ.

ಪರಶುರಾಮ ಕಾರ್ತೀವೀರ್ಯನನ್ನು ಕೊಂದ ನಂತರ ಕಾರ್ತಿವೀರ್ಯನ ಮಕ್ಕಳು ಜಮದಗ್ನಿಯನ್ನು ಕೊಂದರು. ನಂತರ ಪರಶುರಾಮ ಕಾರ್ತಿವೀರ್ಯನ ವಂಶವನ್ನೇ ನಿರ್ನಾಮ ಮಾಡಲು ಕೋಲಾಹಲ ಎಬ್ಬಿಸಿದ. ಇದು ಕ್ಷತ್ರಿಯರ ಶಕ್ತಿ ಶೌರ್ಯ ಮತ್ತು ಬ್ರಾಹ್ಮಣರ ಜ್ಞಾನಗಳ ವಿದ್ಯೆ ನಡುವೆ ಏರ್ಪಟ್ಟ ಸಂಘರ್ಷವೂ ಹೌದು. ಜನಪದ ಹಾಗೂ ಶಿಷ್ಟವಲಯದ ವಿಭಿನ್ನ ಅಂಶಗಳಿಂದ ವಿವಿಧ ಆಯಾಮಗಳವರೆಗೆ ಹಬ್ಬುವ ಇದನ್ನು ಪೌರಾಣಿಕ ಚೌಕಟ್ಟಿನಾಚೆಗೆ ತಂದು ಕುಟುಂಬ ವ್ಯವಸ್ಥೆಯ ಮಾದರಿಗಳಲ್ಲಿನ ಸಂಕಟ ಸಂಘರ್ಷಗಳನ್ನು ವಿವೇಚಿಸಲು ಅನ್ವಯ ಮಾಡಿಕೊಳ್ಳಬಹುದು. ಇದನ್ನು ಕೋಲಾರದ ಬೆಟ್ಟ ಪರಿಸರದ ಐತಿಹ್ಯ ಸೃಷ್ಟಿಗೆ ಪೂರಕ ಮಾಡಿಕೊಂಡಿರುವುದಕ್ಕೆ ಕಾರಣವೆಂದು ಹುಡುಕಲು ಯತ್ನಿಸಿದರೆ ಕೋಲನ ಐತಿಹ್ಯ ಒಂದಷ್ಟು ಪುಷ್ಟಿಕೊಡುತ್ತದೆ. ಈ ಪ್ರದೇಶದಲ್ಲಿ ಚೋಳರ ಪ್ರಾಬಲ್ಯವನ್ನು ಗುರ್ತಿಸುವುದರ ಜೊತೆಗೆ ಕೋಲನ ಹಲಕ್ಕೆ/ನೇಗಿಲಿಗೆ ಸಿಕ್ಕಿದ್ದ ನಿಧಿಯ ನಿದರ್ಶನ ಒಂದೆಡೆ ಸ್ಥಳನಾಮಕ್ಕೆ ಕಾರಣವಾದದ್ದನ್ನು ಅಲಕ್ಷ್ಯ ಮಾಡುವಂತಿಲ್ಲ. ಜೊತೆಗೆ ಕೋಲಾರಮ್ಮನು ಚೋಳರ ಕುಲದೇವತೆ ಅಲ್ಲದೆ ಚೇಳಿನ ಅಧಿದೇವತೆ ಎಂಬುದನ್ನು ಮತ್ತೊಂದು ಐತಿಹ್ಯದ ನಿದರ್ಶನದಿಂದ ತಿಳಿಯಬಹುದು. ಕೋಲಾರಮ್ಮನ ದೇವಾಲಯವನ್ನು ಚೋಳರು ಕಟ್ಟಿಸಿರೆಂಬುದೂ ಇಲ್ಲಿ ಗಮನಿಸಬೇಕಾದ ಸಂಗತಿ. ಜೋಗಪ್ಪಗಳು ಭಿಕ್ಷಾಟನೆಗೆಂದು ಸಂಚರಿಸುವಾಗ ಸೋರೆ ಬುರುಡೆಯಲ್ಲಿ ತಮ್ಮೊಂದಿಗೆ ಚೇಳುಗಳನ್ನು ಸಂಗ್ರಹಿಸಿ ತಂದಿರುತ್ತಾರೆ. ಜನಪದರು ಇವುಗಳನ್ನು ಪೂಜಿಸುವುದಲ್ಲದೆ ಜೋಗಪ್ಪನು ಕೊಡುವ ಚೇಳಿನ ಹಿಕ್ಕೆಗಳನ್ನು ಧೂಪಕ್ಕೆ ಹಾಕಿ ಹೊಗೆ ಹಬ್ಬಿಸುತ್ತಾರೆ. ಈ ಹೊಗೆ ಹರಡಿದೆಡೆಗಳಲ್ಲಿ ಹಾವು ಚೇಳುಗಳು ಬರುವುದಿಲ್ಲವೆಂದು ನಂಬಿಕೆಯಿದೆ. ಅಲ್ಲದೆ ಬಾಲ್ಯಾವ್ಯಸ್ಥೆಯಲ್ಲಿ ಈ ಹೊಗೆಯನ್ನು ಸೇವಿಸಿದವರಿಗೆ ಚೇಳು ಕಡಿದರೆ ವಿಷ ಏರುವುದಿಲ್ಲವೆಂದು ನಂಬುತ್ತಾರೆ. ಈ ಹಿನ್ನೆಲೆಯಲ್ಲಿ ಹಿಂದೆ ಚೇಳುಗಳನ್ನು ಆರಾಧಿಸುವ ಯಾವುದೋ

ಒಂದು ಜೋಗಿಯರ ಪಂಥ ಇಲ್ಲವೇ ಸಮುದಾಯ ಬೆಟ್ಟಗುಡ್ಡಗಳ ಪ್ರದೇಶದಲ್ಲಿ ಇದ್ದಿರಬಹುದು. ಇಲ್ಲವೇ ಚೋಳರು ಇಂಥ ಆರಾಧಕರಾಗಿರುವ ಸಾಧ್ಯತೆಗಳಿವೆ. ಈಗಲೂ ಕೋಲಾರಮ್ಮನ ಗುಡಿಯಲ್ಲಿ ಚೇಳಮ್ಮನ ಆಚರಣೆ ನಂಬಿಕೆಗಳು ಉಳಿದಿವೆ.

ಮೊದಲಿಗೆ ಗಂಗರ ರಾಜಧಾನಿಯಾಗಿದ್ದ ಕೋಲಾರಕ್ಕೆ ಇವರ ಕಾರಣದಿಂದಲೂ ಈ ಹೆಸರು ಬಂದಿರುವ ಸಾಧ್ಯತೆಯಿದೆಯೆಂದೂ ವಿವೇಚಿಸಬಹುದು. "ಆಂಧ್ರಪ್ರದೇಶದಲ್ಲಿರುವ ವಿಶಾಖಪಟ್ಟಣದಲ್ಲಿ ದೊರೆತ ಕಳಿಂಗ ಗಂಗರ ಒಂದು ತಾಮ್ರಶಾಸನದಲ್ಲಿ ಕೋಲಾರಕ್ಕೆ ಸಂಬಂಧಿಸಿದ ಪ್ರಸಂಗವಿದೆ. ಇದರ ಪ್ರಕಾರ ಗಂಗೇಯ ವಂಶದಲ್ಲಿ ೧೮ ಜನ ದೊರೆಗಳು ಇದ್ದು, ಅವರಲ್ಲಿ ೧೭ನೆಯವನೇ ಕೋಲಾಹಲ. ಅವನು ಕಟ್ಟಿಸಿದ ನಗರವನ್ನು ಕೋಲಾಹಲವೆಂದು ಕರೆಯಲಾಗಿದೆ ಎಂದು ಶಾಸನದಿಂದ ತಿಳಿಯಲಾಗುತ್ತದೆ.[೭] ಇದಕ್ಕೆ ಸಂಬಂಧಿಸಿದಂತೆ, ಗಂಗರು ಆಂಧ್ರ ಕಡೆಯ 'ಸರೋಯ' ಎಂಬ ಸ್ಥಳದಲ್ಲಿ ನೆಲೆಯೂರಿದ್ದು, ನಂತರ ಕೋಲಾರದ ಕಡೆಗೆ ಬಂದರು." "ಗಂಗರ ಕಾಲಕ್ಕೆ ಅದು ಕುವಾಳಾಲಪುರವೆಂದು ಹೆಸರು ಪಡೆಯಿತು. ಮತ್ತು ಅವರ ಶಾಸನಗಳಲ್ಲಿ ಕುವಾಳಾಲಪುರಾಧೀಶ್ವರ ಎಂಬ ಬಿರುದಾವಳಿಯಿರುವುದು ಇದಕ್ಕೆ ಸಾಕ್ಷಿಯಾಗಿದೆ."[೮]

ಚೋಳರ ಕಾಲದ ಕೋವಳಾಲಪುರದ ವ್ಯಾಪ್ತಿಗೆ ಸೇರಿದ್ದ ಬೈರಕೂರು, ಪುಂಗನೂರು ಸೇರಿ 'ನಿಗಿರಲಿ ಚೋಳಮಂಡಲ' ಎಂದು ಕರೆಯಿಲ್ಪಟ್ಟಿದೆಯೆಂದೂ ಹೇಳುತ್ತಾರೆ. ಸ್ಥಳನಾಮದ ವ್ಯತ್ಯಾಸಗಳಿಗೆ ಭೌಗೋಳಿಕ ಲಕ್ಷಣಗಳು ರಾಜರ ಆಡಳಿತಗಳು ಒಂದೆಡೆಗೆ ಕಾರಣಗಳಾದರೆ, ಮತ್ತೊಂದೆಡೆ ಭಾಷಿಕತೆ ಮತ್ತೊಂದು ಕಾರಣವಾಗುತ್ತದೆ. ಈ ಪ್ರದೇಶದಲ್ಲಿನ ಪ್ರಬಲ ಭಾಷೆಗಳಾದ ತೆಲುಗು ಕನ್ನಡಗಳ ಜೊತೆಗೆ ತಮಿಳಿನ ಪ್ರಭಾವ ಹಾಗೂ ಮುಸ್ಲಿಂ ದೊರೆಗಳ ಪ್ರಭಾವ ಕೂಡ ಗಮನಾರ್ಹ ಅಂಶಗಳು. ಇವುಗಳ ನಡುವೆ ಮೌಖಿಕ ಪರಂಪರೆಯಲ್ಲಿ ಸಾಗಿ ಬಂದ ಜ್ಞಾನದ ಮಜಲುಗಳನ್ನು ಅಲ್ಲಗಳೆಯುವಂತಿಲ್ಲ.

ಯಾವುದೇ ಸ್ಥಳೈತಿಹ್ಯವು ಸ್ಥಳಪುರಾಣವೆನಿಸಿಕೊಳ್ಳಬೇಕಾದರೆ, ನಿರ್ದಿಷ್ಟವಾದ ಆ ಸ್ಥಳವು ಧಾರ್ಮಿಕ ಪ್ರಭಾವಕ್ಕೆ ಒಳಪಟ್ಟಿರುತ್ತದೆ. ಧಾರ್ಮಿಕ ಮಹತ್ವದಿಂದ ಪವಿತ್ರ ಸ್ಥಳವು ನಿರ್ದಿಷ್ಟತೆಯಿಂದ ಕೂಡಿದ್ದು ಇತರೆಡೆಗಳಿಗಿಂತ ಪ್ರತ್ಯೇಕತೆಯನ್ನು ಉಳಿಸಿಕೊಂಡಿರುತ್ತದೆ. ಇಲ್ಲಿನ ಆಚರಣೆಗಳು ಮತ್ತು ಅವುಗಳಿಗೆ ಸ್ಪಂದಿಸುವ ಸಮುದಾಯವು ಆ ಸ್ಥಳದ ಪಾವಿತ್ರ್ಯತೆಯನ್ನು ಉಳಿಸುವ ಕೆಲಸವನ್ನು ಮಾಡುತ್ತಿರುತ್ತದೆ. ಸಂಬಂಧಿಸಿದ ಸ್ಥಳದಲ್ಲಿ ಹಿಂದೆ ಎಂದೋ ಒಂದು ಮಹತ್ವದ ಘಟನೆ ನಡೆದಿದೆಯೆಂಬ ನಂಬಿಕೆಯನ್ನು ಮತ್ತೆ ಮತ್ತೆ ಕ್ರಿಯಾಶೀಲಗೊಳಿಸುವ ಪ್ರಯತ್ನದ ನಿರಂತರತೆ ಅಲ್ಲಿರುತ್ತದೆ. ಅಲ್ಲಿ ಭೂತಕಾಲದ ಘಟನೆಯು ನೆನಪನ್ನು ಮರುಕಳಿಸಿಕೊಳ್ಳುವ ರೀತಿಯಲ್ಲಿ ಆಚರಣೆಯಾಗಿ ನೆಲೆಯೂರಿರುತ್ತದೆ. ಇಂಥ ಆಚರಣೆಗಳಿಗೆ ಧಾರ್ಮಿಕ ಹಿನ್ನೆಲೆ ಇದ್ದಿತೆಂದರೆ ಅದು ಪೌರಾಣಿಕ ಆಶಯಗಳನ್ನು ಒಳಗೊಂಡಿರುತ್ತದೆ.

ಈ ಹಿನ್ನೆಲೆಯಲ್ಲಿ ಸ್ಥಳೈತಿಹ್ಯಗಳು ಸ್ಥಳಪುರಾಣಗಳಾಗುತ್ತವೆ. ದೇವಾಲಯಗಳು, ನದಿಗಳು, ಪರ್ವತಗಳು ಸ್ಥಳಪುರಾಣಗಳ ಮುಖ್ಯ ನೆಲೆಗಳಾಗಿರುತ್ತವೆ. ಈ ಹಿನ್ನೆಲೆಯಲ್ಲಿ ಇವುಗಳಿಗೆ ಪಾವಿತ್ರ್ಯತೆ, ವಿಶಿಷ್ಟತೆ ಲಭಿಸಿರುತ್ತದೆ. ಇಂಥ ಸ್ಥಳಗಳಿಗೆ ಸಂಬಂಧಿಸಿದ ಐತಿಹ್ಯಗಳು ಪುರಾಣದ ಆವರಣವನ್ನು ಹೊಂದಿರುವುದರಿಂದ ಸಂಪ್ರದಾಯವನ್ನು ರೂಪಿಸಿರುತ್ತವೆ.

**ಸ್ಥಳಪುರಾಣಗಳೊಂದಿಗೆ ಆಚರಣೆ, ವಿಧಿ-ನಿಷೇಧಗಳು**

ಯಾವುದೇ ಐತಿಹ್ಯ ಇಲ್ಲವೇ ಪುರಾಣಕ್ಕೆ ಬದ್ಧವಾದ ಸ್ಥಳದ ಸ್ವರೂಪ ಪಾವಿತ್ರ್ಯತೆಯನ್ನು ಸಾರುವಂತಿರುತ್ತದೆ. ಬಹುಪಾಲು ಅದು ಧಾರ್ಮಿಕ ಉದ್ದೇಶಗಳಿಂದ ಆವೃತ್ತವಾಗಿರುವ ಸಾಧ್ಯತೆಗಳೇ ಹೆಚ್ಚು. ಸಂಪ್ರದಾಯದ ದೃಷ್ಟಿಯಿಂದ ಅನೇಕ ವಿಧಿ-ನಿಷೇಧಗಳನ್ನು ಒಳಗೊಂಡಿರುತ್ತದೆ. ಉದಾ: ಕೋಲಾರ ತಾಲೂಕಿನ ಕಾಮಧೇನುಹಳ್ಳಿ ಎಂಬ ಊರಿಗೆ ಸಂಬಂಧಿಸಿದ ಐತಿಹ್ಯದ ಪ್ರಕಾರ ವಶಿಷ್ಟನು ಆಶ್ರಮದೊಂದಿಗೆ ಕಾಮಧೇನುವನ್ನು ಹೊಂದಿದ್ದ ಸ್ಥಳವದು. ಆದ್ದರಿಂದ ಆ ಊರಿನಲ್ಲಿ ಕೋಣವನ್ನು ಕಡಿಯುವ ಆಚರಣೆಗಳನ್ನು ಮಾಡಬಾರದು. ಹಿಂದೊಮ್ಮೆ ಈ ನಿಯಮವನ್ನು ಮೀರಿ ಮಾರಿ ಜಾತ್ರೆಯಲ್ಲಿ ರಹಸ್ಯವಾಗಿ ಕೋಣವನ್ನು ಬಲಿಕೊಟ್ಟಿದ್ದರು. ಅದರ ರುಂಡವು ಹಾರಿ ಹೋಗಿ ಊರ ಆಚೆಯ ಹೊಲಗದ್ದೆಗಳಲ್ಲಿ ಮೇಯುತ್ತಿತ್ತು. ನೀರಗಂಟಿಯನ್ನು ನೋಡಿ ಕಲ್ಲಾಗಿ ಮಾರ್ಪಟ್ಟಿತು. ಅಂದಿನಿಂದ ಮಾರಿಹಬ್ಬವನ್ನು ನಿಷೇಧಿಸಿದರು. ಮಾರಿಯ ಜಾತ್ರೆಯ ನಿಷೇಧ ಅಥವಾ ಆಚರಣೆಯಲ್ಲಿ ಕೋಣನ ಬಲಿಯ ನಿಷೇಧವನ್ನು ಹೊರುವ ಐತಿಹ್ಯಗಳಲ್ಲಿ ಕತ್ತರಿಸಲ್ಪಟ್ಟ ಕೋಣನ ರುಂಡವು ಊರಾಚೆಯ ಹೊಲಗದ್ದೆಗಳಲ್ಲಿ ಮೇಯುತ್ತಿದ್ದ ನಂಬಿಕೆಯ ಅಂಶವನ್ನು ಹೊಂದಿರುವುದು ಕಂಡುಬರುತ್ತದೆ. ವೈದಿಕ ಇಲ್ಲವೇ ಜೈನ ಧರ್ಮಗಳಂಥ ಯಾವುದೇ ಶಿಷ್ಟ ಧರ್ಮದ ಪ್ರಭಾವಕ್ಕೆ ಜನಪದ ಇಲ್ಲವೇ ಬುಡಕಟ್ಟು ಧರ್ಮಗಳು ಒಳಪಟ್ಟಾಗ ಆದ ಪಲ್ಲಟಗಳನ್ನು ಇಂಥ ಕಡೆಗಳಲ್ಲಿ ಗುರುತಿಸಬಹುದು. 'ಪ್ರಾಣಿ ಹಿಂಸೆ ಮಹಾಪಾಪ'ವೆಂಬ ತತ್ತ್ವಕ್ಕೆ ಕೆಳಜಾತಿ ಅಥವಾ ಕೆಳವರ್ಗದ ಜನ ಕಿವಿಕೊಟ್ಟ ಸಂದರ್ಭಗಳಿಂದಾಗಿ ಅವರ ಆಚರಣೆಗಳಲ್ಲಿ, ಆಹಾರ ಪದ್ಧತಿಗಳಲ್ಲಿ ಆದ ವ್ಯತ್ಯಯಗಳಿದ್ದವು. ಇಂಥ ಪ್ರಭಾವಗಳನ್ನು ಸಾರುವ ಸ್ಥಳಪುರಾಣಗಳಿಗೆ ಬದ್ಧವಾಗಿ ಆಚರಣೆ ಆರಾಧನೆಗಳಲ್ಲಿ ಪಾಲ್ಗೊಂಡ ಜನಸಮುದಾಯಗಳು ಆ ಸ್ಥಳದಲ್ಲಿನ ವಿಧಿ-ನಿಷೇಧಗಳನ್ನು ಅನುಸರಿಸುತ್ತಾರೆ. ಕೆಲವೊಮ್ಮೆ ಸಂಬಂಧಿಸಿದ ಸ್ಥಳದ ಪ್ರಭಾವೀ ನೆನಪುಗಳಿಂದ ಪ್ರೇರಿತರಾಗಿ ಬೇರೆಡೆಗಳಲ್ಲಿ ಬದುಕುವವರೂ ಶಾಶ್ವತವಾಗಿ ಅಥವಾ ಆಯಾ ಕಾಲಘಟ್ಟದಲ್ಲಾಗಲಿ ವಿಧಿ-ನಿಷೇಧಗಳನ್ನು ಅನುಸರಿಸುತ್ತಾರೆ. ಶಿಷ್ಟ ದೈವಗಳ, ಧರ್ಮಗಳ ಪ್ರಭಾವಕ್ಕೆ ಒಳಗಾದ ಎಷ್ಟೋ ಮಾಂಸಾಹಾರಿಗಳು ಯಾವುದೇ ಒಂದು ದಿನ ಅಥವಾ ವಾರ ಇಲ್ಲವೇ ಸಂದರ್ಭದ ಮಟ್ಟಿಗೆ ಮಾಂಸವನ್ನು ತಿನ್ನುವುದಿಲ್ಲ.

ಕಾಮಧೇನುಹಳ್ಳಿಯಲ್ಲಿ ದಲಿತರ ಮನೆಗಳು ಹೆಚ್ಚಾಗಿದ್ದು ಅವರ ಆಚರಣೆಗಳ ಮೇಲೆ ಮೇಲ್ಜಾತಿಯವರ ಪ್ರಭಾವ ಹೆಚ್ಚಾಗಿರುವುದು ಗಮನಕ್ಕೆ ಬರುತ್ತದೆ. ಕೃಷಿ, ಹೈನುಗಾರಿಕೆ, ಸಾಮಾನು ಸರಂಜಾಮುಗಳ ಸಾಗಾಣಿಕೆ ಇತ್ಯಾದಿ ವೃತ್ತಿಗಳಿಗೆ ಪ್ರಾಣಿಗಳನ್ನು ಬಳಸಿಕೊಂಡ ಸಂದರ್ಭಗಳಲ್ಲಿ ಸಂಬಂಧಿಸಿದ ಪ್ರಾಣಿವರ್ಗವನ್ನು ರಕ್ಷಿಸಿಕೊಳ್ಳಲು ಕೆಲವು ವಿಧಿ-ನಿಷೇಧಗಳನ್ನು ರೂಪಿಸಿರುವ ಸಾಧ್ಯತೆಗಳೂ ಇವೆ. ಕಾಮಧೇನುಹಳ್ಳಿಗೆ ಸ್ವಲ್ಪವೇ ದೂರದಲ್ಲಿ ಕಾಮಧೇನುಪುರವೆಂದು ಮತ್ತೊಂದು ಊರಿದೆ. ಇದರ ಸ್ಥಳನಾಮಕ್ಕೆ ಸಂಬಂಧಿಸಿದ ಐತಿಹ್ಯ ಹೀಗಿದೆ: ಹಸು ಸಾಕಾಣಿಕೆಯನ್ನು ಹೊಂದಿದ್ದ ಕುಟುಂಬಗಳು ಈ ಊರಿನಲ್ಲಿ ನೆಲೆಸಿದ್ದರು. ಹಸುವಿನ ಉತ್ಪನ್ನಗಳಿಗಾಗಿ ಸುತ್ತಮುತ್ತಲ ಊರುಗಳ ಜನ ಈ ಊರನ್ನೇ ಆಶ್ರಯಿಸಿದ್ದರು. ಯಾವುದೇ ಧಾರ್ಮಿಕ ಶುಭಕಾರ್ಯಗಳಿಗೆ ಇಲ್ಲಿನ ಹಸುಗಳನ್ನು ಹಾಲು, ಮೊಸರು, ತುಪ್ಪ, ಸಗಣಿ, ಗೋಮೂತ್ರ ಇತ್ಯಾದಿಗಳನ್ನು ಇಲ್ಲಿಂದಲೇ ಪಡೆಯುತ್ತಿದ್ದರು. ಆದ್ದರಿಂದ ಕಾಮಧೇನುಪುರ ವೆಂದು ಹೆಸರು ಬಂದಿದೆ. ಇಲ್ಲಿ ಎಮ್ಮೆಗಳನ್ನು ಸಾಕಬಾರದೆಂಬ ನಿಷೇಧವಿದೆ. ಒಂದು ಕಾಲದವರೆಗೆ ಎಮ್ಮೆ ಸಾಕಾಣಿಕೆ ಇಲ್ಲದ್ದೇ ಇಲ್ಲಿನ ನಿಷೇಧವಾಗಿ ಮಾರ್ಪಟ್ಟಿರಬಹುದು.

ಕೆಲವು ಸ್ಥಳನಾಮಗಳು ಸಾಮ್ರಾಜ್ಯ ಸ್ಥಾಪಿಸಿದ್ದರ ಕೋಟೆ-ಕೊತ್ತಲ-ಪಾಳೆಯಪಟ್ಟುಗಳನ್ನು ರೂಪಿಸಿದ್ದರ ಬಗ್ಗೆ ಸುಳಿವುಗಳನ್ನು ಹೇಳುತ್ತವೆ. ಇವುಗಳಲ್ಲಿ ಪ್ರಾಣಿಗಳು ಸಂದೇಶವಾಹಕವಾಗಿ ಕಂಡು ಬರುತ್ತವೆ. ಬೇಟೆ ನಾಯಿಗಳನ್ನು ಮೊಲ ಅಟ್ಟಿಸಿಕೊಂಡು ಹೋಗುವ ಆಶಯ ಇದ್ದೇ ಇರುತ್ತದೆ. ಇದು ಮೂಲತಃ ಬೇಟೆಗಾರರು ರಾಜ್ಯಸ್ಥಾಪನೆಯಲ್ಲಿ ನೆಲೆಕಂಡುಕೊಂಡದ್ದರ ಹೆಗ್ಗುರುತು. ಅಲ್ಲದೆ ಪರಂಪರಾಗತ ವೃತ್ತಿಯೊಂದು ಪಲ್ಲಟಗೊಂಡು ಹೊಸ ಆಯಾಮಕ್ಕೆ ಆದ್ಯತೆ ದೊರೆತಿದ್ದರ ದ್ಯೋತಕ ಕೂಡ ಹೌದು. ಅದರಂತೆ ರಾಜತ್ವದ ಲಕ್ಷಣಗಳನ್ನು ಹೊಂದಿದವನೆಂದು ರಾಜ್ಯ ಕಟ್ಟುತ್ತಾನೆಂದು ಸೂಚನೆಗೈಯ್ಯುವ ಮತ್ತೊಂದು ಆಶಯದಲ್ಲಿ ಬೇಟೆಯಿಂದ ಬೇಸತ್ತು ನೆರಳು ಸರಿದು ದೂರ ಮೈಚೆಲ್ಲಿ ಮೈಮರೆತು ಮಲಗಿ ನಿದ್ರಿಸುವ ವ್ಯಕ್ತಿಯಿಂದ ನೆರಳುಸರಿದು ದೂರವಾಗಿದ್ದಾಗ ಸರ್ಪವೊಂದು ಹೆಡೆಬಿಚ್ಚಿ ತಲೆಯ ಮೇಲೆ ಹರಡಿ ನೆರಳು ನೀಡುವುದಾಗಿರುತ್ತದೆ. ಇದರಿಂದ ಮುಂದೆ ಸಂಬಂಧಿಸಿದ ವ್ಯಕ್ತಿಯ ರಾಜನಾಗುತ್ತಾನೆಂಬ ಸೂಚನೆ ದೊರೆಯುತ್ತದೆ.

ಕೋಲಾರಮ್ಮನು ಶಕ್ತಿದೇವತೆಯೆಂಬುದನ್ನು ಸಮರ್ಥಿಸುವ ಐತಿಹ್ಯ ಅಥವಾ ಸ್ಥಳಪುರಾಣಗಳು ಹೀಗಿವೆ : ೧. ದಕ್ಷಪ್ರಜಾಪತಿಯು ಯಜ್ಞ ಮಾಡುತ್ತಿದ್ದ ಸಂದರ್ಭದಲ್ಲಿ ಅವನ ಮಗಳಾದ ಸತಿಯು ಆಹ್ವಾನವಿಲ್ಲದಿದ್ದರೂ ಹೋಗಿ ತನ್ನ ಗಂಡನನ್ನು ಕುರಿತು ತಂದೆ ಹೇಳಿದುದನ್ನು ಕೇಳಿ ರೋಷದಿಂದ ಅಗ್ನಿಕುಂಡದಲ್ಲಿಯೇ ಹಾರಿ ಪ್ರಾಣಬಿಟ್ಟರು. ಇದನ್ನು ಕೇಳಿದ ಶಿವನು ಅಲ್ಲಿಗೆ ಧಾವಿಸಿ ಕೋಪದಿಂದ ಜಟೆಯನ್ನು ನೆಲಕ್ಕೆ ಅಪ್ಪಳಿಸಿದಾಗ ವೀರಭದ್ರನು ಹುಟ್ಟಿಕೊಂಡು ದಕ್ಷಬ್ರಹ್ಮನ ಯಜ್ಞವನ್ನು ಧ್ವಂಸ

ಮಾಡಿದ. ತನ್ನ ಸತಿಯ ಮರಣದಿಂದ ವಿಹ್ವಲನಾದ ಶಿವನು ಆಕೆಯ ಕಳೆಬರವನ್ನು ಹೆಗಲಮೇಲೆ ಏರಿಕೊಂಡು ಅಲೆದಾಡತೊಡಗಿದ. ಶಿವನ ಬವಣೆಯನ್ನು ತಪ್ಪಿಸಲು ವಿಷ್ಣುವು ಉಪಾಯದಿಂದ ಕಳೆಬರದ ಒಂದೊಂದು ಭಾಗವನ್ನು ಕಡಿದು ಉರುಳಿಸಿದನು. ಅವು ಬಿದ್ದ ಸ್ಥಳಗಳೇ ಶಕ್ತಿ ಪೀಠಗಳು. ಆ ಒಂದೊಂದು ಶಕ್ತಿಪೀಠದಲ್ಲಿಯೂ ಶಿವನು ಒಂದೊಂದು ಅಂಶದಿಂದ ಶಕ್ತಿಯೊಡಗೂಡಿ ಇದ್ದಾನೆ. ಶಕ್ತಿದೇವತೆಯನ್ನಾಗಿ, ಸ್ತ್ರೀ ದೇವತೆಗಳನ್ನೇ ಅದರಲ್ಲೂ ಮಾತೃ ಎಂದು ಪರಿಗಣಿತವಾದ ದೇವಿಯರನ್ನೇ ಪೂಜಿಸುತ್ತ ಬಂದಿರುವ ಸಂಸ್ಕೃತಿಯಲ್ಲಿ ಐಹೊಳೆಯ ದುರ್ಗ, ಕೊಲ್ಲಾಪುರದ ಮಹಾಲಕ್ಷ್ಮೀ, ಆಲಂಪುರದ ಜೋಗೇಶ್ವರಿ, ಕೋಲಾರದ ಕೋಲಾರಮ್ಮ ಮತ್ತು ಸಪ್ತಮಾತೃಕೆಯರು ಕ್ರಿ.ಶ. ೬-೭ನೇ ಶತಮಾನದಿಂದಲೂ ವಿಶೇಷ ಸ್ಥಾನ ಗಳಿಸಿದ್ದಾರೆ.

೨. ಮಹಿಷಾಸುರನೆಂಬ ರಾಕ್ಷಸನು ಸಮಾಜಕ್ಕೆ ಶಾಂತಿಭಂಗ ತಂದ ಕಾರಣ ತ್ರಿಮೂರ್ತಿಗಳು ತಮ್ಮ ಶಕ್ತಿಯನ್ನು ಆದಿಶಕ್ತಿಯ ಹೆಸರು ಮತ್ತು ರೂಪದಲ್ಲಿ ಕೇಂದ್ರೀಕರಿಸಿದರು. ಆ ಶಕ್ತಿ ಆ ದೈತ್ಯನನ್ನು ಸಂಹರಿಸಿದಳಂತೆ. ಸಂಹರಿಸುವ ಸಂದರ್ಭದಲ್ಲಿ ಮಹಿಷಾಸುರನು ಈ ಸ್ಥಳದಲ್ಲಿ ಬಹಳ ಕೋಲಾಹಲ ಮಾಡಿದ್ದರಿಂದ 'ಕೋಲಾಹಲಪುರಿ' ಎಂಬ ಹೆಸರು ಬಂತು. ಈಗ ಕೋಲಾರವಾಗಿದೆ.

೩. ಕಾರ್ತವೀರ್ಯನೆಂಬ ರಾಜ ಜಮದಗ್ನಿಯ ಆಶ್ರಯಕ್ಕೆ ಬಂದ. ಕಾಮಧೇನುವಿನ ನೆರವಿನಿಂದ ಜಮದಗ್ನಿ ಆತನನ್ನು ಸತ್ಕರಿಸಿದ. ರಾಜ ಕಾಮಧೇನು ತನಗೆ ಬೇಕೆಂದ. ಋಷಿ ಒಪ್ಪಲಿಲ್ಲ. ರಾಜ ಅದನ್ನು ಬಲತ್ಕಾರವಾಗಿ ಎಳೆದೊಯ್ದ. ಪರಶುರಾಮ ಅವನನ್ನೂ ಕೊಂದ. ರಾಜನ ಮಕ್ಕಳು ಪರಶುರಾಮನಿಲ್ಲದ ವೇಳೆಯಲ್ಲಿ ಆಶ್ರಯಕ್ಕೆ ನುಗ್ಗಿ ತಂದೆ ಜಮದಗ್ನಿಯನ್ನು ಕೊಂದರು. ರೇಣುಕೆ ಅಗ್ನಿಪ್ರವೇಶ ಮಾಡಿ ಮಹಾಸತಿಯಾದಳು. ಈ ಸುದ್ದಿ ತಿಳಿದ ಪರಶುರಾಮ ಅವರನ್ನು ಕೊಂದ. ಹಲವಾರು ಘಟನೆಗಳ ಕೋಲಾಹಲವೇ ಜರುಗಿದ್ದರಿಂದ 'ಕೋಲಾಹಲಪುರ'ವಾಯಿತು. ಕ್ರಮೇಣ ರೇಣುಕೆಯ ಸ್ಮಾರಕ ಕೋಲಾರದಲ್ಲಿ ನಿರ್ಮಾಣವಾಯಿತು. ಈಕೆಯೇ ಕೋಲಾರಮ್ಮ ಎಂದು ಜನ ಪೂಜಿಸುತ್ತಾರೆ. ಚೋಳ ದೊರೆ ರಾಜೇಂದ್ರಚೋಳ ಈ ದೇವಾಲಯ ಕಟ್ಟಿಸಿದ, ಗುಡಿಯ ಗೋಡೆಯ ಮೇಲೆ ಚೋಳ ರಾಜರ ದಾನ ಶಾಸನಗಳಿವೆ. ತಮಿಳು, ಮಲೆಯಾಳಿ, ಪಾಳಿ, ಕನ್ನಡ ಭಾಷೆಗಳಲ್ಲೂ ಶಾಸನಗಳಿವೆ.

ಇಲ್ಲಿನ ಚೇಳಮ್ಮ (ದೇವಾಲಯದ ಒಂದು ಮೂರ್ತಿ) ಕಾಲಭೈರವಿ ಈಕೆ ಚೇಳುಗಳ ಅಧಿದೇವತೆ. ಚೇಳಿನ ಕಾಟವಿದ್ದು ಹರಕೆ ಹೊತ್ತರೆ ಮಾಯವಾಗುತ್ತದೆ. ಜಗತ್ತಿನ ಎಲ್ಲ ಚೇಳುಗಳೂ ಇವಳಿಂದಲೇ ಹುಟ್ಟುತ್ತವೆ. ಶಂಕರಾಚಾರ್ಯರಿಂದ ಪ್ರತಿಷ್ಠಿತ ಶ್ರೀಚಕ್ರವೇ ಶಕ್ತಿಯ ಮೂಲ ಆದ್ದರಿಂದಲೇ ದೇವಿಯ ಎಲ್ಲ ಚಟುವಟಿಕೆಗಳು ಜರುಗುವುದು ಎಂಬಿತ್ಯಾದಿ ನಂಬಿಕೆಗಳಿವೆ.

ಮಹಿಷಾಸುರನನ್ನು ಸಂಹರಿಸುವಾಗಿನ ಉಗ್ರರೂಪವಾದ್ದರಿಂದ ಕೋಲಾರಮ್ಮನನ್ನು ಕನ್ನಡಿಯಲ್ಲಿ ದರ್ಶನ ಮಾಡಬೇಕು. ಹೆಣ್ಣುಮಕ್ಕಳು ನಿಷ್ಠೆಯಿಂದ ಪೂಜಿಸಿದರೆ ಇಷ್ಟಾರ್ಥಗಳು ನೆರವೇರುತ್ತವೆ.

**ಸೀತಾ ಪಾರ್ವತಮ್ಮ-ಆವನಿ (ಮುಳುಬಾಗಿಲು ತಾ) :** ಆವನಿಯನ್ನು ಮತ್ತೊಂದು ರಾಮೇಶ್ವರ ಎನ್ನುತ್ತಾರೆ. ಪರನಿಂದೆ ತಾಳಿಕೊಳ್ಳದೆ ರಾಮ ಸೀತೆಯನ್ನು ಬಿಟ್ಟ. ಆಕೆ ವಾಲ್ಮೀಕಿ ವಾಸಿಸುತ್ತಿದ್ದ ಆಶ್ರಮದಲ್ಲಿದ್ದುದು, ಲವಕುಶರ ಜನನ, ರಾಮ ಮತ್ತು ಲವಕುಶರ ಯುದ್ಧ, ಸೀತೆ ಭೂದೇವಿಯಲ್ಲಿ ಅಂತರ್ಗತವಾದದ್ದು ಇಲ್ಲೇ. ರಾಮನ ಸಂಬಂಧಿಕರು ಇಲ್ಲಿ ಅನೇಕ ಲಿಂಗಗಳನ್ನು ಸ್ಥಾಪಿಸಿದ್ದಾರೆ. ಅವು ಅಲ್ಲಲ್ಲಿ ಕಾಣಸುತ್ತಿರುವುದು. ಇಲ್ಲಿ ಹಲವು ತೀರ್ಥಗಳಿವೆ. ಬಹುದಿನಗಳ ಕಾಲ ಸೀತೆಯಿಂದ ದೂರವಿದ್ದ ರಾಮ ಆಕೆಯನ್ನು ಕಂಡು ಸಂತೋಷದ ಕಣ್ಣೀರು ಸುರಿಸಿದ. ಅದು ರಾಮತೀರ್ಥವಾಗಿದೆ.

**ಬಂಗಾರು ತಿರುಪತಿ :** ಸ್ಥಳಪುರಾಣದ ಪ್ರಕಾರ ಬಂಗಾರು ತಿರುಪತಿಯು ಬಂಗಾರಪೇಟೆ ತಾಲೂಕು ಭೃಗು ಮಹರ್ಷಿಗಳ ತಪೋಭೂಮಿಯೆಂಬ ಪ್ರತೀತಿ ಇದೆ. ಈ ಊರಿನ ಸಮೀಪದ ಒಂದು ಬೆಟ್ಟವೇ ಬಂಗಾರು ತಿರುಪತಿ. ಇದರ ಸಮೀಪದ ಗುಡ್ಡದಲ್ಲಿ ಅಲವೇಲುಮಂಗಮ್ಮನ ದೇವಾಲಯವಿದೆ. ಪ್ರಾಚೀನ ಕಾಲದಿಂದಲೂ ಈ ಪ್ರದೇಶದಲ್ಲಿ ಚಿನ್ನದ ಗಣಿಗಾರಿಕೆ ನಡೆಯುತ್ತಿತ್ತೆಂದು ಪ್ರತೀತಿ. ಬಂಗಾರುತಿರುಪತಿ, ಬಂಗಾರುಪೇಟೆ ಎಂಬ ಸ್ಥಳನಾಮಗಳ ಸೃಷ್ಟಿಯೇ ಇದಕ್ಕೆ ಕಾರಣ.

**ಚಿಕ್ಕತಿರುಪತಿ (ಮಾಲೂರು ತಾ):** ಇಲ್ಲಿರುವ ಶ್ರೀನಿವಾಸ ದೇವಾಲಯವು ದೊಡ್ಡದಾಗಿದ್ದು ವಿಶಾಲವಾದ ಅಂಗಳವನ್ನು ಹೊಂದಿದೆ. ಇಲ್ಲಿನ ನವರಂಗದಲ್ಲಿ ವೈಷ್ಣವ ಸಂತರಾದ ರಾಮಾನುಜಾಚಾರ್ಯ ಮತ್ತು ವೇದಾಂತ ದೇಶಿಕರ ಶಿಲ್ಪಗಳಿವೆ. ಆಂಧ್ರಪ್ರದೇಶದಲ್ಲಿರುವ ತಿರುಪತಿಗೆ ಹೋಗಲಾಗದವರು ಈ ಸ್ಥಳವನ್ನು ಸಂದರ್ಶಿಸುತ್ತಾರೆ. ಆದುದರಿಂದ ಇದಕ್ಕೆ ಬಡವರ ತಿರುಪತಿ ಎಂಬ ಅಡ್ಡಹೆಸರು ಬಂದಿದೆ. ಸಾಮಾಜಿಕ ಮತ್ತು ಧಾರ್ಮಿಕ ಸಂಸ್ಥೆಗಳು ಇಲ್ಲಿ ಸಾಮೂಹಿಕ ವಿವಾಹಗಳನ್ನು ಏರ್ಪಡಿಸುತ್ತವೆ. ತಿರುಪತಿಗೆಂದು ಯಾತ್ರೆ ಹೊರಟು ಮಾರ್ಗ ಮಧ್ಯದ ಈ ಸ್ಥಳದಲ್ಲಿ ಕುಸಿದ ಭಕ್ತನೊಬ್ಬನಿಗೆ ತಿರುಪತಿ ವೆಂಕಟರಮಣನು ಇಲ್ಲಿ ದರ್ಶನ ನೀಡಿದನೆಂದು ಐತಿಹ್ಯವಿದೆ.

**ನಂದಿಬೆಟ್ಟದ ಜೈನ ಮತ್ತು ಶೈವ ಪುರಾಣಗಳು :** ನಂದಿದುರ್ಗವು ಗಂಗರ ಕಾಲದಿಂದಲೂ ಪ್ರಸಿದ್ಧವಾಗಿದೆ. ಗಂಗರನ್ನು ಶಾಸನಗಳಲ್ಲಿ ನಂದಿಗಿರಿನಾಥರೆಂದೇ ಕರೆಯಲಾಗಿದೆ. ಆದರೆ ಆ ಕಾಲದ ಶಾಸನಗಳಾವವೂ ಇಲ್ಲಿ ಲಭಿಸಿರುವುದಿಲ್ಲ. ನಂದಿಗ್ರಾಮದಲ್ಲಿ ದೊರೆತ ತಾಮ್ರಶಾಸನವೊಂದರಲ್ಲಿ ನಂದಿಗಿರಿಯಲ್ಲಿಯ ಮಠದ ಸ್ಥಾನಾಧಿಪತಿಯಾದ ಕಾಳಾಮುಖರಿಗೆ ಇದು ಪವಿತ್ರವಾದ ಸ್ಥಳವಾಗಿತ್ತೆನ್ನ ಬಹುದು. ಜೈನ ಮತಾವಲಂಬಿಗಳಾದ ಗಂಗರ ಕಾಲದಲ್ಲೂ ಇದು ಆನಂದಗಿರಿ ಎನಿಸಿಕೊಂಡಿತ್ತೆಂದು

'ವೃಷಭತೀರ್ಥಂಕರರ ಹೆಸರಿನಿಂದ ವೃಷಭ ಪರ್ವತವೆಂಬ ಹೆಸರನ್ನು ಪಡೆದಿತ್ತೆಂದೂ ಐತಿಹ್ಯಗಳಿವೆ.' ಸ್ಥಳಪುರಾಣಗಳಲ್ಲಿ ಈ ದುರ್ಗವನ್ನು ಶೃಂಗಿ ಪರ್ವತ, ಕೂಷ್ಮಾಂಡ ಪರ್ವತವೆಂದು ಕರೆಯಲಾಗಿದೆ. ಕೂಷ್ಮಾಂಡ ಋಷಿ ಇಲ್ಲಿ ನೆಲೆಸಿದ್ದು ಶಿವನನ್ನು ಪೂಜಿಸುತ್ತಿದ್ದನೆಂಬುದೊಂದು ಐತಿಹ್ಯ ಇಲ್ಲಿ ಪ್ರಚಲಿತ ವಾಗಿದೆ. ಯೋಗಿ ನಂದೀಶ್ವರಾಲಯದಲ್ಲಿರುವ ಹಲವಾರು ವಿಗ್ರಹಗಳಲ್ಲಿ ಒಂದನ್ನು ಇಲ್ಲಿ ಕೂಷ್ಮಾಂಡ ಋಷಿಯೆಂದು ತೋರಿಸುತ್ತಾರೆ. (ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪು.೮೧೧)

ಹನ್ನೊಂದನೆ ಶತಮಾನದ ಪೂರ್ವದಲ್ಲಿ ಇದು 'ನಂದಿಗಿರಿ' ಎಂಬುವುದು ಜೈನಕ್ಷೇತ್ರವಾಗಿದ್ದಂತೆ ಕಂಡುಬರುತ್ತದೆ. ಕ್ರಿ.ಶ. ೧೧ರಲ್ಲಿ ಚೋಳರು ಪೂರ್ವ ಗಂಗರನ್ನು ಗೆದ್ದ ಮೇಲೆ ಇದು ಶೈವ ಕ್ಷೇತ್ರವಾಗಿ ಪರಿವರ್ತಿತವಾದಂತೆ ತಿಳಿಯುತ್ತದೆ. ಇಲ್ಲಿನ ಕೆಲವು ದೇವಾಲಯಗಳು ಮೂಲತಃ ಜೈನ ಬಸದಿಗಳಾಗಿದ್ದು ನಂತರ ಶೈವಾಲಯಗಳಾದ ಸಾಧ್ಯತೆಗಳೇ ಹೆಚ್ಚು. ೧೧ನೇ ಶತಮಾನದಲ್ಲಿ ಶ್ರೀಶೈಲದಿಂದ ಚಿತ್ತೈಸಿದ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರು ಚೋಳ ರಾಜನ ಭಕ್ತಿಯನ್ನು ಕೈಗೊಂಡರೆಂಬ ಐತಿಹ್ಯಕ್ಕೆ ಇಂಬುಕೊಟ್ಟಂತೆ ಇಲ್ಲಿನ ಒಂದು ಶಾಸನದ ಆಧಾರವು ತಿಳಿಸುತ್ತದೆ. ಕೈಲಾಸದ ಒಡೆಯನಾದ ಶಿವನ ವಾಹನ ನಂದಿಯು ಭೂಮಿಯಲ್ಲಿ ತಪ್ಪು ಡಂಗೂರ ಸಾರಿದ್ದರ ಪ್ರಾಯಶ್ಚಿತ್ತವಾಗಿ ಈ ಸ್ಥಳದಲ್ಲಿ ಬಸವನಾಗಿ ನೆಲೆಸಿದನೆಂದು ಸ್ಥಳಪುರಾಣವಿದೆ.

**ಕುರುಡು ಮಲೈ:** ಈ ಊರನ್ನು ಕೂಡುಮಲೆ ಎಂದು ಕರೆಯುತ್ತಿದ್ದರು. ಈ ಊರಿನ ಎಲ್ಲ ದೇವತೆಗಳೂ ಕೂಡಿ ಗಣಪತಿಯನ್ನು ಪೂಜಿಸಿ ವರ ಪಡೆಯುತ್ತಿದ್ದರೆಂದು ಮತ್ತು ತ್ರಿಪುರ ಸಂಹಾರಕ್ಕಾಗಿ ಎಲ್ಲಾ ದೇವತೆಗಳು ಇಲ್ಲಿ ಸೇರಿದ್ದರಿಂದಲೂ ಇದರ ಸರಿಯಾದ ಹೆಸರು ಕೂಡುಮಲೆ ಎಂದೂ, ಆ ಕೂಡುಮಲೆಯೇ ಕುರುಡುಮಲೆ ಎಂದು ಹೆಸರಾಯಿತೆಂದು ಐತಿಹ್ಯವಿದೆ. ಮುಳಬಾಗಿಲ ಅರಸರ ಕಾಲದಲ್ಲಿ 'ಗರುಡಮಲೆ' ಎಂಬ ಹೆಸರಿನಿಂದ ಕರೆಯುತ್ತಿದ್ದರು. ವಿರುರಿವಿಪಾಲನ ಮಗ ಎಳವಂಜಿ ರಾಯ ಈ ಅರಸರ ಮೂಲಪುರುಷ. ಇವನು ಕಂಚಿಯಿಂದ ಬಂದವನಾಗಿದ್ದು ಗರುಡಮಲೆ ಎಂಬಲ್ಲಿ ಸೋಮೇಶ್ವರನನ್ನು ಪ್ರತಿಷ್ಠಾಪಿಸಿದನಂತೆ. ಈ ದೈವದ ನಿತ್ಯೋತ್ಸವ ಪಕ್ಷೋತ್ಸವದಂಥ ಆರಾಧನೆಗಳಿಗೆಂದು ಕೆಲವು ಗ್ರಾಮಗಳನ್ನು ಕೆರೆಯನ್ನು ಹೊಲಗದ್ದೆಗಳನ್ನು ದೇವಾಲಯದ ಅರ್ಚಕರಾದ ಚಂದ್ರಶೇಖರ ದೀಕ್ಷಿತರಿಗೆ ದಾನ ನೀಡಿದ ಶಾಸನಾಧರಗಳಿವೆ. (ಎ.ಕ.ಮು.ಬಾ.೧೮)

**ಕೈವಾರ :** ಸ್ಥಳಪುರಾಣ ಹಾಗೂ ಐತಿಹ್ಯಗಳ ಪ್ರಕಾರ, ಇದು ಪೌರಾಣಿಕವಾಗಿ ಏಕಚಕ್ರಪುರ ವಾಗಿದ್ದಿತೆಂದು ಹೇಳಲಾಗಿದೆ. ಇಲ್ಲಿನ ಅಮರನಾರಾಯಣ ಸ್ವಾಮಿ ದೇವಾಲಯದಲ್ಲಿ ಸ್ವತಃ ದೈವ ಅಮರನಾರಾಯಣನೇ ಬಂದು ನೆಲೆಸಿ ಕೈವಲ್ಯವನ್ನು ಕರುಣಿಸಿದುದರಿಂದ 'ಕೈವಲ್ಯಪುರಿ' ಎಂದೆನಿಸಿತು. ಕೃತಯುಗದಲ್ಲಿಯೇ ಈ ಸ್ಥಳನಾಮವು ಅಸ್ತಿತ್ವದಲ್ಲಿದ್ದಿತೆಂದು ಪುರಾಣ ಪ್ರಸಂಗವನ್ನು ವಿವರಿಸಿ ಇಂದ್ರನು

ವೃತಾಸುರನನ್ನು ಕೊಂದ ಬ್ರಹ್ಮಹತ್ಯಾ ದೋಷದ ನಿವಾರಣೆಗಾಗಿ ಬ್ರಹ್ಮನ ಮೊರೆ ಹೋಗುತ್ತಾನೆ. ಆಗ ಬ್ರಹ್ಮನು ಏಕಕಾಲದಲ್ಲಿ ಒಂದೇ ಮುಹೂರ್ತದಲ್ಲಿ ಪಂಚನಾರಾಯಣರ ಮೂರ್ತಿ ಪ್ರತಿಷ್ಠಾಪನೆ ಮಾಡಿ ಪಾಪ ಪರಿಹರಿಸಿಕೊಳ್ಳುವಂತೆ ಸೂಚಿಸಿದ್ದ. ಹಾಗೆ ಇಂದ್ರನು ಪ್ರತಿಪಾದಿಸಿದ ಪಂಚಮೂರ್ತಿಗಳಲ್ಲಿ ಕೈವಾರದ ಅಮರನಾರಾಯಣನ ವಿಗ್ರಹವೂ ಒಂದು ಎಂದು ಹೇಳುತ್ತಾರೆ. ಜಿಲ್ಲೆಯ ಯಲ್ಲೋಡಿನ ಆದಿನಾರಾಯಣ, ಯಗವ ಕೋಟೆಯ ವೀರನಾರಾಯಣ, ಬೂದಿಗೆರೆಯ ದೇಶೀನಾರಾಯಣ, ಸತ್ಯಪುರದ ಲಕ್ಷ್ಮೀನಾರಾಯಣ ಹಾಗೂ ಕೈವಾರದ ಅಮರನಾರಾಯಣ ವಿಗ್ರಹಗಳು ಇಂದ್ರನಿಂದ ಪ್ರತಿಷ್ಠಾಪಿಸಲ್ಪಟ್ಟವು ಎಂದು ಹೇಳುತ್ತಾರೆ. ತ್ರೇತಾಯುಗದಲ್ಲಿ ರಾಮ-ಲಕ್ಷ್ಮಣರು ವನವಾಸದಲ್ಲಿದ್ದಾಗ ಕೈವಾರದ ಹಾದಿಯಲ್ಲಿ ನಡೆದು ಹೋದರು. ನೀರು ಬೇಕಾಗಿ ಬಂದಾಗ ಲಕ್ಷ್ಮಣ ಬಾಣದಿಂದ ಬಂಡೆಯೊಂದಕ್ಕೆ ಹೊಡೆದು ಲಕ್ಷ್ಮಣ ತೀರ್ಥ ರಚಿಸಿದ. (ಬೆಟ್ಟದ ಮೇಲೆ ಸದಾ ನೀರು ನಿಂತಿರುವ ಜಾಗ) ಬಕಾಸುರ ಗುಹೆ. ಭೀಮೇಶ್ವರಲಿಂಗ ರಾಮೇಶ್ವರಲಿಂಗಗಳೆಂದು ಕರೆಯುವಲ್ಲಿ ಶೈವ ದೇವಾಲಯಗಳಿಗೆ ಮಹಾಭಾರತ ರಾಮಾಯಣಗಳೊಂದಿಗೆ ಸಂಬಂಧ ಕಲ್ಪಿಸಿರುವುದು ವ್ಯಕ್ತವಾಗುತ್ತದೆ.

**ಹಿರೇಬಿದನೂರಿನ ಮರಳುಲಿಂಗೇಶ್ವರ :** ವನವಾಸದ ಅವಧಿಯಲ್ಲಿ ರಾಮ-ಸೀತೆ ಹಾಗೂ ಲಕ್ಷ್ಮಣ ಇಲ್ಲಿ ಮೂರು ತಿಂಗಳುಗಳ ಕಾಲ ಉಳಿದಿದ್ದರು. ವನವಾಸದಿಂದ ಹಿಂದಿರುಗುವಾಗ ಇಲ್ಲಿ ತಾವು ನೆಲೆಸಿದ್ದ ಗುರುತಿಗಾಗಿ ರಾಮನು ಅಗ್ನಿಯಾಗ ಮಾಡಿದ. ಈ ನಿಮಿತ್ತ ಶಿವಪೂಜೆ ಮಾಡಲು ಶಿವಲಿಂಗವನ್ನು ತರಿಸಬೇಕಾಗಿತ್ತು. ಹನುಮಂತನು ಕಾಳಿಯಿಂದ ಶಿವಲಿಂಗವನ್ನು ತರುವುದಾಗಿ ಹೇಳಿ ಹೋದವನು ಪೂಜೆಯ ಸಮಯ ಸಮೀಪಿಸಿದರೂ ಬರಲೇ ಇಲ್ಲ. ಶ್ರೀರಾಮನು ಅಲ್ಲಿದ್ದ ಮರುಳನ್ನೇ ಶಿವಲಿಂಗದ ಆಕಾರ ಮಾಡಿ ಪೂಜೆಯನ್ನು ಸಲ್ಲಿಸಿದ. ತಡವಾಗಿ ಹನುಮಂತನು ತಂದ ಶಿವಲಿಂಗವನ್ನು ಮರುಳು ಲಿಂಗದ ಮೇಲೆ ಪ್ರತಿಷ್ಠಾಪಿಸಿದ. ಆದ್ದರಿಂದ ಮರುಳುಲಿಂಗವೆಂದು ಹೆಸರು ಬಂತು.

**ರಾಮಪಟ್ಟಣ :** ಶ್ರೀರಾಮನು ವನವಾಸ ಬಂದಾಗ ಈ ಊರಿನಲ್ಲಿ ಇದ್ದ. ಇಲ್ಲಿನ ಬೆಟ್ಟದ ಪಕ್ಕದಲ್ಲಿ ಹೋಮ ಸುಟ್ಟು ಈ ಊರಿನಲ್ಲಿ ವಾಸವಾಗಿದ್ದ. ಆದ್ದರಿಂದಲೇ ಆಗಿನಿಂದ ರಾಮಪಟ್ಟಣ ಎಂಬ ಹೆಸರು ಬಂದಿದೆ. ಪಕ್ಕದ ಊರಾದ 'ಮಂಡಿಗಲ್ಲು'ವಿನ ಬಳಿ ಆಲದ ಮರದ ಬೇರಿನಿಂದ ಬಾಣ ತಯಾರಿಸಿ ಪ್ರಯೋಗ ಮಾಡುತ್ತಿದ್ದು ಈಗಲೂ ಹೆಜ್ಜೆ ಗುರುತುಗಳು ಇವೆ.

**ತಲಕಾಯಲಬೆಟ್ಟ :** ಒಮ್ಮೆ ಬ್ರಹ್ಮನು ದೇವಸಭೆಯನ್ನು ಕರೆಯುತ್ತಾನೆ. ಅಲ್ಲಿ ಸಭೆಯ ಸಂಸ್ಕೃತಿಯನ್ನು ವರ್ಣಿಸಲು ಕವಿಯು ಇಲ್ಲದ್ದರಿಂದ ಬ್ರಹ್ಮನು ಒಂದು ಮಗುವನ್ನು ಸೃಷ್ಟಿಸಿ ದೇವತೆಗಳ ಕೈಗೆ ಇವನನ್ನು ಚೆನ್ನಾಗಿ ಸಾಕಿ ಸಲುಹಿ ಮುಂದೆ ಇವನು ಕವಿಯಾಗಿ ದೈವ ಮಹಿಮೆಯನ್ನು

ವರ್ಣಿಸುತ್ತಾನೆಂದು ಹೇಳಿದನು. ಆದರೆ ಆ ಮಗುವನ್ನು ಲಾಲನೆ ಪಾಲನೆ ಮಾಡಲು ಯಾರಿಗೂ ಸಾಧ್ಯವಾಗದೆ ಕೊನೆಗೆ ನಾರದ ಮಹರ್ಷಿಯ ಕೈಗೆ ಕೊಟ್ಟರು. ನಾರದನು ತೆಗೆದುಕೊಂಡು ಹೋಗಿ ಕಾಡಿನಲ್ಲಿ ಎಸೆದು ಬಂದನು. ಒಬ್ಬ ಬೇಡರ ಹೆಂಗಸು ಕಾಡಿನ ಮಧ್ಯೆ ಅಳುತ್ತಿದ್ದ ಮಗುವನ್ನು ನೋಡಿ ಎತ್ತಿಕೊಂಡು ಹೋಗಿ ಸಾಕಿದಳು. ಅವನಿಗೆ ಮುತ್ತುರಾಯನೆಂದು ಹೆಸರಿಟ್ಟರು. ಅವನು ಬೆಳೆದು ದೊಡ್ಡವನಾಗಿ ದೊಡ್ಡ ಕಳ್ಳನಾದನು. ದಾರಿಹೋಕರ ತಲೆಗಳನ್ನು ಕಡಿದು ಅವರಿಂದ ನಗ ನಾಣ್ಯ ದೋಚುತ್ತಿದ್ದ. ಹೀಗೆ ಅವನು ಮಾಡಿದ ಪಾಪರಾಶಿಯು ಅಲ್ಲಿ ಬೆಟ್ಟವಾಗಿ ಬೆಳೆದುಬಿಟ್ಟಿತ್ತು. ಇದಕ್ಕಿದಂತೆ ಬ್ರಹ್ಮನು ತಾನು ನೀಡಿದ್ದ ಮಗುವಿನ ಬಗ್ಗೆ ವಿಚಾರಿಸಿದ. ತಕ್ಷಣವೇ ಅವನನ್ನು ಕರೆತರುವಂತೆ ಹೇಳಿದ. ನಾರದನು ಕಾಡಿಗೆ ನಡೆದ ಅಲ್ಲಿ ಮುತ್ತುರಾಯನು ನಾರದನ ತಲೆಯನ್ನು ಕಡೆಯಲು ಮುಂದಾದನು.

ನಾರದನು ಅವನಿಗೆ ಹಿತವಚನಗಳನ್ನು ಹೇಳಿ ಅವನ ಪಾಪದ ಬಗ್ಗೆ ಅರಿವು ಮೂಡಿಸಿದನು. ಇದರಿಂದ ಪಶ್ಚಾತ್ತಾಪಗೊಂಡ ಮುತ್ತುರಾಯ ಆವನಿಗೆ ಹೋಗಿ ತಪಸ್ಸು ಮಾಡಿದನು. ಅಲ್ಲಿಯೇ ರಾಮಾಯಣವನ್ನು ಬರೆದನು. ರಾಮ, ಸೀತೆ, ಲಕ್ಷ್ಮಣ, ಹನುಮ ಹಾಗೂ ಲವಕುಶರನ್ನು ಪರಸ್ಪರ ಭೇಟಿ ಮಾಡಿಸಿದನು. ಹೀಗೆ ತಲಕಾಯಲ ಬೆಟ್ಟವು ವಾಲ್ಮೀಕಿಯು ಋಷಿಯಾಗುವ ಮುನ್ನ ಮಾಡಿದ ಪಾಪಗಳ ಬೆಟ್ಟವೆಂದು ಐತಿಹ್ಯ ಹೇಳುತ್ತದೆ. ಪುರಾಣದ ಸನ್ನಿವೇಶವನ್ನೇ ಆಧರಿಸಿ ಐತಿಹ್ಯ ರಚನೆಯಾದರೂ ಇಲ್ಲಿನ ವ್ಯಕ್ತಿ ಮುತ್ತುರಾಯನಾಗಿ ದರೋಡೆಗಳಲ್ಲಿ ನಿರತನಾಗಿದ್ದವನು ಆವನಿಯಲ್ಲಿ ವಾಲ್ಮೀಕಿ ಯಾಗುತ್ತಾನೆಂದು ಸಂಬಂಧವನ್ನು ಅಲ್ಲಿಯವರೆಗೆ ಬೆಳೆಸಿಕೊಂಡು ಹೋಗುತ್ತಾರೆ. ಇಲ್ಲಿನ ಪುಷ್ಕರಣಿ ಯೊಂದನ್ನು ಐನೂರು ವರ್ಷಗಳ ಹಿಂದೆ ತಿಮ್ಮರಾಜು ಬೊಮ್ಮರಾಜು ಎಂಬ ಪೆನುಗೊಂಡೆಯ ಪಾಳೆಯಗಾರರು ನಿರ್ಮಿಸಿದರೆಂದು ತಿಳಿದುಬರುತ್ತದೆ.

**ಗೌರೀಬಿದನೂರು** : ಹಿಂದೆ ಮಹಾಭಾರತದ ವಿದುರನು ಈ ಊರಿನಲ್ಲಿ ವಾಸವಾಗಿದ್ದನಂತೆ. ಆದ್ದರಿಂದ ಆ ಕಾಲದಲ್ಲಿ ಇದು ವಿದುರೂರು ಎಂಬ ಹೆಸರು ಪಡೆದಿತ್ತಂತೆ. ಮುಂದೆ ದಾರಿನಾಯಕನ ಪಾಳ್ಯದ ನಾಯಕನೊಬ್ಬನು ತನ್ನ ಮಗಳಿಗೆ ಅರಿಶಿಣ ಕುಂಕುಮವಾಗಿ ಈ ಊರನ್ನು ಬಳುವಳಿ ಕೊಟ್ಟ. ಅವಳ ಹೆಸರು ಗೌರಿ ಎಂದಿದ್ದಿತಂತೆ. ಆದ್ದರಿಂದ ಗೌರಿಗೆ ಕೊಟ್ಟ ವಿದುರೂರು ಗೌರೀವಿದುರೂರು ಕಾಲಾನಂತರ ಗೌರೀಬಿದನೂರು ಆಯಿತಂತೆ.

**ಊಲವಾಡಿ** : ಮಹಾಭಾರತದಲ್ಲಿ ಪ್ರಸಿದ್ಧವಾದ ಏಕಚಕ್ರಪುರವೇ ಜಿಲ್ಲೆಯ ಚಿಂತಾಮಣಿ ತಾಲೂಕಿನ ಈಗಿನ ಕೈವಾರವೆಂದು ಹೇಳುತ್ತಾರೆ. ಬಕಾಸುರನ ವಧೆಯಾದ ಭೀಮನ ಬೆಟ್ಟ ಶ್ರೇಣಿಗಳ ಮಧ್ಯದಲ್ಲಿರುವ ಊಲವಾಡಿಯ ಏಕಚಕ್ರಪುರಕ್ಕೆ 'ಹೂವಿನವಾಡಿ'ಯಾಗಿದ್ದಿತೆಂದು ಐತಿಹ್ಯವಿದೆ. ಪ್ರಸಿದ್ಧವಾದ

ಪೌರಾಣಿಕ ಘಟನೆಯ ಐತಿಹ್ಯವನ್ನು ಹೊಂದಿದ ಸ್ಥಳವೊಂದರ ಆಧಾರದ ಮೇಲೆ ರಚನೆಗೊಂಡ ಮತ್ತೊಂದು ಐತಿಹ್ಯವಾಗಿ ಈ ಸ್ಥಳನಾಮವು ಪೂರಕವಾಗುತ್ತದೆ. ಪೂವಲ್‌ವಾಡಿ ಅಥವಾ ಪೂಲವಾಡಿ ಎಂಬ ಹೆಸರುಗಳು ಈ ಊರಿನ ಪ್ರಾಚೀನ ಹೆಸರುಗಳಾಗಿದ್ದು ನಟುವ ಕಲಾವಿದರ ನೆಲೆಬೀಡಾಗಿತ್ತೆಂದು ಹೇಳಲಾಗಿದೆ. ೧೯ನೆಯ ಶತಮಾನದ ಕೊನೆಯಲ್ಲಿ ಇಲ್ಲಿ ಮತ್ತು ಇಲ್ಲಿನ ಸುತ್ತಮುತ್ತಲಿನ ಊರುಗಳಲ್ಲಿ ದೇವದಾಸಿಯರು ರಾಜನರ್ತಕಿಯರು ಮುಂತಾದ ನಟುವ ಕಲಾವಿಧೆಯರು ಇದ್ದರೆಂದು; ವಾದ್ಯ, ನರ್ತನ, ಸಂಗೀತ, ಕಲೆಗಳಿಂದ ಹೆಸರಾಗಿದ್ದರೆಂದು ತಿಳಿದುಬರುತ್ತದೆ. ಇಲ್ಲಿನ ಐತಿಹಾಸಿಕ ವೇಣುಗೋಪಾಲಸ್ವಾಮಿ ದೇವಾಲಯದಲ್ಲಿ ಇವರ ಕಲಾಪ್ರದರ್ಶನಗಳು ನಡೆಯುತ್ತಿದ್ದವು. ಪ್ರತಿವರ್ಷ ಕಾಮನ ಹುಣ್ಣಿಮೆಯಂದು ನಡೆಯುವ ರಥೋತ್ಸವ ಜಾತ್ರೆ ಈಗ ಇದರ ಸಂಕೇತವಾಗಿ ಮಾತ್ರ ಉಳಿದಿದೆ.

**ಸೀತಿ** : ೧. ಗ್ರಾಮದ ಬಳಿ ಸೀತಿ ಬೆಟ್ಟವಿದೆ. ಬೆಟ್ಟದ ಪೂರ್ವ ತಪ್ಪಲಲ್ಲಿ ಚೋಳೇಶ್ವರ ವೇಣುಗೋಪಾಲಸ್ವಾಮಿ ವೀರಭದ್ರ ಮುಂತಾದ ಶಿಥಿಲ ದೇವಾಲಯಗಳಿವೆ. ಸೀತಿ ನಡುಬೆಟ್ಟದಲ್ಲಿ ಶ್ರೀಪತೀಶ್ವರ ಮತ್ತು ಕಾಲಭೈರವ ದೇವಾಲಯಗಳು ಅಕ್ಕಪಕ್ಕದಲ್ಲಿವೆ. ವಿಷ್ಣು ಸ್ಥಾಪಿತವೆಂದೂ ಅದರಿಂದ ಶ್ರೀಪತೀಶ್ವರ ಎಂಬ ಹೆಸರು ಬಂದಿರುವುದಾಗಿಯೂ ಪ್ರತೀತಿ. ಇದರಿಂದಲೇ ಈ ಗ್ರಾಮಕ್ಕೆ ಶ್ರೀಹಟ್ಟಿ ಅಥವಾ ಶಿರಹಟ್ಟಿ ಎಂದು ಕರೆಯುತ್ತಿದ್ದು ಸೀತಿ ಆಯಿತೆಂದು ಪ್ರತೀತಿ. ಶ್ರೀಪತೀಶ್ವರ ಗರ್ಭಗುಡಿಯು ಬಲಭಾಗದಲ್ಲಿ ಮಹಿಷಮರ್ಧಿನಿ, ವಿಘ್ನೇಶ್ವರ ಮತ್ತು ವೀರಭದ್ರ ಗುಡಿಗಳೂ ಎಡಭಾಗದಲ್ಲಿ ಷಣ್ಮುಖಸ್ವಾಮಿ ಮತ್ತು ಪಾರ್ವತಿದೇವಿ ಗುಡಿಗಳೂ ಇವೆ. ಮಹಿಷಮರ್ಧಿನಿ ಗರ್ಭಗುಡಿಯ ಒಳಭಾಗದ ಬಂಡೆಯ ಮೇಲೆ ರಾಜೇಂದ್ರಚೋಳನ ಒಂದು ತಮಿಳು ಶಾಸನ (೧೦೨೪) ಇದೆ. ಕಾಲಭೈರವನ ಗುಡಿಯಲ್ಲಿರುವ ಶಾಸನಗಳಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನ (೧೧೦೮-೧೧೪೨) ಒಂದು ಶಾಸನವೂ ಇದೆ. ಕಾಲಭೈರವ ದೇವಾಲಯದ ಒಳಹೊರಗೋಡೆಯ ಮೇಲೆ ಚೋಳ, ಗಂಗ, ಹೊಯ್ಸಳ ಮತ್ತು ವಿಜಯನಗರ ರಾಜರ ಶಾಸನಗಳಿವೆ. ಈ ಶಾಸನಗಳಲ್ಲಿ ಕಾಲಭೈರವನನ್ನು ತ್ರಿಭುವನವಿಪಂಗ ಕ್ಷೇತ್ರಪಾಲಕ ಪಿಳ್ಳೆಯಾರ್ ಎಂದು ಹೆಸರಿಸಲಾಗಿದೆ. ಕಾಲಭೈರವ ಈ ಪ್ರದೇಶದ ಮೊರಸು ಒಕ್ಕಲಿಗರಿಗೆ ಮತ್ತು ರೆಡ್ಡಿಗಳಿಗೆ ಮನೆದೇವರು. ಈ ದೇವರಿಗೆ ತೋರುಬೆರಳ ಮುಂಭಾಗವನ್ನು ಕಾಣಿಕೆಯಾಗಿ ಕೊಡುವ ಪದ್ಧತಿ ಈ ಶತಮಾನದ ಪ್ರಾರಂಭದವರೆಗೂ ಇತ್ತು.

ಪುರಾಣ ಕಥೆಯಂತೆ ಭಸ್ಮಾಸುರ ಶಿವನಿಂದ ವರವನ್ನು ಪಡೆದು ಆತನ ಮೇಲೆಯೇ ಪ್ರಯೋಗಿಸಲು ಪ್ರಯತ್ನಿಸಿದಾಗ ಶಿವ ಸೀತಿ ಬೆಟ್ಟದ ಮೇಲ್ಭಾಗದಲ್ಲಿದ್ದ ಗೌತಮ ಮುನಿಯ ಮೊರೆಹೊಕ್ಕು ಮುನಿಯ ಸಲಹೆಯಂತೆ ಶ್ರೀಪತೀಶ್ವರ ದೇವಾಲಯದ ಗುಹೆಯಲ್ಲಿ ಅಡಗಿಕೊಂಡನಂತೆ. ಭಸ್ಮಾಸುರ ಬೆಟ್ಟದ ಪಕ್ಕದಲ್ಲಿಯೇ ಉಳುತ್ತಿದ್ದ ರೈತನನ್ನು ಕೇಳಿದಾಗ ರೈತ ಶಿವ ಹೋದ ದಾರಿಯನ್ನು ತನ್ನ ತೋರುಬೆರಳುನಿಂದ

ತೋರಿಸಿದನಂತೆ. ಈ ಮಧ್ಯೆ ವಿಷ್ಣು ಮೋಹಿನಿ ರೂಪದಲ್ಲಿ ಬಂದು ಭಸ್ಮಾಸುರನನ್ನು ಸೀತಿ ಬೆಟ್ಟದ ದಕ್ಷಿಣಕ್ಕಿರುವ ಮತ್ತೊಂದು ದೊಡ್ಡ ಬೆಟ್ಟಕ್ಕೆ ಕರೆದೊಯ್ದು ಭಸ್ಮಾಸುರ ತನ್ನಿಂದಲೇ ತಾನು ಭಸ್ಮವಾಗುವಂತೆ ಮಾಡಿದ. ಆ ಬೆಟ್ಟವನ್ನೇ ಭಸ್ಮಾಸುರ ಬೆಟ್ಟವೆನ್ನುವರು. ಅನಂತರ ಶಿವ ವಿಷ್ಣುವನ್ನು ಯಾವ ಆಕಾರದಲ್ಲಿ ನೀನು ಭಸ್ಮಾಸುರನನ್ನು ವಂಚಿಸಿದೆ ಎಂದು ಕೇಳಲು ಆಗ ವಿಷ್ಣು ಮೋಹಿನಿ ವೇಷದಲ್ಲಿ ಕಾಣಿಸಿಕೊಂಡನೆಂತಲೂ ಶಿವ ಮೋಹಿನಿಯಲ್ಲಿ ವ್ಯಾಮೋಹಗೊಳ್ಳಲು ಕಾಲಭೈರವ ಹುಟ್ಟಿದ ನೆಂದೂ ಪುರಾಣವಿದೆ. ಭಸ್ಮಾಸುರನಿಗೆ ದಾರಿ ತೋರಿದ ತಪ್ಪಿನಿಂದಾಗಿ ಅವನ ವಂಶಜರು ತೋರುಬೆರಳಿನ ಮುಂಭಾಗವನ್ನು ಕಾಲಭೈರವನಿಗೆ ಕಾಣಿಕೆಯಾಗಿ ಕೊಡುತ್ತ ಬಂದರೆಂದು ಐತಿಹ್ಯ. ಸರ್ಕಾರ ಈ ಪದ್ಧತಿಯನ್ನು ನಿಷೇಧಿಸಿತು. ಈಗ ಇದನ್ನು ಸಾಂಕೇತಿಕವಾಗಿ ಆಚರಿಸುತ್ತ ಬೆರಳಿಗೆ ಸುತ್ತಿದ ಹೂದಂಡೆಯನ್ನು ದೇವರಿಗೆ ಅರ್ಪಿಸುತ್ತಾರೆ.

## ಸ್ಥಳನಾಮಗಳಲ್ಲಿ ಅರಸರ ನೆನಪುಗಳು-ಐತಿಹ್ಯ ಸ್ಥಳನಾಮಗಳ ಸಂಬಂಧ

ಸ್ಥಳನಾಮಗಳಿಗೆ ಸಂಬಂಧಿಸಿದಂತೆ ರಾಜರ ಮತ್ತು ವ್ಯಕ್ತಿಗಳ ಹೆಸರುಗಳು ಪ್ರಧಾನವಾಗಿ ಕಂಡುಬರುತ್ತವೆ. ಆಳ್ವಿಕೆ ನಡೆಸಿದ ರಾಜಮನೆತನಗಳು ಪಾಳೆಯಗಾರರ ಹೆಸರುಗಳು ಸ್ಥಳನಾಮಗಳಲ್ಲಿ ಉಳಿದು ಬಂದಿರುತ್ತವೆ. ಗಂಗರ ಆಳ್ವಿಕೆಯನ್ನು ನೆಲೆಯಾಗಿಸಿರುವ ಗಂಗಸಂದ್ರ ಹಾಗೆಯೇ ಗಂಗ ವಂಶದ ಕೊನೆಯ ದೊರೆಯಾದ ಮುಮ್ಮಡಿ ಮಾರಸಿಂಹಗೌಡನ ಹೆಸರಿನಲ್ಲಿ ಮಾರಗೊಂಡನಹಳ್ಳಿ ಮಾರಗಾನಹಳ್ಳಿ, ಮಾನಗೊಂಡನಹಳ್ಳಿ, ಮೋಟಗಾನಹಳ್ಳಿ, ಮೋಟಗೌಡನಹಳ್ಳಿ, ತಿಪ್ಪಗಾನಹಳ್ಳಿ/ಕೆರೆ ತಿಪ್ಪಗೊಂಡನಹಳ್ಳಿ ಇತ್ಯಾದಿ ಗೌಡ ನಾಯಕರ ಹೆಸರಿನ ಊರುಗಳು ಇದ್ದೇ ಇರುತ್ತವೆ.

**ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರಗಳು** : ಚಿಕ್ಕಬಳ್ಳಾಪುರ ಕೋಲಾರ ಜಿಲ್ಲೆಯ ತಾಲೂಕು ಕೇಂದ್ರ. ದೊಡ್ಡಬಳ್ಳಾಪುರ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಾಲೂಕು ಕೇಂದ್ರ. ವಿಸ್ತಾರದಲ್ಲಿ ಇವೆರಡನ್ನು ಚಿಕ್ಕದಾದ್ದು ಚಿಕ್ಕಬಳ್ಳಾಪುರ, ದೊಡ್ಡದಾದ್ದು ದೊಡ್ಡಬಳ್ಳಾಪುರವೆಂದು ಕರೆದಿರುವ ಸಾಧ್ಯತೆಯಿದೆ. **ಐತಿಹ್ಯಗಳು** : ೧. ಯೋಗಿಯೊಬ್ಬನು ಈ ಸ್ಥಳದಲ್ಲಿ ತಪಸ್ಸು ಮಾಡುತ್ತಿದ್ದ. ಆಗ ಅವನ ಸುತ್ತಲು ಹುತ್ತಗಳು ಬೆಳೆದಿದ್ದವು. ಹಸುವೊಂದು ದಿನಾಲೂ ಹುತ್ತದೊಳಕ್ಕೆ ಹಾಲು ಕರೆಯುತ್ತಿತ್ತು. ದೊಡ್ಡಬಳ್ಳದಷ್ಟು ಹಾಲು ಕರೆದು ಹುತ್ತದ ಪ್ರದೇಶ ದೊಡ್ಡಬಳ್ಳಾಪುರವಾಯಿತು. ಚಿಕ್ಕಬಳ್ಳದಷ್ಟು ಹಾಲು ಕರೆದ ಹುತ್ತದ ಪ್ರದೇಶ ಚಿಕ್ಕಬಳ್ಳಾಪುರವಾಯಿತು. **೨. ದೊಡ್ಡಬಳ್ಳ-ಚಿಕ್ಕಬಳ್ಳರ ನೆನಪಿಗಾಗಿ ಹೆಸರಿಸಿದ ಪ್ರದೇಶಗಳು ಎಂಬ ಐತಿಹ್ಯ** : ಹೊಯ್ಸಳ ವಂಶದ ಬಲ್ಲಾಳರಿಗೆ ಸಂಬಂಧಿಸಿದ ಪ್ರದೇಶಗಳು ಹೊಯ್ಸಳ ದೊರೆ ವಿಷ್ಣುವರ್ಧನನ ಅಣ್ಣನ ಹೆಸರು ಬಲ್ಲಾಳ. ಹಾಗೂ ಶಾಂತಲೆ ವಿಷ್ಣುವರ್ಧನರ ಮಗಳು ಹರಿಯಲೆ,

ಮಗನೂ ಬಲ್ಲಾಳನೆಂಬ ಹೆಸರಿನವನಿದ್ದ. ಆದ್ದರಿಂದ ವಿಷ್ಣುವರ್ಧನನ ಅಣ್ಣನನ್ನು ಒಂದನೇ ಬಲ್ಲಾಳ. ಮಗನನ್ನು ಚಿಕ್ಕಬಲ್ಲಾಳನೆಂದು ಗುರ್ತಿಸಿಕೊಂಡರು. ಹರಿಯಲೆಯ ಗಂಡನ ಹೆಸರು ಭರತದಂಡನಾಯಕನು. ವಿಷ್ಣುವರ್ಧನನು ಶ್ರೀವೈಷ್ಣವ ಯುವತಿ ಲಕ್ಷ್ಮಿಯನ್ನು ಮದುವೆಯಾಗುವಾಗ ಆಕೆಯ ಮಗನಿಗೆ ಪಟ್ಟುಕಟ್ಟುವುದಾಗಿ ಮಾತು ಕೊಟ್ಟಿದ್ದರಿಂದ ಶಾಂತಲೆಯ ಮಗ ಚಿಕ್ಕಬಲ್ಲಾಳನಿಗೆ ಪಟ್ಟಕಟ್ಟಲಿಲ್ಲ. ಇದರಿಂದ ಒಂದು ಆಂತರಿಕ ಕಲಹವೇ ನಡೆದು ಹೋಯಿತು. ಅದರಲ್ಲಿ ಚಿಕ್ಕಬಲ್ಲಾಳ ಕೊಲ್ಲಲ್ಪಟ್ಟ. ಹಾಗೂ ಶಾಂತಲೆಯ ಅಳಿಯ (ಮಗಳು ಹರಿಯಲೆಯ ಗಂಡ) ಭರತದಂಡನಾಯಕನೂ ಸಾವನ್ನಪ್ಪಿದ್ದ. ಹರಿಯಾಲಾ ದೇವಿಗೆ ಮಕ್ಕಳಿಲ್ಲದ ಕಾರಣ ಮೈದುನ ದೇವರಸಗೌಡನನ್ನು ದತ್ತು ತೆಗೆದುಕೊಂಡು ಅವನಿಗೆ ಅಧಿಕಾರವನ್ನು ವಹಿಸಿದಳು.

ಕಾಲಾನಂತರ ದೇವರಸನ ವಂಶಸ್ಥನಾದ ಕೆಂಪೇಗೌಡನು ಯಲಹಂಕ ನಾಡಪ್ರಭುವಾಗಿ ಪ್ರಸಿದ್ಧನಾದನು. ಅವನು ತನ್ನ ಪೂರ್ವಿಕರ ನೆನಪಿಗಾಗಿ ದೇವರಸನಹಳ್ಳಿ, ದೊಡ್ಡಬಲ್ಲಾಳಪುರ ಚಿಕ್ಕಬಲ್ಲಾಳಪುರಗಳನ್ನು ಹೆಸರಿಸಿದನೆಂದು ತಿಳಿದುಬರುತ್ತದೆ. ಅವು ಈಗ ದೇವನಹಳ್ಳಿ ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರಗಳಾಗಿವೆ. ಪ್ರಸ್ತುತ ಚಿಕ್ಕಬಳ್ಳಾಪುರವು ಕೋಲಾರ ಜಿಲ್ಲೆಗೆ ಉಳಿದೆರಡೂ ಪಟ್ಟಣಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಗೂ ಸೇರಿವೆ. ಮೊದಲಿಗೆ ಚಿಕ್ಕಬಳ್ಳಾಪುರವನ್ನು ಕೋಡಿಮಂಚನಹಳ್ಳಿ ಎಂದು ಕರೆಯಲಾಗುತ್ತಿತ್ತೆಂದೂ ಆವತಿಯ ಪಾಳೆಗಾರ ಮಲ್ಲಭೈರೇಗೌಡನು ಇದನ್ನು ೧೪೭೮ರಲ್ಲಿ ಸ್ಥಾಪಿಸದನೆಂದೂ ಉಲ್ಲೇಖಗಳಿವೆ. (ಕರ್ನಾಟಕ ರಾಜ್ಯ ಗೆಜೆಟಿಯರ್, ಪು.೫೦೬)

ಆವುತಿ : ಕೆಂಪೇಗೌಡನ ವಂಶಸ್ಥರನ್ನು ಆವುತಿ ನಾಡಪ್ರಭುಗಳು ಎನ್ನುತ್ತಾರೆ. ಇದನ್ನು ಕೆಂಪೇಗೌಡನ ವಂಶಸ್ಥರು ಮೊದಲು ನೆಲೆಸಿದ್ದ ಸ್ಥಳವೆಂದು ಹೇಳುತ್ತಾರೆ. "ಯಲಹಂಕ ವಂಶದ ಮೊದಲ ಗೌಡ ಈ ಭಾಗದಲ್ಲಿ ನೆಲೆಸಿದ್ದಾಗ ಮನೆಯ ಮುಂದಿನ ಹತ್ತಿಯ ಮರಕ್ಕೆ ಜೋಲಿ ಕಟ್ಟಿ ತಮ್ಮ ಮಗುವನ್ನು ಮಲಗಿಸಿ ಕೆಲಸದಲ್ಲಿ ನಿರತರಾದರು. ಬಿಸಿಲೇರಿ ಮಲಗಿದ್ದ ಮಗುವಿನ ಮುಖದ ಮೇಲೆ ಬಿಸಿಲು ಬೀಳಲಾರಂಭಿಸಿತು. ಆಗ ಸರ್ಪವೊಂದು ಹತ್ತಿಯ ಮರದ ಮೇಲೇರಿ ಮಗುವಿನ ಮುಖದ ಮೇಲೆ ಬಿಸಿಲು ಬೀಳದಂತೆ ಹೆಡೆ ಬಿಚ್ಚಿತು. ಹಾವು ಹತ್ತಿಯ ಮರವನ್ನು ಹತ್ತಿದುದರಿಂದ ಹಾವುಹತ್ತಿ- ಹಾವತ್ತಿ- ಆವುತಿ ಆಯಿತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ."

ಯಲಹಂಕ ಪ್ರಭುಗಳ ರಾಜ್ಯ ಸ್ಥಾಪನೆಯ ಕಾಲ ಹದಿನಾಲ್ಕನೆಯ ಶತಮಾನದ್ದಿರಬಹುದು. ಆದರೆ ೮,೭ನೇ ಶತಮಾನಗಳಲ್ಲಿಯೇ 'ಆವುತಿ' ಹೆಸರು ಪ್ರಚಲಿತವಿದೆ. ಈ ಭಾಗದ ಒಕ್ಕಲಿಗರು ತಮ್ಮ ಮೊದಲ ಹೆಣ್ಣುಮಗುವನ್ನು ಭೈರವನಿಗೆ ಆಹುತಿ ಕೊಡುತ್ತಿದ್ದರು. ಹೀಗೆ ಆಹುತಿ, ಆಹ್ತಿ, ಆವುತಿ ಎಂಬುದಾಗಿ ಆಗಿರಬಹುದು. ಈ ನಗರದಿಂದ ಕೆಂಪೇಗೌಡನ ವಂಶದ ಎರಡನೆಯ ಪ್ರಖ್ಯಾತ ದೊರೆ

ಜಯಗೌಡ ಆಳಿದನು. ಇವರಿಗೆ ಆವತಿನಾಡ ಪ್ರಭುಗಳೆಂದು ಹೆಸರೂ ಉಂಟು. ಈಗಲೂ ಸಿಟ್ಟಾದ ತಾಯಿ ನಿನ್ನ ಆವ್ತಿಕೊಡ ಎಂದು ಬೈಯುವ ಪದ್ಧತಿ ಮಾತಿನಲ್ಲಿ ಉಳಿದಿದೆ. ಈ ದುಷ್ಟ ಪದ್ಧತಿಯನ್ನು ತಪ್ಪಿಸಿದವನು ಒಂದನೆಯ ಭೈರೇಗೌಡ. ಆವುತಿಯು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿಗೆ ಸೇರುತ್ತದೆಯಾದರೂ ಚಾರಿತ್ರಿಕವಾಗಿ ಕೋಲಾರ ಜಿಲ್ಲೆಯ ಪ್ರದೇಶವು ಆವುತಿನಾಡ ಪ್ರಭುಗಳ ಆಡಳಿತಕ್ಕೆ ಒಳಪಟ್ಟಿತ್ತು. ಆದ್ದರಿಂದ ಕೋಲಾರ ಜಿಲ್ಲೆಯ ಮೊರಸು ಒಕ್ಕಲಿಗರ ಸಾಂಸ್ಕೃತಿಕ ಅನನ್ಯತೆಯು ಪ್ರಧಾನವೆನಿಸುತ್ತದೆ.

**ಮಾಲೂರು :** ಕೋಲಾರ ಜಿಲ್ಲೆಯ ತಾಲೂಕುಗಳಲ್ಲಿ ಮಾಲೂರಿಗೆ ವಿಶೇಷ ಮಹತ್ವವಿದೆ. ಏಕೆಂದರೆ ಇದು ತಮಿಳುನಾಡು ಮತ್ತು ಆಂಧ್ರಪ್ರದೇಶದ ಗಡಿಗಳನ್ನು ಹೊಂದಿದೆ. ಈ ಮೂಲಕ ತನ್ನ ಕನ್ನಡ ನೆಲದ ಸಂಸ್ಕೃತಿಯೊಂದಿಗೆ ನೆರೆರಾಜ್ಯಗಳ ಸಾಂಸ್ಕೃತಿಕ ವಿನಿಮಯಗಳನ್ನು ಬೆಸೆದುಕೊಂಡಿದೆ. ಶಿವಾರ ಪಟ್ಟಣದ ಶಿಲ್ಪಕಲೆ ಮತ್ತು ಚಿಕ್ಕತಿರುಪತಿಯ ಆರಾಧನಾ ಕ್ಷೇತ್ರದ ಹಿರಿಮೆಗೆ ಮಾಲೂರು ತಾಲೂಕು ನೆಲೆಯಾಗಿದೆ. ಮಾಲೂರಿನ ಹೆಸರನ್ನು ಕುರಿತ ಹಿನ್ನೆಲೆ/ಅಭಿಪ್ರಾಯಗಳು ಐತಿಹ್ಯಗಳಿಂದ ವ್ಯಕ್ತವಾಗುತ್ತವೆ. ಮಾಲೂರು ಮೊದಲಿಗೆ ಮಲ್ಲಿಕಾಪುರವೆಂದು ಕರೆಯಲ್ಪಡುತ್ತಿತ್ತು. ಮಲ್ಲಿಗೆಯನ್ನು ಹೆಚ್ಚಾಗಿ ಬೆಳೆಯುತ್ತಿದ್ದು ದರಿಂದ ಈ ಹೆಸರು ಬಂದಿತ್ತು. ಮಲ್ಲಿಗೆಯ ಮಾಲೆಗಳನ್ನು ಮಾರುತ್ತಿದ್ದುರಿಂದ ಮಾಲೆಗಳ ಊರು ಮಾಲೂರು ಎಂದು ಹೆಸರಾಯಿತು. ಮತ್ತೊಂದು ಅಭಿಪ್ರಾಯದಂತೆ ಮಾಲರು ಅಂದರೆ ಹೊಲೆಯರು ಹೆಚ್ಚಾಗಿ ವಾಸಿಸುತ್ತಿದ್ದ ಊರು, ಮಾಲೂರು ಎಂಬ ಹೆಸರನ್ನು ಪಡೆಯಿತು. ಮಲ್ಲಿಗೆ ಹೆಚ್ಚಾಗಿ ಬೆಳೆಯುತ್ತಿದ್ದುದರಿಂದ ಮಲ್ಲಿಕಾಪುರವೆಂದು ಹೆಸರಾಗಿದ್ದು ಮಾಲರು ಹೆಚ್ಚಾಗಿ ನೆಲೆಸಿರುವ ನೆಲೆಯ ಮೂಲಕ ಮಾಲೂರು ಎಂದು ಕರೆದಿರುವ ಸಾಧ್ಯತೆ.

**ಚಾರಿತ್ರಿಕ ಹಿನ್ನೆಲೆ :** ಕೋಲಾರ ಜಿಲ್ಲೆಯ ಗಂಗರು, ಚೋಳರು, ಹೊಯ್ಸಳರು, ವಿಜಯನಗರ ಅರಸರು, ಬಿಜಾಪುರದ ಸುಲ್ತಾನರು, ಮರಾಠರು, ಬ್ರಿಟಿಷರು, ಆ ಮೂಲಕ ಮೈಸೂರು ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಹೀಗಾಗಿ ಈ ಆಳ್ವಿಕೆಗಳು ಮಾಲೂರಿನ ಪ್ರದೇಶಕ್ಕೂ ಸಲ್ಲುತ್ತವೆ. ಆದರೆ, ಮಾಲೂರಿಗೆ ತನ್ನದೇ ಆದ ಚರಿತ್ರೆಯೊಂದು ಗಟ್ಟಿಗೊಂಡಿದೆ. ವಿಜಯನಗರ ಆಳ್ವಿಕೆಯ ನಂತರ ಚಿಕ್ಕರಾಯನೆಂಬ ಬಿರುದನ್ನು ಪಡೆದಿದ್ದ ಹೊಸಕೋಟೆಯ ತಮ್ಮೇಗೌಡನ ಅಧಿಪತ್ಯಕ್ಕೆ ಮಾಲೂರು ಸೇರಿತ್ತು. ಕ್ರಿ.ಶ. ೧೬೩೮ರಲ್ಲಿ ಶಿವಾಜಿಯ ತಂದೆ ಷಹಜಿಗೆ ಸೇರಿದ ಜಹಾಗೀರಾಗಿತ್ತು. ನಂತರ ಇದು ಅನೇಕ ಸುಬೇದಾರರ ಸಂತತಿಯವರಿಗೆ ಸೇರಿತ್ತು. ಅನಂತರ ಮರಾಠರ ವಶವಾಗಿ ರಜಪೂತ ಜಮೀನ್ದಾರ ಹಿರ್ದೇರಾಂಸಿಂಗನಿಗೆ ಸೇರಿತ್ತು. ಈ ಜಮೀನ್ದಾರನು ಮಾಲೂರು ಪಟ್ಟಣಕ್ಕೆ, ಹೊಸ ಬಡಾವಣೆಗಳನ್ನು ಸೇರಿಸಿ ಮಾಲೂರು ಎಂಬ ಹೆಸರು ಕೊಟ್ಟನೆಂಬ ಪ್ರತೀತಿ ಇದೆ. ಅನಂತರ ಹೈದರಾಲಿಯು ಪ್ರಬಲಗೊಂಡು ಪ್ರಾಂತೀಯ

ಪಾಳೆಗಾರರನ್ನು ಮಟ್ಟಹಾಕಿ ಮೈಸೂರು ಸಂಸ್ಥಾನಕ್ಕೆ ಸೇರಿಕೊಂಡನು. ಅಲ್ಲಿಯವರೆಗೆ ಹಿರ್ದೇರಾಂಸಿಂಗನ ವಶದಲ್ಲಿಯೇ ಇದ್ದ ಮಾಲೂರು ಸುವ್ಯವಸ್ಥಿತ ಹಾಗೂ ದಕ್ಷ ಆಡಳಿತವನ್ನು ಕಂಡಿತು. ಈಗಲೂ ಹಿರ್ದೇರಾಂಸಿಂಗನ ವಂಶಸ್ಥರೆಂಬುವವರು ಮಾಲೂರಿನ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಮೈಸೂರು ಸಂಸ್ಥಾನಕ್ಕೆ ಈ ಊರು ಸೇರಿದ್ದರ ಸೂಚಕವಾಗಿ ಕೋಟೆಯ ಅವಶೇಷಗಳು ಕಂಡುಬರುತ್ತದೆ. ದಿವಾನ್ ಪೂರ್ಣಯ್ಯನವರ ಅನ್ನಛತ್ರ, ತಂಗುದಾಣಗಳಿವೆ. ಅಲ್ಲದೆ ಭೂದಾನ ಪತ್ರಗಳು, ಮುದ್ರೆ ಮುಂತಾದವುಗಳ ಲಭ್ಯವು ಸಾಕ್ಷಿಪುರಾವೆಗಳಿಗೆ ಎಟಕುತ್ತವೆ.

**ಐತಿಹ್ಯ-ಸ್ಥಳನಾಮಗಳ ಸಂಬಂಧ :** ಒಂದು ನಿರ್ದಿಷ್ಟ ಪ್ರದೇಶದ ಅಥವಾ ಸಂಚಾರಿ ಸ್ವರೂಪದ ವಿಶಿಷ್ಟ ಸ್ವರೂಪ ಕಥಾನಕಗಳೇ ಐತಿಹ್ಯಗಳು. ವ್ಯಕ್ತಿ ಘಟನೆ ಸ್ಥಳ ಸಂಬಂಧ ಪ್ರಸಂಗಗಳನ್ನು ಸಾಂಪ್ರದಾಯಿಕ ಆಧಾರದ ಮೂಲವಸ್ತುಗಳೊಡನೆ ಬೆಸೆದು ನಿಜಾಂಶದ ಆಧಾರದ ಮೇಲೆ ಸಾಬೀತಾಗಿದೆಯೆಂದು ಪರಿಭಾವಿತವಾಗುವ ಸಂಕರ್ತಗಳಿವು. ಇವು ಬೆಟ್ಟ ಗುಡ್ಡ, ನದಿ, ಕಣಿವೆ ಮುಂತಾದ ಸ್ಥಳಗಳಿಗೆ ಅನ್ವಯವಾಗಿ ಇಲ್ಲವೇ ಅನೇಕ ವ್ಯಕ್ತಿಗಳ ಹೆಸರಿಸಿ (ಸಾಧನೆಗೆ) ಆರೋಪಿತವಾಗಿರುತ್ತದೆ. ಸಾಂಪ್ರದಾಯಿಕ ಆಧಾರಗಳನ್ನೊಳಗೊಂಡಿರುವುದರಿಂದ ನೈಜ ಘಟನೆಗಳೆಂಬಂತೆ ನಿರೂಪಿತವಾಗುತ್ತದೆ. ಇವು ಸಂಪೂರ್ಣ ಕಲ್ಪಿತವೂ ಅಲ್ಲ, ಪರಿಪೂರ್ಣ ವಾಸ್ತವವೂ ಅಲ್ಲವೆಂಬುದರ ನಡುವೆ ಕೆಲವು ಚಾರಿತ್ರಿಕ ಅಂಶಗಳನ್ನು ತಮ್ಮಲ್ಲಿ ಅಡಗಿಸಿಕೊಂಡಿರುತ್ತವೆ. ಸ್ಥಳನಾಮಗಳಿಗೆ ಸಂಬಂಧಿಸಿದಂತೆ ಸ್ಥಳೀಯ ಐತಿಹ್ಯಗಳು ಸ್ಥಳ ವೈಶಿಷ್ಟ್ಯವನ್ನು ಆಕರ್ಷಕವಾಗಿ ಕಟ್ಟಿಕೊಡುತ್ತವೆ. ಆಯಾ ಸ್ಥಳಕ್ಕೆ ಬದ್ಧವಾದ, ಪ್ರಾದೇಶಿಕವಾಗಿ ಹರಡಿ ವ್ಯಾಪಿಸಿಕೊಂಡಿರುವ ಆಚರಣೆಗಳು, ಸಂಪ್ರದಾಯಗಳು, ನಂಬಿಕೆಗಳು ಇತ್ಯಾದಿಗಳ ಬಗ್ಗೆ ಬೆಳಕು ಚೆಲ್ಲುವ ಕುರುಹುಗಳು ಈ ಐತಿಹ್ಯಗಳಲ್ಲಿವೆ. ಸ್ಥಳನಾಮಗಳಿಗೆ ಸಂಬಂಧಿಸಿದ ಕೆಲವು ಐತಿಹ್ಯಗಳಲ್ಲಿ ನಿಜವಾದ ನಿಷ್ಪತ್ತಿ ದೊರೆಯದೆಯೂ ಇರಬಹುದು. ಇಂಥಲ್ಲಿ ಕಾರ್ಯಕಾರಣ ಸಂಬಂಧವನ್ನು ಬೆಸೆಯುವ ಕಥೆಗಳು ಸೃಷ್ಟಿಯಾಗಿರುತ್ತವೆ. ಅವು ಪುರಾಣದ ಘಟನೆಯೊಂದಿಗ ಅನ್ವಯವಾಗುತ್ತವೆ. ಇಲ್ಲವೇ ನಿಸರ್ಗದ ಕುತೂಹಲಗಳಿಗೆ ಕಂಡುಕೊಂಡ ಕಾರಣವಾಗುತ್ತವೆ. ಏನೇ ಆದರೂ ಹೀಗೆ ನಡೆದಿದೆ ಎಂಬ ಇತಿಹಾಸದ ಶೋಧಕ್ಕೆ ಐತಿಹ್ಯಗಳು ಆಕರಗಳಾಗುತ್ತವೆಯೆಂಬುದನ್ನು ಸ್ಥಳನಾಮಗಳ ಹಿನ್ನೆಲೆಯಲ್ಲಿ ದೃಢಪಡಿಸಬಹುದು.

ಸ್ಥಳನಾಮ ಸೂಚಕ ಐತಿಹ್ಯಗಳಲ್ಲಿ ಹಲವು ಪ್ರಕೃತಿಜನ್ಯ ವಿಸ್ಮಯಗಳಿಗೆ ಪ್ರಕೃತಿಯಿಂದ ಸಂಸ್ಕೃತಿ ರೂಪಿತವಾದ ಬಗ್ಗೆ ನಿಲುವುಗಳನ್ನು ನೀಡುತ್ತವೆ. ನಿಸರ್ಗದ ಅನೇಕ ವಸ್ತುವಿಶೇಷಗಳು ಐತಿಹ್ಯ ರಚನೆಗೆ ಆಧಾರವಾಗುತ್ತವೆ. ಆಯಾ ಪರಿಸರದ ವೈಶಿಷ್ಟ್ಯ ಅಥವಾ ಅದ್ಭುತವೆನಿಸುವ ಅಸಾಮಾನ್ಯತ್ವ ಇಂಥ ಐತಿಹ್ಯಗಳ ತಿರುಳು ಆಗಿರುತ್ತದೆ. ಆದ್ದರಿಂದ ಸ್ಥಳನಾಮ ಸೂಚಕಕ್ಕೆ ಸಂಬಂಧಿಸಿದ ವ್ಯವಸ್ಥಿತ

ಐತಿಹ್ಯಗಳಲ್ಲಿ ರಂಜನೀಯವಾಗಿ ವರ್ಣಿತವಾಗುತ್ತದೆ. ಸ್ಥಳನಾಮಸಂಬಂಧಿ ಐತಿಹ್ಯಗಳು ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗಿರುತ್ತವೆ. ಸ್ಥಳೀಕರಣದ ಗುಣ ಇಂಥ ಐತಿಹ್ಯಗಳ ಲಕ್ಷಣ. ಆದ್ದರಿಂದ ಇವುಗಳಿಗೆ ಸ್ಥಳೀಯವಾದ ವಿಶಿಷ್ಟ ಶೈಲಿ ಲಭ್ಯವಾಗಿರುತ್ತದೆ ಸ್ಥಳದಿಂದ ಸ್ಥಳಕ್ಕೆ ಐತಿಹ್ಯದ ಸ್ವರೂಪದಲ್ಲಿ ಬದಲಾವಣೆಗಳಿರುತ್ತವೆ. ಸ್ಥಳಕ್ಕೆ ಸಂಬಂಧಿಸಿದ ಕಾಲ ಮತ್ತು ವ್ಯಕ್ತಿಗಳೊಂದಿಗೆ ಸೂಕ್ಷ್ಮ ಸಂಬಂಧ ಬೆಸೆದುಕೊಂಡಿರುತ್ತದೆ. ನಿರೂಪಕನು ಐತಿಹ್ಯದ ಸಮರ್ಥನೆಗೆ ನೀಡುವ ಭೌತಿಕ ಆಧಾರವು ನಿರೂಪಣೆಯನ್ನು ಸಾಬೀತುಪಡಿಸುವ ವೈಜ್ಞಾನಿಕ ಕಾರಣವೂ ಆಗಿರಬಹುದು ಅಥವಾ ಸಂಬಂಧವೇ ಇಲ್ಲದ ಸುಸಂಬದ್ಧ ತರ್ಕವೂ ಆಗಿರಬಹುದು. ಸತ್ಯ ಅಸತ್ಯಗಳಿಗಿಂತ ನಂಬಿಕೆ ಮುಖ್ಯವೆನಿಸುತ್ತದೆ. ಈ ಕಾರಣಕ್ಕಾಗಿಯೇ ನಿರೂಪಣೆಗೆ ನೀಡುವ ಆಧಾರಗಳು ಅಡಚಣೆಗಳಿಲ್ಲದೆ ಹೊಂದಿಕೊಂಡಿರುತ್ತದೆ. ಸ್ಥಳನಾಮ ಸಂಬಂಧಿ ಐತಿಹ್ಯಗಳಲ್ಲಿ ಸ್ಥಳ ಹಾಗೂ ಅಲ್ಲಿನ ಸಮಾಜದ ಬಗೆಗೆ ಇರುವ ಪರಂಪರಾಗತ ಅಭಿಮಾನ, ತಿಳುವಳಿಕೆಗಳು ವ್ಯಕ್ತವಾಗುತ್ತವೆ. ಸ್ಥಳನಾಮವನ್ನು ಸಮರ್ಥಿಸುವ ನಿರುಕ್ತಿ, ಕಥೆ, ಪುರಾಣಗಳು ಭೌತಿಕ ಕಸರತ್ತುಗಳೆನಿಸುವುದಿಲ್ಲ. ಏಕೆಂದರೆ ಯಾವುದೇ ಸಮುದಾಯ ಶಿಷ್ಟ ಜನಪದಗಳ ಚೌಕಟ್ಟಿನ ಆಚೆಗೆ ತನ್ನದೇ ಆದ ಕಲ್ಪನಾ ಪ್ರತಿಭೆಯನ್ನು ಹೊಂದಿರುತ್ತದೆ. ಸುತ್ತಮುತ್ತಲಿನ ಪರಿಸರದ ಬಗೆಗೆ ಅಗಾಧವಾದ ಪ್ರಕೃತಿಯ ಸಾಮರ್ಥ್ಯದ ಬಗ್ಗೆ ಸೃಷ್ಟಿ ಚೈತನ್ಯದ ಹಿಂದಿರುವ ಶಕ್ತಿಯ ಕುರಿತು ಚಿಂತಿಸುವಾಗ ತಮ್ಮ ಕಲ್ಪನೆಗೆ ಹೊಳೆದಂತೆ ಸ್ವರ್ಗ-ಮೃತ್ಯು-ಪಾತಾಳಗಳು ರೂಪುಗೊಳ್ಳುತ್ತವೆ. ಅನುಭವ ಸಹಜವಾದ ಘಟನೆ ಯೊಂದಿಗೆ ಅನುಭವರಹಿತವಾದ ಉತ್ಪ್ರೇಕ್ಷೆಗಳು ಸೇರಿಕೊಳ್ಳುವುದುಂಟು. ಹೀಗೆ ನಡೆಯಿತೆಂದು ಹೇಳಲಾದ ಘಟನೆಗಳನ್ನು ಒಳಗೊಂಡು ಅವುಗಳ ಸುತ್ತ ಹೆಣೆದುಕೊಳ್ಳುವ ಕಥೆಗಳೇ ಐತಿಹ್ಯಗಳು. ಆದ್ದರಿಂದ ಐತಿಹ್ಯಗಳನ್ನು ಸುಳ್ಳಿನ ಕಂತೆಗಳೆಂದು ತಳ್ಳಿಹಾಕುವಂತಿಲ್ಲ. ಸಂಸ್ಕೃತಿಗೆ ಸಂಬಂಧಿಸಿದ ಯಾವುದೋ ಅಂಶ ಇದ್ದೇ ಇರುತ್ತದೆ.

ಐತಿಹ್ಯಗಳಿಂದ ಸ್ಥಳನಾಮಗಳ ಇತಿಹಾಸದ ಸುಳಿವುಗಳನ್ನು ತಿಳಿಯಬಹುದು. ಏಕೆಂದರೆ ಐತಿಹ್ಯವು ಇತಿಹಾಸಕ್ಕೆ ಸಮೀಪವರ್ತಿಯಾಗಿರುತ್ತದೆ. ಇತಿಹಾಸ ನಿರ್ಮಿಸಿದಂತೆ ಐತಿಹ್ಯಕ್ಕೂ ಭೌತಿಕ ಆಧಾರವೊಂದನ್ನು ಅದರ ಮೂಲ ಸ್ವರೂಪದಲ್ಲಿಯೇ ಹಿಡಿದಿಟ್ಟುಕೊಳ್ಳಲಾಗುತ್ತದೆ. ಇಲ್ಲಿ ಭಾವುಕತೆಗೆ ಪ್ರಾಧಾನ್ಯತೆ ಇದ್ದರೂ ಸೃಜನಾತ್ಮಕ ಕಲ್ಪನೆಗಳೊಂದಿಗೆ ಚಾರಿತ್ರಿಕ ಸಂಗತಿಯೊಂದು ಪಡೆಯುವ ವಿಶಿಷ್ಟ ರೂಪಗಳನ್ನು ಸ್ಥಳ ನಾಮಗಳ ಅಧ್ಯಯನದಲ್ಲಿ ಗಮನಿಸಬಹುದು. ಇಂಥ ಐತಿಹ್ಯಗಳು ಅನಕ್ಷರಸ್ಥ ಸಮಾಜದ ಚಾರಿತ್ರಿಕ ಪ್ರಕ್ರಿಯೆಗಳಾಗಿರುತ್ತವೆ. ಸ್ಥಳನಾಮಗಳಿಗೆ ಪೂರಕವಾದ ಐತಿಹ್ಯಗಳು ಪ್ರಾಕೃತಿಕ ಚಹರೆಗಳ ಕುರುಹುಗಳನ್ನು ಒಳಗೊಂಡಿರುತ್ತವೆ. ಪ್ರಕೃತಿಯ ವಿಸ್ಮಯಕ್ಕೆ ಪೌರಾಣಿಕ ಘಟನೆಗಳು, ವ್ಯಕ್ತಿಗಳು ಆರೋಪಿತವಾಗುವುದುಂಟು. ಭಯಾನಕ ಭೀಭತ್ಸ ಕಲ್ಪನೆಗಳಾದ ದೆವ್ವ ಭೂತ ಪ್ರೇತ ಪಿಶಾಚಿ ಆರೋಪಿತವಾಗಿರುತ್ತವೆ. ಸ್ಥಳೀಯ

ವ್ಯಕ್ತಿಗಳನ್ನು ಸ್ಥಳನಾಮಗಳಿಗೆ ಸಮನ್ವಯಗೊಳಿಸಲಾಗಿರುತ್ತದೆ. ಚಾರಿತ್ರಿಕ ಸಂಗತಿ ಘಟನೆಗಳಿಂದ ನಿರೂಪಿತವಾಗುವುದು ಕಂಡುಬರುತ್ತದೆ.

**ಪ್ರಕೃತಿಯೊಂದಿಗೆ ಕಟ್ಟಿಕೊಳ್ಳುವ ಐತಿಹ್ಯಗಳ ಲಕ್ಷಣಗಳು :** ಜೋಡಿಕಲ್ಲುಗಳು, ಕೊಳಗಳ ಮರಗಳು, ಕಲ್ಯಾಣಬಾವಿಗಳು, ದೊಣೆಗಳು ಇತ್ಯಾದಿಗಳು ಅಕ್ಕ-ತಂಗಿಯರು ಇಲ್ಲವೆ ಅಣ್ಣ-ತಮ್ಮಂದಿರಾಗಿರುತ್ತವೆ. ಬಂಡೆಯ ಮೇಲಿನ ಹಾಸುಗೆರೆಗಳು ಕೊಳ ದೊಣೆ ತೀರ್ಥಗಳಿದ್ದರೆ ಅವು ಸೀತೆಯ ಸೆರಗು, ಭೀಮನಕೊಳ, ರಾಮನತೀರ್ಥಗಳಾಗಿರುತ್ತವೆ. ಹೆಬ್ಬಂಡೆಯು ಭೀಮನ ಬಂಡೆಯೇ ಆಗಿರುತ್ತದೆ. ಕೆಂಪು ಬಣ್ಣದ ಚಹರೆಯು ದುಷ್ಟನನ್ನು ಕೊಂದಾಗ ರಕ್ತಕಾರಿ ಸತ್ತ ಕುರುಹು ಆಗಿರುತ್ತದೆ. ಐದು ಕಲ್ಲುಗಳು ಕೊಳಗಳು ಗುಡಿಗಳು ಪಾಂಡವರು ಹೋಮ ಮಾಡಿದ ಪ್ರದೇಶಗಳೆನ್ನುವುದು. ಯಾವುದೇ ಸ್ಥಳನಾಮ ಅರ್ಥಗರ್ಭಿತವಾಗಿರುತ್ತದೆ. ಪ್ರಾಕೃತಿಕ ಕೊಡುಗೆಗಳಾದ ಗಿಡ ಮೊದಲಾದುವುಗಳಲ್ಲದೆ, ದೇವಾಲಯಗಳಂಥ ಮಾನವ ನಿರ್ಮಿತ ಕಟ್ಟಡಗಳು ಪೌರಾಣಿಕ ಅಂಶಗಳು ಹೀಗೆ ಚರಿತ್ರೆಗೆ ಸಹಾಯವಾಗಬಲ್ಲ ಎಲ್ಲ ಅಂಶಗಳೂ ಸ್ಥಳನಾಮಗಳ ಹಿನ್ನೆಲೆಯಾಗಿರುತ್ತವೆ. ಸೌಂದರ್ಯ ಪ್ರಜ್ಞೆ, ಧಾರ್ಮಿಕ ಪ್ರಭಾವ, ಮತ್ತೆ ನಂಬಿಕೆ, ಆಚರಣೆ, ದೈವ ಇತ್ಯಾದಿ ವಿಷಯಗಳ ದೃಷ್ಟಿಕೋನದಿಂದ ಭಾಷಾಶಾಸ್ತ್ರ ಮಾನವಶಾಸ್ತ್ರಗಳಂತಹ ಜ್ಞಾನಶಾಖೆಗಳ ಹಿನ್ನೆಲೆಯನ್ನು ಒಳಗೊಂಡಿರುತ್ತವೆ.

ಕೆಲವು ಸ್ಥಳನಾಮಗಳು ಕಾಲದಿಂದ ಕಾಲಕ್ಕೆ ಪರಿವರ್ತನೆಯಾಗಿರುತ್ತವೆ. ಕೆಲವುಗಳ ಅರ್ಥದಲ್ಲಿ ವ್ಯತ್ಯಾಸಗಳಾಗುತ್ತಿರುತ್ತವೆ. ಹೀಗೆ ಸ್ಥಳನಾಮಗಳು ಹೊಸ ರೂಪ ಪಡೆಯುತ್ತಿರುತ್ತವೆ. ಉದಾಹರಣೆಗೆ

**ಬೆಲ್ಲಾಲಬೊಮ್ಮಸಂದ್ರ** (ಬೆಳ್ಳಾಲಬೊಮ್ಮಸಂದ್ರ) : ಇದು ಬೆಳ್ ಆಳ ಅಂದರೆ ನೀರಿನಿಂದ ಆವೃತ್ತವಾದ ಸಮುದ್ರ ಎಂಬ ಅರ್ಥವನ್ನು ನೀಡುತ್ತದೆ. ಏಕೆಂದರೆ ಸಂದ್ರ ಎನ್ನುವ ಪದವು ಸಮುದ್ರ ಎಂಬುದರ ನಿಷ್ಪನ್ನ ರೂಪ. ಬಯಲುಸೀಮೆಯ ಹಲವು ಕಡೆಗಳಲ್ಲಿ ಸಣ್ಣ ಕೆರೆಯೋ, ನದಿಯೋ ಅವರ ಪಾಲಿಗೆ ಸಮುದ್ರವೆನಿಸುತ್ತದೆ. ಆದ್ದರಿಂದ ಅಂಥದ್ದರ ಆಧಾರದ ಮೇರೆಗೆ ಸ್ಥಳನಾಮವು ರಚನೆಗೊಂಡು ಸಂದ್ರವೆಂಬ ಪದದಿಂದ ಕೊನೆಗೊಂಡಿರುತ್ತದೆ. ಬೊಮ್ಮಸಂದ್ರ, ಪೆರೆಸಂದ್ರ, ತಿಮ್ಮಸಂದ್ರ, ನಾಗಸಂದ್ರ, ಗಂಗಸಂದ್ರ ಇತ್ಯಾದಿ. ಆದರೆ ಇಂಥವುಗಳ ಜೊತೆಗೆ ಒಂದು ವಿಶೇಷಣ ಸೇರಿಕೊಂಡಾಗ ಅದಕ್ಕೊಂದು ನಿರುಕ್ತಿ ಸೇರ್ಪಡೆಯಾಗುತ್ತದೆ. ಜನಪದ ಹಿನ್ನೆಲೆಯಲ್ಲಿ ಅದೊಂದು ಐತಿಹ್ಯವೂ ಆಗಿರಬಹುದು. ಬೆಲ್ಲಾಲ ಬೊಮ್ಮಸಂದ್ರಕ್ಕೆ ಸಂಬಂಧಿಸಿದಂತೆ ಐತಿಹ್ಯವೊಂದು ಗಮನ ಸೆಳೆಯುತ್ತದೆ. ಪಾಳೆಯಗಾರರ ಕಾಲದಲ್ಲಿ ಕಳ್ಳರು ಇಲ್ಲಿನ ಕೋಟೆ ಮತ್ತಿತರ ಪ್ರದೇಶಗಳಿಗೆ ನುಗ್ಗಿದರು. ರಾತ್ರಿಯ ಸಮಯವಾದ್ದರಿಂದ ಜನ ಕಂಗಾಲಾದರು. ಬೆಲ್ಲವನ್ನು ತುಂಬಿಸಿಟ್ಟಿದ್ದ ಕೋಣೆಗಳಲ್ಲಿನ ಬೆಲ್ಲದ ಉಂಡೆ ಹಾಗೂ ಬೆಲ್ಲದ

ಮುದ್ದೆಗಳನ್ನು ಹಿಡಿದು ಕಳ್ಳರತ್ತ ಎಸೆಯ ತೊಡಗಿದರು. ಈ ಏಟುಗಳನ್ನು ತಡೆಯಲಾಗದೆ ಕಳ್ಳರು ಅಲ್ಲಿಂದ ಕಾಲ್ಕಿತ್ತರು. ಈ ಬೊಮ್ಮಸಂದ್ರದಲ್ಲಿ ಬೆಲ್ಲದಿಂದ ಹೊಡೆದೋಡಿಸಿದ್ದರಿಂದ ಬೆಲ್ಲಾಲು ಬೊಮ್ಮಸಂದ್ರವೆಂದು ಹೆಸರಾಯಿತು. ತೆಲುಗಿನಲ್ಲಿ ಬೆಲ್ಲಮು ಏಕವಚನ ಬೆಲ್ಲಾಲು ಬಹುವಚನಗಳಾಗಿ ಈ ಊರು ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ 'ಬೆಳ್ಳಿ' ಎಂಬ ಸಾದರ ಜಾತಿಯ ಒಂದು ಪಂಗಡದವರು ಹೆಚ್ಚಾಗಿ ನೆಲೆಸಿರುವ ಮತ್ತೊಂದು ಊರು ಇದೆ. ಈ ಕಾರಣದಿಂದ 'ಬೆಳ್ಳಿ' ಸಾದರು ವಾಸಿಸುವ ಊರೆಂದು ಇದನ್ನು ಹೇಳಬಹುದು.

### ಸ್ಥಳನಾಮ ಸಂಬಂಧಿ ಐತಿಹ್ಯಗಳು ಹಾಗೂ ನಂಬಿಕೆಗಳು

ಪ್ರಕೃತಿಯ ಅದ್ಭುತಗಳಿಗೆ ಸ್ವಾರಸ್ಯವನ್ನು ಕಟ್ಟುವುದು ಮನುಷ್ಯ ಸ್ವಭಾವ. ಅದು ಪ್ರಚಲಿತಗೊಂಡು ಪರಂಪರೆಯಲ್ಲಿ ಐತಿಹ್ಯವಾಗಿ ಬಳಿಕೆಗೆ ಬರುವ ಸಾಧ್ಯತೆಗಳು ಇರುತ್ತವೆ. ಆದರೆ ಇಂಥ ಕಲ್ಪನೆಗಳ ಹಿಂದೆ ಯಾವುದೋ ನಂಬಿಕೆ ಮೌಲ್ಯಗಳು ಇದ್ದೇ ಇರುತ್ತವೆ. ಅಪ್ಪಲೋನಗುಟ್ಟ (ಡಿ.ಪಾಳ್ಯ ಗೌರೀಬಿದನೂರು ತಾ) ಈ ಗುಡ್ಡದ ಒಂದು ಭಾಗದಲ್ಲಿ ದೊಡ್ಡ ಪ್ರಮಾಣದ ಕಲ್ಲುಬಂಡೆಯ ಮೇಲೆ ದುಂಡಗಿನ ಕಲ್ಲುಗುಂಡು ನೆತ್ತಿಯ ಮೇಲೆ ಕಾಣಿಸದಂತೆ ಉಳಿದಿದೆ. ಸ್ವಲ್ಪವೇ ದೂರದಲ್ಲಿ ಮತ್ತೇ ಅಂಥದ್ದೇ ಸಾದೃಶ್ಯದ ಮತ್ತೊಂದು ಜೋಡಿಕಲ್ಲುಗಳಿವೆ. ಆದರೆ ಇಲ್ಲಿ ಬಂಡೆಯ ತಲೆಯ ಮೇಲಿನ ಕಲ್ಲು ಕೆಳಗೆ ಉರುಳಿ ಬಿದ್ದಿದೆ. ಈ ಸಾದೃಶ್ಯದ ಜೋಡಿ ಕಲ್ಲುಗಳ ಗುಟ್ಟ (ಸಣ್ಣಗುಡ್ಡ) ಅಪ್ಪಲೋನಿ ಗುಟ್ಟ ಎಂದು ಹೆಸರು ಪಡೆದಿದೆ (ಸಾಲಗಾರನ ಗುಟ್ಟ). ಐತಿಹ್ಯದ ಪ್ರಕಾರ ಅಣ್ಣತಮ್ಮಂದಿರಿಬ್ಬರು ಜಮೀನ್ದಾರನ ಬಳಿ ಸಾಲ ಮಾಡಿದರು. ಸಾಲಕ್ಕಾಗಿ ಜಮೀನ್ದಾರನಲ್ಲಿ (ರೆಡ್ಡಿಯಲ್ಲಿ) ಸಾಯುವರೆಗೂ ಜೀತ ಮಾಡಿ ದುಡಿದರೂ ಸಾಲ ತೀರಿಸಲಾಗಲಿಲ್ಲ. ಆದ್ದರಿಂದ ಸಾಲದ ಋಣ ಸಾಲದ ಹೊರೆ ಇದ್ದದ್ದರಿಂದ ಅವರು ಬಂಡೆಗಳಾದರು. ಅವರ ತಲೆಗಳ ಮೆಲೆ ದೊಡ್ಡ ಗುಂಡು ಕಲ್ಲುಗಳಾಗಿ ಕುಳಿತು ಬಿಟ್ಟಿತು. ಈ ಇಬ್ಬರಲ್ಲಿ ಒಬ್ಬನ ಮಕ್ಕಳು ಜೀತ ಮಾಡಿ ತಮ್ಮ ತಂದೆಯ ಸಾಲ ತೀರಿಸಿದರು. ಆಗ ಒಂದು ಬಂಡೆಯ ಮೇಲಿನ ಗುಂಡುಕಲ್ಲು ಕೆಳಗೆ ಉರುಳಿತು. ಮತ್ತೊಬ್ಬನ ಸಾಲ ತೀರಲಿಲ್ಲವಾದ್ದರಿಂದ ಬಂಡೆಯ ಮೇಲಿನ ಕಲ್ಲು ಹಾಗೆಯೇ ಭದ್ರವಾಗಿ ಕುಳಿತಿದೆ. ಸಾಲಗಾರಿಕೆ ಜೀತ ಪದ್ಧತಿಗಳೆರಡು ಅನುಭವಿಸಲಾಗದ ಶೋಷಣೆಗಳು ಅವುಗಳ ಪರಿಣಾಮ ಎಷ್ಟು ಕೆಟ್ಟದಾಗಿರುತ್ತದೆವೆಂಬುದನ್ನು ಈ ಐತಿಹ್ಯ ವಿವರಿಸುತ್ತದೆ. ಜೀತಗಾರನ ಪಾಲಿಗೆ ಇಂಥ ಐತಿಹ್ಯಗಳು ಭಯಭೀತರನ್ನಾಗಿಸುತ್ತವೆ.

ಇದು ವಾಸ್ತವವಾಗಿ ಅಪನ್ನಗುಟ್ಟ ಅಪ್ಪಲನ್ನಗುಟ್ಟ ಆಗಿದ್ದು ಇಲ್ಲಿ ಅಪನ್ನ ಎಂಬ ವ್ಯಕ್ತಿನಾಮ ಸಂಬಂಧದ ಮೂಲವನ್ನು ಹೊಂದಿದೆ. ತೆಲುಗಿನ ಪದ 'ಅಪ್ಪು' ಸಾಲ ಎಂಬ ಅರ್ಥ ಕೊಡುತ್ತದೆ.

ಆದ್ದರಿಂದ ಸಾಲ ಮಾಡಿದವನು (ಅಪ್ಪಲೋನ) ಎಂಬರ್ಥ ಕೊಡುತ್ತದೆ. ಅಪ್ಪನ್ನಗುಟ್ಟಿ > ಅಪ್ಪನಗುಟ್ಟಿ > ಅಪ್ಪಲಗುಟ್ಟಿ ಅಪ್ಪಲ-ಅವನು: ಅಪ್ಪಲೋನು (ಅಪ್ಪಲವಾಡು > ಅಪ್ಪಲೋಡು): ಅಪ್ಪಲೋನಿಗುಟ್ಟಿ

**ಕಪ್ಪಲಮಡುಗು** (ಮುಳುಬಾಗಿಲು ತಾ) : ಈ ಊರಿನ ಕೆರೆಯಲ್ಲಿ ವಿಪರೀತ ಕಪ್ಪೆಗಳು ವಟಗುಟ್ಟುತ್ತಿದ್ದುದರಿಂದ ಈ ಊರಿಗೆ ಕಪ್ಪಲಮಡುಗು ಎಂದು ಹೆಸರು ಬಂದಿರುವುದಾಗಿ ಐತಿಹ್ಯವಿದೆ. ಆದರೆ, ಈ ಊರಿಗೆ ಕಂಪಸಮುದ್ರವೆಂಬ ಹೆಸರಿದ್ದಂತೆ ಶಾಸನಗಳಿಂದ ತಿಳಿದುಬರುತ್ತವೆ. (ಎ.ಕ x ಮುಳುಬಾಗಿಲು ೧೮, ಕ್ರಿ.ಶ.೧೩೫೫) ವಿಜಯನಗರ ಬುಕ್ಕರಾಯನ ಮಗ ಕಂಪಣರಾಯನು ಮುಳುಬಾಗಿಲಿನ ಮಾಂಡಲಿಕನಾಗಿದ್ದು ಅವನ ಹೆಸರಿನಲ್ಲಿ ನಿರ್ಮಾಣವಾದ ಈ ಊರಿನ ಕೆರೆ ಕಂಪಸಮುದ್ರವು; ಕಂಪಣ ಮಡುವು (ತೆಲಗು; ಕಂಪಣಮಡಗು) ಆಗಿ ಕಾಲಕ್ರಮೇಣ ಅದು ಕಂಪಲಮಡುಗು ಎನಿಸಿ ಕಪ್ಪಲಮಡುಗು ಆಗಿರುವ ಸಾಧ್ಯತೆ ಇದೆ.

**ಕೈವಾರ** : ಭೀಮನು ಇಲ್ಲಿನ ಬೆಟ್ಟದಲ್ಲಿ ಬಕಾಸುರನನ್ನು ಕೊಂದ ಸ್ಥಳವೆಂದು ರಾಕ್ಷಸ ಸಂಹಾರದಿಂದ ಸಂತೋಷಗೊಂಡ ದೇವತೆಗಳು ಇಲ್ಲಿ ವಿಷ್ಣುವಿನ ಕೈವಾರ (ಸ್ತೋತ್ರ) ನಡೆಸಿದರೆಂದು ಹೇಳುತ್ತಾರೆ. ಆದರೆ ಹನ್ನೆರಡನೆಯ ಶತಮಾನದ ಆರಂಭದಲ್ಲೇ ಕಯ್ವಾರ ನಾಡು, ಕಯವರ ನಾಡು, ಕಯವಾರ, ಕೈವಾರ, ಕೈವಲ್ಯಪುರಿ ಮುಂತಾದ ಹೆಸರುಗಳಲ್ಲದೆ, ಕೈವಾರದ ಯೋಗಿನಾರೇಯಣಪ್ಪನ ಕೃತಿಗಳಲ್ಲಿ ಇದನ್ನು ಕೈವಲ್ಯಪುರಿ ಎಂದೂ ಇಲ್ಲಿನ ದೈವವನ್ನು ಕೈವಲ್ಯ ಪುರಾವರಾಧೀಶ್ವರ ಎಂದು ಕರೆಯಲಾಗಿದೆ. ಕಯ್ವಾರ, ಕಯವರ, ಕಯವೂರು, ಕಯಪುರ, ಕಯ, ಕಯಂ ಎಂಬ ಪದಗಳ ಅರ್ಥವು ಕೊಳ ಜಲಾಶಯ ಇಲ್ಲವೇ ಜಲಸಂಬಂಧವುಳ್ಳ ಭೂಭಾಗ ಎಂದು (ತಮಿಳು-ತುಳು ಮೂಲದಿಂದ) ತಿಳಿದುಬರುತ್ತದೆ.

**ವಿದುರಾಶ್ವತ್ಥ:** ಸ್ಥಳಪುರಾಣದ ಪ್ರಕಾರ ಮೈತ್ರೇಯ ಮಹರ್ಷಿಯು ಇಲ್ಲಿ ತಪಗೈಯುತ್ತಿದ್ದ. ಲೋಕ ಪರ್ಯಟನೆಯ ನಿಮಿತ್ತ ಇಲ್ಲಿಗೆ ಬಂದ ವಿದುರನು ಇಲ್ಲೊಂದು ಅರಳಿಯ ಸಸಿಯನ್ನು ನೆಟ್ಟ. ಅದು ಬೆಳೆದು ಮರವಾದಂತೆಲ್ಲ ಆ ಮರವು ಮರವಿರುವ ಸ್ಥಳವು ವಿದುರಾಶ್ವತ್ಥವೆಂಬ ಹೆಸರನ್ನು ಪಡೆದವೆಂಬ ನಿದರ್ಶನವಿದೆ. ಆದರೆ ಮೊದಲಿಗೆ ಈ ಪ್ರದೇಶವೆಲ್ಲ ಬಿದಿರನ್ನು ಬೆಳೆಯುವ ಪ್ರದೇಶವಾಗಿದ್ದಿರ ಬಹುದೆಂದು ಅಶ್ವತ್ಥವೃಕ್ಷವಿರುವ ಸ್ಥಳವು ಬಿದಿರಿನ ಅಶ್ವತ್ಥ ಬಿದುರಾಶ್ವತ್ಥ-ವಿದುರಾಶ್ವತ್ಥವಾಗಿದೆಯೆಂದು ಸಂಶೋಧಕರ ಅಭಿಪ್ರಾಯ. ಇಲ್ಲಿಗೆ ಸಮೀಪವೆಂಬಂತೆ ಮೇಳ್ಯ (ಬಿದಿರಿನ ಮೇಳೆ) ಎಂಬ ಊರಿಗೆ ಅಲ್ಲದೆ ಹಿರೇಬಿದನೂರು (ಹಿರಿಯ ಬಿದುರಿನ ಊರು); ಗೌರಿ/ಗೋರಿಬಿದನೂರು ಗೋರಿಗಳಿರುವ ಬಿದುರಿನ ಊರು-ಗೋರಿಬಿದನೂರು; ಸಂತೆಬಿದನೂರು (ಸಂತೆ ನಡೆಯುವ ಬಿದುರಿನ ಪ್ರದೇಶ) ಆಗಿವೆಯೆನ್ನಬಹುದು. ಎ.ಕ.x ರಲ್ಲಿ ಪಿರಿಯಬಿದನೂರು, ಗೋರಿಬಿದನೂರ್ - ಕ್ರಿ.ಶ. ೯೨೦,

ಬಿದಿರೂರ್ (ಮುಳು. ೧೨೬-೬೧) ಎಂಬ ಶಾಸನಾಧಾರಗಳಿಂದ ಈ ಪ್ರದೇಶವೆಲ್ಲ ಹಿಂದಿನಿಂದಲೂ ಬಿದಿರಿನಿಂದ ಕೂಡಿದ ಸ್ಥಳವಾಗಿತ್ತೆಂದು ಹೇಳಬಹುದು.

ಹೀಗೆ ಭಾಷೆ ಮತ್ತು ಚಾರಿತ್ರಿಕ ದೃಷ್ಟಿಯಿಂದ ಒಪ್ಪಲಾಗದೆ ಸ್ಥಳನಾಮ ಸೂಚಕವು ವಕ್ತೃವಿನ ಹಾಗೂ ಪರಂಪರೆಯ ಜಾಣ್ಮೆ ಧಾರ್ಮಿಕ ಪ್ರಭಾವ, ನಿಸರ್ಗದ ಬಗ್ಗೆ ಜಾಗರೂಕತೆ ಅಭಿಮಾನ ನಂಬಿಕೆ ಇತ್ಯಾದಿ ಅಂಶಗಳನ್ನು ಪ್ರಕಟಿಸುತ್ತವೆ.

## ಸ್ಥಳೈತಿಹ್ಯ-ಸ್ಥಳನಾಮಗಳಲ್ಲಿ ಅಡಗಿರುವ ಪೌರಾಣಿಕ ಅಂಶಗಳು

ಸ್ಥಳೈತಿಹ್ಯಗಳಲ್ಲಿ ಸ್ಥಳನಾಮಗಳು, ಸ್ಥಳಪುರಾಣಗಳು ಮತ್ತು ಸ್ಥಳದ ವಿಶೇಷತೆಯಿಂದ ರೂಪುಗೊಂಡ ಘಟನಾ ಐತಿಹ್ಯಗಳು ಬರುತ್ತವೆ. ಸ್ಥಳಸಂಬಂಧಿ ಘಟನಾ ಐತಿಹ್ಯಕ್ಕೆ ಉದಾ: ಶ್ರೀರಾಮಪಟ್ಟಣವೆಂಬ ಸ್ಥಳನಾಮಕ್ಕೆ ಮಾರುಹೋದ ಸನ್ಯಾಸಿಯೊಬ್ಬನು ಸ್ಥಳಕ್ಕೆ ಭೇಟಿ ನೀಡಿ ನಿರಾಶೆಗೊಂಡ, ರಾಮರಾಜ್ಯದಂತೆ ನೆಮ್ಮದಿಗಳಿಸದ ಆ ಊರಿಗೆ ಪರದೇಶಿಪಟ್ಟಣ ಎಂದು ಹೆಸರಿಟ್ಟ. ಹೀಗೆ ಸ್ಥಳೈತಿಹ್ಯಗಳು ಘಟನೆ ನಡೆದ ಸ್ಥಳದ ಮಹತ್ವವನ್ನು ಕುರಿತು ಹೇಳುತ್ತವೆ. ಇವು ಗ್ರಂಥಸ್ಥ ಅಥವಾ ಶಿಷ್ಟ ಇತಿಹಾಸದ ನೆಲೆಗಳನ್ನು ಒದಗಿಸುವಂಥಗಳು ಆಗಿರಬಹುದು. ಸಾಂಸ್ಕೃತಿಕ - ಸಾಮಾಜಿಕ ಇಲ್ಲವೇ ಪೌರಾಣಿಕ ಘಟನೆಗಳು ನಡೆದು ಸ್ಥಳದಿಂದಲೇ ಪ್ರಾಧಾನ್ಯತೆ ಪಡೆದಿವೆ ಎಂಬುದಾಗಿ ಕಂಡುಬರುವ ಐತಿಹ್ಯಗಳು ಈ ವರ್ಗಕ್ಕೆ ಸೇರುತ್ತವೆ. ಸ್ಥಳಪುರಾಣಗಳು ಸ್ಥಳೈತಿಹ್ಯಗಳಲ್ಲಿ ಸೇರುತ್ತವೆ. ಹಾಗೆಯೇ ಸ್ಥಳನಾಮಗಳು ಇದೇ ಸಾಲಿಗೆ ಬಂದೊದಗುತ್ತವೆ.

ತಮ್ಮ ಊರಿನಲ್ಲಿ ಪೌರಾಣಿಕ ಘಟನೆ ನಡೆದಿದೆ, ಪುರಾಣ ವ್ಯಕ್ತಿಗಳು ಬಂದು ಓಡಾಡಿದ್ದಾರೆ, ನೆಲೆಸಿದ್ದಾರೆ, ಅವರ ನೋವು-ನಲಿವುಗಳು ಅನುಭವ ವಿಶೇಷಗಳು ಸಂಬಂಧಿಸಿದ ಸ್ಥಳದೊಂದಿಗೆ ಹಂಚಿಕೆಯಾಗಿವೆ ಎಂದು ಹೇಳಿಕೊಳ್ಳುವ ಮೂಲಕ ಈ ಸ್ಥಳಕ್ಕೆ ಪೌರಾಣಿಕ ಶಿಫಾರಸ್ಸನ್ನು ಪಡೆಯುವುದಲ್ಲದೆ ಆ ನಂಬಿಕೆಯ ಮೂಲಕ ಕೆಲವು ಮೌಲ್ಯಗಳನ್ನು ನಿಷೇಧಗಳನ್ನು ಅನುಸರಿಸುವಂತೆ ಮಾಡುತ್ತಾರೆ. ಕೆಲವು ಸ್ಥಳನಾಮಗಳು ಚಾರಿತ್ರಿಕ ಘಟನೆ, ಸನ್ನಿವೇಶಗಳ ವಿವರಣೆಗಳನ್ನು ಒಳಗೊಂಡಿರುತ್ತವೆ. ಇವು ಲಿಖಿತ ಚರಿತ್ರೆಯ ವಸ್ತು ಘಟನೆ ಸನ್ನಿವೇಶ ಸಂದರ್ಭಗಳಿಗೆ ಪೂರಕವಾಗಿರುತ್ತವೆ. ಇವುಗಳ ಮೂಲಕ ಇತಿಹಾಸದ ಸಾಂಸ್ಕೃತಿಕ ಸಂದರ್ಭಗಳನ್ನು ಪರಿಶೋಧಿಸಲು ಅನುವಾಗುತ್ತದೆ. ಜನಪ್ರಿಯ ಅರಸರು ಪಾಳೆಯಗಾರರು ಅವರ ಸಾಧನೆಗಳ ಲೋಕಪ್ರಿಯತೆ ಇತ್ಯಾದಿ ಅಂಶಗಳು ಬೆಳಕಿಗೆ ಬರುತ್ತವೆ.

ಕೋಲಾರ ಜಿಲ್ಲೆಯಲ್ಲಿ ಗಂಗ ಅರಸರ ಹೆಸರುಗಳು ಸ್ಥಳನಾಮಗಳಲ್ಲಿ ವ್ಯಕ್ತವಾಗಿವೆ. ಉದಾ: ಗಂಗಸಂದ್ರ, ಮಾರಸಂದ್ರ ಇತ್ಯಾದಿ. ಹಾಗೆಯೇ ಚಿಕ್ಕಬಳ್ಳಾಪುರದ ಪಾಳೆಯಗಾರ ಭೈರೇಗೌಡನ ಹೆಸರು ಸಹ ಸ್ಥಳನಾಮಗಳಲ್ಲಿ ಕೆರೆಕುಂಟೆಗಳ ಹೆಸರುಗಳಲ್ಲಿ ಅಡಗಿದೆ. ಭೈರಸಂದ್ರ ಭೈರಗಾನಹಳ್ಳಿ ಕೆರೆ ಭೈಚಾಪುರ

ಮುಂತಾದವು. ಹೊಯ್ಸಳರ ಅರಸ ಚಿಕ್ಕಬಲ್ಲಾಳನ ನೆನಪಿನಲ್ಲಿ ಚಿಕ್ಕಬಳ್ಳಾಪುರವಿದೆ. ವಿಜಯನಗರದ ಅರಸರ ಕಾಲದಲ್ಲಿ ಜನಪ್ರಿಯತೆಗೆ ಬಂದ ಪಾಳೆಯಗಾರರು ಜಿಲ್ಲೆಯಾದ್ಯಂತ ಅಲ್ಲಲ್ಲಿ ಸ್ಥಳೀಯವಾಗಿ ಪ್ರಭಾವ ಬೀರಿದ್ದಾರೆ. ದಾರಿನಾಯಕ ಗುಮ್ಮನಾಯಕ ಇತ್ಯಾದಿ ಪಾಳೆಯಗಾರರ ಹೆಸರಿನ ಆಳ್ವಿಕೆಯ ಪ್ರದೇಶಗಳು ದಾರಿನಾಯಕನಪಾಳ್ಯ ಗುಮ್ಮನಾಯಕನಪಾಳ್ಯಗಳೆಂದು ಹೆಸರಾಗಿವೆ. ವಿಜಯನಗರದ ಅರಸರ ದಕ್ಷಿಣದ ಸಾಂಸ್ಕೃತಿಕ ರಾಜಧಾನಿಯಾಗಿದ್ದ ಮುಳಬಾಗಿಲು ವಿಜಯನಗರ ಸಾಮ್ರಾಜ್ಯದ ಮೂಡಣದ ಬಾಗಿಲು ಆಗಿತ್ತೆಂದು ಹೇಳಲಾಗಿದೆ. ಇದಕ್ಕೂ ಮುನ್ನ ಹೊಯ್ಸಳ ಸಾಮ್ರಾಜ್ಯದ ವಿಸ್ತರಣೆ ಕೋಲಾರ ಜಿಲ್ಲೆಯ ಗೌರೀಬಿದನೂರು, ಬಾಗೇಪಲ್ಲಿ, ಗುಡಿಬಂಡೆ, ಚಿಕ್ಕಬಳ್ಳಾಪುರ ಇತ್ಯಾದಿ ಕಡೆಗಳಲ್ಲಿ ವ್ಯಾಪಿಸಿದ್ದಲ್ಲದೆ ಅವರು ಕಟ್ಟಿದ ಹೊಸೂರು, ಕುದುರೆ ಬ್ಯಾಲ್ಯ, ಕುರೂಡಿ ಮುಂತಾದ ಸ್ಥಳನಾಮಗಳು ಆಡಳಿತ ಕೇಂದ್ರಗಳಾಗಿದ್ದನ್ನು ತಿಳಿಸುತ್ತವೆ. ಕೋಟೆ-ಕೊತ್ತಲ, ನಗರ ಪ್ರದೇಶ, ಆರ್ಥಿಕ ಹಾಗೂ ವಾಣಿಜ್ಯ ವಹಿವಾಟಿನ ಸ್ಥಳಗಳು ಹೀಗೆ ಆಡಳಿತಕ್ಕೆ ಪೂರಕವಾದ ನೆಲೆಗಳುಳ್ಳವಾಗಿ ಕೆಲವು ಉಳಿದಿರುತ್ತವೆ. ಅಥವಾ ಆಯಾ ಸ್ಥಳಕ್ಕೆ ಸಂಬಂಧಿಸಿದ ಪ್ರಭಾವಿ ವ್ಯಕ್ತಿಯ ದೈನಂದಿನ ಬದುಕಿನಲ್ಲಿ ಹಾಸುಹೊಕ್ಕಾಗಿರುವ, ಆತನ ಜೀವನದೊಂದಿಗೆ ನಿಕಟ ಸಂಬಂಧವನ್ನು ಹೊಂದಿರುವ, ಆತನ ನಿತ್ಯಜೀವನಕ್ಕೆ ಅಗತ್ಯವಾದ ವಸ್ತು-ವಿಷಯಗಳನ್ನಾಧರಿಸಿ ಹುಟ್ಟಿಕೊಂಡಿರುತ್ತವೆ.[೮]

ಕೆಲವು ಸ್ಥಳನಾಮಗಳು ಅಲ್ಲಿನ ಮೂಲನಿವಾಸಿಗಳು ಅಥವಾ ಆರಂಭದಿಂದ ಅಲ್ಲಿ ನೆಲೆಸಿದ್ದ ಇಲ್ಲವೇ ಅಲ್ಲಿಗೆ ಹೋಗಿ ಆಕ್ರಮಿಸಿಕೊಂಡ ಸಮುದಾಯಗಳು ಮತ್ತು ಸಮಾಜ ಅದರ ವೃತ್ತಿ ಕಸುಬು ಇಲ್ಲವೇ ನಡೆಸಿದ ಆಡಳಿತ ಇತ್ಯಾದಿ ಅಂಶಗಳನ್ನು ಸ್ಥಳೀಯ ನೆಲೆಯಲ್ಲಿ ಸ್ಪಷ್ಟಪಡಿಸುತ್ತವೆ. ಅಲ್ಲಿನ ಭೌಗೋಳಿಕ ಪ್ರದೇಶಕ್ಕೂ ನೆಲೆಸಿದ ಸಮುದಾಯಕ್ಕೂ ವೈರುಧ್ಯಗಳಿಲ್ಲದೆ ಪೂರಕ ಸಂಬಂಧ ಕಂಡುಬರುತ್ತದೆ. ಹೇಗೆಂದರೆ ಕಳ್ಳರಬೆಟ್ಟ, ಸಿದ್ದರಬೆಟ್ಟ, ಗುಡ್ಡದಕೊರಚರಹಳ್ಳಿ, ಬ್ಯಾಡಕೆರಿ, ಹೊಲಗೇರಿ, ಗೊಲ್ಲಹಳ್ಳಿ, ಉಪ್ಪಾರಹಳ್ಳಿ, ಹಾರುವನಹಳ್ಳಿ, ಅಗ್ರಹಾರ ಈ ಹೆಸರುಗಳೇ ಸ್ಪಷ್ಟ ವಿವರಗಳನ್ನು ಒದಗಿಸುತ್ತವೆ. ಬೆಟ್ಟಗುಡ್ಡಗಳ ಪರ್ವತ ಪ್ರದೇಶದಲ್ಲಿ ಬುಡಕಟ್ಟು ಸಮುದಾಯಗಳು ಕಳ್ಳರು ಇಲ್ಲವೇ ಸಿದ್ದರು-ಸನ್ಯಾಸಿಗಳು ತಪೋನಿಷ್ಠರು ಮುಂತಾದವರು ವಾಸಿಸುತ್ತಿದ್ದರೆಂಬುದಕ್ಕೂ ಅಲ್ಲಿನ ಅವರ ವೃತ್ತಿಗೂ ಪೂರಕ ಸಂಬಂಧವಿರುತ್ತದೆ. ಹೊಲಗೇರಿ-ಬ್ಯಾಡಕೇರಿಗಳಂತ ಸ್ಥಳಗಳಲ್ಲಿ ಬ್ರಾಹ್ಮಣರು ವೈಶ್ಯ-ಕ್ಷತ್ರಿಯರಿದ್ದರು ಎನ್ನಲಾದೀತೆ? ಅಗ್ರಹಾರ ಹಾರುವನಹಳ್ಳಿಗಳಲ್ಲಿ ಅಸ್ಪೃಶ್ಯರು ನೆಲೆಸಿದ್ದರೆನ್ನಲಾದೀತೆ? ಹೀಗೆ ಬಹುಪಾಲು ಸ್ಥಳನಾಮಗಳು ಸಮುದಾಯ ಸಮಾಜ ಮತ್ತು ವೃತ್ತಿಗೆ ಪೂರಕವಾಗಿರುತ್ತವೆ. ನಾಯಕನಹಳ್ಳಿ, ಗೌಡಗೆರೆ, ಪಟೇಲನಗರ, ಪಾಳೆಯ, ಹೊಸಕೋಟೆ, ಹೊಸಹಳ್ಳಿ (ನಾಯಕನ ಹೊಸಳ್ಳಿ), ಗೌಡರ ಹೊಸಳ್ಳಿ, ರಾಜಲದೇವರಕೊಂಡ (ರಾಜರ ದೇವರ ಬೆಟ್ಟ) ಮುಂತಾದ ಹೆಸರುಗಳು ಕಿರುಗತೆಗಳನ್ನು ಹೊಂದಿದ್ದು

ಸಂಬಂಧಿಸಿದ ಸ್ಥಳದಲ್ಲಿನ ಸಮುದಾಯದ ಮೂಲ ಪರಿಸರ ಏನಿತ್ತು ಎಂಬುದನ್ನು ವ್ಯಕ್ತಪಡಿಸುತ್ತವೆ. ಆಡಳಿತಾತ್ಮಕವಾಗಿ ಪ್ರಾದೇಶಿಕ ವಲಯದಲ್ಲಿ ನಡೆಸಿದ ಸಾಹಸ ದುಸ್ಸಾಹಸ ಸುಖಾಂತ-ದುರಂತಗಳ ಛಾಯೆಯ ಕೆಲವು ಸ್ಥಳನಾಮಗಳಲ್ಲಿರುತ್ತದೆ. ನಡೆದ ಘಟನೆಯ ನೆನಪುಗಳು ಊರ ಹೆಸರುಗಳೊಂದಿಗೆ ಉಳಿದುಕೊಂಡಿರುತ್ತವೆ. ಎಲ್ಲ ಸ್ಥಳನಾಮಗಳು ಏಕರೂಪತೆಯನ್ನು ಹೊಂದಿರುವುದಿಲ್ಲ. ಕೆಲವು ಸ್ಥಳೈತಿಹ್ಯಗಳಾದರೆ ಕೆಲವು ಸ್ಥಳೈತಿಹ್ಯಕ್ಕೆ ಪುರಾಣದ ಮೆರಗನ್ನು ಕೊಡುವ ಮೂಲಕ ಸ್ಥಳಪುರಾಣಗಳಾಗಿ ಬಿಡುತ್ತವೆ. ಇವುಗಳಲ್ಲಿ ಕೆಲವು ನಿರ್ದಿಷ್ಟವಾದ ಪ್ರದೇಶ ಅಥವಾ ಸ್ಥಳಕ್ಕೆ ಸೀಮಿತವಾಗಿದ್ದರೆ ಮತ್ತೆ ಕೆಲವು ಸಂಚಾರಿ ಗುಣದಿಂದ ಪ್ರಸರಣದ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುತ್ತವೆ.

**ಸ್ಥಳನಾಮಗಳಲ್ಲಿ ಪ್ರಾದೇಶಿಕ ಭೌಗೋಳಿಕ ಅಂಶಗಳು :** ಯಾವುದೇ ಪ್ರದೇಶದ ಭೌಗೋಳಿಕ ಅಂಶಗಳು ವ್ಯಕ್ತವಾಗುವುದು ಸ್ಥಳನಾಮಗಳು ಮತ್ತು ಸ್ಥಳಪುರಾಣಗಳಿಗೆ ಸಂಬಂಧಿಸಿದ ಸ್ಥಳೈತಿಹ್ಯಗಳಿಂದ. ಇಂತಹ ಐತಿಹ್ಯಗಳಲ್ಲಿ ಸಂಬಂಧಿಸಿದ ಸ್ಥಳನಾಮದಿಂದ ನಿರ್ದಿಷ್ಟವಾದ ಆ ಸ್ಥಳಕ್ಕೂ ಅಥವಾ ಅದಕ್ಕೆ ಸಂಬಂಧಿಸಿದ ಯಾವುದೋ ವಿಶೇಷತೆಯಿಂದ ಸ್ಥಳನಾಮಕ್ಕೂ ಅವಿನಾಭಾವ ಸಂಬಂಧವಿರುವುದು ವ್ಯಕ್ತವಾಗುತ್ತದೆ. ಅಲ್ಲಿನ ಭೂಪ್ರದೇಶದ ಲಕ್ಷಣ ಮಣ್ಣಿನ ಗುಣ-ಪ್ರಕಾರಗಳು ಬೆಟ್ಟ, ಗುಡ್ಡ, ಕಣಿವೆ, ನದಿ, ಹವಾಮಾನ, ಸಸ್ಯಸಂಪತ್ತು, ಪ್ರಾಣಿಸಮೂಹ ಇತ್ಯಾದಿ ವೈಶಿಷ್ಟ್ಯಗಳಿಗೆ ಅನುಗುಣವಾಗಿ ಸ್ಥಳನಾಮಗಳು ಅವುಗಳ ಹಿನ್ನೆಲೆಯಾಗಿ ಐತಿಹ್ಯಗಳು ರಚನೆಯಾಗಿರುತ್ತವೆ. ಇನ್ನೂ ಮುಂದುವರಿದಂತೆ ಆಯಾ ಸ್ಥಳಗಳಲ್ಲಿ ನೆಲೆಸಿದ್ದ ಅಥವಾ ಸ್ಥಳದೊಂದಿಗೆ ಸಂಪರ್ಕವಿಟ್ಟುಕೊಂಡ ಸಮುದಾಯಗಳ ವಿವರಗಳು ಲಭಿಸುತ್ತವೆ.

ಉದಾ: ಚೌಳೂರು. ದಿಬ್ಬೂರು, ಕಣಿವೆ, ಕೊಪ್ಪ, ಬೆಟ್ಟದಹಳ್ಳಿ, ಗುಟ್ಟಳ್ಳಿ ಕಲ್ಲಳ್ಳಿ, ಕರೇಕಲ್ಲಹಳ್ಳಿ ದಿನ್ನೆ ಮೇಲಿನಹಳ್ಳಿ, ರ್‍ಯಾಗಡಿ, ಬೂದಗೆರೆ, ಕೋನಾಪುರ ಇತ್ಯಾದಿ ಹೆಸರುಗಳು ಭೂಪ್ರದೇಶದ ಲಕ್ಷಣಗಳು ಹಾಗೂ ನೆಲದ ಗುಣವನ್ನು ಹೇಳುತ್ತವೆ. ಬಿಸಿಲಹಳ್ಳಿ, ಗಂಗಸಂದ್ರ, ನಾಗಸಂದ್ರ ಇತ್ಯಾದಿ ಸ್ಥಳನಾಮಗಳು ಸಂಬಂಧಿಸಿದ ಪ್ರದೇಶದ ವಾತಾವರಣವನ್ನು ಹೇಳುತ್ತವೆ. ಗಿಡ ಮರಗಳು ಮತ್ತು ಸಸ್ಯ ಸಮೂಹವು ಸಂಬಂಧಿಸಿದ ಜಾಗದಲ್ಲಿ ಹೇರಳವಾಗಿದ್ದುವು ಎಂಬ ಕುರುಹುಗಳು ಪತ್ತೆಯಾಗುತ್ತವೆ. ಬೇವಿನಹಳ್ಳಿ, ಮಾವಿನಹಳ್ಳಿ, ಹೊಂಗೆನಳ್ಳಿ, ಹುಣಸೂರು, ಬಿದರೂರು, ಮೇಳ್ಳೆಮಲ್ಲಿಕಾಪುರ, ಸಂಪಿಗೆಕೆರೆ, ತಾವರೆಕೆರೆ ಇಂಥ ಹೆಸರುಗಳು ಭೌಗೋಳಿಕತೆಗೆ ಅನುಗುಣವಾಗಿರುತ್ತವೆ. ಮಾವಿನಹಳ್ಳಿಗೆ ಬದಲಾಗಿ ಚೆರ್ರಿ, ಕಿತ್ತಾಳೆ, ಸೇಬಿನಹಳ್ಳಿಗಳನ್ನು ಕಾಣಲಾಗುವುದಿಲ್ಲ. ಪ್ರಾಣಿವಲಯದಲ್ಲಿಯೂ ಹಾಗೆಯೇ ನಕ್ಕಲಹಳ್ಳಿ (ನರಿಗಳಹಳ್ಳಿ), ಕುಕ್ಕಲಳ್ಳಿ (ನಾಯಿಗಳಹಳ್ಳಿ), ಆವುಲಹಳ್ಳಿ (ಹಸುಗಳಹಳ್ಳಿ), ಮಟ್ಟವುಲಹಳ್ಳಿ, ಚಿಟ್ಟಾವುಲಹಳ್ಳಿ

(ಮಟ್ಟೆಹಸುಗಳ ಹಳ್ಳಿ, ಚಿಕ್ಕಹಸುಗಳ ಹಳ್ಳಿ), ಕರಡಿಪುರಗುಡ್ಡ, ಚಿಲಕನೇರ್ಪು ಇತ್ಯಾದಿ ಪ್ರದೇಶಕ್ಕೆ ಒಗ್ಗುವ ಸಂತತಿಯ ಹೆಸರುಗಳಿರುತ್ತವೆ.

ಸ್ಥಳನಾಮ, ಸ್ಥಳಪುರಾಣ ಮತ್ತು ಸ್ಥಳೈತಿಹ್ಯಗಳಿಗೆ ಪರಸ್ಪರ ಸಂಬಂಧ ಅಂತರ, ಹೋಲಿಕೆ-ವ್ಯತ್ಯಾಸಗಳು ಕಂಡುಬರುವುದುಂಟು. ಆದರೆ ಇವುಗಳಲ್ಲಿ ಅಡಗಿರುವ ಪೌರಾಣಿಕ ಅಂಶಗಳಿಂದ ಸ್ಥಳಪುರಾಣಗಳು ಸೃಷ್ಟಿಯಾಗುತ್ತವೆ. ಕೆಲವು ಸ್ಥಳಪುರಾಣಗಳಲ್ಲಿ ಸ್ಥಳನಾಮದ ಹಿನ್ನೆಲೆಯು ಕಂಡುಬರುತ್ತದೆ. ಉದಾ: ವಿದುರನು ನೆಟ್ಟ ಅಶ್ವತ್ಥ ವೃಕ್ಷವಿರುವ ಸ್ಥಳವು ವಿದುರಾಶ್ವತ್ಥ. ಇಲ್ಲಿ ಯುಗ-ಯುಗಗಳಿಂದಲೂ ಋಷಿಗಳು ತಪಸ್ಸನ್ನು ಆಚರಿಸಿ ನಾರಾಯಣನನ್ನು ಕುರಿತು ಆರಾಧಿಸುತ್ತಿದ್ದುದು ನಾರಾಯಣನು ಅವರಿಗಾಗಿ ಉದ್ಭವಿಸಿ ನಂತರ ಅಶ್ವತ್ಥವೃಕ್ಷದೊಂದಿಗೆ ತನ್ನನ್ನು ಗುರುತಿಸಿಕೊಂಡು ಅಶ್ವತ್ಥ ನಾರಾಯಣನೆಂದು ಕರೆಸಿಕೊಂಡಿರುವುದು ಸ್ಥಳಪುರಾಣದಿಂದ ತಿಳಿದುಬರುತ್ತದೆ. ಕೋಲಾರ ಸ್ಥಳನಾಮಕ್ಕೆ ಸಂಬಂಧಿಸಿದ ಸ್ಥಳಪುರಾಣದಂತೆ ಪರಶುರಾಮನು ತನ್ನ ತಂದೆ ಜಮದಾಗ್ನಿಯನ್ನು ಕೊಂದ ಕಾರ್ತಿವೀರ್ಯ ಮತ್ತಿತರ ರಾಜರನ್ನು ಹೋರಾಟದಲ್ಲಿ ಕೊಂದು ಕೋಲಾಹಲವೆಬ್ಬಿಸಿದ ಸ್ಥಳವೆಂದು ತಿಳಿದುಬರುತ್ತದೆ. ಇಂತಹ ಸ್ಥಳಪುರಾಣವುಳ್ಳ ಸ್ಥಳನಾಮಕ್ಕೆ ಸಂಬಂಧಿಸಿದ ಸ್ಥಳೈತಿಹ್ಯಗಳಲ್ಲಿ ವ್ಯಕ್ತಿ ಇಲ್ಲವೇ ಘಟನೆಗೆ ಪ್ರಾಧಾನ್ಯತೆ ಇರುತ್ತದೆ. ಆದರೆ ಘಟನೆಯ ನಿರೂಪಣೆಯಲ್ಲಿ ನಂಬಲು ಅರ್ಹವಲ್ಲದ ಅಸಂಭಾವ್ಯವೆನಿಸುವ ಅತಿಮಾನವೀಯ ಇಲ್ಲವೇ ಪವಾಡ ಸಾದೃಶ್ಯ ಅಂಶಗಳು ಸ್ಥಳಕ್ಕೆ ಆರೋಪಿತವಾಗುವುದರಿಂದ ಅವು ಸ್ಥಳಸಂಬಂಧಿ ಐತಿಹ್ಯಗಳಾಗಿ ಉಳಿಯದೆ ಸ್ಥಳಪುರಾಣಗಳಾಗಿ ಬೆಳೆದುಬಿಡುತ್ತವೆ.

ಕೆಲವು ಸ್ಥಳಪುರಾಣಗಳು ಸ್ಥಳನಾಮಕ್ಕೆ ಕಾರಣವಾದ ವಿವರಗಳನ್ನು ಹೊರತುಪಡಿಸಿ ಅಲ್ಲಿ ನೆಲೆಸಿದೆ ಎನ್ನಲಾದ ದೈವದ ಬಗ್ಗೆ ವಿವರಿಸುತ್ತವೆ. ಜನಪದರಿಗೆ ಇವುಗಳ ಬಗ್ಗೆ ನಂಬಿಕೆ ಇರುತ್ತದೆ. ವಾಸ್ತವದ ಬಗ್ಗೆ ಪುರಾವೆಗಳು ಏನನ್ನಾದರು ಸ್ಪಷ್ಟಪಡಿಸುತ್ತಿವೆಯೇ ಎಂಬುದು ಮುಖ್ಯವಾಗುವುದಿಲ್ಲ. ಪುರಾಣ ಪ್ರತಿಮೆ ಜನಪದೀಯ ಅಂಶಗಳಿಗೆ ಒಳಗಾಗಿರುತ್ತದೆ. ಉದಾಹರಣೆಗೆ ಲಕ್ಷ್ಮಿಯ ಸಂಪತ್ತನ್ನು ದೋಚಲು ಕಳ್ಳರು ದೇವಾಲಯಕ್ಕೆ ನುಗ್ಗಿದರು. ಅವಳು ಸ್ವಲ್ಪವೇ ದೂರದ ಗುಡಿಯಲ್ಲಿರುವ ಕಳಂತರಾಯ ದೈವವನ್ನು ಸಹಾಯಕ್ಕೆಂದು ಜೋರಾಗಿ ಕೂಗಿದಳು. ಕಳ್ಳರಿಗೆ ಸಿಟ್ಟು ಬಂದು ಅವಳ ಮೂಗನ್ನು ಕತ್ತಿಯಿಂದ ಕತ್ತರಿಸಿಬಿಟ್ಟರು. ವಿಗ್ರಹ ಭಗ್ನವಾಯಿತು. ಅವಳು ಕಲ್ಲುಗಳಾಗುವಂತೆ ಶಾಪ ಹಾಕಿದಳು. ಕಳಂಕರಾಯ ಇವಳ ಕೂಗನ್ನು ಕೇಳಿಸಿಕೊಂಡು ಧಾವಿಸಿ ಬಂದು ನೋಡಿದ ದೇವಿ ಭಗ್ನವಾಗಿದ್ದಾಳೆ. ಕಳ್ಳರು ಕಲ್ಲುಗಳಾಗಿದ್ದಾರೆ. ಅಂದಿನಿಂದ ಅವಳಿಗೆ ಪೂಜೆ ಇಲ್ಲವಾಯಿತು ಎನ್ನುತ್ತಾರೆ. ಈ ಐತಿಹ್ಯದಲ್ಲಿ ಇಷ್ಟೊಂದು ದುರ್ಬಲಳು ದೇವಿ ಹೇಗಾದಳು ಎಂಬ ಪ್ರಶ್ನೆಯಾಗಲಿ ಅಥವಾ ಕಳ್ಳರನ್ನು ಕಂಡೊಡನೆಯೇ ಕಲ್ಲುಗಳಾಗುವಂತೆ ಶಾಪ ನೀಡಬಹುದಿತ್ತಲ್ಲವೇ ಎಂಬ ಕುತೂಹಲವಾಗಲಿ ಕೇಳುಗರಲ್ಲಿ ಮೂಡುವುದಿಲ್ಲ.

ಅಥವಾ ಅದು ಮುಖ್ಯವೂ ಅಲ್ಲ, ದೇವತೆಯಾದರೇನು ಹೆಣ್ಣು ದುರ್ಬಲಳು ಜೊತೆಗೆ ಸಹನಾಶೀಲಳು ಆದರೆ ಪರಿಸ್ಥಿತಿ ವಿಕೋಪಕ್ಕೆ ಹೋದಾಗ ಶಾಪಹಾಕುತ್ತಾಳೆ. ಅದು ಹೆಣ್ಣಿನ ಶಾಪವಾದ್ದರಿಂದ ಫಲಿಸುತ್ತದೆಯೆಂಬ ನಂಬಿಕೆ ಇದೆ.

ಇಲ್ಲಿನ ಕಳಂತರಾಯನ ಗುಡಿಯ ಮುಂದಿರುವ ಬಂಡೆಯ ಮೇಲೆ ನೀರು ಹರಿದಂತೆ ಸವೆದಿರುವ ಇಳಿಜಾರು ಕಂಡುಬರುತ್ತದೆ. ಇದನ್ನು ಸೀತೆಯ ಸೆರಗು ಎನ್ನುತ್ತಾರೆ. ರಾವಣನು ಸೀತೆಯನ್ನು ಇಲ್ಲಿಂದಲೇ ಅಪಹರಿಸಿದ್ದು ಎಂಬುದಕ್ಕೆ ಕುರುಹಾಗಿ ಆ ಬಂಡೆಯನ್ನು ತೋರಿಸುತ್ತಾರೆ. ಆ ಗುರುತು ಸೀತೆಯನ್ನು ದರದರನೆ ಎಳೆದೊಯ್ಯುವಾಗ ಜಾರಿ ಬಿದ್ದ ಸೀತೆಯ ಸೆರಗು ಬಂಡೆಯನ್ನು ಸವೆಸಿರುವ ಗುರುತು ಎಂದು ಹೇಳುತ್ತಾರೆ. ಹಾಗೆಯೇ ಸೀತೆಯನ್ನು ಬಿಡಿಸಿಕೊಳ್ಳಲು ಹೋದ ಜಟಾಯುವನ್ನು ರಾವಣ ಇಲ್ಲಿಯೇ ಕತ್ತರಿಸಿದ್ದು ಅದರ ಒಂದು ರೆಕ್ಕೆ ಇಲ್ಲಿ ಕಡಿದು ಬಿತ್ತು, ಮತ್ತೊಂದು ರೆಕ್ಕೆ ಲೇಪಾಕ್ಷಿಯಲ್ಲಿ ಬಿದ್ದಿದೆ ಎಂದು ಹೇಳುತ್ತಾರೆ. ಸೀತೆಯನ್ನು ಹುಡುಕುತ್ತಾ ಬಂದ ರಾಮ-ಲಕ್ಷ್ಮಣರು ಈ ಸ್ಥಳದಲ್ಲಿ ವಿಶ್ರಾಂತಿ ಪಡೆದರು. ದಣಿವನ್ನು ಆರಿಸಿಕೊಳ್ಳಲು ಚಿಲುಮೆಯನ್ನು ತೋಡಿ ನೀರನ್ನು ಕುಡಿದರು. ಹಾಗೆಯೇ ಬೆಟ್ಟದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಿದರು. ಅವನೇ ಕಳಂತರಾಯನೆಂದು ಹೇಳುತ್ತಾರೆ. ಐತಿಹ್ಯವು ಮತ್ತೆ ಲೇಪಾಕ್ಷಿಯ ಸ್ಥಳಪುರಾಣದವರೆಗೂ ಬೆಳೆಯುತ್ತದೆ. ಅಲ್ಲಿಂದ ಮುಂದೆ ಹೊರಟ ರಾಮ-ಲಕ್ಷ್ಮಣರು ಲೇಪಾಕ್ಷಿಗೆ ಹೋದರು. ಅಲ್ಲಿ ಜಟಾಯುವು ರೆಕ್ಕೆಗಳೆರಡನ್ನೂ ಕಳೆದುಕೊಂಡು ಹಾರಲಾರದೆ ಕೆಳಗೆ ಬಿದ್ದು ನರಳುತ್ತಿತ್ತು. ಅದನ್ನು ಕಂಡ ರಾಮ-ಲಕ್ಷ್ಮಣರು ಎಲೈ ಪಕ್ಷಿ ನಿನಗೆ ಏನಾಗಿದೆ ಎದ್ದೇಳು (ತೆಲುಗಿನಲ್ಲಿ ಲೈ) ಪಕ್ಷಿ ಎಂದು ಎಬ್ಬಿಸಿದರು. ಅಂದಿನಿಂದ ಆ ಊರು ಲೇಪಾಕ್ಷಿ ಎಂಬ ಹೆಸರನ್ನು ಪಡೆಯಿತು ಎನ್ನುತ್ತಾರೆ. ಲೇಪಾಕ್ಷಿಯ ಸ್ಥಳಪುರಾಣವು ಜನಪ್ರಿಯವಾಗಿರುವುದರ ಹಿನ್ನೆಲೆಯಲ್ಲಿ ತಮ್ಮ ಸ್ಥಳಕ್ಕೆ ಮಹತ್ವ ಹೆಚ್ಚಿಸಿಕೊಳ್ಳಲು ಲೇಪಾಕ್ಷಿಯನ್ನು ಬಳಸಿಕೊಂಡಂತಿದೆ.

**ಸ್ಥಳೈತಿಹ್ಯಗಳಲ್ಲಿ ಘಟನೆಯ ಪ್ರಾಧಾನ್ಯತೆ :** ಸ್ಥಳಕ್ಕೆ ಸಂಬಂಧಪಟ್ಟ, ಸ್ಥಳದ ವಿಶೇಷಗಳಿಗೆ ಸಂಬಂಧಪಟ್ಟ ಸ್ಥಳೀಯ ಇಲ್ಲವೇ ಸಂಚಾರಿ ಐತಿಹ್ಯಗಳಲ್ಲಿ ನಿರ್ದಿಷ್ಟ ಘಟನೆಯಿಂದಾಗಿಯೇ ಹೊಸ ತಿರುವು ಕಾಣಿಸಿಕೊಳ್ಳುವುದುಂಟು.[೯] ಇಂತಹ ಸ್ಥಳೈತಿಹ್ಯಗಳಲ್ಲಿ ಜನಪ್ರಿಯವಾದ ಸಂಚಾರಿ ಐತಿಹ್ಯವು ಇಲ್ಲವೇ ಪೌರಾಣಿಕ ಸಂದರ್ಭವು ಆಯಾ ಸ್ಥಳಕ್ಕೆ ಅನ್ವಯವಾಗುವಾಗ ಅಲ್ಲಲ್ಲಿನ ಪ್ರಾದೇಶಿಕ ಅಂಶಗಳನ್ನು ಒಳಗೊಂಡಿರುತ್ತದೆ. ಈ ಮೂಲಕ ಸ್ಥಳೈತಿಹ್ಯದ ಘಟನೆ ಮಹತ್ವ ಪಡೆಯುತ್ತದೆ. ಉದಾ: ರಾಮಾಯಣದಲ್ಲಿ ರಾಮ-ಲಕ್ಷ್ಮಣರು ಸೀತೆಯೊಂದಿಗೆ ವನವಾಸ ಮಾಡಿದರೆಂದು ನಿರೂಪಿತವಾಗುವ ಐತಿಹ್ಯಗಳಾಗಲಿ ಮಹಾಭಾರತದ ಪಾಂಡವರ ವನವಾಸದ ಐತಿಹ್ಯಗಳಾಗಲಿ ಸಾಮಾನ್ಯವಾಗಿ ಕಂಡು ಬರುವಂಥವು. ಆದರೆ ಸ್ಥಳದಿಂದ ಸ್ಥಳಕ್ಕೆ ಇವು ಕೆಲವು ಯಾವುದಾದರೂ ಪ್ರಾದೇಶಿಕವೆನಿಸುವ ವಿಶಿಷ್ಟ

ಗುಣಗಳಿಂದ ಕೂಡಿರುತ್ತವೆ. ಸೀತೆಯ ಸೆರಗಿನ ಬಂಡೆಯೊಂದಿಗೆ ಲೇಪಾಕ್ಷಿಯ ಪ್ರಸ್ತಾಪ ಬರುವುದು ಸಂಬಂಧಿಸಿದ ಪ್ರದೇಶಕ್ಕಷ್ಟೆ ಸಾಧ್ಯ.

ಜಿಲ್ಲೆಯಲ್ಲಿ ದೀಪಾವಳಿಯ ಆಚರಣೆಗೆ ಪೂರಕವಾಗಿ ಬರುವ ಬಲೀಂದ್ರನ ಆಚರಣೆಗೆ ಸಂಬಂಧಿಸಿ ಐತಿಹ್ಯವು ಪುರಾಣಾಧಾರಿತವಾದರೂ ಇಲ್ಲಿನ ಪ್ರಾದೇಶಿಕ ವೈಶಿಷ್ಟ್ಯಗಳಿಂದ ಕೂಡಿರುತ್ತದೆ. ಬಲಿಂದ್ರನು ತನ್ನ ರಾಜ್ಯದಲ್ಲಿ ಚಿನ್ನದ ಮಳೆಯನ್ನು ಸುರಿಸುತ್ತಿದ್ದ. ಅವನ ಪ್ರಜೆಗಳೆಲ್ಲ ಸುಭಿಕ್ಷವಾಗಿದ್ದರು. ಆದರೆ ಅವನು ರಾಕ್ಷಸನೆಂಬ ಕಾರಣಕ್ಕಾಗಿ ವಿಷ್ಣುವು ಅವನನ್ನು ಸಂಹಾರ ಮಾಡಬೇಕಾಗಿತ್ತು. ಆ ಪ್ರಕಾರವಾಗಿ ಬಲಿಂದ್ರನಿಂದ ಮೂರು ಹೆಜ್ಜೆಗಳನ್ನಿಡಲು ತನಗೆ ಜಾಗ ಬೇಕೆಂದು ದಾನವನ್ನು ಬೇಡಿದ. ಇದರಂತೆ ಆಕಾಶ-ಭೂಮಿಗಳಿಗೆ ಎರಡು ಹೆಜ್ಜೆಯ ಜಾಗ ಸರಿಯಾಯಿತು. ಇನ್ನೂ ಮೂರನೆಯ ಹೆಜ್ಜೆಗೆ ಆ ಚಕ್ರವರ್ತಿಯು ತನ್ನ ತಲೆಯನ್ನೇ ಬಲಿ ನೀಡಿದ. ವಿಷ್ಣುವು ಅವನ ತಲೆಯ ಮೇಲೆ ಪಾದವನ್ನಿಟ್ಟು ಪಾತಾಳಕ್ಕೆ ತುಳಿದ. ಕೊನೆಗಳಿಗೆಯಲ್ಲಿ ಬಲಿಂದ್ರನು ತನ್ನ ಪ್ರಜೆಗಳನ್ನು ರಾಜ್ಯವನ್ನು ಸುಭಿಕ್ಷವಾಗಿ ಮುಂದುವರಿಸಿಕೊಂಡು ಹೋಗಬೇಕೆಂದು ಬೇಡಿಕೊಂಡ. ತಾನು ಬಲಿಯಾದ ದಿನಕ್ಕನುಗುಣವಾಗಿ ವರ್ಷಕ್ಕೊಮ್ಮೆ ಭೂಲೋಕಕ್ಕೆ ಬಂದು ಹೋಗಲು ಅನುಮತಿ ಕೋರಿದ. ಬಲಿಯು ಕಾಲವಾದದ್ದರಿಂದ ಕತ್ತಲು ಆವರಿಸಿತ್ತು. ವರ್ಷಕ್ಕೊಮ್ಮೆ ಅವನು ಭೂಮಿಗೆ ಬರುವಾಗಲೂ ಅಮವಾಸ್ಯೆಯ ಕತ್ತಲು ಇರುತ್ತದೆ. ಅಲ್ಲದೆ ಅವನ ಕಾಲಾನಂತರ ಚಿನ್ನದ ಮಳೆ ಸುರಿಯುವುದು ನಿಂತು ಹೋಯಿತು. ಅದಕ್ಕೆ ವಿಷ್ಣುವು ಒಂದು ಉಪಾಯವನ್ನು ಮಾಡಿದ ಬಲಿಂದ್ರನು ಬರುವ ಸಂಜೆಯ ಸಮಯದಲ್ಲಿ ಎಲ್ಲರ ಮನೆಯ ಹೊಸ್ತಿಲುಗಳಿಗೆ ತಂಗಟೆಯ ಹೂ ಅಥವಾ ಹುಚ್ಚೆಳ್ಳು ಹೂವುಗಳನ್ನು ಹಾಕಿ ದೀಪಗಳನ್ನು ಬೆಳಗಿಸಿಡುವಂತೆ ಹೇಳಿದ. ದೀಪದ ಬೆಳಕಿನಲ್ಲಿ ಬಲೀಂದ್ರನು ಹೊನ್ನಿನ ಬಣ್ಣದ ಹೂವುಗಳನ್ನು ನೋಡಿ ಚಿನ್ನದ ಮಳೆ ಸುರಿದಿದೆಯೆಂದು ತಿಳಿದುಕೊಳ್ಳುತ್ತಾನೆ. ಗುಡುಗು-ಸಿಡಿಲುಗಳ ಸಾದೃಶ್ಯಕ್ಕಾಗಿ ಪಟಾಕಿ ಬಿರುಸು ಬಾಣಗಳನ್ನು ಹಚ್ಚಿರೆಂದು ಹೇಳಿದ. ಪ್ರತಿವರ್ಷವೂ ಹೀಗೆ ಬಲಿಚಕ್ರವರ್ತಿಯನ್ನು ಮೋಸ ಮಾಡುತ್ತೇವೆಂದು ಹೇಳುತ್ತಾರೆ.

ಬಲಿಚಕ್ರವರ್ತಿಯ ಆಚರಣೆಗೆ ಅನ್ವಯವಾಗುವ ಐತಿಹ್ಯಗಳಲ್ಲಿ ಬಲಿಯು ಕೆಟ್ಟವನೆಂಬ ಸೂಚನೆ ಕಂಡುಬರುವುದಿಲ್ಲ. ತನ್ನ ರಾಜ್ಯದ ಪ್ರಜೆಗಳನ್ನು ನೋಡಲು ವರ್ಷಕ್ಕೊಮ್ಮೆ ಬರುತ್ತಾನೆಂಬ ಆಶಯವೂ ಎಲ್ಲ ಕಡೆಯೂ ಒಂದೇ ಆಗಿದೆ. ಹೊನ್ನಿನ ಬಣ್ಣದ (ಹಳದಿ) ಹೂಗಳಿಂದ ಅಲಂಕರಿಸುವುದು ಕಂಡು ಬರುತ್ತದೆ. ಆದರೆ ಕೋಲಾರ ಜಿಲ್ಲೆಯಲ್ಲಿ ದೊರೆಯುವ ತಂಗಟೆಯ ಹೂವು (ಹೊನ್ನರಕೆ ಹೂವು) ಮತ್ತು ಹುಚ್ಚೆಳ್ಳು (ಗುರೆಳ್ಳು) ಹೂಗಳು ಆ ಕಾಲಕ್ಕೆ ಯಥೇಚ್ಛವಾಗಿ ಅರಳುವುದರಿಂದ ಅವುಗಳನ್ನು ಆಚರಣೆಗೆ ಬಳಸಿಕೊಳ್ಳುವುದು ಮುಖ್ಯ ಸಂಗತಿಯಾಗುತ್ತದೆ.

ಕೆಲವು ಸ್ಥಳನಾಮ ಸೂಚಕಗಳಲ್ಲೂ ಆ ನಿರ್ದಿಷ್ಟ ಸ್ಥಳದಲ್ಲಿ ನಡೆದ ನಿರ್ದಿಷ್ಟ ಘಟನೆ ಪ್ರಾಧಾನ್ಯತೆಯನ್ನು ಪಡೆದುಕೊಳ್ಳುತ್ತದೆ. ನಿರ್ದಿಷ್ಟ ಸ್ಥಳನಾಮಕ್ಕೆ ಪೂರಕವಾದ ಘಟನೆ ಏನು! ಯಾಕೆ ನಡೆಯಿತು? ಎಂಬ ಅಂಶಗಳು ಕುತೂಹಲ ಮೂಡಿಸುತ್ತವೆ. ಹಿಡಗೂರು ಎಂಬ ಸ್ಥಳನಾಮಕ್ಕೆ ಅನ್ವಯವಾಗುವ ಘಟನೆ ಹೀಗಿದೆ : ಪಾಂಡವರಿದ್ದ ಅರಗಿನ ಮನೆಗೆ ಬೆಂಕಿ ಬಿದ್ದಾಗ ಭೀಮನು ತನ್ನ ತಾಯಿ ಹಾಗೂ ಸಹೋದರರನ್ನು ಅಪಘಾತದಿಂದ ಪಾರುಮಾಡಿದ. ಎಲ್ಲರನ್ನೂ ತಬ್ಬಿಕೊಂಡು ಬೆಂಕಿಯಿಂದ ಹೊರ ಬಿದ್ದವನೇ ನಡುರಾತ್ರಿ ಒಂದು ನಿರ್ಜನ ಪ್ರದೇಶಕ್ಕೆ ನಡೆದ. ಅಲ್ಲೊಂದು ಮರದ ಕೆಳಗೆ ತಾಯಿ ಮತ್ತು ಅಣ್ಣತಮ್ಮಂದಿರನ್ನು ಮಲಗಿಸಿ ಕಾವಲು ಕಾಯುತ್ತಾ ಕುಳಿತ. ಆ ಸ್ಥಳವು ಒಂದು ಅರಣ್ಯ ಪ್ರದೇಶವಾಗಿತ್ತು. ಅಲ್ಲದೆ ಹಿಡಿಂಬನೆಂಬ ರಾಕ್ಷಸನಿಗೆ ಸೇರಿದ ಹಿಡಿಂಬಾಪುರಕ್ಕೆ ಸೇರಿತ್ತು. ಹಿಡಿಂಬ ಮತ್ತು ಅವನ ತಂಗಿ ಹಿಡಿಂಬೆಗೆ ನರಮನುಷ್ಯರ ವಾಸನೆ ಬಂತು. ಹುಡುಕುತ್ತಾ ಬಂದವರು ಅಲ್ಲಿ ಮರದಡಿ ಮಲಗಿದ್ದ ಮನುಷ್ಯರನ್ನು ತಿನ್ನಲು ಪ್ರಯತ್ನಿಸಿದರು. ಭೀಮನು ಹಿಡಿಂಬನನ್ನು ಕೊಂದನು. ಭೀಮನ ಸಾಹಸಕ್ಕೆ ಮೆಚ್ಚಿದ ಹಿಡಿಂಬೆಯು ತಾನು ಅಣ್ಣನಿಲ್ಲದೆ ಅನಾಥಳಾಗಿದ್ದೇನೆ ನನ್ನನ್ನು ಮದುವೆಯಾಗೆಂದು ಕೇಳಿಕೊಂಡಳು. ಅದರಂತೆ ಭೀಮನು ಹಿಡಿಂಬೆಯನ್ನು ಮದುವೆಯಾದನು. ಹಿಡಿಂಬಾಪುರವೆಂಬ ಆ ಊರು ಹಿಡಿಂಬನ ಮರಣದ ನಂತರ ಹಿಡಿಂಬೆಯ ಊರು ಆಗಿತ್ತು. ಕಾಲಾನಂತರ ಹಿಡಗೂರ ಆಯಿತೆಂದು ಹೇಳುತ್ತಾರೆ.

ಚಿಕ್ಕಕುರುಗೋಡು ದೊಡ್ಡಕುರುಗೋಡು ಕುರುಗೋಡುತಮ್ಮನಹಳ್ಳಿಗಳೆಂಬ ಊರುಗಳು ಒಂದಕ್ಕೊಂದು ಸಮೀಪದಲ್ಲಿ ಅಂದರೆ ಮೂರು-ನಾಲ್ಕು ಕಿ.ಮೀ.ಗಳ ದೂರದಲ್ಲಿ ಗೌರೀಬಿದನೂರಿಗೆ ಸಮೀಪದಲ್ಲಿ ಕಂಡುಬರುತ್ತವೆ. ವಲಸೆ ಬಂದ ಕುರುಬರು ಈ ಊರುಗಳನ್ನು ಕಟ್ಟಿದ ಘಟನೆಗಳನ್ನು ಒಂದು ಐತಿಹ್ಯ ವಿವರಿಸುತ್ತದೆ. ದೊಡ್ಡ ಕುರುಬನು ಕಟ್ಟಿದ ಊರು ದೊಡ್ಡಕುರುಗೋಡು ಚಿಕ್ಕಕುರುಬನ ಊರು ಚಿಕ್ಕಕುರುಗೋಡು ಇವರಿಬ್ಬರ ತಮ್ಮನು ಸ್ಥಾಪಿಸಿಕೊಂಡ ಕುರುಗೋಡು ಅದು ಕುರುಗೋಡು ತಮ್ಮನಹಳ್ಳಿ. ತೆಲುಗಿನಲ್ಲಿ ಕುರುಬೋಡು ಎಂದರೆ ಕುರುಬನೆಂದು ಅರ್ಥ. ಈ ಊರುಗಳಿಗೆ ಪೆದ್ದಕುರುಗೋಡು, ಚಿನ್ನಕುರುಗೋಡು, ಕುರುಗೋಡುತಮ್ಮನಿಪಲ್ಲಿ ಎಂದು ತೆಲುಗಿನಿಂದ ಕರೆಯುತ್ತಾರೆ. ಆದರೆ ಈ ಊರುಗಳಲ್ಲಿ ಕಪ್ಪು ಮಣ್ಣಿನ ಪ್ರದೇಶವು ಹೆಚ್ಚಾಗಿದ್ದು ಇಲ್ಲಿ ಭತ್ತವನ್ನು ಬೆಳೆಯುತ್ತಿದ್ದರೆಂಬುದನ್ನು ಗಮನಿಸಬೇಕಾಗುತ್ತದೆ.

ಉತ್ತರ ಪಿನಾಕನಿ ನದಿಯ ದಡದಲ್ಲಿನ ಈ ಊರುಗಳಲ್ಲಿ ಬೂದಿಗುಡ್ಡಗಳಿದ್ದು ಅವು ಪಾಂಡವರು-ಕೌರವರು ಯಜ್ಞ-ಯಾಗಾದಿಗಳನ್ನು ನಡೆಸಿದ ಸ್ಥಳಗಳೆಂದು (ಹೋಮ ಸುಟ್ಟ ದಡಗಳೆಂದು) ಹೇಳುತ್ತಾರೆ. ಹಿಂದೆ ಯಾವುದೇ ಪ್ರಾಚೀನ ಸಂಸ್ಕೃತಿಯು ಸುಟ್ಟು ಭಸ್ಮವಾಗಿರಬಹುದಾದ ಅವಶೇಷಗಳನ್ನು

ಯಾಗ-ಯಜ್ಞಾದಿಗಳಿಗೆ ಬಳಸಿಕೊಂಡ ಪಾತ್ರೆಯ ವಿಶೇಷಗಳೆನ್ನುತ್ತಾರೆ. ಇಲ್ಲಿನ ಉತ್ತರ ಪಿನಾಕಿನಿ ನದಿಯ ನಡುಗಡ್ಡೆಯಲ್ಲಿ ಪಾಂಡವರ ಗುಡಿಗಳ ಅವಶೇಷಗಳಿದ್ದು ಆ ಪ್ರದೇಶವನ್ನು ಮಲ್ಲಪ್ಪನಗಡ್ಡೆ ಎಂದು ಕರೆಯುತ್ತಾರೆ. ಇದೇ ನದಿಯ ದಡದಲ್ಲಿ ಐದಾರು ಕಿ.ಮೀ.ಗಳ ದೂರದಲ್ಲಿ ಕುರುಬರ ಸಾಂಸ್ಕೃತಿಕ ವೀರ ದಾಲ್‌ದುರ್ಗಪ್ಪ (ದಾದಲದುರ್ಗಪ್ಪ)ನ ಜಲ್ದಿ (ತಿಥಿಯ ಸಂಬಂಧಿ ಆಚರಣೆ) ನಡೆಯುತ್ತದೆ. ಇವೆಲ್ಲವುಗಳ ಆಧಾರದ ಮೇಲೆ ಯಾವುದೋ ಕಾಲಘಟ್ಟದಲ್ಲಿ ನದಿಯ ದಡಗಳಲ್ಲಿ ಕುರುಬರು ನೆಲೆಸಿದ್ದು ಪಶುಪಾಲನೆ ಹಾಗೂ ಕೃಷಿಯನ್ನು ಕೈಗೊಂಡಿರಬೇಕೆಂದು ಕಂಡುಬರುತ್ತದೆ. ನಂತರ ಆಂಧ್ರದ ರೆಡ್ಡಿಗಳು ಇಲ್ಲಿಗೆ ಲಗ್ಗೆಯಿಟ್ಟ ನಂತರ ಇವರು ಕೃಷಿಭೂಮಿಯನ್ನು ಕಳೆದುಕೊಂಡ ಸಾಧ್ಯತೆಗಳಿವೆ.

**ಬಳೆಬಂಡೆ** (ಗಾಜುಲುಬಂಡ ಚಿಂತಾಮಣಿ ತಾ) : ಹಿಂದಿನ ಕಾಲದಲ್ಲಿ ಈ ಸ್ಥಳದಲ್ಲಿ ಬಳೆಗಳನ್ನು ತಯಾರಿಸಿ, ಭೂಮಿಯ ಒಳಗೆ ಕಂದರಗಳನ್ನು ತೋಡಿ ಬಳೆಗಳನ್ನು ಸಂಗ್ರಹಿಸುತ್ತಿದ್ದರು. ಈಗಲೂ ಇಲ್ಲಿ ನೆಲವನ್ನು ಅಗೆದರೆ ಬಳೆಗಳ ಅವಶೇಷಗಳು ದೊರೆಯುತ್ತವೆ.

**ದಿಬ್ಬೂರಹಳ್ಳಿ** (ಶಿಡ್ಲಘಟ್ಟ ತಾ) : ಹಿಂದಿನ ಕಾಲದಲ್ಲಿ ಈ ಊರನ್ನು ಮುತ್ಯಾಲ ಪಟ್ಟಣವೆಂದು ಕರೆಯುತ್ತಿದ್ದರು. ದಿಣ್ಣೆಯ ಪ್ರದೇಶದಲ್ಲಿರುವುದರಿಂದ ಚೋಳರ ಕಾಲದಲ್ಲಿ ಮುಚ್ಚಿಟಲ ದಿನ್ನ (ದಿಣ್ಣೆ) ಎಂದು ಕರೆಯುತ್ತಿದ್ದರು. ಚೋಳರು ಕಟ್ಟಿಸಿದರೆನ್ನಲಾದ ಸೋಮೇಶ್ವರ ದೇವಾಲಯ ಮತ್ತು ಚೌಡೇಶ್ವರಿ ದೇವಾಲಯಗಳಿವೆ. ಈ ಪ್ರದೇಶವು ದಿಬ್ಬದ ಮೇಲಿದ್ದು ಪ್ರಾಚೀನ ಕಾಲದಲ್ಲಿ ಋಷಿಗಳು ಇಲ್ಲಿ ಯಜ್ಞಯಾಗಾದಿಗಳನ್ನು ಮಾಡಿದ್ದರೆಂದು ಅದರ ಸಾಕ್ಷಿಯಾಗಿ ನೆಲದಲ್ಲಿ ಮಡಿಕೆ-ಕುಡಿಕೆಗಳು ದೊರೆಯುತ್ತವೆಂದು ಐತಿಹ್ಯವನ್ನು ನಿರೂಪಿಸುತ್ತಾರೆ. ಸುಮಾರು ನೂರು ನೂರೈವತ್ತು ವರ್ಷಗಳ ಹಿಂದೆ ಶೃಂಗೇರಿಯ ಮಠದ ಸ್ವಾಮಿಯೊಬ್ಬರು ಇಲ್ಲಿ ಲಿಂಗ ಪ್ರತಿಷ್ಠಾಪನೆ ಮಾಡಿ ಒಂದೂವರೆ ತಿಂಗಳುಗಳ ಕಾಲ ಇಲ್ಲಿ ವಾಸವಾಗಿದ್ದರೆಂದು ಹೇಳುತ್ತಾರೆ.

ಪ್ರಾಚೀನ ಯುಗದ ಅವಶೇಷಗಳುಳ್ಳ ಆ ಸ್ಥಳವನ್ನು ಮುತ್ಯಾಲ ಪಟ್ಟಣ (ಮುತ್ತಿನ ಪಟ್ಟಣ)ವಾಗಿ ಜನಪದರು ವೈಭವೀಕರಿಸಿದ್ದಾರೆ. ಚೋಳರ ಕಾಲದೊಂದಿಗೆ ಸಂಬಂಧ ಬೆಸೆಯುವಾಗ ಮುಚ್ಚಟಲ ದಿಣ್ಣೆ (ಮುಚ್ಚಟೆ: ಪ್ರೀತಿಯ ದಿಣ್ಣೆ) ಎಂದು ಕರೆದರೆನ್ನಲಾಗಿದೆ. ಒಂದು ವೇಳೆ ಇದು ಮುಚ್ಚಲ ದಿನ್ನ (ಕಳ್ಳರ ದಿಣ್ಣೆ) ಎಂದು ಗುರುತಿಸಲ್ಪಟ್ಟಿರಬಹುದು. ಐತಿಹಾಸಿಕವಾಗಿ ನಾಶವಾದ ನೆನಪುಗಳು ಮರೆಯಾದಂತೆ ಪುರಾಣದ ಕಲ್ಪನೆಯ ಆರೋಪವಾಗಿದೆ. ಶೃಂಗೇರಿಯ ಸ್ವಾಮಿ ಬಂದಿದ್ದರೆನ್ನಲಾದ ಘಟನೆಯೂ ಸೇರಿಕೊಂಡಿತು. ಹೀಗೆ ಒಂದು ಸ್ಥಳದ ಮೇಲೆ ಹಲವು ಪರಿಣಾಮ ಪ್ರಭಾವಗಳೇರ್ಪಟ್ಟ ಗುರುತುಗಳು ಇಲ್ಲಿ ಮುಖ್ಯವಾಗುತ್ತವೆ.

**ಮಿಟ್ಟೇಮರಿ :** ಹಿಂದೆ ಇಲ್ಲಿ ಸಕ್ಕರೆಯನ್ನು ತಯಾರಿಸಿ ಇಲ್ಲಿನ ಸಕ್ಕರೆಯನ್ನು ಎತ್ತಿನ ಮೇಲೆ ಸಾಗಿಸಿಕೊಂಡು ಹೋಗಿ ವ್ಯಾಪಾರ ಮಾಡುತ್ತಿದ್ದರೆಂದು ಈ ಕಾರಣದಿಂದ 'ಮೀಟಾಪುರಿ' ಎಂಬ ಹೆಸರಿತ್ತೆಂದು ಹೇಳುತ್ತಾರೆ. ಬಹಳ ಪ್ರಾಚೀನ ಕಾಲದಲ್ಲಿ ಇದನ್ನು ಗರುಡಾದ್ರಿಪುರವೆಂದು ಕರೆಯುತ್ತಿದ್ದರು. ಇದಕ್ಕೆ ಕಾರಣ ಊರಿನ ಹನುಮಂತನ ಗುಡಿಯ ಮುಂದಿರುವ ಗರುಡನ ವಿಗ್ರಹವೆಂದು ತೋರಿಸುತ್ತಾರೆ. ಇಲ್ಲಿನ ಕಾಡಿನಲ್ಲಿ ಹುತ್ತಕ್ಕೆ ಹಸು ಹಾಲು ಕರೆಯುತ್ತಿದ್ದನ್ನು ಪತ್ತೆ ಮಾಡಿ ಹುತ್ತಕ್ಕೆ ಪೂಜೆ ಸಲ್ಲಿಸುತ್ತಿದ್ದರು. ಗುಮ್ಮನಾಯಕನಹಳ್ಳಿಯ ಪಾಳೆಯಗಾರರು ಹುತ್ತದ ಮೇಲೆ ಲಕ್ಷ್ಮೀನಾರಾಯಣ ಸ್ವಾಮಿಯ ವಿಗ್ರಹವನ್ನಿಟ್ಟು ದೇವಾಲಯವನ್ನು ಕಟ್ಟಿಸಿದರು.

ಇಲ್ಲಿನ ಉಪ್ಪಡಮ್ಮನ ಕೆರೆಯಲ್ಲಿ ಪಾಳೆಯಗಾರರು ಉಪ್ಪನ್ನು ತಯಾರಿಸುತ್ತಿದ್ದರು. ಅದಕ್ಕೆಂದೇ ಗಾರಿನಿಂದ ಕಟ್ಟಿಡ ಪಟ್ಟಿಗಳು ಈಗಲೂ ಇವೆ. ಕೆಲವು ಸ್ಥಳನಾಮಗಳ ಕುರಿತು ಐತಿಹ್ಯಗಳು ಸ್ಥಳದ ಮೇಲೆ ಆದ ಉತ್ಪಾದನಾ ಪದಾರ್ಥದ ಪ್ರಭಾವ, ಧಾರ್ಮಿಕ ಪ್ರಭಾವ, ಇತ್ಯಾದಿ ಹಲವು ಅಂಶಗಳನ್ನು ಆಡಳಿತಾತ್ಮಕ ಪರಿಣಾಮದ ಹಿನ್ನೆಲೆಯಲ್ಲಿ ವಿವರಿಸುತ್ತದೆ. ಏಕೆಂದರೆ ಇಲ್ಲಿ ಗುಮ್ಮನಾಯಕನ ಹಳ್ಳಿಯ ಪಾಳೆಯಗಾರರ ಪ್ರಸ್ತಾಪವೂ ಇದೆ.

**ಕಾದಲವೇಣಿ** (ಗೌರೀಬಿದನೂರು ತಾ) : ಈ ಸ್ಥಳನಾಮದ ಅನ್ವರ್ಥನಾಮವು ಕಾದಲ ಮತ್ತು ವೇಣಿ ಎಂಬ ಪದಗಳಿಂದ ಸಂಪನ್ನಗೊಂಡು ಸುಂದರವಾದ ಅರ್ಥವನ್ನು ಕೊಡುತ್ತದೆ. ಪ್ರೀತಿಯಜಡೆ, ಪ್ರೀತಿಸುವವರ ಜಡೆ (ಪ್ರೇಯಸಿ ಅಥವಾ ಪ್ರಿಯತಮೆ ಇಲ್ಲವೇ ಪ್ರಿಯಕರ ಇವರಲ್ಲಿ ಯಾರದೊಬ್ಬರ ಜಡೆ ಇರಬಹುದು). ಐತಿಹ್ಯದ ಪ್ರಕಾರ ಐನೂರು ವರ್ಷಗಳ ಹಿಂದೆ ಕಾತುರಾಯ ಎಂಬ ಅರಸನು ಈ ಸ್ಥಳದಲ್ಲಿ ಕೋಟೆಯನ್ನು ಕಟ್ಟಿಕೊಂಡು ರಾಜ್ಯವಾಳುತ್ತಿದ್ದನು. ಆದ್ದರಿಂದ ಇದನ್ನು ಕಾತುರಾಯನ ಪಟ್ಟಣವೆಂದು ಕರೆಯುತ್ತಿದ್ದರು.

**ಸಾದಲಿ :** ಹಿಂದಿನ ಕಾಲದಲ್ಲಿ ಈ ಸಹದೇವಪುರವೆಂದು ಕರೆಸಿಕೊಳ್ಳುತ್ತಿತ್ತು. ಇಲ್ಲಿ ಏಳು ಎಲೆಯ ಜೋಳವನ್ನು ಬೆಳೆಯುತ್ತಿದ್ದರು. ಈ ಊರಿನ ಪೇದರಾಲು ಪೆದ್ದಮ್ಮ (ಬಡತನದ ದೊಡ್ಡಮ್ಮ) ಹೆಣ್ಣು ಮಕ್ಕಳಿಬ್ಬರು ಜೋಳವನ್ನು ಕದ್ದು ತಂದರು. ರಾಜರು ಅವರನ್ನು ಹಿಡಿದು ಗಲ್ಲುಶಿಕ್ಷೆಗೆ ಹಾಕಿದರು. ದೊಡ್ಡಮ್ಮನು ತನ್ನ ಮಕ್ಕಳು ಸತ್ತ ದುಃಖದಲ್ಲಿ ಈ ಊರು ಹಾಳಾಗಲಿ ಇಲ್ಲಿನ ಹೆಣ್ಣುಮಕ್ಕಳಿಗೆ ಕಷ್ಟಗಳು ಬರಲಿ, ಸೊಸೆಯಂದಿರು ಸುಖವಾಗಿರಲೆಂದು ಶಾಪ ಹಾಕಿದಳು.

**ಶ್ರೀನಿವಾಸಪುರ :** ಈ ಊರಿಗೆ ಪಾಪನಪಲ್ಲಿ ಹೆಸರಿತ್ತು. ದಿವಾನ್ ಪೂರ್ಣಯ್ಯನವರು ಒಮ್ಮೆ ತಿರುಪತಿಗೆ ಹೋಗಿ ಹಿಂದಿರುಗಿ ಬರುವಾಗ ಈ ಸ್ಥಳದಲ್ಲಿ ತಂಗಿದ್ದಾಗ ಊರಿಗೆ ತಮ್ಮ ಮಗ

ಶ್ರೀನಿವಾಸಮೂರ್ತಿಯ ನೆನಪಿಗಾಗಿ ಈ ಹೆಸರನ್ನು ಇಟ್ಟರೆಂದು ಐತಿಹ್ಯವಿದೆ. ಕೈವಾರ : ಇಂದ್ರನು ವೃತಾಸುರನನ್ನು ಕೊಂದಾಗ ಉಂಟಾದ ಬ್ರಹ್ಮಹತ್ಯಾದೋಷ ನಿವಾರಣೆಗಾಗಿ ಪಂಚನಾರಾಯಣ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ. ಅದರಲ್ಲಿ ಕೈವಾರದ ಮೂರ್ತಿ ಅಮರನಾರಾಯಣ ಮೂರ್ತಿಯು ಒಂದು. ಆಗ ದೇವತೆಗಳು ಸ್ವಾಮಿಯನ್ನು ಕೈವಾರ (ಸ್ತುತಿ) ಮಾಡಿದರು. ಹೀಗೆ ಕೈವಾರ ಎಂಬ ಹೆಸರು ಈ ಊರಿಗೆ ಬಂದಿದೆ ಎನ್ನುತ್ತಾರೆ.

**ಚಿಲಕನ ನೇರ್ಪು** (ಮಾಲೂರು ತಾ) : ತೆಲುಗಿನಲ್ಲಿ 'ಚಿಲಕ' ಅಂದರೆ ಗಿಳಿ ಎಂಬುದಾಗಿಯೂ 'ನೇರ್ಪು' ಅಂದರೆ ಹರಡು ಎಂಬ ಅರ್ಥಗಳಿವೆ. ಗಿಳಿಗಳ ಹರುಡುವಿಕೆ ಎಂದು ಈ ಪದದ ಅರ್ಥ ಚಿಂತಾಮಣಿ ತಾಲ್ಲೂಕಿನಲ್ಲಿ ಈ ಗ್ರಾಮ ನಿಸರ್ಗದ ಸಿರಿಯ ನಡುವೆ ಇದೆ. ಈ ಹಳ್ಳಿಯ ಸುತ್ತಮುತ್ತ ಸಾವಿರಾರು ಗಿಳಿಗಳು ಈಗಲೂ ದಂಡು ದಂಡಿನಲ್ಲಿ ಹಾರಾಡುತ್ತಿರುತ್ತವೆ. ಗಿಳಿಗಳು ಚಿಲುಕು ಚಿಲುಕೆಂದು ಈ ಪ್ರದೇಶದಲ್ಲಿ ಕೂಗಾಡುತ್ತ ಹಾರಾಡುತ್ತಿದ್ದುದ್ದರಿಂದ ಊರಿಗೆ ಈ ಹೆಸರು. **ವಿದುರಾಶ್ವತ್ಥ** : ಗೌರಿಬಿದನೂರು ತಾಲ್ಲೂಕಿನಲ್ಲಿದೆ. ಇಲ್ಲಿರುವ ದೊಡ್ಡ ಅಶ್ವತ್ಥವೃಕ್ಷವನ್ನು ಮಹಾಭಾರತ ಕಾಲದ ವಿದುರನೇ ನೆಟ್ಟು ಬೆಳೆಸಿದನೆಂದು ಐತಿಹ್ಯ. ಹೀಗಾಗಿ ಊರಿಗೆ ವಿದುರಾಶ್ವತ್ಥ ಎಂಬ ಹೆಸರು ಬಂದಿದೆ.

**ಮಂಡಿಗಲ್ಲು** : ಈ ಊರಿಗೆ ಸುಮಾರು ವರ್ಷಗಳ ಹಿಂದೆ ಅಂದರೆ ಪುರಾಣಗಳ ಕಾಲದಲ್ಲಿ ಪನಾಗಲ್ಲು ಎಂಬ ಹೆಸರಿತ್ತು. ಪಾಳೆಯಗಾರರ ಕಾಲದಲ್ಲಿ 'ಮಂಡಿಗಲ್ಲು' ಎಂಬ ಹೆಸರು ಬಂತು. ಪಾಳೆಯಗಾರ ಭೈರೇಗೌಡ ಈ ಹೆಸರನ್ನು ಇಟ್ಟಿದ್ದಾನೆ. ಹಿಂದೆ ಬಾಲನಾಗಮ್ಮ ಹುಟ್ಟಿದ ಪನಗಲ್ಲು ಪಟ್ಟಣ ಇದೇ ಆಗಿತ್ತು. ಭಿಕ್ಷೆಯ ನೆಪದಲ್ಲಿ ಬಂದ ಮಾಯಲುಮರಾಠಿಯು ಅವಳನ್ನು ಅಪಹರಿಸಿ ಈ ಊರಿನ ಬೆಟ್ಟದ ಗವಿ (ಗುಹೆ)ಯಲ್ಲಿ ಅಡಗಿಸಿಟ್ಟಿದ್ದ. ಆದ್ದರಿಂದ ಆ ಬೆಟ್ಟವನ್ನು ನಾಗಲುಗುಟ್ಟ (ನಾಗಮ್ಮನ ಗುಟ್ಟೆ) ಎಂದು ಕರೆಯುತ್ತಾರೆ. ಇದರ ಪಕ್ಕದಲ್ಲಿ ಮಾಯಲು ಮರಾಠಿಯ ಸ್ನಾನ ಮಾಡುತ್ತಿದ್ದ ಹಳ್ಳ ಇದೆ. ಅದನ್ನು ಫಕೀರನ ಹಳ್ಳ ಎಂದು ಕರೆಯುತ್ತಾರೆ. ಈ ಹಳ್ಳದ ಬಳಿ ಆತ ಗಾಂಡ್ಲು ಸಂಗೋಜಿ ಎಂಬ ಸೂಳೆಯನ್ನು ಇಟ್ಟುಕೊಂಡಿದ್ದ. ಅವಳ ನೆನಪಿಗಾಗಿ ಸಮೀಪದಲ್ಲಿ ಕುಂಟೆಯನ್ನು ಕಟ್ಟಿಸಿದ್ದಾನೆ. ಇಂದಿಗೂ ಅದರ ಹೆಸರು 'ಗಾಂಡ್ಲು ಸಂಗೋಜಿ ಕುಂಟೆ' ಎಂದೇ ಆಗಿದೆ.

ಬಾಲನಾಗಮ್ಮನ ಕಥಾನಕವು ಜನಪದ ಕಾವ್ಯವಾಗಿ ಅಭಿವ್ಯಕ್ತಿಸಲ್ಪಟ್ಟ ಸಂದರ್ಭದಲ್ಲಿ ಇದರ ಕಥೆಗೆ ಸ್ಪಂದಿಸಿದ ಸ್ಥಳೀಯರು ಅದನ್ನು ತಮ್ಮ ಪ್ರದೇಶದ ಜನಪದ ವಲಯದಲ್ಲಿಯೇ ನಡೆದಿದೆಯೆಂದು ಪರಿಭಾವಿಸಿಕೊಂಡದ್ದರ ಹಿನ್ನೆಲೆಯಲ್ಲಿ ಸ್ಥಳಾಧಾರಗಳನ್ನು ಒದಗಿಸಿದ್ದಾರೆ. ಆ ಮೂಲಕ ಐತಿಹ್ಯವಾಗಿ ಮತ್ತೊಂದು ಜನಪದ ಸಾಹಿತ್ಯ ಪ್ರಕಾರವಾಗಿ ರೂಪಾಂತರಗೊಂಡಿದೆ. ಪಾಳೆಯಗಾರರ ಕಾಲದಲ್ಲಿ ಈ

ಸ್ಥಳವು ವ್ಯಾಪಾರ ಕೇಂದ್ರವಾಗಿದ್ದು ಮಂಡಿ (ಗೋಡನ್)ಗಳಿಂದ ಇಲ್ಲಿ ಸಂಗ್ರಹಿಸಿ ಮಾರಾಟಕ್ಕೆ ಅನುವು ಮಾಡಿಕೊಡಲಾಗಿದ್ದರ ಪರಿಣಾಮವಾಗಿ ಮಂಡಿಗಲ್ಲು ಎಂದು ಹೆಸರಾಯಿತು.

ಹಿಂದೆ ಶ್ರೀರಾಮನು ವನವಾಸ ಬಂದಿದ್ದಾಗ ಇಲ್ಲಿ ಹೋಮ ಮಾಡಿ ಈ ಊರಿನಲ್ಲಿ ವಾಸವಾಗಿದ್ದ. ಈ ಊರಿಗೆ ಎರಡು ಕಿ.ಮೀ. ದೂರದ ಮಂಡಿಗಲ್ಲು ಬೆಟ್ಟದ ಗವಿಯಲ್ಲಿ ರಾಮನು ತಂಗಿದ್ದು ಅಲ್ಲಿನ ಆಲದ ಮರದ ಬೇರನ್ನು, ಬಾಣವನ್ನಾಗಿ ಮಾಡಿಕೊಂಡು ಬಾಣ ಪ್ರಯೋಗ ಮಾಡುತ್ತಿದ್ದ. ಈ ಪ್ರದೇಶದಲ್ಲಿ ಶ್ರೀರಾಮನಿದ್ದ ಎಂಬುದಕ್ಕೆ ಕೆಲವು ಗುರುತುಗಳನ್ನು ತೋರಿಸುತ್ತಾರೆ. ಆದ್ದರಿಂದ ಶ್ರೀರಾಮಪಟ್ಟಣವೆಂದು ಹೆಸರಾಯಿತಂತೆ. ಒಮ್ಮೆ ಒಬ್ಬ ಋಷಿಯು ರಾಮಪಟ್ಟಣವೆಂಬ ಈ ಊರಿನ ಹೆಸರನ್ನು ಕೇಳಿ ಶ್ರೀರಾಮನು ಆಳಿದ ಪಟ್ಟಣ ಹೇಗೆ ಇದೆಯೋ ನೋಡೋಣವೆಂದು ಕುತೂಹಲದಿಂದ ಬಂದ. ಹದಿನಾರು ಮನೆಗಳ ಈ ಊರನ್ನು ಕಂಡು ಬಹಳ ಬೇಸರಗೊಂಡ. "ಈ ಪರದೇಶಿ ಪಟ್ಟಣವನ್ನು ನೋಡಲು ಎಷ್ಟು ದೂರದಿಂದ ಬಂದೆ." ಎಂದು ಪರಿತಪಿಸಿದ. ಅಂದಿನಿಂದ ಪರದೇಶಿಪಟ್ಟಣವೆಂಬ ಹೆಸರೂ ಇದೆ.

ಕೆಲವು ಸಂದರ್ಭಗಳಲ್ಲಿ ಸ್ಥಳನಾಮವು ಬೇರೆ ಬೇರೆ ರೂಪಗಳನ್ನು ಪಡೆಯುತ್ತಿರುತ್ತದೆ. ಮೂಲರೂಪವು ಹಾಗೆಯೇ ಉಳಿದು ಅದರಿಂದ ಹಲವು ಸಾಧ್ಯತೆಗಳ ಅರ್ಥಗಳು ಕಾಲಘಟ್ಟಗಳಿಗೆ ಅನುಗುಣವಾಗಿ ಅನ್ವಯವಾಗುತ್ತಾ ಹೊಸ ಹೊಸ ಘಟನೆಗಳ ಹಿನ್ನೆಲೆಗಳನ್ನು ಕಟ್ಟಿಕೊಡುತ್ತಿರುತ್ತವೆ. ಕೆಲವು ಸ್ಥಳನಾಮಗಳು ಸಂಬಂಧಿಸಿದ ಸ್ವಾರಸ್ಯಗಳನ್ನು ಕಳೆದುಕೊಳ್ಳುತ್ತಿದ್ದಂತೆಯೇ ಬೇರೆ ಹೆಸರುಗಳನ್ನು ಪಡೆದುಕೊಂಡಿರುತ್ತವೆ. ಎಷ್ಟೋ ಗೊಲ್ಲರ ಹಳ್ಳಿಗಳು, ಕುರುಬರ ಹಳ್ಳಿಗಳು ಒಂದು ಕಾಲದಲ್ಲಿ ಆಯಾ ಸಮುದಾಯದ ನೆಲೆಗಳಾಗಿ ಹೆಸರುಗಳನ್ನು ಸೂಚಿಸುತ್ತಿದ್ದವು. ಕಾಲಕ್ರಮೇಣ ಅಲ್ಲಿ ಸಮುದಾಯಗಳು ಮರೆಯಾಗಿ ಸ್ಥಳೀಯವಾಗಿ ಮಹತ್ವ ಪಡೆದ ದೈವದ ಹೆಸರನ್ನು ಒಳಗೊಳ್ಳುತ್ತವೆ. ರಾಮಚಂದ್ರಪುರವೆಂತಲೋ ಗೋಪಾಲಪುರವೆಂತಲೋ ಹೆಸರು ಪಡೆಯುವುದುಂಟು.

ಕೆಲವೊಮ್ಮೆ ಆಡಳಿತಾತ್ಮಕ ಹಾಗೂ ರಾಜಕೀಯ ಕಾರಣಗಳಿಂದಾಗಿ ಸ್ಥಳನಾಮಗಳು ಬದಲಾಗುತ್ತವೆ. ಅಸ್ಪೃಶ್ಯರ ಅಥವಾ ಬುಡಕಟ್ಟುಗಳ ಕೇರಿಗಳು ಇಲ್ಲವೇ ಹಟ್ಟಿಗಳು ಸ್ಥಳನಾಮದೊಂದಿಗೆ ಮೂಲನೆಲೆಯ ನೆನಪುಗಳನ್ನು ಉಳಿಸಿಕೊಂಡಿದ್ದವು. ಇಂಥ ಸಮುದಾಯಗಳ ಮೇಲೆ ಪ್ರಭಾವಗಳಿಗೆ ಅನುಗುಣವಾಗಿ ಪರಿವರ್ತನೆ ಹೊಂದಿರುವುದು ತಿಳಿದುಬರುತ್ತದೆ. ಎ.ಕೆ. ಕಾಲೋನಿ, ಅಂಬೇಡ್ಕರ್ ನಗರ, ಜಗಜೀವನ್‌ರಾಂ ನಗರ ಎಂಬ ಇತ್ಯಾದಿ ಸ್ಥಳನಾಮಗಳಾಗಿರುತ್ತವೆ. ಅಲ್ಲಿನ ಗ್ರಾಮದೇವತೆಯು ಶಿಷ್ಟ ಪ್ರಭಾವಕ್ಕೆ ಒಳಗಾಗುತ್ತಿದ್ದರೆ ಪ್ರಭಾವದಿಂದಾದ ನವೀನ ಹೆಸರು ಸ್ಥಳಸೂಚಕವಾಗಿರುತ್ತದೆ. ಮಾರಿಕಾಂಬ ನಗರ, ಜಗದಾಂಬ ನಗರ, ಪಾರ್ವತಿಪುರ, ಲಕ್ಷ್ಮೀಪುರ, ಸರಸ್ವತಿಪುರ ಇತ್ಯಾದಿ. ಕೆಲವೊಮ್ಮೆ ತಮ್ಮ ಊರಿನ

ಹೆಸರು ತಮಗೆ ಅಪಮಾನ ತರುವಂಥದ್ದೆಂಬ ಹಿನ್ನೆಲೆಯಲ್ಲಿಯೂ ಬದಲಾಯಿಸಿಕೊಳ್ಳುವ ಪರಿಪಾಠವಿದೆ. ಜಾತಿವ್ಯವಸ್ಥೆಯ ಹಿನ್ನೆಲೆಯಲ್ಲಿ ಕೆಳಜಾತಿಗಳು ಅದರಲ್ಲೂ ಅಸ್ಪೃಶ್ಯರು ಜಾತಿಸೂಚಕ ಸ್ಥಳನಾಮದ ಕೀಳರಿಮೆಯಿಂದ ಕೆಲವು ಕಡೆ ತಮ್ಮ ಊರಿನ ಹೆಸರುಗಳನ್ನು ಆಧುನಿಕ ಪರಿಸರಕ್ಕನುಗುಣವಾಗಿ ಬದಲಾಯಿಸಿಕೊಂಡಿರುತ್ತಾರೆ. ಜಾತಿನಿಂದನೆ ಅಪಮಾನಗಳಂಥ ಶೋಷಣೆಗಳಿಂದ ಬೇಸತ್ತ ದಲಿತ ವರ್ಗದ ತುಡಿತವನ್ನು ಈ ಬದಲಾವಣೆಗಳಲ್ಲಿ ಕಾಣಬಹುದು.

ಕೆಲವೊಮ್ಮೆ ಪ್ರಭಾವಿ ಆಡಳಿತಗಾರರ ನೆನಪಿನಲ್ಲಿ ಸ್ಥಳನಾಮಗಳು ರಚನೆಯಾಗುತ್ತವೆ. ರಾಬರ್ಟ್‌ಸನ್‌ಪೇಟೆ, ಇಂದಿರಾನಗರ, ಸಂಜಯನಗರ, ರಾಜೀವ್‌ಗಾಂಧಿನಗರ ಮುಂತಾದ ಪ್ರಭಾವಿ ವ್ಯಕ್ತಿಗಳು ಇಲ್ಲವೇ ಜನಪ್ರಿಯ ವ್ಯಕ್ತಿಗಳು ಆ ಸ್ಥಳಕ್ಕೆ ಭೇಟಿ ನೀಡಿದ್ದರ ನೆನಪುಗಳನ್ನು ಇಂಥ ಸ್ಥಳನಾಮಗಳು ಒಳಗೊಂಡಿರುತ್ತವೆ. ಕೆಲವು ಆಡಳಿತಗಾರರು ತಮ್ಮ ಯಾವುದೋ ಒಂದು ಆಶಯಕ್ಕನು ಗುಣವಾಗಿ ಸ್ಥಳನಾಮಗಳಲ್ಲಿ ಮಾರ್ಪಾಟುಗಳನ್ನು ಮಾಡಿರುತ್ತಾರೆ. ಉದಾ : ದಿವಾನ್ ಪೂರ್ಣಯ್ಯನು ಒಮ್ಮೆ ತಿರುಪತಿಯ ಯಾತ್ರೆ ಮುಗಿಸಿ ಹಿಂದಿರುಗುವಾಗ ಕೋಲಾರ ಜಿಲ್ಲೆಯ ಪಾಪನಹಳ್ಳಿಯಲ್ಲಿ ತಂಗಿದ್ದ ನೆನಪಿಗಾಗಿ ಆ ಊರಿಗೆ ಶ್ರೀನಿವಾಸಪುರವೆಂಬ ಹೆಸರಿಸಿದನಂತೆ.

**ಮುರುಘಮಲ್ಲೆ-ಅಬ್ಬಾಜಾನ್ ಅಮ್ಮಾಜಾನ್ ದರ್ಗಾ :** ಚೋಳರ ದೊರೆಯು ಮುರುಘೇಶ್ವರ ದೇವಾಲಯವನ್ನು ಸ್ಥಾಪಿಸಿದ ಬೆಟ್ಟ ಪ್ರದೇಶವು ಮುರುಘಮಲ್ಲೆ ಎಂದಾಯಿತು ಎಂಬುದು ಐತಿಹ್ಯ. ಮುಸ್ಲಿಂ ಸಂತರಾದ ಅಬ್ಬಾಜಾನ್, ಅಮ್ಮಾಜಾನ್ ಸಮಾಧಿಗಳುಳ್ಳ ದರ್ಗಾ ಇದೆ. ರೋಗರುಜಿನಗಳ ಪರಿಹಾರ ಇಲ್ಲಿನ ಆಚರಣೆಗಳ ಆಶಯವಾಗಿದೆ.

### ಸ್ಥಳನಾಮಗಳು-ದೇವಾಲಯಗಳು

ಜಿಲ್ಲೆಯ ಶಿಷ್ಟ ಹಾಗೂ ಜನಪದ ವಲಯಗಳಲ್ಲಿ ವೈಷ್ಣವ ಪರಂಪರೆಯ ಪ್ರಭಾವವಿದೆ. ತಿರುಪತಿಯ ವೆಂಕಟರಮಣ, ಕದ್ರಿ (ಆಂಧ್ರದ ಅನಂತಪುರ ಜಿಲ್ಲೆ)ಯ ನರಸಿಂಹ ದೇವರುಗಳ ಭಕ್ತರು ಹೆಚ್ಚಾಗಿದ್ದಾರೆ. ತಮ್ಮ ದೈವಗಳ ನೆನಪುಗಳನ್ನು ಜನಪದರು ತಾವು ಇರುವಲ್ಲಿಯೇ ಸ್ಥಾಪಿಸಿಕೊಂಡು ಮರ-ಗಿಡಗಳ ಅಡಿಯಲ್ಲಿ ಸಣ್ಣಗುಡಿಗಳನ್ನು ಕಟ್ಟಿಕೊಂಡಿದ್ದಾರೆ. ಇಂಥ ಗುಡಿಗಳ ಒಳಗೆ ವಿಗ್ರಹ ಗಳಿರುವುದಿಲ್ಲ. ದುಂಡಗಿನ ಕಲ್ಲುಗಳು ಅಥವಾ ಬಂಡೆಗಲ್ಲುಗಳನ್ನು ದೇವಾಲಯದ ಒಳಗೆ ಇಟ್ಟು ಪೂಜಿಸುತ್ತಾರೆ. ತಮ್ಮ ಪೂರ್ವಿಕರ ಆರಾಧ್ಯ ದೈವದ ಮೂಲಗುಡಿ ಇರುವ ಪ್ರದೇಶದಿಂದ ತಂದಿರುವಂಥ ಕಲ್ಲುಗಳೆಂದು ಅವುಗಳ ಬಗ್ಗೆ ಸಮರ್ಥನೆ ಇರುತ್ತದೆ. ಇಂಥ ಗುಡಿಗಳು ತೆರೆದ ಗುಡಿಗಳಾಗಿರುತ್ತವೆ. ಬಾಗಿಲು ಛಾವಣಿಗಳು ಇರುವುದಿಲ್ಲ. ನಾಲ್ಕು ಗೋಡೆಗಳಿಂದ ಆವೃತ್ತವಾಗಿದ್ದು ಗುಡಿಯ ಒಳಗೆ

ಪ್ರವೇಶಿಸಲು ಜಾಗವನ್ನು ಬಿಟ್ಟಿರುತ್ತಾರೆ. ಬೆಟ್ಟಗುಡ್ಡಗಳ ಪ್ರದೇಶದಲ್ಲಿ ಬೆಟ್ಟಗಳ ಮೇಲೆ ಗುಹೆಗಳಲ್ಲಿ ಇಳಿಜಾರು ಕಣಿವೆಗಳಲ್ಲಿ ವಿಸ್ಮಯಾತ್ಮಕವಾದ ಪ್ರಕೃತಿಯ ಮಾದರಿಗಳನ್ನು ದೈವವೆಂದು ಪರಿಭಾವಿಸುತ್ತಾರೆ.

ಯಾವುದೋ ಒಂದು ಸ್ಥಳದಿಂದ ಮತ್ತೊಂದು ಊರಿಗೆ ವಲಸೆ ಬಂದು ನೆಲೆಸಿರುವ ಸಮುದಾಯಗಳು ಅಲ್ಲಿಂದ ತಮ್ಮ ದೈವದ ನೆನಪುಗಳನ್ನು ಹೊತ್ತು ತಂದು ತಾವು ನೆಲೆಸಿದ ಎಡೆಗಳಲ್ಲಿ ಸ್ಥಾಪಿಸಿಕೊಳ್ಳುವಾಗ ತಮ್ಮದೇ ಆದ ಪ್ರತ್ಯೇಕತೆ ಅಥವಾ ವಿಶಿಷ್ಟತೆಯನ್ನು ಉಳಿಸಿಕೊಳ್ಳುತ್ತಾರೆ. ತಮ್ಮ ವೃತ್ತಿವಲಯಕ್ಕೆ ಅನುಗುಣವಾದ ಆಚರಣೆಗಳಿಂದ ವಿಶಿಷ್ಟತೆ ರೂಪುಗೊಂಡಿರುತ್ತದೆ. ಕೃಷಿಕರು ನಡೆಸುವ ಆಚರಣೆಗಳು ಕೃಷಿಯೊಂದಿಗೆ ಸಂಬಂಧ ಪಡೆದಿರುತ್ತವೆ. ಆಚರಣೆ ನಡೆಯುವ ಕಾಲ-ಸಂದರ್ಭ, ಉದ್ದೇಶ ಆಚರಣೆಗೆಂದು ಬಳಸುವ ಸಾಮಗ್ರಿಗಳು, ಆಹಾರ, ನೈವೇದ್ಯ ಇತ್ಯಾದಿಗಳೆಲ್ಲವೂ ಕೃಷಿ ಸಮೃದ್ಧತೆಯ ಆಶಯವನ್ನಿಸಿ ಕೊಂಡಿರುತ್ತವೆ. ಅಂತೆಯೇ ಪಶುಪಾಲನೆ, ಮೀನುಗಾರಿಕೆ ಮತ್ತಿತರ ವೃತ್ತಿ ಕಸುಬುಗಳಲ್ಲಿಯೂ ಇಂಥದ್ದನ್ನೇ ಕಾಣಬಹುದು.

ತಿರುಪತಿಯ ವೆಂಕಟರಮಣನನ್ನು ತಾವು ವಾಸಿಸುವ ಕಡೆಗಳಲ್ಲಿ ತಿಮ್ಮಪ್ಪ, ರಾಜಲಪ್ಪ, ಮಂಗಪತಿ ಎಂಬಿತ್ಯಾದಿ ಹೆಸರುಗಳಿಂದ ಪ್ರತಿಷ್ಠಾಪಿಸಿ ಪೂಜಿಸುತ್ತಾರೆ. ನರಸಿಂಹನಭಕ್ತರು ಆಂಧ್ರದ ಕದ್ರಿ, ಅಹೋಬಲ, ಪೆನ್ನೋಬಲ ಕ್ಷೇತ್ರಗಳಲ್ಲಿ ಯಾವುದಾದರೊಂದು ಕ್ಷೇತ್ರದ ನರಸಿಂಹನ ಭಕ್ತರಾಗಿದ್ದಾರೆ. ಕದ್ರಿ ನರಸಿಂಹನ ಗುಡಿಗಳು ಪ್ರಾದೇಶಿಕವಾಗಿ ಬೆಟ್ಟ-ಗುಡ್ಡ, ಕಣಿವೆಗಳಲ್ಲೂ, ಅಹೋಬಲನ ಗುಡಿಗಳು ಕೆರೆ-ಕಟ್ಟೆಗಳಲ್ಲೂ ಇರುವುದು ಕಂಡುಬರುತ್ತದೆ.

ಇಂಥ ನರಸಿಂಹ ದೇವರನ್ನು ಕದಿರಪ್ಪ, ಅಹೋಬಲಪ್ಪ, ಓಬಳಪ್ಪ ಇತ್ಯಾದಿಗಳಲ್ಲಿ ಒಂದಾದ ಮೂಲನೆಲೆಯ ಸ್ಥಳನಾಮದಿಂದ ಕರೆಯುತ್ತಾರೆ. ಇಂತಹ ದೇವಾಲಯಗಳಲ್ಲಿ ನಡೆಯುವ ಆಚರಣೆ ಉತ್ಸವಗಳಿಗೆ ಮೂಲನೆಲೆಯಿಂದ ತೀರ್ಥವನ್ನು ತಂದು ಹಾಕುತ್ತಾರೆ. ಸಾಮಾನ್ಯವಾಗಿ ಕೋಲಾರ ಜಿಲ್ಲೆಯ ನರಸಿಂಹ ದೇವರ ಉತ್ಸವಗಳು ಫಾಲ್ಗುಣ ಮಾಸದ ಹುಣ್ಣಿಮೆಯ ಸಂದರ್ಭದಲ್ಲಿ ನಡೆಯುತ್ತವೆ. ಕಾಮದಹನದ ಆಚರಣೆಗೆ ಮುನ್ನ ನರಸಿಂಹ ದೇವರ ತೇರನ್ನು ಎಳೆಯಬೇಕೆಂಬ ನಿಯಮವಿದೆ. ಕಾಮನ ಆಚರಣೆಯ ಬೂದಿಯು ಮೈಲಿಗೆಯಾಗುತ್ತದೆಂಬ ನಂಬಿಕೆಯಿಂದ ಹೀಗೆ ಮಾಡುತ್ತಾರೆ. ನರಸಿಂಹನ ಭಕ್ತರು ವೆಂಕಟರಮಣ (ತಿಮ್ಮಪ್ಪ)ನ ಭಕ್ತರಾಗಬಾರದೆಂಬ ನಿಷೇಧವು ಜನಪದ ಸಮುದಾಯಗಳಲ್ಲಿನ ಗಮನಾರ್ಹ ಅಂಶ. ನಿಯಮವನ್ನು ಉಲ್ಲಂಘಿಸಿದರೆ ಕೇಡುಂಟಾಗುತ್ತದೆಂಬ ನಂಬಿಕೆ ಇದೆ. ನಿಯಮ ಮೀರಿದವರಿಗೆ ಎಂಥೆಂಥ ತೊಂದರೆಗಳಾದುವೆಂದು ಹೇಳುವ ನೆನಪುಗಳು ಐತಿಹ್ಯಗಳಿಗೆ ಸಮೀಪವಾಗುತ್ತವೆ. ಆದರೆ ವಿಷ್ಣುವಿನ ಆರಾಧಕರು ಶಿವನನ್ನು ಪೂಜಿಸಬಾರದೆಂಬ ನಿಯಮವಿಲ್ಲ.

ಜಿಲ್ಲೆಯಲ್ಲಿ ಶಿವನ ಆರಾಧನೆಯನ್ನು ಎಲ್ಲರೂ ಕೈಗೊಳ್ಳುತ್ತಾರೆ. ಜಿಲ್ಲೆಯ ನಂದಿಕ್ಷೇತ್ರ ಹಾಗೂ ಕಾಮಸಂದ್ರದ ಕೋಟಿಲಿಂಗೇಶ್ವರ ಕ್ಷೇತ್ರಗಳಲ್ಲದೆ, ನೆರೆಯ ದೊಡ್ಡಬಳ್ಳಾಪುರ (ಬೆಂಗಳೂರು ಗ್ರಾಮಾಂತರ ಜಿಲ್ಲೆ) ಕ್ಷೇತ್ರದ ಘಾಟಿಸುಬ್ರಹ್ಮಣ್ಯ ಜಾತ್ರೆಗಳ ಪ್ರಭಾವ ವಿಶೇಷವಾಗಿ ಕಂಡುಬರುತ್ತದೆ. ಈ ಜಾತ್ರೆಗಳಂದು ಸುತ್ತಮುತ್ತಲಿನ ಊರುಗಳಲ್ಲಿ ಹಬ್ಬದ ಸಡಗರವಿರುತ್ತದೆ. ಶಿವರಾತ್ರಿ, ಸಂಕ್ರಾಂತಿ, ಷಷ್ಠಿ ಆಚರಣೆಗಳು ಈ ದೈವಗಳ ಆಚರಣೆಗಳನ್ನು ಒಳಗೊಂಡಿರುತ್ತವೆ. ಜಿಲ್ಲೆಯ ಜನಪದರು ಶಿವ ಹಾಗೂ ಅವನ ಪರಿವಾರಕ್ಕೆ ಸಂಬಂಧಿಸಿದ ಆಚರಣೆಗಳನ್ನು ಸರ್ಪದ ಸಂಕೇತದೊಂದಿಗೆ ಈಡೇರಿಸುತ್ತಾರೆ. ತಮ್ಮ ಹೊಲಗದ್ದೆಗಳ ಪ್ರದೇಶದಲ್ಲಿ ಹಬ್ಬಗಳಂದು ಹುತ್ತಕ್ಕೆ ಹಾಲೆರೆದು ನಂದೀಶ್ವರ ಇಲ್ಲವೇ ಸುಬ್ರಹ್ಮಣ್ಯನ ಹರಕೆಯನ್ನು ಸಲ್ಲಿಸುತ್ತಾರೆ. ಜನಪದರ ಇಲ್ಲಿನ ಗೌರಿ-ಗಣೇಶನ ಹಬ್ಬವೂ ಹುತ್ತದ ಪೂಜೆಯೇ ಆಗಿರುತ್ತದೆ. ಕೋಲಾರ ಜಿಲ್ಲೆಯ ವಿದುರಾಶ್ವತ್ಥವು ನಾಗಾರಾಧನೆಯ ಕೇಂದ್ರವಾಗಿದೆ. ಉತ್ತಮವಾದ ದಾಂಪತ್ಯ ಜೀವನದ ಅಭಿಲಾಷೆ ಹಾಗೂ ಸಂತಾನಾಪೇಕ್ಷೆಯ ಉದ್ದೇಶದಿಂದ ಇಲ್ಲಿನ ಕಲ್ಲುನಾಗರಗಳನ್ನು ಪೂಜಿಸುವ ಹಾಗೂ ನಾಗರಕಲ್ಲುಗಳ ಪ್ರತಿಷ್ಠಾಪಿಸುವ ಆಚರಣೆ ಇಲ್ಲಿನ ಆರಾಧನಾ ಪದ್ಧತಿಗಳಲ್ಲೊಂದು.

ಇಲ್ಲಿಗೆ ಸಮೀಪದ ನಾಗಲಮಡಗು (ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನಲ್ಲಿದೆ.) ಕ್ಷೇತ್ರದಲ್ಲಿಯೂ ನಾಗರಕಲ್ಲುಗಳ ಆರಾಧನೆ ನಡೆಯುತ್ತದೆ. ಇಲ್ಲಿನ ಜಾತ್ರೆಯಲ್ಲಿ ಊಟದ ಸಮಾರಾಧನೆ ನಡೆಯುತ್ತದೆ. ಈ ಸಮಾರಾಧನೆಯಲ್ಲಿ ಮೊದಲಿಗೆ ಬ್ರಾಹ್ಮಣರ ಊಟವಾಗುತ್ತದೆ. ಬ್ರಾಹ್ಮಣರು ಬಿಟ್ಟ ಊಟದ ಎಲೆಗಳಲ್ಲಿನ ಎಂಜಲನ್ನವನ್ನು ತಿಂದರೆ ಒಳ್ಳೆಯದಾಗುತ್ತದೆಂಬ ನಂಬಿಕೆಯಿರುವುದರಿಂದ ಎಂಜಲನ್ನವನ್ನು ತಿನ್ನುವುದಕ್ಕಾಗಿ ಪರದಾಡುತ್ತಾರೆ. ಇಲ್ಲಿನ ಜಾತ್ರೆಯ ಉತ್ಸವಕ್ಕೆ ವಿದುರಾಶ್ವತ್ಥದಿಂದ ತೀರ್ಥವನ್ನು ತೆಗೆದುಕೊಂಡು ಹೋಗುವ ಪರಿಪಾಠವಿದೆ.

ಕೋಲಾರ, ಬೆಂಗಳೂರು ಹಾಗೂ ತುಮಕೂರು ಜಿಲ್ಲೆಗಳು ಬಯಲುಸೀಮೆಯ ಪ್ರದೇಶಗಳಾಗಿದ್ದು ಬಿಸಿ ಉಷ್ಣಾಂಶದ ಭೂಪ್ರದೇಶವಾಗಿರುವುದರಿಂದ ಇಲ್ಲಿ ನಾಗರಹಾವುಗಳು ಹೆಚ್ಚಾಗಿ ಕಂಡುಬರುತ್ತವೆ. ಸರ್ಪಸಮೂಹದಲ್ಲೆಲ್ಲ ನಾಗರಹಾವು ಅತ್ಯಂತ ವಿಷಪೂರಿತ ಜಂತುವಾಗಿರುವುದರಿಂದ ಈ ಹಾವಿನ ಕಡಿತದ ಭೀತಿಯೂ ಕಾಡುತ್ತಿರುತ್ತದೆ. ಆದ್ದರಿಂದಲೇ ಸುಬ್ರಹ್ಮಣ್ಯ ಷಷ್ಠಿಯ ದಿನದಂದು ಸುಬ್ರಹ್ಮಣ್ಯ ಘಾಟಿಯ ಹುತ್ತಗಳಿಗೆ ಹಾಲೆರೆಯುವುದರೊಂದಿಗೆ ಎಳೆನಾಗರ, ಮಿಳಿನಾಗರ (ಬಂಗಾರದನಾಗರ, ಬೆಳ್ಳಿ ನಾಗರ)ಗಳೆಂಬ ತಗಡಿನ ನಾಗರಗಳನ್ನು ಹುತ್ತಕ್ಕೆ ಅರ್ಪಿಸಿ ಆರಾಧಿಸುತ್ತಾರೆ. ಷಷ್ಠಿಯ ದಿನದಂದು ಸುತ್ತಮುತ್ತಲ ಊರುಗಳ ಜನ ಹೊಲಗದ್ದೆಗಳ ಪ್ರದೇಶದಲ್ಲಿ ಹಬ್ಬದ ಆಚರಣೆ ಮಾಡುತ್ತಾರೆ. ತಳಿಗೆ ಅನ್ನದ ನೈವೇದ್ಯದೊಂದಿಗೆ ಹುತ್ತದ ಪೂಜೆ ನಡೆಯುತ್ತದೆ. ಹುತ್ತದ ಮಣ್ಣನ್ನು 'ಹುತ್ತದ ಬಂಗಾರ'ವೆಂದು ಕಿವಿಗಳಿಗೆ ಹಚ್ಚಿಕೊಳ್ಳುತ್ತಾರೆ. ಇದರಿಂದ ಕಿವಿ, ಮೂಗು, ಬಾಯಿ ಹಾಗೂ ಕೈಕಾಲುಗಳಿಗೆ

ಶ್ರೇಯಸ್ಸುಂಟಾಗುತ್ತದೆಂಬ ನಂಬಿಕೆ ಇದೆ. ಹರಕೆ ಹೊತ್ತವರು ಘಾಟಿ ಜಾತ್ರೆಗೆ ಹೋಗಿ ಕೂದಲ ಮುಂಡೆಯನ್ನು ತೆಗೆಸಿಕೊಂಡು ಹಿಂದಿರುಗುತ್ತಾರೆ.

ಜಿಲ್ಲೆಯ ಬೇಡ-ನಾಯಕ ಬುಡಕಟ್ಟು ಹಾಗೂ ಕೆಲವು ಜನಪದರು ನಾಗಲಮ್ಮನೆಂಬ ನಾಗರಗಳ ಅಧಿದೇವತೆಯನ್ನು ಆರಾಧಿಸುತ್ತಾರೆ. ಈಕೆಯನ್ನು 'ಗೌರಿ' ಎಂದು ಕರೆಯುತ್ತಾರೆ. ಗೌರಿಹಬ್ಬದಂದು ನಾಗರಕಲ್ಲುಗಳ ಪೂಜೆ ನಡೆಯುತ್ತದೆ. ಹೀಗೆ ಕೋಲಾರ ಜಿಲ್ಲೆಯಲ್ಲಿ ನಾಗರಕಲ್ಲುಗಳ ಆರಾಧನೆ ಶಿವನ ಪರಿವಾರವನ್ನು ಸಂದರ್ಭಕ್ಕೆ ಅನುಗುಣವಾಗಿ ಆಚರಣೆಗೆ ತೊಡಗಿಸಿಕೊಳ್ಳುವ ವಿವಿಧ ಆಯಾಮಗಳಿಂದ ಕೂಡಿದೆ. ಇಲ್ಲಿ ಯಾವುದೇ ಮತ-ಪಂಥದ ಮಿತಿ ಇಲ್ಲದಿರುವುದೇ ವಿಶೇಷ. ಶಿವಪಾರ್ವತಿ, ಗಣಪತಿ ನಾಗರಾಜ, ನಾಗಲಮ್ಮ ಈ ಎಲ್ಲ ದೈವಗಳನ್ನೂ ನಾಗರಕಲ್ಲುಗಳೇ ಸಂಕೇತಿಸುತ್ತವೆ. ದಾಂಪತ್ಯ ಸಾಮರಸ್ಯ, ಸಂತಾನಾಪೇಕ್ಷೆ, ಪಶುಪಾಲನಾ ಅಭಿವೃದ್ಧಿ, ಕೃಷಿಯಲ್ಲಿನ ಫಸಲಿನ ಸಮೃದ್ಧಿ, ಆರೋಗ್ಯ, ಸರ್ಪಭೀತಿ ನಿವಾರಣೆ ಮುಂತಾದ ಉದ್ದೇಶಗಳು ನಾಗಾರಾಧನೆಯಲ್ಲಿ ಕಂಡುಬರುತ್ತವೆ. ಆದರೆ ಕೋಲಾರ ಜಿಲ್ಲೆ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ನಾಗರಪಂಚಮಿಯ ಆಚರಣೆ ಕಂಡುಬರುವುದಿಲ್ಲ. ಬೆನಕನ ಚೌತಿ (ಗಣಪತಿಯ ಹಬ್ಬ) 'ನಾಗಲ ಚೌತಿ' ಎಂಬ ಹೆಸರಿನಲ್ಲಿ ಆಚರಿಸಲ್ಪಡುವುದು ಇಲ್ಲಿನ ಜನಪದ ವೈಶಿಷ್ಟ್ಯಗಳಲ್ಲೊಂದು.

ಕೋಲಾರ ಜಿಲ್ಲೆಯ ದೈವಾರಾಧನೆಯಲ್ಲಿ ವೈಷ್ಣವ ಪರಂಪರೆ ಮತ್ತು ಶೈವ ಪರಂಪರೆಗಳಿಗೆ ಪೈಪೋಟಿ ಇಲ್ಲ. ಇದನ್ನು ಶೈವ ಪರಂಪರೆ ಎನ್ನುವುದಕ್ಕಿಂತ ಶಿವ ಹಾಗೂ ಅವನ ಪರಿವಾರದ ಆರಾಧನೆಯನ್ನಬೇಕಾಗುತ್ತದೆ. ಏಕೆಂದರೆ ಶಿವನ ಆರಾಧನೆ ಸಂಪೂರ್ಣ ಜನಪದ ಆಚರಣೆಯಾಗಿದೆ. ಶೈವ-ವೀರಶೈವ, ಕಾಪಾಲಿಕ-ಕಾಳಾಮುಖ ಸಂಪ್ರದಾಯಗಳ ಬದಲು ಹುತ್ತದ ಪೂಜೆ ಎಲ್ಲೆಲ್ಲೂ ಮಹತ್ವ ಪಡೆದಿದೆ. ಇದೊಂದು ನಾಗದೇವತೆಯ ಆರಾಧನೆಯಾಗಿದ್ದು ಮಾತ್ರ ದೈವೋಪಾಸನೆಯ ಸಂಕೇತವಾಗಿ ಉಳಿಯುತ್ತದೆ. ಶಿವಲಿಂಗ ಹಾಗೂ ಅದರ ಪೀಠಕ್ಕೆ ಬದಲಾಗಿ ಹುತ್ತ ಹಾಗೂ ಹುತ್ತದೊಳಗಿನ ಸರ್ಪ ಹಲವು ಸಂಕೇತಗಳನ್ನು ನೀಡುತ್ತವೆ. ಮೈ ಮತ್ತು ಮನಸ್ಸು; ದೇಹ ಮತ್ತು ಜೀವ; ಕಾಮ ಮತ್ತು ಧರ್ಮ; ಇತ್ಯಾದಿ ಅರ್ಥಗಳು ಶಿಶ್ನ ಮತ್ತು ಯೋನಿಯ ಸಂಗಮದಾಚೆಗೆ ಪೂರಕವಾಗಿ ಉಳಿಯುತ್ತವೆ. ಇಂಥ ಆಶಯಗಳು ಹುತ್ತದ ಪೂಜೆಯ ನೆಲೆಯಲ್ಲಿ ವ್ಯಕ್ತಗೊಳ್ಳುತ್ತವೆ.

**ಸ್ಥಳಪುರಾಣಗಳು ಹಾಗೂ ಶಿಷ್ಟ ದೇವಾಲಯಗಳು :** ಜನಪದ ಆಶಯದೊಂದಿಗೆ ಸ್ಥಳಪುರಾಣಗಳು ಸೃಷ್ಟಿಯಾಗುತ್ತವೆ, ಶಿಷ್ಟ ದೈವಾರಾಧನೆಗೆ ನೆಲೆಯಾಗುತ್ತವೆ. ಏಕೆಂದರೆ, ವಿಶ್ವದ ಹಲವು ಪುರಾತನ ಸಂಸ್ಕೃತಿಗಳಲ್ಲಿ ಭಾರತೀಯ ಸಂಸ್ಕೃತಿಯೂ ಒಂದು ಎಂಬ ಮಾತುಗಳು ಕೇಳಿಬರುತ್ತಿರುತ್ತವೆ. ಭಾರತ ಹಲವು ಧರ್ಮಗಳ-ಸಂಸ್ಕೃತಿಗಳ ನೆಲೆಬೀಡು ಆಡಳಿತಾತ್ಮಕವಾಗಿ ಹಲವು ರಾಜ್ಯಗಳ-ಭಾಷೆಗಳ ಕೇಂದ್ರವಾದ

ಭಾರತದ ಉದ್ದಗಲಕ್ಕೂ ಅಗಣಿತ ಸಮುದಾಯಗಳ ವಿಭಿನ್ನ ಸಮಾಜಗಳು ಸಂಪ್ರದಾಯಗಳು ಪ್ರಚಲಿತವಿವೆ. ಶಿಷ್ಟ ಹಾಗೂ ಮೌಖಿಕ ಪರಂಪರೆಗಳು ಒಮ್ಮೊಮ್ಮೆ ಪೂರಕ ಕೆಲವೊಮ್ಮೆ ವೈರುಧ್ಯಗಳೆಂಬಂತೆ ಬೆಸೆದುಕೊಂಡಿವೆ. ಹೀಗಿರುವಾಗ ಭಾರತೀಯ ಸಂಸ್ಕೃತಿ ಪುರಾತನವಾದದ್ದು ಎಂದು ಕರೆಯುವುದು ಯಾವುದನ್ನು ಎಂಬ ಪ್ರಶ್ನೆ ಎದುರಾಗುತ್ತದೆ. ಏಕೆಂದರೆ ಮಾನವ ಸಮಾಜ ಹಾಗೂ ಸಂಸ್ಕೃತಿಗಳು ಪ್ರದೇಶದಿಂದ ಪ್ರದೇಶಕ್ಕೆ ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗುತ್ತಾ ಹೋಗುತ್ತವೆ.

ಶಿಷ್ಟ ಪರಂಪರೆಯು ವೈದಿಕ ಸಂಸ್ಕೃತಿಯನ್ನು ಪ್ರಾಚೀನ ಸಂಸ್ಕೃತಿಯೆಂದು ಗುರ್ತಿಸುವುದು ವಾಡಿಕೆ. ಇದನ್ನು ಪುಷ್ಟಿಗೊಳಿಸಲು ವೇದ-ಪುರಾಣಗಳ ಉಲ್ಲೇಖವನ್ನು ಮಂಡಿಸುತ್ತಾರೆ. ಇಂಥ ಲಿಖಿತ ದಾಖಲೆ ಗಳನ್ನು ಒದಗಿಸುವಾಗ ಇದಕ್ಕೂ ಪೂರ್ವದಲ್ಲಿ ಮೊದಲು ಅಲಿಖಿತ ಪರಂಪರೆಯೊಂದಿದ್ದು, ಲಿಖಿತ ಪರಂಪರೆಯು ರೂಪುಗೊಂಡು ಬೆಳೆಯುತ್ತಿರುವ ಹಂತಗಳಲ್ಲೂ ಪರ್ಯಾಯವಾಗಿ ಬೆಳೆಯುತ್ತಲೇ ಇದೆಯೆಂಬುದರ ಬಗ್ಗೆ ವಿಸ್ಮೃತಿಯಿಂದಿರುವುದು ದುರದೃಷ್ಟಕರವೆನಿಸುತ್ತದೆ. ಶಿಷ್ಟ ಪರಂಪರೆಯಲ್ಲಿ ದೈನಂದಿನ ಆಚರಣೆಯಿಂದಾಗಿ ನಿತ್ಯಜೀವನದಲ್ಲಿ ಮನಃಶಾಂತಿ ಪಡೆಯಲು ಮಾನವಾತೀತ ಶಕ್ತಿಗೆ ಶರಣು ಹೋಗಿ ಅದಕ್ಕೆ ಸಾಕಾರ ರೂಪವನ್ನಿತ್ತು ದೇವರು ಎಂದು ಪೂಜಿಸುತ್ತಾರೆ. ಈ ಭಾವನೆಗಳ ಸಂಘಟನೆಯ ದ್ಯೋತಕವೇ ದೇವಾಲಯಗಳು. ಇಂಥ ದೇವಾಲಯಗಳ ಹಿನ್ನೆಲೆಯಾಗಿ ಉಳಿದು ಬಂದಿರುವ ಪೌರಾಣಿಕ ಘಟನೆಗಳು ಪುರಾಣದ ಘಟನೆಗಳ ಸ್ಮೃತಿಗಳನ್ನು ದೇವಾಲಯಗಳಿಗೆ ಬೆಸೆಯುವಾಗ ಏರ್ಪಡುವ ಜನಪದ ಜ್ಞಾನ ಈ ಮೂಲಕ ಸೃಷ್ಟಿಯಾಗುವ ಐತಿಹ್ಯಗಳ ಸ್ವರೂಪ ಇತ್ಯಾದಿಗಳನ್ನು ಚರ್ಚಿಸಲಾಗುತ್ತದೆ. ಈ ಮೂಲಕ ಶಿಷ್ಟ ಜನಪದಗಳ ಸಂಬಂಧಾಂತರಗಳ ಪರೀಶೀಲನೆಯಾದಂತಾಗುತ್ತದೆ.

ಕೋಲಾರ ಜಿಲ್ಲೆಯನ್ನು ಪುರಾಣ ಇತಿಹಾಸಗಳ ಬೀಡು ಎಂದು ವರ್ಣಿಸುವವರೆಲ್ಲರೂ ಹಲವು ಬಗೆಯ ದೈವಗಳ ನೆಲೆವೀಡು ಎಂಬ ಸಮರ್ಥನೆಯನ್ನು ನೀಡುತ್ತಾರೆ. ಇಲ್ಲಿ ಜನಪದ ಮೂಲದಿಂದ ಆರಂಭಗೊಂಡು ವೈದಿಕ ಪರಂಪರೆಯವರೆಗೆ, ದ್ರಾವಿಡ ಸಂಸ್ಕೃತಿಯಿಂದ ಆರ್ಯರ ನಾಗರಿಕತೆಯವರೆಗೆ ಸ್ಪಂದಿಸಿದ ಎಲ್ಲ ರೀತಿಯ ಆರಾಧನೆಗಳನ್ನೂ ತನ್ನದಾಗಿಸಿಕೊಂಡ ಹೆಜ್ಜೆ ಗುರುತುಗಳುಳ್ಳ ದೇವಾಲಯಗಳನ್ನು ಸಮೀಕ್ಷಿಸಬಹುದು. ಅಭಿರುಚಿಗೆ ತಕ್ಕಂತೆ ಕಾಲದ ಪರಿಧಿಗನುಗುಣವಾಗಿ ಮಂದಿರ-ಮಠಗಳ ಆಚರಣೆಗಳು ವಿಚಾರಗಳು ಭಿನ್ನವಾಗುತ್ತಾ ಹೋಗುತ್ತವೆ. ಹಳೆಯ ಮತ್ತು ಹೊಸತುಗಳ ಸಂಕ್ರಮಣ ವೈರುದ್ಯ ಹೊಂದಾಣಿಕೆಗಳನ್ನು ಇದಕ್ಕೆ ಕಾರಣವಾದ ಸಾಮಾಜಿಕ ಪ್ರೇರಣೆಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಈ ಹಿನ್ನೆಲೆಗೆ ಸಹಾಯವಾಗಿ ಐತಿಹ್ಯಗಳು ಬಂದೊದಗುತ್ತವೆ. ಜಿಲ್ಲೆಯ ಧಾರ್ಮಿಕ ವಲಯದ ಪ್ರಾಚೀನತೆಯನ್ನು ಕುರಿತು ಹೇಳಬೇಕೆಂದರೆ, ಪುರಾಣಗಳ ಕಾಲವನ್ನೇ ಆಶ್ರಯಿಸಬೇಕು. ಏಕೆಂದರೆ ಪುರಾಣಗಳು ರಚನೆಗೊಂಡ ಕಾಲಕ್ಕಿಂತ ಹಿಂದಿನ ಸಂಸ್ಕೃತಿಯ ವಿವರಗಳು ಲಿಖಿತ ರೂಪದಲ್ಲಿ

ದೊರೆಯುವುದಿಲ್ಲ. ಆದ್ದರಿಂದಲೇ ಭಾರತೀಯ ಸಮಾಜದ ಈ ಕಾಲಘಟ್ಟದ ಸಂದರ್ಭ ಹಾಗೂ ನಂತರದ ದಿನಗಳಲ್ಲಿ ವೇದ-ಪುರಾಣಗಳನ್ನು ಜ್ಞಾನವೆಂದು ಪರಿಗಣಿಸಿದ್ದರು. ಇವುಗಳ ಅಧ್ಯಯನ ಮಾಡಿದವರನ್ನು ಜ್ಞಾನಿಗಳೆಂದು ಗುರುತಿಸುತ್ತಿದ್ದರು. ಇತರೆ ಶಾಸ್ತ್ರಗ್ರಂಥಗಳು ಮೌಖಿಕ ಪರಂಪರೆಯ ಪ್ರಕಾರಗಳು ಜ್ಞಾನವೆಂದು ಪರಿಗಣಿತವಾದದ್ದು ವಸಾಹತುಶಾಹಿಯ ಆಕ್ರಮಣದ ಸಂದರ್ಭದ ನಂತರವೆಂದರೆ ತಪ್ಪಾಗಲಾರದು.

ಬ್ರಿಟೀಷರ ರಾಜಕೀಯ ಅಗತ್ಯಗಳಿಗೆ ಅನುಗುಣವಾಗಿ ರಚನೆಯಾದ ಆಧುನಿಕ ವಿದ್ಯಾಭ್ಯಾಸವು ಸಮಾಜದ ಎಲ್ಲ ವರ್ಗ ವಲಯಗಳು ಕಲಿಯಬಹುದಾದದ್ದು ಎಂಬ ಅರಿವು ನಮ್ಮಲ್ಲಿ ಮೂಡಿದ್ದು ಇದೇ ಸಂದರ್ಭದಲ್ಲಿ ಅಲ್ಲಿಯವರೆಗೂ ವೇದಪುರಾಣಗಳೇ ಜ್ಞಾನ, ಅವುಗಳ ಪಠಣವೇ ಶಿಕ್ಷಣ ಎಂಬ ತಿಳುವಳಿಕೆ ಭಾರತೀಯರಲ್ಲಿತ್ತು. ಶಿಷ್ಟ ವರ್ಗವು ಪುರಾಣಗಳನ್ನು ಅಕ್ಷರ ಮಾಧ್ಯಮದಲ್ಲಿ ಉಳಿಸಿಕೊಂಡರೆ ಜನಪದ ಪರಂಪರೆಯು ಆ ಪ್ರಭಾವದ ನೆನಪುಗಳನ್ನು ಘಟನಾ ಪ್ರಧಾನವಾದ ಐತಿಹ್ಯಗಳಲ್ಲಿ ಉಳಿಸಿಕೊಂಡಿತು, ಇಲ್ಲವೇ ಸ್ಥಳೈತಿಹ್ಯಗಳಿಗೆ ಸಮೀಕರಿಸಿತು. ಈ ಮೂಲಕ ಕಲ್ಪನಾಲೋಕದ ಘಟನೆಗಳನ್ನು ವಾಸ್ತವ ಜಗತ್ತಿನಲ್ಲಿಟ್ಟು ಅವುಗಳನ್ನು ಲೌಕಿಕಗೊಳಿಸುವ ಪ್ರಯತ್ನ ಇದಾಗಿದೆ.

ಅಲೌಕಿಕ ಜಗತ್ತು ದೈವದ ಮೂಲವೆಂದು ಗ್ರಹಿಸುವ ಮನುಷ್ಯನ ಮನಸ್ಸು ಭೂಮಿಯ ಮೇಲೆಯೇ ದೈವಕ್ಕೊಂದು ನೆಲೆಯನ್ನು ನೀಡುತ್ತದೆ. ಸೃಷ್ಟಿಯ ಚೇತನ-ಅಚೇತನಗಳಲ್ಲಿ ಸ್ಥಾವರ ಜಂಗಮಗಳಲ್ಲಿ ಅದನ್ನು ಗುರ್ತಿಸುತ್ತಾ ಹೋಗುತ್ತದೆ. ಶಿಷ್ಟ ದೇವಾಲಯಗಳಲ್ಲಿ ಜನಪದರು ಬೆಟ್ಟ-ಗುಡ್ಡ, ಕಣಿವೆ, ನದಿ, ಝರಿ, ಮರ-ಗಿಡ ಮುಂತಾದವುಗಳಲ್ಲಿ ಕಂಡುಕೊಳ್ಳುವ ದೈವದ ಸ್ವರೂಪಕ್ಕೆ ಪುರಾಣ ಘಟನೆಯನ್ನೊಳಗೊಂಡ ಐತಿಹ್ಯವು ಸೃಷ್ಟಿಯಾಗಿರುತ್ತದೆ. ಈ ಎರಡು ನೆಲೆಗಳಲ್ಲೂ ಜನಪದ ಪರಂಪರೆ ಪುರಾಣದಲ್ಲಿ ನಡೆದಿದೆಯೆಂದು ನಂಬುವ ಘಟನೆಗಳನ್ನು ಈ ನೆಲದ ಮೇಲೆ ಇದೇ ಜಾಗದಲ್ಲಿ ನಡೆದಿದೆ ಎಂದು ಸಮರ್ಥಿಸುತ್ತದೆ. ನೆಲದ ಒಂದು ನೆಲೆಯನ್ನು ತೋರಿಸಿ ಅದನ್ನು ಪ್ರಮಾಣೀಕರಿಸುವ ಪ್ರಯತ್ನ ಮಾಡುತ್ತದೆ. ಆದ್ದರಿಂದಲೇ ರಾಮಾಯಣ ಮಹಾಭಾರತಗಳು ಸ್ಥಳೀಯವಾಗಿ ನಡೆದಿದೆ ಎಂಬ ಐತಿಹ್ಯಗಳು ಎಲ್ಲೆಲ್ಲೂ ಕಾಣಸಿಗುತ್ತವೆ. ಈ ಮೂಲಕ ಶಿಷ್ಟ ವರ್ಗವು ಪುರಾಣ ಹಾಗೂ ಧಾರ್ಮಿಕ ಶ್ರದ್ಧೆಯನ್ನು ಜನಪದ ವಲಯದಲ್ಲಿ ಮೌಖಿಕವಾಗಿ ಉಳಿಸಿ ಬೆಳೆಸುವ ಗುರಿಯೂ ಈಡೇರಿದಂತಾಗುತ್ತದೆ. ಜಿಲ್ಲೆಯಲ್ಲಿ ವೆಂಕಟರಮಣಸ್ವಾಮಿ, ಈಶ್ವರ, ನರಸಿಂಹ ದೇವಾಲಯಗಳು ಸಾಕಷ್ಟು ಸಂಖ್ಯೆಯಲ್ಲಿವೆ. ಇದು ವೈಷ್ಣವ ಧರ್ಮದ ಪ್ರಭಾವವನ್ನು ಹೇಳುತ್ತದೆ. ಅಂತೆಯೇ ಆಂಜನೇಯ, ಹನುಮಂತರಾಯ ಇತ್ಯಾದಿ ಹೆಸರುಗಳಿಂದ ಕರೆಸಿಕೊಳ್ಳುವ ದೇವಾಲಯಗಳು ಇವೆ. ಅರ್ಜುನ ಪ್ರತಿಷ್ಠೆ ಮಾಡಿದನೆಂದು ಹೇಳುವ ದೇವಾಲಯಗಳೇ ಹೆಚ್ಚು. ಮುಳುಬಾಗಿಲಿನ ಆಂಜನೇಯ, ಬೂರಗಮಾಕಲಹಳ್ಳಿಯ ವೀರಾಂಜನೇಯ ಇತ್ಯಾದಿ.

ಪಾಂಡವರ ನೆನಪನ್ನು ಪುನರ್‌ಸ್ಥಾಪಿಸಿಕೊಳ್ಳುವ ನಿಲುವು ಈ ಮೂಲಕ ವ್ಯಕ್ತವಾಗುತ್ತದೆ. ಔಷಧೀಯ ಗಿಡಮೂಲಿಕೆಗಳಿರುವ ಯಾವುದೇ ಬೆಟ್ಟಗುಡ್ಡದ ಆಂಜನೇಯನ ದೇವಾಲಯಕ್ಕೆ ಸಂಜೀವರಾಯನ ದೇವಾಲಯವೆಂದು ಕರೆಯುತ್ತಾರೆ. ಆಂಜನೇಯನು ಹೊತ್ತು ತಂದ ಸಂಜೀವಿನಿಪರ್ವತ ಇಲ್ಲಿನ ಬೆಟ್ಟವೆಂದು ನಿರೂಪಕನು ಹೇಳುತ್ತಾನೆ. ಔಷಧೀಯ ಸಸ್ಯಗಳಿರುವ ಬೆಟ್ಟವನ್ನು ಸಂಜೀವಿನಿ ಪರ್ವತದ ಸಾದೃಶ್ಯದೊಂದಿಗೆ ಉಳಿಸಿಕೊಳ್ಳುವ ಪ್ರಕ್ರಿಯೆಯಾಗುವುದಲ್ಲದೆ ಮಹತ್ವ ತುಂಬುವುದು ಗಮನೀಯ ಅಂಶವಾಗುತ್ತದೆ. ಸಂಜೀವಿನಿಯ ಮಹತ್ವದಿಂದ ಹನುಮನನ್ನು ಮುಖ್ಯಪ್ರಾಣನೆಂದು ಕರೆಯುತ್ತಾರೆ. ಭಯಭೀತಿಗಳಿಗೆ ಆತ ವಜ್ರಾಯುಧನೆಂದು ಗುರುತಿಸುತ್ತಾರೆ. ಸಂಜೀವ ಎಂಬ ಮಾತು 'ಒಟ್ಟಿಗೆ ಇರುವ' ಎಂಬ ಅರ್ಥವನ್ನು ಹೇಳುತ್ತದೆ. ಹಾಗೆಯೇ ಮತ್ತೆ ಬದುಕಿಸುವ 'ಶಕ್ತಿ'ಯೂ ಸಂಜೀವ. ಜೀವ ಬೇರೆ, ದೇಹ ಬೇರೆ ಎಂಬ ದ್ವೈತ ಭಾವನೆಗೆ ಅದ್ವೈತ ರೂಪಿಯಾಗಿ ಇರುವವನೆ ಸಂಜೀವ. ದೇಹ ಮನಸ್ಸುಗಳು ಎರಡು ಮುಖಗಳು ಅವುಗಳ ಏಕಮುಖತೆಯ ಅರಿವಿಗೆ ಸಂಜೀವ ಮಾರ್ಗದರ್ಶಕ. ಭೌತಿಕ ಶರೀರದ ನಶ್ವರತೆಯನ್ನೂ ಅಚಲ ಮನಸ್ಸಿನ ಸುಸ್ಥಿತಿಯನ್ನೂ ಒಂದುಗೂಡಿಸಬಲ್ಲ ಚೈತನ್ಯ ಸ್ವರೂಪ ಸಂಜೀವ. ಜೀವ ಅರ್ಥಾತ್ ಪ್ರಾಣವಿದ್ದಾಗಲೇ ಬದುಕು ಸಾಧ್ಯ. ಜೀವವಿಲ್ಲದ ಬದುಕು ಶೂನ್ಯ. ಹೀಗೆ ಬದುಕಿಗೆ ಮಹತ್ವ ಕೊಡುವ ಸಂಜೀವರಾಯ ಮುಖ್ಯಪ್ರಾಣದ ಸಂಕೇತವಾಗುತ್ತಾನೆ.

ಯೋಗಿನಾರೇಯಣ, ಅಮರನಾರೇಯಣ, ವೀರನಾರೇಯಣ ಹೆಸರಿನ ದೇವಾಲಯಗಳು ವೆಂಕಟರಮಣಸ್ವಾಮಿ, ನರಸಿಂಹ ಬೆಟ್ಟಗಳು, ವರದಾಂಜನೇಯ, ವೀರಾಂಜನೇಯ ದೇವಾಲಯಗಳು ಅಲ್ಲಲ್ಲಿ ವೇಣುಗೋಪಾಲಸ್ವಾಮಿ ದೇವಾಲಯಗಳು ಜಿಲ್ಲೆಯಾದ್ಯಂತ ಕಂಡುಬರುವ ಪ್ರಾಚೀನ ದೇವಾಲಯಗಳು, ಕೈವಾರ, ಯಗವಕೋಟೆ, ಬುರುಡಕುಂಟೆ, ಕೋನಕುಂಟ್ಲು ಊಲವಾಡಿ ಬೂರಗಮಾಕಲ ಹಳ್ಳಿ ಮುಂತಾದಲ್ಲಿ (ಚಿಂತಾಮಣಿ ತಾಲೂಕಿನಾದ್ಯಂತ) ವಿಷ್ಣುಪರಂಪರೆಯ ಆರಾಧನೆಗೆ ಪೂರಕವಾದ ಪೌರಾಣಿಕ ಘಟನೆಗಳನ್ನೊಳಗೊಂಡ ಐತಿಹ್ಯಗಳು ದೇವಾಲಯಗಳ ಹಿನ್ನೆಲೆಯಾಗಿ ನಿಲ್ಲುತ್ತವೆ.

ಇಂದ್ರನು ಕೃತಯುಗದಲ್ಲಿ ವೃತ್ರಾಸುರನನ್ನು ಕೊಂದಾಗ ಬ್ರಹ್ಮ ಹತ್ಯಾದೋಷವು ಅವನಿಗೆ ತಟ್ಟಿತು. ಆ ದೋಷ ನಿವಾರಣೆಗಾಗಿ ಪಂಚನಾರಾಯಣ ಮೂರ್ತಿಗಳನ್ನು ಪ್ರತಿಷ್ಠೆ ಮಾಡಿದನೆಂದು ಪೌರಾಣಿಕವಾಗಿ ನಂಬಲಾಗಿದೆ. ಇಂಥ ಪಂಚನಾರಾಯಣ ಮೂರ್ತಿಗಳಲ್ಲಿ ಕೈವಾರದಲ್ಲಿ ನಿಲ್ಲಿಸಿದ ಅಮರನಾರಾಯಣ ಮೂರ್ತಿಯೂ ಒಂದು ಎಂಬ ಸ್ಥಳಪುರಾಣವನ್ನು ಆರೋಪಿಸಲಾಗಿದೆ. ಇದರ ಪ್ರಭಾವವನ್ನು ಯಗವಕೋಟೆಯ ವೀರನಾರೇಯಣ ದೇವಾಲಯದ ಸ್ಥಳಪುರಾಣದಲ್ಲಿ ಕಾಣಬಹುದು. ಆದರೆ ಐತಿಹಾಸಿಕವಾಗಿ ಹೊಯ್ಸಳ ದೊರೆ ವಿಷ್ಣುವರ್ಧನನು ಕೈವಾರದ ಅಮರನಾರಾಯಣ ಮೂರ್ತಿಯನ್ನು ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ. ವಿಷ್ಣುವರ್ಧನನು ಪಂಚನಾರಾಯಣ ಮೂರ್ತಿಗಳನ್ನು ಸ್ಥಾಪಿಸಿದನೆಂದೂ

ಅವು ಕೈವಾರದ ಅಮರನಾರಾಯಣ, ಬೂದಿಗೆರೆಯ ದೇಶನಾರಾಯಣ, ತಲಕಾಡಿನ ಕೀರ್ತಿನಾರಾಯಣ, ಗದುಗಿನ ವೀರನಾರಾಯಣ, ಬೇಲೂರಿನ ವಿಜಯನಾರಾಯಣ ಮೂರ್ತಿಗಳೆಂದು ಹೇಳಲಾಗಿದೆ. ಇಂದ್ರನು ಅಮರನಾರಾಯಣ ಮೂರ್ತಿಯನ್ನು ಪ್ರತಿಷ್ಠಾಪಿಸಿದ ಸ್ಥಳದಲ್ಲಿ ದೇವತೆಗಳು ಸ್ವಾಮಿಯನ್ನು ಕುರಿತು ಸ್ತೋತ್ರ (ಕೈವಾರ) ಮಾಡಿದರು. ಆ ನೆನಪಿನಿಂದ ಪ್ರಸ್ತುತ ಸ್ಥಳಕ್ಕೆ ಕೈವಾರವೆಂದು ಹೆಸರು ಬಂದಿತೆಂಬ ಐತಿಹ್ಯ ಜನಜನಿತವಾಗಿದೆ. ದೇವಾಲಯಕ್ಕೆ ಸಂಬಂಧಿಸಿದ ಸ್ಥಳಪುರಾಣವನ್ನು ಉಲ್ಲೇಖ ಮಾಡಿ ಸ್ಥಳನಾಮಗಳಿಗೆ ಐತಿಹ್ಯಗಳು ಸೃಷ್ಟಿಯಾಗುತ್ತವೆಂಬುದಕ್ಕೆ ಇದೊಂದು ನಿದರ್ಶನ. ವಿದುರಾಶ್ವತ್ಥದ ಹೆಸರನ್ನೂ ಇಲ್ಲಿ ಸೇರಿಸಬಹುದು. ಕೈವಾರ ಗ್ರಾಮದ ಒಳಗೆ ಭೀಮಲಿಂಗೇಶ್ವರ ದೇವಾಲಯವಿದೆ. ದೇವಾಲಯದ ಒಳಗಿನ ದೊಡ್ಡಲಿಂಗವನ್ನು ಭೀಮನು ಪ್ರತಿಷ್ಠಾಪಿಸಿದನೆಂದೂ ದೇವಾಲಯದಲ್ಲಿ ಸುತ್ತಲೂ ಇರುವ ನಾಲ್ಕು ಲಿಂಗಗಳನ್ನು ಉಳಿದ ಪಾಂಡವರು ಪ್ರತಿಷ್ಠಾಪಿಸಿದರೆಂದು ಹೇಳುತ್ತಾರೆ. ಆದ್ದರಿಂದ ಆ ಲಿಂಗಗಳ ಗುಡಿಗಳನ್ನು ಧರ್ಮಲಿಂಗೇಶ್ವರ, ಪಾರ್ಥಲಿಂಗೇಶ್ವರ, ನಕುಲಲಿಂಗೇಶ್ವರ, ಸಹದೇವಲಿಂಗೇಶ್ವರಗಳೆಂದು ಗುರುತಿಸುತ್ತಾರೆ.

ಕೈವಾರವನ್ನು ಮಹಾಭಾರತ ಕಾಲದ ಏಕಚಕ್ರಪುರವೆಂದು, ಪಾಂಡವರು ಅರಗಿನಮನೆಯ ದುರಂತದಿಂದ ತಲೆತಪ್ಪಿಸಿಕೊಂಡು ಇಲ್ಲಿಗೆ ಬಂದಿದ್ದರೆಂದು ಐತಿಹ್ಯವಿದೆ. ಕಂಠಕಪ್ರಾಯನಾಗಿದ್ದ ಬಕಾಸುರನನ್ನು ಭೀಮನು ಅಲ್ಲಿನ ಬೆಟ್ಟಗಳಲ್ಲಿ ಕೊಂದು ಒಂದು ಗುಹೆಯೊಳಕ್ಕೆ ಅವನ ಶರೀರವನ್ನು ತುರುಕಿ ದೊಡ್ಡ ಕಲ್ಲನ್ನು ಅಡ್ಡ ಇಟ್ಟು ಮುಚ್ಚಿ ಬಂದನೆಂದು ಐತಿಹ್ಯವು ಬೆಳವಣಿಗೆ ಪಡೆದು ಮಳೆಗಾಲದಲ್ಲಿ ಗವಿಯು ಬಂಡೆಯ ಕೆಳಗಿನಿಂದ ಸೋರುವ ಕೆಂಪುಬಿಳಿ ಮಣ್ಣಿನ ನೀರನ್ನು ಬಕನ ಶರೀರದ ಕೀವು ರಕ್ತಗಳೆಂದು ಆಧಾರವನ್ನು ನೀಡುತ್ತಾರೆ.

**ಆವನಿಯ ಗುಹಾಂತರ ದೇವಾಲಯಗಳು ಮತ್ತು ಪಾಂಡವರ ಗುಡಿಗಳು :** ವಾಲ್ಮೀಕಿ ಬೆಟ್ಟದ ಮೇಲಿನ ವಾಲ್ಮೀಕಿ ಆಶ್ರಮ, ಲವಕುಶರ ಗುಹೆ, ಸೀತಾ, ಪಾರ್ವತಿ ಗುಡಿ ಮೊದಲಾದ ಹಲವಾರು ನೊಳಂಬರ ಕಾಲದ ಗುಹಾಂತರ ದೇವಾಲಯಗಳಿವೆ. ಇವುಗಳ ಮುಚ್ಚಳ ಅಥವಾ ಮೇಲ್ಛಾವಣಿಗೆಯ ಬಂಡೆಗಳಲ್ಲಿ ಸಣ್ಣ ಸಣ್ಣದಾದ ಪಾತ್ರಾಕಾರದ ಗುಣಿಗಳು ಇದ್ದು, ಅವುಗಳನ್ನು ಬಡಿದಾಗ ತಾಮ್ರ ಲೋಹದ ಪಾತ್ರೆಯಲ್ಲಿ ಮೂಡುವಂತಹ ನಾದ ಹೊಮ್ಮುತ್ತದೆ. ಇಂಥ ಗುಹೆಗಳನ್ನು ಸೀತೆಯು ನೀರು ಕಾಯಿಸುತ್ತಿದ್ದ ಹಂಡೆಯೆಂದೂ ಆಂಜನೇಯನು ಅದನ್ನು ಕೆಳಮುಖವಾಗಿ ತಿರುಗಿಸಿದನೆಂದೂ ಕಥೆ ಇದೆ. ಬಂಡೆಕಲ್ಲುಗಳ ಕೆಲವು ಗಂಗೆಗಳನ್ನು ಸೀತೆಯು ಅಡುಗೆ ಮಾಡಲು ಬಳಸಿದ ಪಾತ್ರೆಗಳು ಊಟ ಮಾಡಿದ ತಟ್ಟೆಗಳು ಲವಕುಶರನ್ನು ಕೂಗಿದ ತೊಟ್ಟಿಲುಗಳು ಎಂದು ಹೇಳುತ್ತಾರೆ.

ವಾಲ್ಮೀಕಿ ಆಶ್ರಮದ ಉತ್ತರಕ್ಕೆ ಪಾಂಡವರಗುಡಿ ಹಾಗೂ ಪಂಚಪಾಂಡವರು ಪ್ರತಿಷ್ಠಾಪಿಸಿದರೆನ್ನಲಾದ ಐದು ಶಿವಲಿಂಗಗಳಿವೆ. ಪಾಂಡವರು ತಮ್ಮ ವನವಾಸ ಕಾಲದಲ್ಲಿ ಈ ಸ್ಥಳಕ್ಕೂ ಭೇಟಿ ಕೊಟ್ಟಿದ್ದರು. ಆಗ ತಮ್ಮ ಭೇಟಿಯ ಜ್ಞಾಪಕಾರ್ಥವಾಗಿ ಪಂಚಲಿಂಗಗಳನ್ನು ಪ್ರತಿಷ್ಠಾಪಿಸಿದರೆನ್ನಲಾಗುತ್ತದೆ. ಇಲ್ಲಿರುವ ಗುಹಾಂತರ ದೇವಾಲಯಗಳಲ್ಲಿನ ಗುಣಿ ರಚನೆಗಳು ಪಾಂಡವರ ಗುಡಿಗಳು ಯಾವುದೋ ಶಿಲಾಯುಗದ ಸಂಸ್ಕೃತಿಯ ಅವಶೇಷಗಳಾಗಿವೆ. ಅಂತರಗಂಗೆ ಎಂಬ ಹತ್ತಿರದ ಪ್ರದೇಶದಲ್ಲಿ ಯಜ್ಞಾವಶೇಷಗಳಂತೆ ಕಾಣುವ ಪಳೆಯುಳಿಕೆಗಳು ಸಂಸ್ಕೃತಿಯೊಂದು ನಾಶವಾದದ್ದರ ಗುರುತುಗಳಿರಬಹುದು.

**ಆವನಿಯ ತೀರ್ಥ-ಧನುಷ್ಕೋಟಿ-ಅಂತರಗಂಗೆಗಳು :** ಬೆಟ್ಟದ ಮೇಲಿನ ಒಂದು ದೊಡ್ಡದಾದ ಬಂಡೆಯಲ್ಲಿ ಅಗಲವಾಗಿ ಬಿರುಕುಬಿಟ್ಟು, ಜಲದಿಂದ ಕೂಡಿದ ತೀರ್ಥವನ್ನು ಕಾಣುತ್ತೇವೆ. ಐತಿಹ್ಯದಂತೆ ರಾಮನ ಆಜ್ಞೆಯಂತೆ ಲಕ್ಷ್ಮಣನು ಸೀತೆಯನ್ನು ವನವಾಸಕ್ಕೆಂದು ಇಲ್ಲಿ ಬಿಟ್ಟು ಹೊರಡಲು ಅನುವಾದ. ಭೀತಿಗೊಂಡ ಸೀತೆಯು ಮೂರ್ಛಿತಳಾದಳು. ಆಗ ಲಕ್ಷ್ಮಣನು ಅಲ್ಲಿದ್ದ ಬಂಡೆಯನ್ನು ತನ್ನ ಬಾಣದಿಂದ ಸೀಳಿ ಸೀತೆಗೆ ನೀರನ್ನು ಒದಗಿಸಿದನು. ಆ ನೀರನ್ನು ಸೀತೆಯ ಮೇಲೆ ಸಿಂಪಡಿಸಿ ಎಚ್ಚರಿಸಿ ಕುಡಿಯಲು ಒದಗಿಸಿದನು. ಆ ಕೊಳದ ದಕ್ಷಿಣದ ಬಂಡೆಯಲ್ಲಿ ಕೊರೆದ ವಿಶಾಲವಾದ ಪಾದಗಳು ಲಕ್ಷ್ಮಣನ ಹೆಜ್ಜೆಗುರುತುಗಳೆಂದು ಹೇಳುತ್ತಾರೆ. ಬೆಟ್ಟದ ಮೇಲಿನ ಗುಹೆಗಳ ಪಕ್ಕದಲ್ಲಿ ಮತ್ತೊಂದು ತೀರ್ಥವುಂಟು. ಕಾಷಾಯಿ ತೀರ್ಥವೆಂದೂ ಕರೆಯುತ್ತಾರೆ. ಇಲ್ಲಿ ಸೀತೆಯು ತನ್ನ ಮಕ್ಕಳ ಬಟ್ಟೆಗಳನ್ನು ಒಗೆದಳೆಂದು ಐತಿಹ್ಯವಿದೆ. ಬೆಟ್ಟದ ಮೇಲಿನ ಸಣ್ಣ ಚಿಲುಮೆಗೆ ಅಗ್ನಿತೀರ್ಥವೆಂದು ಹೆಸರಿದೆ. ಸ್ಥಳಪುರಾಣದಂತೆ ರಾಮನು ಸೀತೆಯ ಪಾತಿವ್ರತ್ಯವನ್ನು ಪರೀಕ್ಷಿಸಲು ಅಗ್ನಿಪರೀಕ್ಷೆ ನೀಡಿ ಇಲ್ಲಿನ ಕುರ್ಚಿಯಾಕಾರದ ಗುಂಡಿನ ಮೇಲೆ ಕುಳಿತು ವೀಕ್ಷಿಸಿದನಂತೆ. ಸೀತೆಯ ಪಾತಿವ್ರತ್ಯದ ಪವಿತ್ರತೆಯಿಂದ ಅಗ್ನಿಯು ಕರಗಿ (ಅವಳನ್ನು ಸೋಕಲಾಗದೆ) ಪವಿತ್ರ ಜಲವಾಗಿ ಮಾರ್ಪಟ್ಟನೆಂದು ಆ ಜಲವೇ ಇದೆಂದು ಐತಿಹ್ಯ ವಿವರಿಸುತ್ತದೆ.

ಇದು ಬೆಟ್ಟದ ತಪ್ಪಲಿನಲ್ಲಿ ಈ ಪ್ರದೇಶವಿದ್ದು ಇಲ್ಲಿನ ಬಸವನ ಹೊಕ್ಕಳಿನಿಂದ ನೀರು ಬರುತ್ತಿರುತ್ತದೆ. ಇಲ್ಲಿ ರುದ್ರಭಟ್ಟಾರಕರು ಅಹವನೀಯ ಯಾಗವನ್ನು ಮಾಡಿದರೆಂದು ಐತಿಹ್ಯ. ಅದರ ಅವಶೇಷಗಳನ್ನು ತೋರಿಸುತ್ತಾರೆ. ಇವುಗಳಲ್ಲದೆ ವಾಲ್ಮೀಕಿಗಳ ಕಮಂಡಲದ ನೀರಿನಿಂದ ಉದ್ಭವಿಸಿದೆ ಎನ್ನಲಾದ ಗಿಂಡಿ ತೀರ್ಥ ಹಾಗೂ ಲಕ್ಷ್ಮಣನಿಂದ ನಿರ್ಮಿತವಾದ ಶೇಷತೀರ್ಥಗಳನ್ನು ಕಾಣಬಹುದು. ಆವನಿಯ ಗ್ರಾಮದಲ್ಲಿ ಹಾಗೂ ಬೆಟ್ಟದ ಮೇಲೆ ೯-೧೦ನೇ ಶತಮಾನದಿಂದ ಇತ್ತೀಚಿನವರೆಗಿನ ಶಾಸನಗಳು ಹೇರಳವಾಗಿ ದೊರೆಯುತ್ತವೆ. ಗಂಗ, ನೊಳಂಬ, ಚೋಳ, ಹೊಯ್ಸಳ, ತಮಿಳುಗಂಗ, ವಿಜಯನಗರದ ಅರಸರು ಹಾಗೂ ಪಾಳೆಯಗಾರರ ಆಳ್ವಿಕೆಗೆ ಸಂಬಂಧಪಟ್ಟ ಸುಮಾರು ಐವತ್ತು

ಅರವತ್ತು ಶಾಸನಗಳು ಇಲ್ಲಿವೆ. ಅಲ್ಲದೆ ಕ್ರಿ.ಶ. ೩೯೯ರ ಬಾಣರ ಶಾಸನಗಳು ಊರಿನಲ್ಲಿದ್ದು ಅವುಗಳಲ್ಲಿ ಆವನಿಯನ್ನು 'ದಕ್ಷಿಣಗಯಾ' ಎಂದು ಕರೆಯಲಾಗಿದೆ. ಬೆಟ್ಟದ ಮೇಲಿನ ವಾಲ್ಮೀಕಿ ಗುಹೆಯ ಸಮೀಪದಲ್ಲಿ ಚೋಳ ಸಂಪ್ರದಾಯದ ದೇವಾಲಯವಿದೆ. ಅಲ್ಲಿಗೆ ತುಸು ದೂರದಲ್ಲಿರುವ ಏಕಾಂತ ರಾಮಯ್ಯನ ದೇವಾಲಯವು ಕೂಡ ಚೋಳ ಸಂಪ್ರದಾಯದ ಕಟ್ಟಡ. ಇದರ ನವರಂಗದ ಭಾಗವು ಹೊಯ್ಸಳ ಶೈಲಿಯಲ್ಲಿದೆ. ಇದು ಮುಮ್ಮಡಿ ಚೋಳನ ಕಾಲಕ್ಕೆ ಸೇರಿದುದೆಂದು ಹೇಳುತ್ತಾರೆ.

**ಆವನಿ ಗ್ರಾಮದಲ್ಲಿರುವ ದೇವಾಲಯಗಳು :** ಲಕ್ಷ್ಮಣೇಶ್ವರ ದೇವಾಲಯ ನೊಳಂಬ ವಾಸ್ತುಶಿಲ್ಪ ಶೈಲಿಯ ಪ್ರತೀಕವಾಗಿದೆ. ಕಂಚಿಯ ದೇವಾಲಯಗಳ ಸಂಪ್ರದಾಯ ಇದಾಗಿದೆ. ಇದನ್ನು ಸುಮಾರು ಹತ್ತನೇ ಶತಮಾನದಲ್ಲಿ ಕಟ್ಟಿರಬಹುದೆಂದು ಹೇಳುತ್ತಾರೆ. ದೇವಾಲಯದ ಮೇಲ್ಭಾಗದ ಗೋಪುರದಂತಹ ಇಟ್ಟಿಗೆಯ ಕಟ್ಟಡದ ಸೇರ್ಪಡೆಗಳು ವಿಜಯನಗರ ಅರಸರ ಕಾಲದ ಪಾಳೆಯಗಾರರು ಕಟ್ಟಿಸಿದವುಗಳು. ಭರತೇಶ್ವರ ಶತ್ರುಘ್ನೇಶ್ವರ ಮತ್ತು ಆಂಜನೇಶ್ವರ ದೇವಾಲಯಗಳು ಇದೇ ಕಾಲದವುಗಳಾಗಿವೆ. ಸಮೀಪದ ರಾಮೇಶ್ವರ ದೇವಾಲಯದ ಶಿಖರವು ದ್ರಾವಿಡ ಶೈಲಿಯದು. ಇದರ ಗರ್ಭಗುಡಿ ಮತ್ತು ನವರಂಗದ ಕೆಲವು ಭಾಗಗಳು ರಚನಾ ಶೈಲಿಯಲ್ಲಿ ಉಳಿದ ದೇವಾಲಯಗಳನ್ನೇ ಹೋಲುತ್ತವೆ. ಆದರೆ ಹನ್ನೆರಡು-ಹದಿಮೂರನೆಯ ಶತಮಾನದ ಕೆಲವು ಸೇರ್ಪಡೆಗಳು ಈ ದೇವಾಲಯದಲ್ಲಿ ಕಂಡುಬರುತ್ತವೆ.

ಊರಿನಲ್ಲಿರುವ ಸೀತಾ ಪಾರ್ವತಿಯ ದೇವಾಲಯದ ಕಟ್ಟಡದಲ್ಲಿ ಉಳಿದ ದೇವಾಲಯಗಳ ಪ್ರಬುದ್ಧತೆಯನ್ನು ಕಾಣಲಾಗುವುದಿಲ್ಲ. ಇದೊಂದು ಸಾಮಾನ್ಯ ದೇವಾಲಯ ಹದಿಮೂರನೆಯ ಶತಮಾನ ದಲ್ಲಿ ಕೋಲಾರ ಪ್ರದೇಶವನ್ನು ಆಳುತ್ತಿದ್ದ ತಮಿಳುಗಂಗರ ಅರಸು ಇಳವಂಜಿರಾಯ ಮತ್ತು ಅವನ ತಮ್ಮ ವಾಸುದೇವ ಈ ದೇವಾಲಯವನ್ನು ಕಟ್ಟಿಸಿರಬಹುದು. ಇಲ್ಲವೇ ಜೀರ್ಣೋದ್ಧಾರ ಮಾಡಿಸಿರಬಹುದು. ಇಂಥ ಗುರುತಿಗಾಗಿಯೇ ಅವರಿಬ್ಬರ ಭಕ್ತವಿಗ್ರಹಗಳು ಉಳಿದಿವೆ. ಇವರನ್ನು ಕುಂಭಕೋಣದ ನವಕೋಟಿ ನಾರಾಯಣಶೆಟ್ಟರು ಕಳುಹಿಸಿದ್ದರು ಎನ್ನಲಾಗಿದೆ.

**ಕೋಲಾರಮ್ಮನ ದೇವಾಲಯ** : ಮಾತೃ ಸ್ವರೂಪದಲ್ಲಿ ದೈವವನ್ನು ಆರಾಧಿಸುವ ಪದ್ಧತಿ ಅನಾದಿಯಾದುದು. ಜನನ ಶಕ್ತಿಯ ವಿಸ್ಮಯ ಮೂಡಿಸಿದ್ದೇ ಹೆಣ್ಣು ದೈವತ್ವವನ್ನು ಪಡೆಯಲು ಕಾರಣವಾಯಿತು. ಹೀಗೆ ಮಾತೃದೇವತಾರ್ಚನಾ ಪದ್ಧತಿ ತೀರಾ ಪ್ರಾಚೀನವಾದುದು. ನಾಗರಿಕತೆ ಬೆಳೆದಂತೆ ಮಾತೃದೈವದ ಆರಾಧನೆ ಕಡಿಮೆಯಾಗುತ್ತಿದ್ದರೂ ಭಾರತದಲ್ಲಿ ಈ ಉಪಾಸನೆ ಪ್ರಾಶಸ್ತ್ಯವನ್ನು ಪಡೆದಿದೆ. ಜನಪದ ಪರಿವಲಯದಿಂದ ಶಿಷ್ಟ ಸಮುದಾಯಗಳವರೆಗೆ ಈ ಉಪಾಸನೆ ಒಂದಲ್ಲ ಒಂದು ವಿಧದಲ್ಲಿ ಸಾರ್ವತ್ರಿಕವಾಗಿದೆ. ಸಿಂಧು ಕಣಿವೆ ಅಥವಾ ಸಿಂಧು ಬಯಲಿನ ಸಂಸ್ಕೃತಿಯಿಂದ ಆಧುನಿಕ ಸಂಸ್ಕೃತಿಗಳವರೆಗೂ ಒಂದಲ್ಲ ಒಂದು ರೀತಿಯಲ್ಲಿ ಅನುಚಾನವಾಗಿ ಬೆಳೆದು ಬಂದಿದೆ. ಮಾತೃದೇವತೆ ಪುರಾತನ ಕಾಲದ

ಸಮುದಾಯಗಳ ಅಧಿದೇವತೆ. ಈ ದೇವತೆಯ ಆರಾಧನೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ರೂಪುಗೊಂಡ ಹಂತದಲ್ಲಿ ಉಗಮಗೊಂಡಿತೆನ್ನಬಹುದು. ಸಂಸ್ಕೃತದ ಜಗದಂಬೆಯ ದೇಶೀಯರಿಂದ ಸ್ವೀಕರಿಸಿದ 'ಅಮ್ಮ'ನಾಗಿದ್ದಾಳೆ ಎಂದು ಹಲವರ ಊಹೆ. ವೇದ ಕಾಲಕ್ಕಿಂತ ಮುಂಚಿತವಾಗಿಯೇ ಜನಮನದಲ್ಲಿದ್ದ ಮಾತೃದೇವತೆಯ ಪರಿಕಲ್ಪನೆ ನಂತರ ವೇದ ಮಂತ್ರ ದೃಷ್ಟಾಕರ ಚಿತ್ತ ಸೂರೆಗೈದಳು. ಅವರು ಈ ದೇವತೆಗೆ ಮಾನ್ಯ ನೀಡಿ ದ್ರಾವಿಡ ಸಂಪ್ರದಾಯವನ್ನು ಗೌರವಿಸಿ ಆರ್ಯ-ಅನಾರ್ಯ ಸಾಮರಸ್ಯತೆಯನ್ನು ಸಾಧಿಸಿದ್ದಾರೆ. ಶಕ್ತಿದೇವತೆಯಾಗಿ ಸ್ತ್ರೀವರ್ಗದ ದೇವತೆಗಳನ್ನು ಪೂಜಿಸುವ ಸಾಲಿನಲ್ಲಿ ಕೋಲಾರಮ್ಮನ ಆರಾಧನೆಯೂ ಗಮನ ಸೆಳೆಯುವಂಥದ್ದು. ಗಂಡುದೈವಗಳ ಜೊತೆಗೆ ಹೆಣ್ಣುದೈವಗಳನ್ನು ಶಕ್ತಿಯರೆಂದು ಅಳವಡಿಸಿ ಪೂಜಿಸುವ ಪ್ರಾರ್ಥಿಸುವ ಪರಿಪಾಠ ಶಿಷ್ಟ ಸಮಾಜದಲ್ಲಿ ಕಂಡುಬರುತ್ತದೆ. ಬ್ರಹ್ಮನಿಗೆ ಸರಸ್ವತಿ, ವಿಷ್ಣುವಿಗೆ ಲಕ್ಷ್ಮೀ (ವೈಷ್ಣವಿ) ಶಿವನಿಗೆ ಪಾರ್ವತಿ (ಶಿವೆ) ಗಣಪತಿಗೆ ಪುಷ್ಟಿ, ಅನಂತನಿಗೆ ತುಷ್ಟಿ, ಕಾಲನಿಗೆ ರಾತ್ರಿ, ಸೂರ್ಯನಿಗೆ ಸಂಜ್ಞೆ, ಇಂದ್ರನಿಗೆ ಶಚಿ, ಅಗ್ನಿಗೆ ಸ್ವಾಹಾ, ದಕ್ಷನಿಗೆ ದಾಕ್ಷಿಣಿ, ಸ್ಕಂದನಿಗೆ ಶಿವಸೇನೆ - ಹೀಗೆ ಪುರುಷ ದೈವದ ಶಕ್ತಿಯಾಗಿ ಸ್ತ್ರೀದೈವವನ್ನು ಸೂಚಿಸಲಾಗಿದೆ.

**ಶಕ್ತಿದೇವತೆಗಳ ಸೃಷ್ಟಿಗೆ ಸಂಬಂಧಿಸಿದಂತೆ ಪೌರಾಣಿಕ ಐತಿಹ್ಯದ ಪ್ರಕಾರ,** ದಕ್ಷಪ್ರಜಾಪತಿಯು ಯಜ್ಞ ಮಾಡುತ್ತಿದ್ದ ಸಂದರ್ಭದಲ್ಲಿ ಅವನ ಮಗಳಾದ ಸತಿಯು ಆಹ್ವಾನವಿಲ್ಲದಿದ್ದರೂ ಹೋಗಿ ತನ್ನ ಗಂಡನ ಬಗ್ಗೆ ತಂದೆ ನಿಂದಿಸಿದನ್ನು ಸಹಿಸಲಾರದೆ ಅಗ್ನಿಕುಂಡದಲ್ಲಿ ಬಿದ್ದು ಪ್ರಾಣ ಬಿಡುತ್ತಾಳೆ. ಇದನ್ನು ಕೇಳಿದ ಶಿವನು ಅಲ್ಲಿಗೆ ಓಡಿಬಂದು ಕೋಪದಿಂದ ನೆಲಕ್ಕೆ ಜಟೆಯನ್ನು ಅಪ್ಪಳಿಸಿದಾಗ ವೀರಭದ್ರನು ಹುಟ್ಟಿಕೊಂಡು ದಕ್ಷಬ್ರಹ್ಮನ ಯಜ್ಞವನ್ನು ಧ್ವಂಸ ಮಾಡಿದ. ತನ್ನ ಸತಿಯ ಮರಣದಿಂದ ವಿಹ್ವಲವಾದ ಶಿವನು ಅವಳ ಕಳೇಬರವನ್ನು ಹೆಗಲ ಮೇಲೆ ಹೊತ್ತು ಅಲೆದಾಡತೊಡಗಿದ. ಶಿವನ ಬವಣೆಯನ್ನು ತಪ್ಪಿಸಲು ವಿಷ್ಣುವು ಉಪಾಯದಿಂದ ಕಳೇಬರದ ಒಂದೊಂದು ಭಾಗವನ್ನು ಕಡಿದು ಉರುಳಿಸಿದನು. ಅವು ಬಿದ್ದ ಸ್ಥಳಗಳು ಶಕ್ತಿಪೀಠಗಳಾದವು. ಪ್ರತಿಯೊಂದು ಶಕ್ತಿಪೀಠದಲ್ಲಿಯೂ ಶಿವನು ಒಂದೊಂದು ಅಂಶದಿಂದ ಶಕ್ತಿಯೊಡಗೂಡಿ ಉಳಿದನು. ಕಾಮಾಖ್ಯಾ (ಗೌಹಾತಿ), ಶ್ರೀಹಟ್ಟಿ (ಸಿಲ್ಹೆಟ್) ಪೂರ್ಣಗಿರಿ ಮತ್ತು ಉಡಿಯಾನ (ಒಡ್ಯಾಣ) ಇವು ನಾಲ್ಕು ಶಕ್ತಿಪೀಠಗಳೆಂದು ನಿರ್ದೇಶನವಿದೆ.[೨೦] ಶಕ್ತಿದೇವತೆಯ ಸ್ವರೂಪದಲ್ಲಿ ಸ್ತ್ರೀದೈವಗಳನ್ನು 'ಮಾತೃ'ವೆಂದು ಪರಿಗಣಿಸಿ ಪೂಜಿಸುತ್ತಾ ಬಂದಿರುವ ಪರಂಪರೆ ಕ್ರಿ.ಶ. ೬-೭ನೇ ಶತಮಾನದಿಂದ ಆರಂಭಗೊಂಡಿರಬಹುದು. ಐಹೊಳೆಯ ದುರ್ಗಾ, ಕೊಲ್ಲಾಪುರದ ಮಹಾಲಕ್ಷ್ಮೀ, ಆಲಂಪುರದ ಜೋಗೇಶ್ವರಿ ಮತ್ತು ಕೋಲಾರದ ಕೋಲಾರಮ್ಮನ ಆರಾಧನೆಗಳಲ್ಲಿ ಇದನ್ನು ಗುರುತಿಸಬಹುದು.

ಕೋಲಾರಮ್ಮನ ದೇವಾಲಯವು ೧೧ನೇ ಶತಮಾನದಲ್ಲಿ ಗಂಗರು ಕಟ್ಟಿದ್ದಿರಬಹುದೆಂದು ಹೇಳುತ್ತಾರೆ. ಇದನ್ನು ಲಂಬಾಕೋನಾಕೃತಿಯ ವಾಸ್ತುಶಿಲ್ಪದ ಆಧಾರದ ಮೇಲೆ ಕಟ್ಟಲಾಗಿದೆ. ಇದರಲ್ಲಿ ಎರಡು ದೇವಮಂದಿರಗಳಿದ್ದು ಒಂದೇ ಮುಖಮಂಟಪವನ್ನು ಹೊಂದಿರುವುದು ಇದರ ವಿಶೇಷ. ದೇವಾಲಯದ ಮಹಾದ್ವಾರವು ಎತ್ತರವಾಗಿದೆಯಾದರೂ ಅದಕ್ಕೆ ಗೋಪುರವಿಲ್ಲ. ಪ್ರಸ್ತುತ ಪೂಜೆ ಗೊಳ್ಳುತ್ತಿರುವ ಕೋಲಾರಮ್ಮ ದಕ್ಷಿಣಾಭಿಮುಖವಾಗಿದ್ದು, ಇದನ್ನು ಚೋಳರ ದೊರೆ ರಾಜೇಂದ್ರಚೋಳನು ಪ್ರತಿಷ್ಠಾಪಿಸಿದನೆಂದು ಹೇಳಲಾಗುತ್ತದೆ. ಅಲ್ಲಿಯೇ ಸುಮಾರು ನಾಲ್ಕೈದು ಅಡಿ ಎತ್ತರದ ಚಾಮುಂಡೇಶ್ವರಿ ವಿಗ್ರಹವು ಹೂವಿನ ತೋರಣದ ಕೆತ್ತನೆಯಿಂದ ಕೂಡಿ ಅಡಿಯಲ್ಲಿ ರಾಕ್ಷಸನನ್ನು ಸಂಹಾರ ಮಾಡುತ್ತಿರುವ ಭಂಗಿಯಲ್ಲಿದೆ. ಈ ದೇವತೆಯ ದೃಷ್ಟಿಯು ನೇರವಾಗಿ ಮನುಷ್ಯರ ಮೇಲೆ ಬೀಳಬಾರದೆಂಬ ನಂಬಿಕೆ ಯಿಂದ ಆಕೆಯ ದೃಷ್ಟಿ ದಕ್ಷಿಣಾಮೂರ್ತಿಯ ಮೇಲೆ ಬೀಳುವಂತೆ ಪ್ರತಿಷ್ಠಾಪಿಸಲಾಗಿದೆಯೆಂದು ಪ್ರತೀತಿ. ದಕ್ಷಿಣಾಮೂರ್ತಿಯು ಅದನ್ನು ನಿಗ್ರಹಿಸುವವನೆಂಬ ನಂಬಿಕೆಯೂ ಇದೆ.

ಉತ್ತರಾಭಿಮುಖವಾಗಿರುವ ಮತ್ತೊಂದು ದೇವಾಲಯ ಅಪರೂಪವಾದ ಮಣ್ಣಿನ ಗಾರೆಯಿಂದ ಕೂಡಿದ್ದು, ಶಿಲೆಯ ಹಾಗೂ ಲೋಹದ ವಿಗ್ರಹಗಳಿಂದ ಕೂಡಿದೆ. ಗೋಡೆಯ ಅಂಚಿನ ಗಾರೆಯಲ್ಲಿ ಸಪ್ತಮಾತೃಕೆಯರ ವಿಗ್ರಹಗಳು ಇದ್ದು, ಈ ಆಲಯದ ಹೊರಭಾಗದಲ್ಲಿ ನಗ್ನಸ್ತ್ರೀಯ ವಿಗ್ರಹವೊಂದು ಗವಾಕ್ಷದಲ್ಲಿಟ್ಟಂತೆ ಕಾಣುತ್ತದೆ. ದೇವಾಲಯ ಒಳಭಾಗದಲ್ಲಿರುವ ಗಣಪತಿಯ ಕಿವಿಗಳು ಗರುಡನ ಮೂರ್ತಿ ಹಾಗೂ ಹನುಮಂತನ ಮುಖವನ್ನು ಹೋಲುವುದರಿಂದ ಅಪರೂಪವೆನಿಸುತ್ತವೆ. ಈ ಮಂದಿರದ ಎದುರುಗಡೆಯ ಗೂಡುಗಳಲ್ಲಿ ದೇವಾಲಯದ ರಕ್ಷಣೆ ಪೂಜೆ ಮುಂತಾದ ಕಾರ್ಯಗಳಲ್ಲಿ ಭಾಗವಹಿಸಿದ ಪ್ರಸಿದ್ಧ ವ್ಯಕ್ತಿಗಳ ಚಿತ್ರಗಳನ್ನು ಕಲ್ಲಿನಲ್ಲಿ ಕೆತ್ತಲಾಗಿದೆ. ಹಾಗೆಯೇ ತಮ್ಮ ತಲೆ ಕಣ್ಣು ಇತ್ಯಾದಿಗಳನ್ನು ದೇವರಿಗೆ ಅರ್ಪಿಸುವ ಮೂಲಕ ಬಲಿಯಾದ ಭಕ್ತರ ಶಿಲ್ಪಗಳಿವೆ. ದೇವಾಲಯದ ಉತ್ತರಾಭಿಮುಖವಾಗಿ ಶಂಕರಾಚಾರ್ಯರು ಪ್ರತಿಷ್ಠಾಪಿಸಿದರೆನ್ನಲಾದ ಶ್ರೀಚಕ್ರವಿದೆ. ಅಮ್ಮನ ಕೋಪವನ್ನು ಇದು ತಿಳಿಗೊಳಿಸುತ್ತದೆಂದು ಶಕ್ತಿಮೂಲವಾದ ಈ ಚಕ್ರದ ಮೂಲಕ ದೇವಿಯ ಚಟುವಟಿಕೆಗಳು ಸಾಗುತ್ತವೆಂದು ಅರ್ಚಕರು ಹೇಳುತ್ತಾರೆ.

ಕೋಲಾರಮ್ಮನ ದೇವಾಲಯದ ಮಹಾದ್ವಾರದಲ್ಲಿ ಗಜಲಕ್ಷ್ಮಿಯನ್ನು ಕೆತ್ತಲಾಗಿದೆ. ದ್ವಾರದ ಇಕ್ಕೆಲಗಳಲ್ಲಿ ಸ್ತ್ರೀಯರ ಶಿಲ್ಪಗಳನ್ನು ಬಿಡಿಸಿದ್ದು, ಅವು ಆಭರಣಗಳ ಅಲಂಕಾರ ಮತ್ತು ಕೇಶವಿನ್ಯಾಸದ ಅಲಂಕಾರಗಳಿಂದ ಆಕರ್ಷಣೀಯವೆನಿಸುತ್ತವೆ. ದೇವಾಲಯದ ಒಳಭಾಗದ ಗೋಡೆಗಳಲ್ಲಿ ತಮಿಳು ಕನ್ನಡ ಭಾಷೆಗಳ ಬರವಣಿಗೆಗಳು (ಶಾಸನಗಳು) ತುಂಬಿವೆ.

**ಚೇಳೂರಮ್ಮನ ವಿಗ್ರಹ :** ಕೋಲಾರಮ್ಮನ ದೇವಾಲಯದ ಹೊರ ಮಂಟಪದಲ್ಲಿ ಸುಮಾರು ಐದಾರು ಅಡಿ ಎತ್ತರದ ಚೇಳೂರಮ್ಮನ ವಿಗ್ರಹವಿದೆ. ಇದು ಕರ್ನಾಟಕದ ಅತ್ಯಪರೂಪವಾದ ವಿಗ್ರಹ ವೆಂದರೆ ತಪ್ಪಾಗಲಾರದು. ಮನೆಯಲ್ಲಿ ಕಾಣಿಸುವ ಚೇಳು, ಜರಿ (ಲಕ್ಷ್ಮೀ ಚೇಳು) ಇತ್ಯಾದಿ ವಿಷ ಜಂತುಗಳ ಕಾಟದಿಂದ ಪಾರಾಗಲು ಈ ದೇವತೆಯನ್ನು ಆರಾಧಿಸುತ್ತಾರೆ. ಈ ತೊಂದರೆಯನ್ನು ನಿವಾರಿಸುವಂತೆ ಹರಕೆ ಕಟ್ಟುತ್ತಾರೆ. ವರ್ಷಕ್ಕೊಮ್ಮೆ ನಿಗದಿಯಾದ ದಿನ ಚೇಳೂರಮ್ಮನು ಚೇಳಿನ ರೂಪದಲ್ಲಿ ಕಾಣಿಸಿಕೊಳ್ಳುತ್ತಾಳೆಂದು ನಂಬುತ್ತಾರೆ. ಆ ಕಿಂಡಿಗೆ ಭಕ್ತಾದಿಗಳು ಕಾಣಿಕೆಗಳನ್ನು ಅರ್ಪಿಸುತ್ತಾರೆ. ಚೇಳೂರಮ್ಮನ ವಿಗ್ರಹ ಬೆತ್ತಲೆಯಾಗಿದ್ದು, ಇಂಥ ನಗ್ನವಿಗ್ರಹಗಳ ಆರಾಧನೆ ಕೆಲವು ಶತಮಾನಗಳ ಹಿಂದೆ ಶ್ರೇಷ್ಠವೆಂದು ಭಾವಿಸಲಾಗುತ್ತಿತ್ತು. ಹೊರ ಮಂಟಪದ ನಗ್ನಕಾಲಭೈರವ-ಭೈರವಿಯ ಮೂರ್ತಿಗಳು, ಮಹಾದ್ವಾರದಿಂದ ಪ್ರವೇಶಿಸುತ್ತಿದ್ದಂತೆಯೇ ಕಾಣಿಸುವ ಬಲಿಪೀಠ ಎಲ್ಲವೂ ಕೋಲಾರಮ್ಮ ಶಕ್ತಿದೇವತೆಯಾಗಿ ಪರಿಭಾವಿಸಲ್ಪಟ್ಟಿರುವುದಕ್ಕೆ ದೃಢೀಕರಣವನ್ನು ನೀಡುತ್ತವೆ. ಪ್ರಾಚೀನ ಕಾಲದಿಂದಲೂ ಇಲ್ಲಿ ನರಬಲಿ ಪ್ರಚಲಿತವಿದ್ದು ಕಾಲಾನುಕ್ರಮದಲ್ಲಿ ಅದು ನಿಷೇಧಿಸಲ್ಪಟ್ಟು ಪ್ರಾಣಿಬಲಿ ಬಳಕೆಗೆ ಬಂದಿತು. ಶಿಷ್ಟ ಪರಂಪರೆಯ ಪ್ರಭಾವ ಈ ದೇವಾಲಯದ ಆಚರಣೆಗಳ ಮೇಲೆ ಆಗತೊಡಗಿದ್ದರಿಂದ 'ಪ್ರಾಣಿ ಬಲಿ'ಗೆ ಪ್ರಾಶಸ್ತ್ಯವಿಲ್ಲದಾಯಿತು. ಅದಕ್ಕೆ ಪರ್ಯಾಯವಾಗಿ ನಿಂಬೆಹಣ್ಣನ್ನು ಕತ್ತರಿಸಿ ದೀಪ ಹಚ್ಚುವ ಪದ್ಧತಿ ಬಳಕೆಯಲ್ಲಿದೆ. ಜನಪದ ಸಂಪ್ರದಾಯದಂತೆ ಬಲಿಕೊಡುವವರ ಇಚ್ಛೆಯು ಐಚ್ಛಿಕವಾದದ್ದು. ಆದರೆ ಇದನ್ನು ಬಲಿಪೀಠಕ್ಕೆ ದೂರದ ಬಯಲಿನಲ್ಲಿ ನಡೆಸುತ್ತಾರೆಯೇ ಹೊರತು ದೇಗುಲದಲ್ಲಿ ಇಂಥ ಸಾಧ್ಯತೆ ಇಲ್ಲವಾಗಿದೆ.

ಕೋಲಾರಮ್ಮನಿಗೆ ನಡೆಯುವ ನಿಂಬೆಹಣ್ಣಿನ ಹೋಳುಗಳಲ್ಲಿ ದೀಪಹಚ್ಚುವ ಆಚರಣೆ ವೈದಿಕೀಕರಣದ ಪ್ರಭಾವದಿಂದ ರಚನೆಗೊಂಡದ್ದಾಗಿದೆ. ಇದು ಭೈರವಿಯ ಹೆಸರಿನಲ್ಲಿ ಜರುಗುತ್ತದೆ. ಶಿಷ್ಟ ಪರಿಕಲ್ಪನೆಯಂತೆ ದುರ್ಗಾದೇವಿಗೆ 'ರಾಹು' ಅಧಿದೇವತೆ. ಆದ್ದರಿಂದ ನಿಂಬೆಹಣ್ಣಿನಲ್ಲಿ ದೀಪ ಹಚ್ಚುವ ಆಚರಣೆಯನ್ನು ರಾಹುಕಾಲದಲ್ಲಿ ಮಾಡುತ್ತಾರೆ. ನಿಂಬೆಹಣ್ಣನ್ನು ದೇವಿಯ ಮುಂದೆ ತುಂಡರಿಸಿ ತಿರುಳು ಹಾಗೂ ರಸವನ್ನು ತೆಗೆದು ಉಳಿದ ಬಟ್ಟಲಿನಾಕಾರದ ಸಿಪ್ಪೆಯೊಳಕ್ಕೆ ಎಣ್ಣೆ ಬತ್ತಿಯನ್ನು ಹಾಕಿ ದೀಪ ಉರಿಸುತ್ತಾರೆ. ರಸ ಹಿಂಡುವ ಮೊದಲು ನಿಂಬೆಹಣ್ಣಿನ ಹೋಳುಗಳನ್ನು ಕುಂಕುಮದಲ್ಲಿ ಅದ್ದಿ ನಂತರ ದೇವಿಯೆದುರು ರಸವನ್ನು ಹಿಂಡುತ್ತಾರೆ. ಕುಂಕುಮಭರಿತ ರಸವು ಕೆಂಪಗೆ ರಕ್ತವನ್ನು ಹೋಲುವುದರಿಂದ ಇದು ಪ್ರಾಣಿಬಲಿಯ ಅನುಕರಣೆಯಾಗುತ್ತದೆ. ಇಂಥ ದೀಪ ಹಚ್ಚುವ ಆಚರಣೆಯನ್ನು ೧೨ ವಾರ ೨೪ ವಾರ ಇಲ್ಲವೇ ೪೮ ವಾರಗಳ ಕಾಲ ನೆರವೇರಿಸುವ ಪದ್ಧತಿ ಆಚರಣೆಯಲ್ಲಿದೆ. ಇದು ಅವರವರ ಹರಕೆಗೆ ಅನುಗುಣವಾಗಿರುತ್ತದೆ. ಒಂದು ಮಂಡಲಕಾಲ ಹರಕೆಯ ರೂಪದಲ್ಲಿ ತೆಂಗಿನಕಾಯಿಯನ್ನು

ಉತ್ಸವ ಮೂರ್ತಿಯ ಮುಂದಿಟ್ಟು ಪೂಜೆ ಮಾಡಿ ಅದನ್ನು ಪ್ರಸಾದ ರೂಪದಲ್ಲಿ ಪಡೆದು ಮನೆಯಲ್ಲಿ 'ರಕ್ಷಾಫಲ'ವೆಂದು ಕಟ್ಟುವ ವಾಡಿಕೆ ಇದೆ. ಪಾಲ್ಗುಣ ಶುದ್ಧ ಅಷ್ಟಮಿಯೆಂದು ನಡೆಯುವ ರಥೋತ್ಸವ ದೊಂದಿಗೆ ಭಕ್ತರ ಹರಕೆಗಳು ಸಲ್ಲುತ್ತವೆ. ನವರಾತ್ರಿಯ ಸಂದರ್ಭದಲ್ಲಿ ನಡೆಯುವ ವಿಶೇಷ ಪೂಜೆಗಳು ಶಿಷ್ಟೀಕರಣಗೊಂಡಿರುವ ಗಮನಾರ್ಹ ಅಂಶ.

ಐತಿಹ್ಯದ ಪ್ರಕಾರ, ಪರಶುರಾಮನು ತನ್ನ ತಂದೆ ಜಮದಗ್ನಿಯನ್ನು ಮೋಸದಿಂದ ಕೊಂದ ಕಾರ್ತಿವೀರ್ಯಾಜುನನ ಮೇಲೆ ಸೇಡನ್ನು ತೀರಿಸಿಕೊಳ್ಳಲು ಎಲ್ಲ ಕ್ಷತ್ರಿಯ ಅರಸರನ್ನು ಕೊಲ್ಲುವುದಾಗಿ ಶಪಥ ಮಾಡಿದನು. ಅದರಂತೆ ಕೊಲ್ಲುತ್ತಾ ಮುನ್ನಡೆದಾಗ ಕೋಲಾರದ ಶತಶೃಂಗ ಪರ್ವತದ ತಪ್ಪಲಲ್ಲಿ ಕಾರ್ತವೀರ್ಯಾರ್ಜುನನ್ನು ಎದುರ್ಗೊಂಡು ಯುದ್ಧ ಮಾಡಿ ಕೊಂದ. ಈ ಯುದ್ಧದ ಕೋಲಾಹಲದಿಂದ ಆವೃತ್ತವಾದ ಪ್ರದೇಶವು ಕೋಲಾಹಪುರವೆಂದು ಹೆಸರಾಯಿತು. ಪರುಶುರಾಮನು ತನ್ನ ಸೇಡಿನ ಕೃತ್ಯವು ಈಡೇರಿದ್ದರ ಸಲುವಾಗಿ ಅಲ್ಲಿ ಉಗ್ರರೂಪಿಯಾದ ರೇಣುಕೆಯ ಪ್ರತಿಷ್ಠಾಪನೆ ಮಾಡಿದ. ಕೋಲಾಹಪುರದ ಅಮ್ಮ ಕೋಲಾರಮ್ಮನೆಂದು ಪ್ರಚಲಿತಗೊಂಡಳು. ಈ ಐತಿಹ್ಯವು ರೇಣುಕೆ ಜಮದಗ್ನಿ ಹಾಗೂ ಪರುಶರಾಮ ಮತ್ತು ಕಾರ್ತವೀರ್ಯಾರ್ಜುನನ ಪೌರಾಣಿಕ ಘಟನೆಯನ್ನು ಒಳಗೊಂಡಿದ್ದಾಗಿದೆ. ಯಲ್ಲಮ್ಮನ ಆರಾಧನೆಯ ಶಿಷ್ಟ ಪರಂಪರೆಯ ಪ್ರಭಾವದಿಂದ ರೂಪಾಂತರ ಪಡೆದದ್ದರ ಹಿನ್ನೆಲೆಯಲ್ಲಿ ನಾವಿದನ್ನು ಗುರುತಿಸಬಹುದು. ಮತ್ತೊಂದು ಐತಿಹ್ಯವು ಕೋಲನೆಂಬ ರೈತನು ತನ್ನ ಹೊಲದಲ್ಲಿ ನೇಗಿಲನ್ನು ಉಳುತ್ತಿರುವಾಗ ಅವನ ನೇಗಿಲಿಗೆ (ಹಲಕ್ಕೆ) ಸಿಕ್ಕಿ ನಿಧಿಯು ದೊರೆತು ಚೋಳರಾಜನು ಅದನ್ನು ಪಡೆಯಬಯಸುತ್ತಾನೆ. (ಅಲ್ಲದೇ ತನ್ನ ರಾಜಧಾನಿಯಾದ ಕಾಂಚೀಪುರಕ್ಕೆ ಕೋಲನನ್ನು ಕರೆಸುತ್ತಾನೆ.) ಆಗ ಅವನ ಕನಸಿನಲ್ಲಿ ರೇಣುಕೆಯು ಕೋಲನನ್ನು ಗೌರವಿಸುವಂತೆ ಸೂಚಿಸುತ್ತಾಳೆ. ಅದರಂತೆ ರಾಜನು ಕೋಲನಿಗೆ ದೊರೆತ ನಿಧಿಯಲ್ಲಿ ರೇಣುಕಾಂಬೆಯ ದೇವಾಲಯವನ್ನು ನಿರ್ಮಿಸಿದನಲ್ಲದೆ ಕೋಲನನ್ನು ಆ ಪ್ರಾಂತ್ಯದ ಅಧಿಕಾರಿಯನ್ನಾಗಿ ಮಾಡಿ ಗೌರವಿಸಿದನು.

ಈ ಐತಿಹ್ಯದ ಪರಿಶೀಲನೆಯಿಂದ ಸ್ಪಷ್ಟವಾಗುವ ಸಂಗತಿಯೆಂದರೆ, ಚೋಳರ ಕಾಲದಲ್ಲಿ ಕೋಲಾರಮ್ಮನ ದೇವಾಲಯವು ಮತ್ತಷ್ಟು ಅಭಿವೃದ್ಧಿಗೊಂಡಿದೆಯೆಂಬುದು. ಈ ದೇವಾಲಯದ ಅಭಿವೃದ್ಧಿಗೆ ನಿಧಿಯನ್ನು ಕೋಲನೆಂಬ ಪ್ರಾಂತ್ಯಾಧಿಕಾರಿ ಸಲ್ಲಿಸಿರಬಹುದು. ಈ ಪ್ರದೇಶದ ಮೇಲೂ ಹಿಡಿತವನ್ನು ಹೊಂದಿದ್ದ ಚೋಳರ ದೊರೆ ಗಾಜೇಂದ್ರಚೋಳನು ರಾಜಧಾನಿ ಕಂಚಿಯಿಂದ ದೇವಾಲಯದ ಉದ್ಘಾಟನೆಗೆ ಆಗಮಿಸಿ ಸಂತಸದಿಂದ ಪ್ರಾಂತ್ಯಾಧಿಕಾರಿಯನ್ನು ಪ್ರಶಂಸಿರಬಹುದು. ಈ ಕಾಲಕ್ಕಾಗಲೇ ಜನಪದರ ದೈವವಾಗಿದ್ದ ಇಲ್ಲಿನ ದೇವಿಯು ಶಿಷ್ಟ ಪರಂಪರೆಗೆ ಪರಿವರ್ತನೆಗೊಂಡು ರಾಜಕೀಯದ

(ರಾಜರ ಆಸ್ಥಾನದ) ಬೆಂಬಲವನ್ನು ದೊರಕಿಸಿಕೊಂಡು ಸಾಮಾಜಿಕವಾಗಿ ಪಲ್ಲಟಗೊಂಡ, ಧಾರ್ಮಿಕವಾಗಿ ರೂಪಾಂತರಗೊಂಡ ಬೆಳವಣಿಗೆ ಕಂಡುಬರುತ್ತದೆ.

**ಕೆರೆ-ಕುಂಟೆ-ಬಾವಿಗಳಿಗೆ ಸಂಬಂಧಿಸಿದ ಸ್ಥಳೈತಿಹ್ಯಗಳು**

ಪುತ್ರಾಪೇಕ್ಷೆಗಾಗಿ ಶಿಷ್ಟ ಪರಂಪರೆಯಲ್ಲಿ ಪೂಜೆ ಆರಾಧನೆ ಆಚರಣೆಗಳಲ್ಲದೆ ಹೋಮ, ಹವನ, ಯಜ್ಞ-ಯಾಗ ತಪ್ಪಸ್ಸುಗಳನ್ನು ಮಾಡಿದ ನಿದರ್ಶನಗಳಿವೆ. ಆದರೆ ಇವುಗಳ ಹಿನ್ನೆಲೆಯಾಗಿ ಸಂತಾನಾಪೇಕ್ಷೆಯ ಬಯಕೆ ಹಾಗೂ ಆ ಮೂಲಕ ಮೋಕ್ಷದ ಹಂಬಲ ಕೆಲಸ ಮಾಡುತ್ತದೆ. ಜನಪದರು ಜನೋಪಯೋಗಿ ಕೆಲಸವನ್ನು ಕೈಗೊಂಡು ಪಾಪಗಳನ್ನು ಪರಿಹರಿಸಿಕೊಳ್ಳಲು ಹವಣಿಸುತ್ತಾರೆ. ಈ ಹಿನ್ನೆಲೆಯಲ್ಲಿ ಮಕ್ಕಳಿಲ್ಲದವರು ಕೆರೆಕಟ್ಟಿ ಬಾವಿ-ಕುಂಟೆಗಳನ್ನು ಸಂತಾನಾಪೇಕ್ಷೆಯ ಉದ್ದೇಶವಾಗಿ ಎಲ್ಲಿಯೂ ನಿರ್ಮಿಸಲಿಲ್ಲ. ಬದಲಿಗೆ ಇಂಥ ನಿರ್ಮಾಣಗಳ ಭದ್ರತೆಗಾಗಿ ತಮ್ಮ ಮನೆಯ ಮಕ್ಕಳನ್ನು, ಬಸವಿ, ಬಾಣಂತಿಯರನ್ನು ಬಲಿಕೊಟ್ಟ ನಿದರ್ಶನಗಳಿವೆ. ಗೌರಿಬಿದನೂರು ತಾ. ಕಾಟಮಾಚೇನಹಳ್ಳಿಯ ಚಿಕ್ಕನಂಜಪ್ಪನ ಕುಂಟೆಯೂ ಆತನಿಗೆ ಮಕ್ಕಳಿಲ್ಲವೆಂಬ ಕಾರಣಕ್ಕಾಗಿ ಕಟ್ಟಿಸಿದ್ದು. ಹಾಗೆಯೇ ವೇದಲವೇಣಿಯಲ್ಲಿ ಗಾಳೆಮ್ಮನೆಂಬ ಮಹಿಳೆ (ತನಗೆ ಮಕ್ಕಳಿಲ್ಲದ ಕಾರಣಕ್ಕಾಗಿ) ದನ-ಕರುಗಳ ನೀರಿನ ವ್ಯವಸ್ಥೆಗೆಂದು ಕುಂಟೆಯನ್ನು ಕಟ್ಟಿಸಿದಳು.

ಹಾಗೆಯೇ ಕೋಲಾರ ಜಿಲ್ಲೆಯಂಥ ಬಯಲು ಪ್ರದೇಶದಲ್ಲಿ ಮಳೆಗಾಲ ಮುಗಿಯತ್ತಿದ್ದಂತೆ ದನ-ಕರುಗಳಿಗೆ ಕುಡಿಯುವ ನೀರನ್ನು ಒದಗಿಸಲು ಕುಂಟೆಗಳನ್ನು ಆಶ್ರಯಿಸಬೇಕಾಗುತ್ತದೆ. ಏಕೆಂದರೆ ಜಿಲ್ಲೆಯಲ್ಲಿ ನದಿ-ಹಳ್ಳಗಳು ಮಳೆಗಾಲದಲ್ಲಿ ಮಾತ್ರ ಹರಿದು ಬತ್ತಿ ಹೋಗುತ್ತವೆ. ಕೃಷಿಯ ಅವಶ್ಯಕತೆ ಗಳಿಗೆ ಕೆರೆಗಳನ್ನು ಆಶ್ರಯಿಸಿದಂತೆ ದಿಣ್ಣೆಯ ಪ್ರದೇಶದಲ್ಲಿ ಮೇಯುವ ದನಗಳ ನೀರಿನ ಅವಶ್ಯಕತೆಗಾಗಿ ಕುಂಟೆಗಳನ್ನು ನಿರ್ಮಿಸಿರುತ್ತಾರೆ. ಶ್ರೀನಿವಾಸಪುರ ತಾಲ್ಲೂಕಿನ ಇಮರುಕುಂಟೆ ಎಂಬಲ್ಲಿ ಸುಣ್ಣಕಲ್ಲು ಚಂದ್ರಪ್ಪನಾಯ್ಕ ಎಂಬುವವನ ಆಳ್ವಿಕೆ ಇತ್ತು. ಈತನೊಂದು ಕುಂಟೆಯನ್ನು ಕಟ್ಟಿಸಿದ್ದಾನೆ. ಒಟ್ಟಾರೆ ಈ ಪ್ರದೇಶದಲ್ಲಿ ಎಲ್ಲಿಯೂ ನೀರು ನಿಲ್ಲದೆ ಹಿಂಗುವುದರಿಂದ ಇದನ್ನು ಇವರುಕುಂಟೆ (ಹಿಂಗುವ ಕುಂಟೆ) ಎಂದು ಕರೆಯುತ್ತಾರೆ. ಹೀಗೆ ಬಹುಪಾಲು ಕುಂಟೆಗಳು ಮಕ್ಕಳಿಲ್ಲದವರು ಕಟ್ಟಸಿರುವುದು ಗಮನಾರ್ಹ.

ವೀರಪ್ಪನೆಂಬ ವ್ಯಕ್ತಿಯು ತನಗೆ ಮಕ್ಕಳಿಲ್ಲವೆಂಬ ಕಾರಣಕ್ಕಾಗಿ ಒಂದು ಕುಂಟೆಯನ್ನು ಕಟ್ಟಿಸುತ್ತಾನೆ. ದನ-ಕರುಗಳಿಗೆ ಬೇಸಿಗೆಯಲ್ಲಿ ನೀರಿನ ಕೊರತೆಯಾಗುವುದರಿಂದ ಈ ಮೂಲಕ ಆಶ್ರಯ ಒದಗಿಸಿ ಪುಣ್ಯಾ ಪಡೆದುಕೊಳ್ಳಬೇಕೆಂಬ ಹಂಬಲ 'ಕುಂಟೆ'ಗಳ ನಿರ್ಮಾಣದ ಹಿಂದಿನ ಆಶಯವಾಗಿರುತ್ತದೆ.

ಮಕ್ಕಳಿಲ್ಲದವರಿಗೆ ಮೋಕ್ಷವಿರುವುದಿಲ್ಲವೆಂಬ ನಂಬಿಕೆಯಿದೆ. ಜನಪದದಲ್ಲಿ ಸಂತಾನರಹಿತರು ಬಾವಿಯನ್ನು ತೋಡಿಸುವುದು ಇಲ್ಲವೇ ಕುಂಟೆಯನ್ನು ಕಟ್ಟಿಸುವುದು ಇತ್ಯಾದಿ ಕುಡಿಯುವ ನೀರಿನ ಸೌಲಭ್ಯ ಒದಗಿಸುವ ಮೂಲಕ ಮೋಕ್ಷಕ್ಕೆ ಸಲ್ಲುತ್ತಾರೆಂದು ಭರವಸೆಯ ನಂಬಿಕೆ ಇಂಥಲ್ಲಿ ಭದ್ರಗೊಂಡಿರುತ್ತದೆ.

**ಬಲಿಯ ಆಯಾಮಗಳ ಕೆರೆ-ಕುಂಟೆಗಳು :** ಮಾರಪ್ಪ ನಾಯಕ ಎಂಬುವವನು ಸ್ಥಾಪಿಸಿದ ಮಾರಗನಹಳ್ಳಿಯ ಕೆರೆಯನ್ನು (ಬಾಗೇಪಲ್ಲಿ ತಾಲ್ಲೂಕು) ಗೊಲ್ಲರು ಕಟ್ಟಿದರೆಂದು ಇವರು ಮಾರಗಾನಹಳ್ಳಿಯ ಪಕ್ಕದ ಹಳ್ಳಿಯಾದ ಬೊಮ್ಮಗಾನಪಲ್ಲಿ (ಹಳ್ಳಿ)ಯವರೆಂದು ಹೇಳುತ್ತಾರೆ. ಈ ಕೆರೆಗೆ ನೀರು ತುಂಬಿದ ತಕ್ಷಣ ಕಟ್ಟೆ ಒಡೆದು ನೀರೆಲ್ಲವೂ ಹರಿದು ಹೋಗುತ್ತಿತ್ತು. ಹೀಗೆ ಕೆರೆಯಲ್ಲಿ ನೀರು ಉಳಿಯದೆ ಇದ್ದುದರಿಂದ ಮಾರಪ್ಪನ ಹಿರಿಯ ಸೊಸೆಯನ್ನು ಕೆರೆಯ ಕಟ್ಟೆಗೆ ಅಡ್ಡ ಹಾಕಿ ಕಟ್ಟೆಗೆ ಮಣ್ಣನ್ನು ಹಾಕುತ್ತಾ ಹೋಗುತ್ತಾರೆ. ತುಂಬು ಗರ್ಭಿಣಿಯಾದ ಇವಳನ್ನು ಬಲಿ ನೀಡಿದ್ದರಿಂದ ಕೆರೆಯ ಕಟ್ಟೆಯು ಭದ್ರಗೊಂಡು ಕೆರೆಯಲ್ಲಿ ನೀರು ಉಳಿಯಿತಂತೆ. ಸೊಸೆಯ ಗುರುತಿಗಾಗಿ ಆಲದ ಮರವನ್ನು ಕೆರೆಯ ಕಟ್ಟೆಯಡಿ ಬೆಳೆಸುತ್ತಾನೆ. ಕೆರೆಗೆ ಸೇರುವ ಜಮೀನುಗಳ ರೈತರು ಹಾಗೂ ಅವಳ ಮನೆತನದವರು ವರ್ಷಕ್ಕೊಮ್ಮೆ ಅನ್ನ ಸಂತರ್ಪಣೆ ಮಾಡಿ ಆರಾಧಿಸುತ್ತಾರೆ.

**ಗುಡಿಬಂಡೆಯ** ಕೆರೆಗೆ ಸಂಬಂಧಿಸಿದಂತೆ ಇಂಥದ್ದೇ ಐತಿಹ್ಯವನ್ನು ಹೇಳುತ್ತಾರಾದರೂ ಈ ಕೆರೆಯ ಕಟ್ಟೆಗೆ ವಡ್ಡ ತನ್ನ ಎರಡನೆಯ ಸೊಸೆ (ಗರ್ಭಿಣಿ)ಯನ್ನೇ ಬಲಿ ಕೊಡುತ್ತಾನೆ. ಅವಳನ್ನು ಒಡೆದ ಕೆರೆಯ ಕಟ್ಟೆಗೆ ಮಣ್ಣು ಹೊರಲೆಂದು ಮೋಸದಿಂದ ಕರೆದೊಯ್ದು ಕಟ್ಟೆಗೆ ಅವಳನ್ನು ಅಡ್ಡಹಾಕಿ ಅವಳ ಮೇಲಕ್ಕೆ ಮಣ್ಣು ಹಾಕಿಸಿ ಬಿಡುತ್ತಾನೆ. ಮಣ್ಣಿನ ಕೆಳಗೆ ಸಿಕ್ಕಿ ಉಸಿರುಕಟ್ಟಿ ಸಾಯುವಾಗ ಅವಳ ತನ್ನ ಮೂಗಿನಲ್ಲಿ ಹರಿಯುತ್ತಿರುವ ರಕ್ತದಂತೆಯೇ ಕೆರೆಯ ನೀರು ಕೆಂಪಾಗಿರಲಿ ಎಂದು ಶಾಪ ಹಾಕಿದಳು. ಅಂದಿನಿಂದ ಕೆರೆಯ ನೀರು ಕೆಂಪಾಯಿತು. ಅವಳು ಬಲಿಯಾದ ಸ್ಥಳದಲ್ಲಿ ವರ್ಷಕ್ಕೊಂದು ಕಲ್ಲಿನ ವಿಗ್ರಹಗಳು ಉತ್ಪತ್ತಿಯಾಗುತ್ತಿದ್ದವು. ಅವು ಅವಳ ಮಕ್ಕಳು, ಬಲಿಯಾದ ಈಕೆಗೆ ವರ್ಷಕ್ಕೊಮ್ಮೆ ಊರ ಜನರಿಂದ ದೀಪದಾರತಿ ಮಾಡುತ್ತಾರೆ. ಈ ಆಚರಣೆಗಾಗಿ ಆಯಾ ವರ್ಷ ಬೆಳೆದ ಹೊಸ ಅಕ್ಕಿಯ ಹಿಟ್ಟಿನಲ್ಲಿ ದೀಪದ ತಂಬಿಟ್ಟನ್ನು ಮಾಡುತ್ತಾರೆ. ಒಂದು ವರ್ಷ ಬರಗಾಲ ಬಂದು ಕೆರೆಯು ಬತ್ತಿ ಹೋಗಿತ್ತು. ಆ ವರ್ಷ ಬತ್ತದ ಬೆಳೆ ಇಲ್ಲದ್ದರಿಂದ ಒಬ್ಬಳು ಕೊರ್ರುಲಅಕ್ಕಿಯಲ್ಲಿ (ನವಣೆ ಅಕ್ಕಿ) ದೀಪದ ತಂಬಿಟ್ಟನ್ನು ತಂದು ಆರತಿ ಬೆಳಗಿ ಬೈದಳು. "ಬರಗಾಲ ಬಂದು ಕೆರೆಯಲ್ಲಿ ನೀರಿಲ್ಲದಿದ್ದರೂ ನೀನು ನಿನ್ನ ಮಕ್ಕಳು ಹಾಳಾಗಿ ಹೋಗಬಾರದೇ?" ಎಂದು ಅಂದಿನಿಂದ ಕಟ್ಟೆಯಲ್ಲಿ ವರ್ಷಕ್ಕೊಂದು ಕಲ್ಲು ಕಾಣಿಸಿಕೊಳ್ಳುವುದು ನಿಂತಿತು. ಹಾಗೆಯೇ ಕೆರೆ ತುಂಬಿದಾಗ ಮಾತ್ರ ದೀಪದ ಆಚರಣೆ ಮಾಡುತ್ತಾರೆ. ಬಲಿಯಾದ ಹೆಂಗಸು ಮಣ್ಣಿನ ಕೆಳಗೆ ಸಿಕ್ಕಿ ಉಸಿರುಕಟ್ಟಿ ಸಾಯುವಾಗ ಅವಳ ಬಾಯಿ ಮೂಗಿನಿಂದ ಒಸರುತ್ತಿರುವ ರಕ್ತವು

ಇಂದಿಗೂ ನಿರಂತರವಾಗಿ ಕಟ್ಟೆಯ ಕೆಳಗಿನಿಂದ ಹರಿದು ಬರುತ್ತಿದೆಯೆಂದು ವಕ್ಷವು ಕಟ್ಟೆಯಿಂದ ಹರಿದು ಬರುವ ಕೆಂಪು ಬಣ್ಣದ ರಾಡಿಯನ್ನು ತೋರಿಸುತ್ತಾರೆ. ಈ ರಾಡಿಯು ಜಮೀನನ್ನು ನೀರಗಂಟಿಗೆ ಮಾನ್ಯವಾಗಿ ನೀಡಿದ್ದಾರೆ.

ಮೇಲಿನ ಐತಿಹ್ಯಗಳಲ್ಲಿ ಮಾರಗಾನಕುಂಟೆಗೆ ಬಲಿಯಾದ ಹೆಂಗಸಿಗೆ ತಾನು ಬಲಿಯಾಗುವ ವಿಷಯ ತಿಳಿದಿತ್ತು. ಅದಕ್ಕೆ ಅವಳ ಒಪ್ಪಿಗೆಯೂ ಇತ್ತು. ಆದರೆ ಗುಡಿಬಂಡೆಯ ಕೆರೆಗೆ ಬಲಿಯಾದವಳಿಗೆ ಏನೂ ತಿಳಿದಿರಲಿಲ್ಲ. ಮೋಸದಿಂದ ಬಲಿ ನೀಡಿದ್ದರು. ಒಬ್ಬಳು ಪ್ರತಿಭಟಿಸದೆ ಅಸಹಾಯಕತೆಯನ್ನು ಒಪ್ಪಿಕೊಂಡರೆ ಮತ್ತೊಬ್ಬಳು ತನ್ನ ಅಸಹಾಯಕತೆಯ ವ್ಯಾಪ್ತಿಯಲ್ಲಿ ಶಾಪ ಹಾಕುವಂಥ ಪ್ರತಿಭಟನೆಯನ್ನು ಮಾಡಿದ್ದಾಳೆ. ಅಥವಾ ಅವಳಿಗೆ ಮಾಡಿದ ಮೋಸಕ್ಕೆ ಮಡಿದ ಜನಮನದ ಪ್ರತಿಭಟನೆಯೂ ಇದಾಗಿದೆ. ಗುಡಿಬಂಡೆಯ ಕೆರೆಯನ್ನು (ರಾಮೇಗೌಡನ ತಮ್ಮ) ಭೈರೇಗೌಡ ಹಾಗೂ ಅವನ ಹೆಂಡತಿ ಮಕ್ಕಳಿಲ್ಲದ ಕೊರತೆಯನ್ನು ಮರೆಯಲೆಂದು ಕಟ್ಟಿಸಿದರೆಂದು ಹೇಳುತ್ತಾರೆ. ಕೆರೆಯನ್ನು ಕಟ್ಟಿದ ವಡ್ಡನು ತನ್ನ ಗರ್ಭಿಣಿ ಸೊಸೆಯನ್ನು ಬಲಿಕೊಟ್ಟನೆಂಬಲ್ಲಿ ಈ ಕೆರೆಯ ಹಿನ್ನೆಲೆಗೆ ಸಂತಾನಪೇಕ್ಷೆ ಹಾಗೂ ಸಂತಾನದ ಬಲಿ ಎರಡೂ ವಿರುದ್ಧ ಆಯಾಮಗಳ ಆಶಯಗಳಿವೆ.

**ಪ್ರತಿಭಟನೆಯ ಕುರುಹುಗಳಾಗಿ ಕೆರೆ-ಕುಂಟೆಗಳು :** ಬಾಗೇಪಲ್ಲಿ ತಾಲ್ಲೂಕಿನ 'ತಲಕಾಯಕುಂಟೆ' ಎಂಬುದಕ್ಕೆ ಸಂಬಂಧಿಸಿದ ಐತಿಹ್ಯದ ಪ್ರಕಾರ ಪಾಳೆಯಗಾರರ ಕಾಲದಲ್ಲಿ ತಮ್ಮ ಕೋಟೆಯಲ್ಲಿ ಕಳ್ಳತನ ಮಾಡಿದ ವ್ಯಕ್ತಿಯೊಬ್ಬನ ತಲೆಯನ್ನು ಬೆಟ್ಟದ ಮೇಲೆ ಕಡಿದರು. ಕಡಿದ ತಲೆಯು ಕೆಳಗೆ ಬಿದ್ದ ಸ್ಥಳದಲ್ಲಿ ಅವನ ಸಂಬಂಧಿಕರು ಒಂದು ಕುಂಟೆಯನ್ನು ಕಟ್ಟಿಸಿದರು. ಇದರ ಉದ್ದೇಶ ಕಳ್ಳತನದ ಪಾಪ ಪರಿಹಾರವಾಗಲಿ ಎಂದು ಇರಬಹುದು. ಅಲ್ಲದೆ ಸಣ್ಣ-ಪುಟ್ಟ ಕಳ್ಳತನಗಳಿಗೆ ಸಂಬಂಧಿಸಿದಂತೆ ಜಮೀನ್ದಾರರು ರಾಜರು ಪಾಳೆಯಗಾರರು ಹೀಗೆ ಆರ್ಥಿಕವಾಗಿ ಪಟ್ಟಭದ್ರರೆನಿಸಿಕೊಂಡವರು ಸಾಮಾನ್ಯ ಜನರಿಗೆ ಶಿಕ್ಷೆ ನೀಡುವುದು ಸಹಜವೇ ಆದರೂ ಅಂಥವರ ಬಗ್ಗೆ ಪ್ರತಿಭಟನೆ ಇಂಥ ಕಡೆ ಪ್ರಧಾನವಾಗಿ ಎದ್ದು ಕಾಣುತ್ತದೆ.

**ಶಾಪದ ತಾಪ ಹೊತ್ತ ಕೆರೆ-ಬಾವಿಗಳು :** ಕೆರೆಬಾವಿಗಳಲ್ಲಿ ನೀರು ನಿಲ್ಲದಿದ್ದರೆ ಅದು ಕೆರೆ-ಬಾವಿಗಳನ್ನು ಕಟ್ಟಿದ ವಡ್ಡರು ಶಾಪ ಹಾಕಿದ್ದಾರೆಂಬ ನಂಬಿಕೆಗಳಿವೆ. ಕಷ್ಟಪಟ್ಟ ವಡ್ಡರಿಗೆ ತಕ್ಕ ಸಂಭಾವನೆ ನೀಡದಿದ್ದರೆ ಅವರು ನೀರು ಉಳಿಯದಿರಲೆಂದು ಶಾಪ ಹಾಕಿದ ಘಟನೆಗಳಿಗೆ ಸಂಬಂಧಿಸಿದ ಐತಿಹ್ಯಗಳು ಹೇರಳವಾಗಿ ದೊರೆಯುತ್ತವೆ. ಆದರೆ ಈ ಶಾಪಕ್ಕೆ ಪರಿಹಾರವೇ ಇಲ್ಲ, ಇಲ್ಲಿ ನೀರಿನ ಆಶಯಕ್ಕಾಗಿ ಬಲಿ ಕೊಟ್ಟು, ನೀರನ್ನು ತರಿಸಿಕೊಳ್ಳುವ ಪ್ರಮೇಯವು ಎದುರಾಗುವುದೇ ಇಲ್ಲ. ಈ ಘಟನಾ ಸಂಬಂಧಿ

ಕೆರೆಬಾವಿಗಳು ಸದಾ ಬತ್ತಿ ಹೋಗಿರುತ್ತವೆಯೆಂಬುದು ಸ್ಪಷ್ಟ. ಕೆರೆಬಾವಿಗಳನ್ನು ನಿರ್ಮಿಸಿದ ಜಾಗದಲ್ಲಿ ವೈಜ್ಞಾನಿಕವಾಗಿ ಅಲ್ಲಿನ ಮಣ್ಣಿನ ಕಾರಣದಿಂದ ನೀರು ಉಳಿಯದೆ ಇರುವ ಸಾಧ್ಯತೆಗಳಿವೆ. **ಪಾಪಮ್ಮನ ಬಾವಿ (ಬಾಗೇಪಲ್ಲಿ ತಾ)** : ಪಾಪಮ್ಮನು ನೀರಿಗಾಗಿ ಬಾವಿಯನ್ನು ತೋಡಿಸಿದಳು. ಕೂಲಿಕಾರ ವಡ್ಡರಿಗೆ ಐವತ್ನಾಲ್ಕು ಸೇರು ಬೆಳ್ಳಿಯ ನಾಣ್ಯಗಳನ್ನು ಸಂಭಾವನೆ ಕೊಡುವುದಾಗಿ ಹೇಳಿದ್ದವಳು ಬಾವಿಯು ಪೂರ್ಣಗೊಂಡ ನಂತರ ನಾಣ್ಯಗಳನ್ನು ಸೇರಿನಲ್ಲಿ ಅಳೆಯುವ ಬದಲು ಕೊಡಲಿಯ ತೂಬಿನಲ್ಲಿ ಐವತ್ನಾಲ್ಕು ಸಲಿ ಅಳೆದು ಕೊಟ್ಟಳು. ಅಸಮಾಧಾನಗೊಂಡ ವಡ್ಡರು ಬಾವಿಯಲ್ಲಿ ನೀರು ಉಳಿಯದೆ ಬತ್ತಿ ಹೋಗಲೆಂದು ಶಾಪ ಹಾಕಿದರು. ಗುಡಿಬಂಡೆ ತಾಲ್ಲೂಕಿನ ಯಲ್ಲೋಡು ಕೆರೆಯಲ್ಲಿಯೂ ನೀರು ಉಳಿಯುವುದಿಲ್ಲ. ಕಾರಣ ಕೆರೆಯನ್ನು ಕಟ್ಟಿದ ವಡ್ಡನಿಗೆ ಊರಿನ ಮುಖ್ಯಸ್ಥ ಸರಿಯಾದ ಕೂಲಿ ಕೊಡದೆ ಮೋಸ ಮಾಡಿದ. ನಿರಾಶೆಗೊಂಡ ವಡ್ಡನು "ಯಲ್ಲೋಡು ಹಾಳಾಗಲಿ ಕೆರೆ ಹೂಳಾಗಲಿ" ಎಂದು ಶಾಪ ಹಾಕಿದ. ಇದರಿಂದ ಯಲ್ಲೋಡು ಜನರಿಗೆ ದರಿದ್ರ ಬಂತು. ಕೆರೆಯಲ್ಲಿ ಸದಾ ಹೂಳು ತುಂಬಿ ನೀರು ನಿಲ್ಲದಂತಾಯಿತು. ಈ ಐತಿಹ್ಯದಲ್ಲಿ ವಡ್ಡನ ಶಾಪವು ಊರು ಮತ್ತು ಕೆರೆಗಳೆರಡನ್ನೂ ವ್ಯಾಪಿಸಿರುವುದರ ಹಿಂದೆ ಅಡಗಿರುವ ಸಂಬಂಧ ಗಮನಾರ್ಹವಾದುದು.

**ಭೈರಗಾನಹಳ್ಳಿಕೆರೆ (ಚಿಕ್ಕಬಳ್ಳಾಪುರ ತಾ)** : ಭೈರೇಗೌಡನ ಹೆಂಡತಿ ಈ ಕೆರೆಯನ್ನು ಕಟ್ಟಿಸಿದಳು. ಆಕೆ ಈ ಕೆರೆಯನ್ನು ಕಟ್ಟುವ ವಡ್ಡನಿಗೆ ಒಂದು ಸೊಲಿಗೆ ಮುತ್ತುಗಳನ್ನು ನೀಡುತ್ತೇನೆ ಎಂದು ಮಾತು ನೀಡಿದ್ದಳಂತೆ. ಕೆರೆ ಪೂರ್ಣಗೊಂಡ ನಂತರ ಆಕೆ ತನ್ನ ಮಾತಿನಂತೆ ನಡೆದುಕೊಳ್ಳಲಿಲ್ಲ. ಬದಲಾಗಿ ತನ್ನ ಕಿವಿಯ ಓಲೆಯಲ್ಲಿನ ಮುತ್ತುಗಳನ್ನು ಅಳೆದುಕೊಟ್ಟಳು. ಕೋಪಗೊಂಡ ವಡ್ಡನು ಈ ಕೆರೆಯಲ್ಲಿ ನೀರು ನಿಲ್ಲದಿರಲಿ ಎಂದು ಶಾಪ ಹಾಕಿದ. ಅಂದಿನಿಂದ ಎಷ್ಟೇ ಮಳೆ ಬಂದರೂ ಕೆರೆ ತುಂಬಿದರೂ ನೀರು ನಿಲ್ಲುವುದಿಲ್ಲ. ಅಂದರೆ ಕೆರೆಯಲ್ಲಿ ನೀರು ಹಿಂಗಿ ಹೋಗುತ್ತದೆ. ಕಟ್ಟಿಸಿದ ಕೆರೆ-ಕಟ್ಟೆಗಳಲ್ಲಿ ನೀರು ನಿಲ್ಲದಿದ್ದಾಗ ನೀರು ಸಮೃದ್ಧವಾಗಿ ಉಳಿಯಲಿ ಎಂಬ ಕಾರಣಕ್ಕಾಗಿ ಬಲಿಯನ್ನು ನೀಡಿದ ನಿದರ್ಶನಗಳು ಹಲವು ಐತಿಹ್ಯಗಳಲ್ಲಿ ವ್ಯಕ್ತವಾಗಿವೆ. ಮತ್ತೆ ಕೆಲವು ಐತಿಹ್ಯಗಳಲ್ಲಿ ಕೆರೆಯಲ್ಲಿ ನೀರು ಉಳಿಯದೆ ಹಿಂಗಿ ಹೋಗುವುದಕ್ಕೆ ಕೆರೆ ಕಟ್ಟಿದ ಒಡ್ಡನ ಶಾಪವೆಂದು ಭಾವಿಸಿರುವುದು ಕಂಡುಬರುತ್ತದೆ. ಕೆರೆಯನ್ನು ತೋಡಿಸುವಾಗ ಭೂಗುಣ ಹಾಗೂ ಸಮತಟ್ಟಾದ ಪ್ರದೇಶದ ನೆಲೆಗಳು ಮುಖ್ಯವಾಗುತ್ತವೆ. ಇಂಥಲ್ಲಿ ಕೆರೆಯನ್ನು ತೋಡುವ ಕೆರೆಯ ಕಟ್ಟೆಯನ್ನು ಕಟ್ಟುವ ವಡ್ಡರ ಶ್ರಮವೂ ಅಪಾರವಾದುದು. ತಂತ್ರಜ್ಞಾನ ಇಲ್ಲವೇ ವೈಜ್ಞಾನಿಕ ದೋಷದಿಂದ ಕಟ್ಟಿದ ಕೆರೆಯಲ್ಲಿ ನೀರು ಉಳಿಯದೆ ಮತ್ತೆಲ್ಲಿಗೋ ಹಿಂಗಿ ಹೋಗುವುದು ವಾಸ್ತವ ಸಂಗತಿ. ಆದರೆ ಕೆರೆಯನ್ನು ತೋಡುವ ಕೆಲಸವನ್ನು ಒಪ್ಪಿಕೊಂಡ ವಡ್ಡರ ಶ್ರಮ ವ್ಯರ್ಥವಾದದ್ದಕ್ಕೆ ಜನಪದರು ಇಂಥ ನಿಲುವನ್ನು ತಾಳಿದ್ದಾರೆ. ಪುಣ್ಯದ ಕಾರ್ಯಗಳೆಂದು

ಪರಿಗಣಿಸುವ ಪಟ್ಟಿಯಲ್ಲಿ ಕೆರೆ-ಬಾವಿಗಳನ್ನು ತೋಡಿಸುವುದೂ ಪುಣ್ಯ ಪ್ರಾಪ್ತಿಗಾಗಿ ಎಂಬ ನಂಬಿಕೆ ಇತ್ತು. ಆದರೆ ಇಂಥ ಉದ್ದೇಶವನ್ನು ಹೊಂದಿದ್ದ ದಾನಿಯು ಕೆರೆಯ ನಿರ್ಮಾಣಕ್ಕೆಂದು ವೆಚ್ಚ ಮಾಡುವಾಗ ಶ್ರಮಜೀವಿಗಳಿಗೆ ತಕ್ಕ ಪ್ರತಿಫಲ ನೀಡಲಿ ಎಂಬ ಆಶಯ ಇಂಥ ಐತಿಹ್ಯಗಳನ್ನು ಕಟ್ಟುತ್ತದೆ.

ಬಾವಿಗಳಿಗೆ ಸಂಬಂಧಿಸಿದಂತೆ ಸ್ಥಳೀಯವಾಗಿ ನಡೆದ ಮಹತ್ವದ ಘಟನೆಗಳ ನೆನಪುಗಳಾಗಿ ಬಾವಿಗಳು ಉಳಿದು ಬಿಡುತ್ತವೆ. ಉದಾಹರಣೆಗೆ ಬೀಚನಹಳ್ಳಿಯ ಕಳ್ಳರ ಬಾವಿಗೆ ಸಂಬಂಧಿಸಿದ ನೆನಪಿನ ಘಟನೆಯ ಐತಿಹ್ಯ ಹೀಗಿದೆ: ಊರಿನ ಚನ್ನಕೇಶವಸ್ವಾಮಿ ದೇವಾಲಯದಲ್ಲಿ ಕದ್ದ ಆಭರಣಗಳನ್ನು ಕಳ್ಳರು ಆ ಬಾವಿಯೊಳಕ್ಕೆ ಹಾಕಿದ್ದರು. ದೈವದ ಮಹಿಮೆಯಿಂದ ಕಣ್ಣು ಕಾಣದಂತಾಯಿತು. ನಿಜವನ್ನು ಹೇಳಿಬಿಟ್ಟರು, ಗ್ರಾಮಸ್ಥರು ಬಾವಿಯಲ್ಲಿ ಹುಡುಕಿ ಆಭರಣಗಳನ್ನು ತೆಗೆದು ದೈವಕ್ಕೆ ಅರ್ಪಿಸಿದರು. ಈ ಐತಿಹ್ಯದಲ್ಲಿ ಅಡಗಿರುವ ಅಂಶವೆಂದರೆ ಊರಿನ ದೇವಾಲಯದ ಕಳವಿನ ಪ್ರಸಂಗ ಮಹತ್ವದ್ದೇ ಆಗಿರುತ್ತದೆ. ದೇವಾಲಯದಲ್ಲಿ ಕಳವಾದ ಒಡವೆಗಳು ಸಂಬಂಧಿಸಿದ ಬಾವಿಯಲ್ಲಿ ಪತ್ತೆಯಾದ ವಿಷಯ ಬಾವಿಯ ಕಾರಣದಿಂದ ನೆನಪಾಗಿ ಉಳಿದಿದೆ. ಕಡಬೂರು (ಬಾಗೇಪಲ್ಲಿ ತಾ.) ಗ್ರಾಮದಲ್ಲಿ ಬಾವಿಯನ್ನು ಅಗೆಯುತ್ತಿದ್ದಾಗ ಎಲ್ಲಮ್ಮನ ವಿಗ್ರಹವು ದೊರೆತಿದ್ದರಿಂದ ಅದರ ಹೆಸರು ಎಲ್ಲಮ್ಮನ ಬಾವಿಯೆಂದಾಯಿತು. ಬಾವಿಯ ಪಕ್ಕದಲ್ಲಿ ಗುಡಿಯನ್ನು ಕಟ್ಟಿ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ.

**ಗುಂಡ್ಲುಗುರ್ಕಿ ಜಂಗಮಬಾವಿ (ಚಿಕ್ಕಬಳ್ಳಾಪುರ ತಾ) :** ಗುರ್ಕನ್ನ ಎಂಬ ಸನ್ಯಾಸಿ ಇಲ್ಲಿನ ಬೆಟ್ಟದ ಗುಹೆಯಲ್ಲಿ ವಾಸವಾಗಿದ್ದ ಆತನು ತನಗೆ ಅಡ್ಡವಾದ ಗುಡ್ಡದ ಕಲ್ಲುಗುಂಡುಗಳನ್ನು ತನ್ನ ಕಿರುಬೆರಳಿನಿಂದ ತೆಗೆದು ಒಂದರ ಮೇಲೊಂದು ಪೇರಿಸಿ ಇಡುತ್ತಿದ್ದ. ಹೀಗೆ ಇಟ್ಟ ಎರಡು ಗುಂಡುಗಳ ನಡುವೆ ಒಳಕಲ್ಲು ಇದ್ದು ಅದರ ಕೆಳಗೆ ನಿಧಿ ಅಡಗಿದೆಯೆಂಬ ನಂಬಿಕೆಯಿದೆ. ಆ ಬಂಡೆಗಳ ಮೇಲೊಂದು ಸರ್ಪ ನಿಧಿಯನ್ನು ಕಾಯುತ್ತಿದೆ. ಯಾರೂ ಆ ಕಲ್ಲುಗಳನ್ನು ಹತ್ತಬಾರದು. ಹತ್ತಲು ಪ್ರಯತ್ನಿಸಿದರೆ ರಕ್ತಕಾರಿ ಸಾಯುತ್ತಾರೆ. ಅಲ್ಲದೆ ಇಲ್ಲಿ ಪಾಪಾಗ್ನಿ ನದಿ ಹುಟ್ಟುತ್ತದೆ. ಈ ನೀರಿನಲ್ಲಿ ಸ್ನಾನ ಮಾಡಿದವರಿಗೆ ಪಾಪಗಳು ಪರಿಹಾರವಾಗುತ್ತವೆ ಎಂದು ನಂಬಿಕೆಯಿದೆ. ಈ ಊರಿನಲ್ಲೊಂದು ಜಂಗಮಬಾವಿ ಇದೆ. ಇದರಲ್ಲಿ ಮಾತ್ರ ಸಿಹಿನೀರು ದೊರೆಯುತ್ತದೆ. ಜಂಗಮಮ್ಮ ಎಂಬಾಕೆಯು ಈ ಬಾವಿಯನ್ನು ತೋಡಿಸಿದಳು. ಸುತ್ತಮುತ್ತಲಿನ ಬಾವಿಗಳಲ್ಲೆಲ್ಲ ಉಪ್ಪು ನೀರು ಇದ್ದು ಇವಳು ತೋಡಿಸಿದ ಬಾವಿಯಲ್ಲಿ ಮಾತ್ರ ಸಿಹಿನೀರು ಬಂದದ್ದರಿಂದ ಸಹಿಸಲಾರದ ಜನ ಇವಳಿಗೆ ಕಾಟಕೊಡಲಾರಂಭಿಸಿದರು. ಅವಳು ಸಿಟ್ಟುಗೊಂಡು ಇನ್ನೆಂದಿಗೂ ಈ ಊರಿನಲ್ಲಿ ಇನ್ನೆಲ್ಲಿಯೂ ಸಿಹಿನೀರು ಸಿಗದಿರಲಿ ಎಂದು ಶಾಪ ಹಾಕಿದಳೆಂದು ಐತಿಹ್ಯವಿದೆ. ಈ ಬಾವಿಯನ್ನು ಹೊರತುಪಡಿಸಿ ಈ ಪ್ರದೇಶದಲ್ಲಿ ಇನ್ನೆಲ್ಲಿಯೂ ಸಿಹಿನೀರಿನ ಬಾವಿ ಇಲ್ಲದಿರುವುದೇ ಪ್ರಸ್ತುತ ಐತಿಹ್ಯದ ರಚನೆಗೆ ಕಾರಣವಿರಬಹುದು. ಕೋಲಾರ ಜಿಲ್ಲೆಯ ಉಪ್ಪು ನೀರಿನ

ನೆಲೆಗಳಿರುವ ಬಹಳಷ್ಟು ಕಡೆಗಳಲ್ಲಿ ಅಪರೂಪಕ್ಕೊಂದು ಸಿಹಿನೀರಿನ ಬಾವಿ ಇದ್ದರೆ ಅದನ್ನು ಜಂಗಮಬಾವಿ ಎಂದು ಕರೆಯುವ ಪರಿಪಾಠವಿದೆ.

ಬಾವಿಗಳಿಗೆ ಸಂಬಂಧಿಸಿದಂತೆ ಸ್ಥಳೀಯವಾಗಿ ನಡೆದ ಮಹತ್ವದ ಘಟನೆಗಳ ನೆನಪುಗಳಾಗಿ ಬಾವಿಗಳು ಉಳಿದು ಬಿಡುತ್ತವೆ. ಉದಾಹರಣೆಗೆ ಬೀಚನಹಳ್ಳಿಯು ಕಳ್ಳರ ಬಾವಿಗೆ ಸಂಬಂಧಿಸಿದ ನೆನಪಿನ ಘಟನೆಯ ಐತಿಹ್ಯ ಹೀಗಿದೆ: ಊರಿನ ಚನ್ನಕೇಶವಸ್ವಾಮಿ ದೇವಾಲಯದಲ್ಲಿ ಕದ್ದ ಆಭರಣಗಳನ್ನು ಕಳ್ಳರು ಆ ಬಾವಿಯೊಳಕ್ಕೆ ಹಾಕಿದ್ದರು. ದೈವದ ಮಹಿಮೆಯಿಂದ ಕಣ್ಣು ಕಾಣದಂತಾಯಿತು. ನಿಜವನ್ನು ಹೇಳಿಬಿಟ್ಟರು, ಗ್ರಾಮಸ್ಥರು ಬಾವಿಯಲ್ಲಿ ಹುಡುಕಿ ಆಭರಣಗಳನ್ನು ತೆಗೆದು ದೈವಕ್ಕೆ ಅರ್ಪಿಸಿದರು. ಈ ಐತಿಹ್ಯದಲ್ಲಿ ಅಡಗಿರುವ ಅಂಶವೆಂದರೆ ಊರಿನ ದೇವಾಲಯದ ಕಳವಿನ ಪ್ರಸಂಗ ಮಹತ್ವದ್ದೇ ಆಗಿರುತ್ತದೆ. ದೇವಾಲಯದಲ್ಲಿ ಕಳವಾದ ಒಡವೆಗಳು ಸಂಬಂಧಿಸಿದ ಬಾವಿಯಲ್ಲಿ ಪತ್ತೆಯಾದ ವಿಷಯ ಬಾವಿಯ ಕಾರಣದಿಂದ ನೆನಪಾಗಿ ಉಳಿದಿದೆ. ಕಡಬೂರು (ಬಾಗೇಪಲ್ಲಿ ತಾ.) ಗ್ರಾಮದಲ್ಲಿ ಬಾವಿಯನ್ನು ಅಗೆಯುತ್ತಿದ್ದಾಗ ಎಲ್ಲಮ್ಮನ ವಿಗ್ರಹವು ದೊರೆತಿದ್ದರಿಂದ ಅದರ ಹೆಸರು ಎಲ್ಲಮ್ಮನ ಬಾವಿಯೆಂದಾಯಿತು. ಬಾವಿಯ ಪಕ್ಕದಲ್ಲಿ ಗುಡಿಯನ್ನು ಕಟ್ಟಿ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ.

ಕೆರೆಯ ಕಟ್ಟೆಯು ಭದ್ರವಾಗಿ ನಿಲ್ಲಲಿ ಎಂಬ ಕಾರಣಕ್ಕಾಗಿಯೋ ಅಥವಾ ಕೆರೆಯಲ್ಲಿ ನೀರು ನಿಲ್ಲಲಿ ಎಂಬ ಉದ್ದೇಶಕ್ಕಾಗಿಯೋ ನಂಬಿಕೆಯಂತೆ ಬಲಿಯಾದವರನ್ನು ದೈವವೆಂದು ಪೂಜಿಸಿ ಆರಾಧಿಸುವುದು ವಾಡಿಕೆ. ಜನಪದರ ಹಿತಕ್ಕಾಗಿ ಈ ರೀತಿಯಾಗಿ ಪ್ರಾಣಾರ್ಪಣೆ ಮಾಡಿದವರನ್ನು ದೈವತ್ವಕ್ಕೆ ಏರಿಸುವುದರೊಂದಿಗೆ ಆಚರಣೆಗಳನ್ನು ಕೈಗೊಳ್ಳುತ್ತಾರೆ. ಆದರೆ ಕೆರೆಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡ ಬೈಯಮ್ಮನನ್ನು ಪೂಜಿಸುವುದು ವಿಶೇಷವೆನಿಸುತ್ತದೆ. ಆಕೆಯ ಗಂಡನ ಮನೆಯ ವಂಶಸ್ಥರೆಂದು ಕರೆಯಲ್ಪಡುವವರೇ ಅಲ್ಲದೆ ಸುತ್ತಮುತ್ತಲಿನ ಪ್ರಾದೇಶಿಕ ಸಮುದಾಯ ವರ್ಗಗಳೂ ಭೈಯಮ್ಮನ ಆಚರಣೆಗಳನ್ನು ಮಾಡುವುದು ಗಮನ ಸೆಳೆಯುವ ಸಂಗತಿ. ಮಕ್ಕಳಿಲ್ಲದ ದಂಪತಿಗಳು ಸಂತಾನಭಾಗ್ಯಕ್ಕಾಗಿ ಭೈಯಮ್ಮನಿಗೆ ಹರಕೆ ಕಟ್ಟುತ್ತಾರೆ. ಅದರಂತೆ ತಮಗೆ ಮಕ್ಕಳಾದರೆ ಮೊದಲ ಮಗುವಿಗೆ ಭೈಯಮ್ಮ(ಕ್ಕ) ಇಲ್ಲವೇ ಭೈಯಪ್ಪ(ನ್ನ)ನೆಂದು ಹೆಸರು ಹಾಕುತ್ತಾರೆ. ಸಮುದಾಯ ಸೂಚಕ ಪದಗಳು ಆಯಾ ಹೆಸರಿನೊಂದಿಗೆ ಸೇರುವ ಸಾಧ್ಯತೆಯೂ ಇರುತ್ತದೆ. ಇದು ಪುರುಷ ವಲಯಕ್ಕೆ ಮಾತ್ರ ಅನ್ವಯವಾಗುತ್ತದೆ. ಉದಾಹರಣೆಗೆ ಭೈಯಪ್ಪ/ನ್ನ ಗೌಡ, ಭೈಯಪ್ಪ/ನ್ನ ರೆಡ್ಡಿ ಶೂದ್ರ ವರ್ಗದಲ್ಲಿ ಮಾತ್ರ ಭೈಯಮ್ಮನ ಆಚರಣೆ ಕಂಡುಬರುತ್ತದೆ. ಶಿಷ್ಟ ವಲಯದಲ್ಲಿ ಅತಿ ವಿರಳವೆಂದೇ ಹೇಳಬೇಕು. ಭೈಯಪ್ಪರಾವ್ ಭೈಯಪ್ಪ ಶೆಟ್ಟಿ ಭೈಯಪ್ಪಾಚಾರ ಎಂಬಿತ್ಯಾದಿ ಹೆಸರುಗಳು ಕಾಣಸಿಗುವುದಿಲ್ಲ. ಅವಳು ಮನೆಯಿಂದ ಬರುವಾಗ ಅವಳನ್ನು ಹಿಂಬಾಲಿಸಿ ಮನೆಯ ಸಾಕು ನಾಯಿಯೂ ಬಂದಿತ್ತೆಂದು ಅವಳ

ಹಾರಿದ ತಕ್ಷಣ ಅದೂ ಕೆರೆಗೆ ಹಾರಿತು. ನೀರಗಂಟಿಯೂ ಹಾರಿದ. ಇದನ್ನೆಲ್ಲ ನೋಡುತ್ತಿದ್ದ ಸರ್ಪವೂ ಕೆರೆಗೆ ಹಾರಿತು. ಇವರೆಲ್ಲರೂ ಜೀವ ಬಿಟ್ಟರು.

ಕೆರೆಯ ಮಧ್ಯದಲ್ಲಿ ಭೈಯಮ್ಮನ ಗುಡಿಯು ನಿರ್ಮಾಣವಾಯಿತು. ಗುಡಿಯಲ್ಲಿ ಒಂದು ದೊಡ್ಡ ಗುಂಡುಕಲ್ಲು (ದುಂಡಗಿನ ಕಲ್ಲು) ಅದರ ಸುತ್ತಲೂ ಸಣ್ಣ ದುಂಡುಗಿನ ಕಲ್ಲುಗಳು ವರ್ಷಕ್ಕೊಂದರಂತೆ ಬೆಳೆಯತೊಡಗಿದವು. ಇವು ಭೈಯಮ್ಮನಿಗೆ ಆಗುವ ಮಕ್ಕಳೆಂದು ಹೇಳುತ್ತಾರೆ. ರಾತ್ರಿಯಿಡೀ ಮಕ್ಕಳು ಅಳುವುದು ಅವಳು ಮಕ್ಕಳನ್ನು ಸುಧಾರಿಸುವುದು ಜೋಗುಳ ಹಾಡುವುದು ಹೀಗೆ ಕೆರೆಯ ಕಡೆಯಿಂದ ರಾತ್ರಿಯಿಡೀ ಕೇಳಿಬರುತ್ತಿತ್ತು. ಒಂದು ರಾತ್ರಿ ಮಾದಿಗರ ವ್ಯಕ್ತಿಯೊಬ್ಬನು ತಾನು ಕದ್ದಂತಹ ಹಸು ವೊಂದನ್ನು ಭೈಯಮ್ಮನ ಗುಡಿಗೆ ಎಳೆದೊಯ್ದು ಕೊಯ್ದು ಮಾಂಸವನ್ನು ಬಿಡಿಸಿದ. ಅಂದಿನಿಂದ ಗುಡಿಯು ಅಪವಿತ್ರಗೊಂಡಿದ್ದರಿಂದ ಭೈಯಮ್ಮನಿಗೆ ಮತ್ತೆ ಮಕ್ಕಳಾಗಲಿಲ್ಲ. ಮಕ್ಕಳ ಅಳುವಿಕೆ ತಾಯಿಯ ಸಾಂತ್ವನ ಇತ್ಯಾದಿಗಳಾವುವೂ ಕೇಳಿಬರಲಿಲ್ಲ. ಐತಿಹ್ಯದ ಕೊನೆಯ ಭಾಗವು ಗೋವಿನ ವಧೆ-ಗೋಮಾಂಸದ ನಿಷೇಧ ಹಾಗೂ ದಲಿತರು ಸಾರ್ವಜನಿಕ ಹಾಗೂ ಧಾರ್ಮಿಕ ಸ್ಥಳಗಳಿಗೆ ಪ್ರವೇಶಿಸಿದರೆ ಕೇಡುಂಟಾಗುತ್ತದೆಂಬ ನಂಬಿಕೆಗಳಿಂದ ಮುಕ್ತಾಯವಾಗುತ್ತದೆ.

ಚಿತ್ರದುರ್ಗ ಜಿಲ್ಲೆಯ ಎರಡುಕೆರೆ ಗ್ರಾಮದ ಬಂದಮ್ಮನ ಬಲಿಗೆ ಸಂಬಂಧಿಸಿದ ಐತಿಹ್ಯದ ಪ್ರಕಾರ ಕೆರೆ ನಿರ್ಮಿಸಿದರೆ ನೀರು ಬರಲಿಲ್ಲ. ಜೋಯಿಸ ಕೇಳಿದರೆ ಮಗಳನ್ನು ಬಲಿ ಕೊಡಲು ಹೇಳಿದರು. ಸೊಸೆಯನ್ನು ಕೊಡುವುದಾಗಿ ಒಪ್ಪಿಸಿದರೆ, ಸೊಸೆ ಬಂದಮ್ಮನನ್ನು ಬಲಿಕೊಡಲು ನಿರ್ಧರಿಸಿದರು. ಆಕೆಯ ಗಂಡ ಪ್ರತಿಭಟಿಸಿದ. ಆದರೆ ಹಿರಿಯರು ಪಟ್ಟು ಹಿಡಿದಾಗ ಅಸಹಾಯಕನಾಗಿ ಯೋಚಿಸತೊಡಗಿದ. ಆದ್ದರಿಂದ ಆ ಮನೆಯ ಆಳುಮಗ ಪರಿಸ್ಥಿತಿಯನ್ನು ಅರ್ಥೈಸಿಕೊಂಡು ತನ್ನ ಹೆಂಡತಿಯನ್ನು ಬಲಿಕೊಡುವುದಾಗಿ ನಿರ್ಧರಿಸುತ್ತಾನೆ. ಆವಳು ಒಪ್ಪದೆ ತೌರಿಗೆ ಹೋಗುತ್ತಾಳೆ. ಆದರೆ ತೌರಿನಲ್ಲಿ ಆಶ್ರಯ ಕೊಡದೆ ಬುದ್ದಿ ಹೇಳಿ ಹಿಂದಿರುಗಿಸುತ್ತಾರೆ. ಸಾಮಾಜಿಕ ಕಟ್ಟಳೆಗಳಿಗೆ ಅನುಗುಣವಾಗಿ ಅವಳಿಗೆ ಹಿರಿಯರ ಮಾತುಗಳನ್ನು ಮೀರಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅಸಹಾಯಕಳಾಗಿ ಅವಳು ಬಲಿ ಯಾಗಬೇಕಾಗುತ್ತದೆ. ಆ ಸಂದರ್ಭದಲ್ಲಿ 'ನಿಮ್ಮ ವಂಶದಲ್ಲಿ ಹೆಣ್ಣು ಮಕ್ಕಳು ಹುಟ್ಟದಿರಲೆಂದು' ತೌರಿನವರಿಗೆ ಶಾಪ ಹಾಕುತ್ತಾಳೆ.

ಮಹಾಲಕ್ಷ್ಮಿ ಬಾವಿ ಐತಿಹ್ಯದಲ್ಲಿ "ಮಹಾರಾಷ್ಟ್ರದ ಅಕ್ಕಲಕೋಟೆ ತಾಲ್ಲೂಕಿನಲ್ಲಿರುವ ತೊಳನೂರು ಗ್ರಾಮದಲ್ಲಿ ಒಮ್ಮೆ ಭೀಕರ ಕ್ಷಾಮ ಉಂಟಾಯಿತು. ಊರಿನ ಮುಖಂಡರು ಬಾವಿ ತೋಡಿಸಿದರು. ಎಷ್ಟು ಆಳ ತೋಡಿದರೂ ನೀರು ಬಾರದಿದ್ದಾಗ ಸ್ವಾಮಿಗಳನ್ನು ವಿಚಾರಿಸಲಾಗಿ ಪೂರ್ವ ದಿಕ್ಕಿಗೆ ಮನೆ

ಬಾಗಿಲಿರುವ ೧೩ ವರ್ಷದ ಬಾಲಕಿಯನ್ನು ಬಲಿ ಕೊಟ್ಟರೆ ನೀರು ಬರುವುದಾಗಿ ಹೇಳಿದರು. ನಡಗೇರಿ ಸರದಾರನ ಏಕೈಕ ಪುತ್ರಿಯೇ ಆ ನತದೃಷ್ಟ ಬಾಲಕಿ. ಇಲ್ಲಿ ಊರಿನ ಹಿತಕ್ಕಾಗಿ ತನ್ನ ವಂಶದ ಏಕೈಕ ಕುಡಿಯನ್ನು ಬಲಿ ಕೊಡುವ ಪ್ರಸಂಗವು ಸಮಾಜ ಮಕ್ಕಳನ್ನು ಯಾವ ರೀತಿ ನೋಡಿಕೊಳ್ಳುತ್ತಿತ್ತೆಂಬುದಕ್ಕೆ ನಿದರ್ಶನ."

ತುಂಬಿದ ಕೆರೆಗೆ ಪ್ರಾಣಿ ಬಲಿಯನ್ನು ನೀಡುವ ಸಂಪ್ರದಾಯ ಕೋಲಾರ ಜಿಲ್ಲೆಯಲ್ಲಿದೆ. ಕೆರೆಯ ವ್ಯಾಪ್ತಿಗೆ ಒಳಪಡುವ ರೈತರು ನೀರಗಂಟಿಗೆ ಚಂದಾ ನೀಡುತ್ತಾರೆ. ಈ ಹಣದಿಂದ ಮೇಕೆಹೋತ ಅಥವಾ ಟಗರನ್ನು ಕೊಂಡು ತಂದು ಬಲಿ ನೀಡುತ್ತಾರೆ. ಮಾಂಸವನ್ನು ಆಯಾಗಾರರು ಪಾಲು ಮಾಡಿಕೊಳ್ಳುತ್ತಾರೆ. ತೋಟಿ, ತಳವಾರ, ನೀರಗಂಟಿಗಳು ಹಂಚಿಕೊಳ್ಳುತ್ತಾರೆ. ಹರಿವ ನದಿಗೆ ಬಲಿ ಕೊಡುವುದು ಅಪರೂಪ. ಹಾಗೆಯೇ ಮಕ್ಕಳನ್ನು ಬಲಿಕೊಟ್ಟ ಐತಿಹ್ಯಗಳು ಜಿಲ್ಲೆಯಲ್ಲಿ ಎಲ್ಲಿಯೂ ದೊರೆತಿಲ್ಲ. ರಾಜಮನೆತನಗಳು ಕೆರೆ-ಕೋಟೆಗಳನ್ನು ನಿರ್ಮಿಸಿದ್ದರೂ ಐತಿಹ್ಯಗಳು ಅವರನ್ನು ಸ್ಮರಿಸುವುದಿಲ್ಲ. ಕೆರೆ-ಕೋಟೆಗಳ ನಿರ್ಮಾಣದ ಹಿಂದೆ ಅಡಗಿರುವ ಜನಸಾಮಾನ್ಯರ ಕಷ್ಟ-ನೋವುಗಳನ್ನು ಮಾತ್ರ ಸ್ಮೃತಿ ಪಟಲದಲ್ಲಿ ಉಳಿಸಿಕೊಂಡು ಬಂದಿದ್ದಾರೆ. ಕೋಟೆಗಳಲ್ಲಿ ಬಹುಪಾಲು ಪಾಳೆಯಗಾರರು ಕಟ್ಟಿಸಿದ್ದು ಎನ್ನುತ್ತಾರೆ.

ಇಂಥ ಬಲಿಗಳಿಗೆ ಸಂಬಂಧಿಸಿದ ಐತಿಹ್ಯಗಳಲ್ಲಿ ಮಹಿಳೆಯ ಪಾತ್ರ ಪ್ರಧಾನವಾಗಿರುತ್ತದೆ. ಬಲಿಯಾಗುವ ಮಹಿಳೆಯರು ಸಾಮಾನ್ಯವಾಗಿ ಸೊಸೆಯಂದಿರಾಗಿರುತ್ತಾರೆ. ಮಗಳನ್ನು ಬಲಿ ಕೊಡುವುದು ಅಪರೂಪ. ಬಲಿಯಾದ ಮಹಿಳೆಯು ದೇವತೆಯಾಗುತ್ತಾಳೆ. ಪೂಜೆ-ಜಾತ್ರೆಗಳು ನಡೆಯುತ್ತವೆ. ಗಂಡ ದಂಡಿನಲ್ಲಿರುತ್ತಾನೆ ಅಥವಾ ವ್ಯಾಪಾರಕ್ಕೆ ಹೋಗಿರುತ್ತಾನೆಂಬ ಸೂಚನೆಗಳು ಸಿಗುತ್ತವೆ. ಮುತ್ತೈದೈಯರು/ ವಿವಾಹಿತ ಸ್ತ್ರೀಯರು ಹೆಚ್ಚು ಬಲಿಗೆ ಒಡ್ಡಿಕೊಂಡಿದ್ದಾರೆ. ಅವರು ಅಸಹಾಯಕ ಸ್ಥಿತಿಯಲ್ಲಿ ತ್ಯಾಗ ಮಾಡಿರುತ್ತಾರೆ. ಬಾಲೆಯರ ಬಲಿಯೆಂದರೆ ದಲಿತ ಬಾಲೆಯದಿರುತ್ತದೆ.. ಹೆಣ್ಣಿನ ಬಲಿಯಿಂದ ಕೆರೆ-ಕಟ್ಟೆಗಳಿಗೆ ನೀರೊದಗುವುದರೊಂದಿಗೆ ಭದ್ರತೆ ಒದಗುತ್ತದೆ ಎಂಬ ನಂಬಿಕೆ ಪ್ರಧಾನವಾದುದು. ಕೋಟೆಗಳು ಬೀಳದೆ ಹಾಗೆಯೇ ಇಂಥ ಬಲಿಗಳನ್ನು ನೀಡುವುದರಿಂದ ಕೋಟೆಗಳೂ ಭದ್ರಗೊಳ್ಳುತ್ತವೆಂಬ ಕೋಟೆಗಳಿಗೆ ಸಂಬಂಧಿಸಿದ ನಂಬಿಕೆ ಗಮನಾರ್ಹವಾದುದ್ದು.

ಬಲಿ ಐತಿಹ್ಯಗಳು ಕೆರೆಗಳು ಮತ್ತು ಕೋಟೆಗಳಿಗೆ ಸಂಬಂಧಿಸಿರುತ್ತವೆ. ಕೆರೆ ಮತ್ತು ಕೋಟೆಗಳಿಗೆ ಮಹಿಳೆಯರನ್ನು ಬಲಿಕೊಟ್ಟಿರುತ್ತಾರೆ. ಕೆರೆಗೆ ಕಿರಿಸೊಸೆಯ ಬಲಿ ಸಾಮಾನ್ಯವಾದುದು. ವಿವಾಹಿತರು, ಮುತ್ತೈದೆಯರು, ಗರ್ಭಿಣಿಯರು ಆಹುತಿಯಾಗುತ್ತಾರೆ. ಕೋಟೆಗಳಿಗೆ ಕನ್ಯೆಯರು ಅಥವಾ ಗರ್ಭಿಣಿಯರು ಬಲಿಯಾಗುತ್ತಾರೆ. ಬೆಂಗಳೂರು ಕೋಟೆಗೆ ಕೆಂಪೇಗೌಡನ ಸೊಸೆ ಬಲಿಯಾದಳು. ಹಲಸಂಗಿ ಕೋಟೆಗೆ ಬಲಿಯಾದ ಜಕ್ಕವ್ವೆಯು ಮಾದಿಗರ ಬಾಲೆ. ಇಂಥವರನ್ನು ಕೆರೆಗೆ ನೀರು ಬರದಿದ್ದಾಗ, ಕೆರೆಯ ಕಟ್ಟೆಯು

ಭದ್ರವಾಗಿ ನಿಲ್ಲದಿರುವಾಗ, ಕೋಟೆಯ ಗೋಡೆ ಕುಸಿದು ಬೀಳುವಾಗ ಬಲಿ ನೀಡಲಾಗಿದೆ. ಈಗಲೂ ದೊಡ್ಡ ದೊಡ್ಡ ಕಟ್ಟಡಗಳು ಮತ್ತು ಸೇತುವೆಗಳ ನಿರ್ಮಾಣದ ನಂತರ ಬಲಿಯಾಗಿ ಪ್ರಾಣಿಗಳನ್ನು ನೀಡುತ್ತಾರೆ. ಹಾಗೆ ನೀಡದಿದ್ದರೆ ಕಟ್ಟಡವು ಶಿಥಿಲಗೊಂಡು ಕುಸಿಯುತ್ತದೆಂದು ನಂಬಿಕೆ. ಶಿಷ್ಟ ಪರಂಪರೆಯಲ್ಲಿ ಪ್ರಾಣಿ ಬಲಿಗೆ ಸಾಂಕೇತಿಕವಾಗಿ ಕುಂಬಳಕಾಯಿಯ ಬಲಿಯನ್ನು ನೀಡಲಾಗುತ್ತದೆ.

**ಯಲ್ಲಂಪಲ್ಲಿಯ ಕೋಟೆ (ಬಾಗೇಪಲ್ಲಿ ತಾ)**ಗೆ ಸಂಬಂಧಿಸಿದಂತೆ, ಜೋಗರೆಡ್ಡಿ ಎಂಬಾತನು ಈ ಕೋಟೆಯನ್ನು ಕಟ್ಟಿಸಿದ. ಗೋಡೆಯು ಭದ್ರವಾಗಿ ನಿಲ್ಲದಿರಲು ಗರ್ಭಿಣಿಯಾಗಿದ್ದ ತನ್ನ ಮಗಳನ್ನೇ ಬಲಿ ನೀಡಿದ. ಅಂದಿನಿಂದ ಕೋಟೆಯಲ್ಲಿ ಅಮಾವಾಸ್ಯೆ ಮತ್ತು ಹುಣ್ಣಿಮೆಯ ರಾತ್ರಿಗಳಲ್ಲಿ ಅಳುತ್ತಿರುವ ಮಗುವನ್ನು ಹೆಂಗಸು ಸುಧಾರಿಸುವುದು ಕೇಳಿಬರುತ್ತದೆ ಎಂಬ ನಂಬಿಕೆಯಿದೆ. ಟಿಪ್ಪೂ ಸುಲ್ತಾನನ ಕಾಲದಲ್ಲಿ ಕೋಟೆಯ ಸುತ್ತಲೂ ಕಂದರವನ್ನು ಮಾಡಿಸಿ ನೀರು ತುಂಬಿಸಿರುತ್ತಿದ್ದ ದಾಟಲು ಹೋದವರು ಕಂದರದಲ್ಲಿ ಬಿದ್ದು ಸಾಯುತ್ತಿದ್ದರು. ಕೋಟೆಗೆ ಮುತ್ತಿಗೆ ಹಾಕಿದ ಸೈನಿಕರನ್ನು ಕಂದರಕ್ಕೆ ತಳ್ಳಿದ್ದರೆಂದು ಐತಿಹ್ಯವಿದೆ.

**ಟಿಪ್ಪಣಿಗಳು**

೧. ಕಿಟ್ಟೆಲ್ ಕೋಶ, ಪು.೯೬ ಉದ್ಧೃತ ಸೋಮಶೇಖರ ಇಮ್ರಾಪುರ (ಸಂ) ೧೯೪ ಪು.೧೭

೨. ಸುಬ್ಬಣ್ಣರೈ, ೧೯೯೪, ಪು.೮೩

೩. ಈ ನದಿಯು ನಂದಿಬೆಟ್ಟದಲ್ಲಿ ಹುಟ್ಟಿ ಚಿಕ್ಕಬಳ್ಳಾಪುರ ಗೌರೀಬಿದನೂರುಗಳ ಮೂಲಕ ಆಂಧ್ರವನ್ನು ಸೇರುತ್ತದೆ.

೪. ಅಭಿಶಂಕರ ಕೆ., ಕೋಲಾರ ಜಿಲ್ಲಾ ಗೆಜಿಟಿಯರ್, ೧೯೬೮, ಬೆಂಗಳೂರು, ಪು.೩ ಉದ್ಧೃತ ಜಿ.ಎಂ. ವೆಂಕಟೇಶ್-೨೦೦೫ ಪು.೨೩

೫. ಅದೇ, ಪು.೨೩

೬. ಅದೇ, ಪು.೨೩-೨೪

೭. ರಾಜಶೇಖರಪ್ಪ ಬಿ. ಗೋಪಾಲ್ ಆರ್. (ಸಂ.) ೨೦೦೪, ಪು.೩೪

೮. ಸುಬ್ಬಣ್ಣ ರೈ ಎ., ೧೯೯೪, ಪು.೫೭

೯. ಅದೇ, ಪು.೬೩

೧೦. ವಾಣಿಪ್ರಹ್ಲಾದರಾವ್, ರಂಗಾರೆಡ್ಡಿ ಕೆ. ಸಂ., ೨೦೦೩, ಪು.೬೭

## ಅಧ್ಯಾಯ ೫

# ವ್ಯಕ್ತಿ ಹಾಗೂ ಸಮುದಾಯ ಐತಿಹ್ಯಗಳು

ವ್ಯಕ್ತಿಯ ಪ್ರಸ್ತಾಪವಿಲ್ಲದ ಐತಿಹ್ಯಗಳು ಬಹಳ ಕಡಿಮೆ. ಯಾವುದೇ ಐತಿಹ್ಯವನ್ನು ಗಮನಿಸಿದರೂ ಘಟನೆಯೊಂದು ನಡೆದೇ ಇರುತ್ತದೆ. ಇಂಥ ಸಂದರ್ಭಗಳ ಹಿನ್ನೆಲೆಯಲ್ಲಿಯೇ ವ್ಯಕ್ತಿಪ್ರಧಾನ ಐತಿಹ್ಯಗಳೆಂದು ಗುರುತಿಸಬೇಕಾದರೆ ಕೆಲವು ಅಂಶಗಳನ್ನು ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ. ಅವುಗಳೆಂದರೆ, ಐತಿಹ್ಯವೊಂದರಲ್ಲಿನ ವ್ಯಕ್ತಿ ಪಾತ್ರದ ಮಹತ್ವ, ಐತಿಹ್ಯದ ವ್ಯಕ್ತಿಯು ಘಟನೆಯೊಂದಿಗೆ ಬೆಸೆದುಕೊಂಡಿರುವ ಸಂಬಂಧ ಮುಖ್ಯವಾಗುತ್ತದೆ. ವ್ಯಕ್ತಿ ಮಹತ್ವದಿಂದ ಐತಿಹ್ಯದ ಘಟನೆ ಸೃಷ್ಟಿಯಾಗಿದೆಯೋ ಹೊಸ ತಿರುವು ಪಡೆಯುತ್ತಿದೆಯೋ ಅಥವಾ ಸಂಭವಿಸಿದ ಘಟನೆ ಸನ್ನಿವೇಶಗಳಲ್ಲಿ ವ್ಯಕ್ತಿ ತೊಡಗಿಸಿಕೊಂಡ ಕುರುಹುಗಳಿವೆಯೋ ತಿಳಿದುಕೊಳ್ಳಬೇಕು. ಇಂಥ ಅಂಶಗಳ ಆಧಾರದ ಮೇಲೆ ಐತಿಹ್ಯಗಳಲ್ಲಿ ವ್ಯಕ್ತಿ ಪ್ರಾಧಾನ್ಯತೆಯನ್ನು ಗುರುತಿಸಬಹುದು. ಐತಿಹ್ಯದ ಘಟನೆ ಹಾಗೂ ಸ್ಥಳಗಳಿಗೆ ಪೂರಕ ಸಂಬಂಧವಿರಬಹುದು. ಆದರೆ ಆ ಸ್ಥಳದಲ್ಲಿ ಸಂಬಂಧಿಸಿದ ಘಟನೆ ನಿರ್ದಿಷ್ಟ ವ್ಯಕ್ತಿಯ ಕಾರಣದಿಂದಲೇ ನಡೆದಿದೆಯೆಂದು ಮನವರಿಕೆಯಾಗುವ ಐತಿಹ್ಯಗಳು ವ್ಯಕ್ತಿಕೇಂದ್ರಿತ ಅಥವಾ ವ್ಯಕ್ತಿ ಪ್ರಧಾನ ಐತಿಹ್ಯಗಳೆನಿಸುತ್ತವೆ.

ವ್ಯಕ್ತಿಪ್ರಧಾನ ಐತಿಹ್ಯಗಳಲ್ಲಿ ಕಂಡುಬರುವ ವ್ಯಕ್ತಿಯ ಅಸಾಮಾನ್ಯ ಗುಣಗಳು ಮುಖ್ಯವಾಗುತ್ತವೆ. ಸಂಬಂಧಿಸಿದ ವ್ಯಕ್ತಿಯ ಒಳ್ಳೆಯ ಗುಣಗಳು ಅಥವಾ ದುರ್ಗುಣಗಳಿಂದ ಘಟನೆಯು ಸಂಭವಿಸಿರುತ್ತದೆ. ಒಟ್ಟಾರೆ ವ್ಯಕ್ತಿವಿಶಿಷ್ಟವೆನಿಸುವ ಗುಣ ಸ್ವಭಾವಗಳಿಂದ ಮಾಡಿದ ಕೆಲಸವು ಘಟನೆಯ ಮೂಲಕ ಬೆಳಕಿಗೆ ಬರುತ್ತದೆ. ಅದು ಒಳ್ಳೆಯ ಕಾರ್ಯವೂ ಆಗಿರಬಹುದು ಇಲ್ಲವೇ ದುಷ್ಕೃತ್ಯವೂ ಆಗಿರಬಹುದು. ವ್ಯಕ್ತಿಐತಿಹ್ಯಗಳು ಆ ವ್ಯಕ್ತಿಯು ಹುಟ್ಟಿ ಬೆಳೆದ ಜಾತಿ ಮತ್ತು ಪ್ರದೇಶದ ಆಧಾರವನ್ನೊಳಗೊಂಡು ವೃತ್ತಿಸಾಧನೆಗಳ ಮೂಲಕ ವ್ಯಕ್ತಿಮಹತ್ವವನ್ನು ಕಟ್ಟಿಕೊಡುತ್ತವೆ. ಆದ್ದರಿಂದ ಇಂಥ ವ್ಯಕ್ತಿಐತಿಹ್ಯಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ವ್ಯಕ್ತಿಗತ (individual) ವಿವರಗಳ ಐತಿಹ್ಯಗಳನ್ನು ಸ್ಥಳಪ್ರಧಾನ ಇಲ್ಲವೇ ಘಟನಾ ಪ್ರಧಾನ ಐತಿಹ್ಯಗಳೊಂದಿಗೆ ವಿವರಿಸಿ ಈ ಅಧ್ಯಾಯದಲ್ಲಿ ಸಮುದಾಯಗಳ ಸಂಬಂಧಿ ವ್ಯಕ್ತಿ ಐತಿಹ್ಯಗಳನ್ನು ಮಾತ್ರ ವಿಶ್ಲೇಷಿಸಲಾಗಿದೆ.

## ಸಾಂಸ್ಕೃತಿಕ ವ್ಯಕ್ತಿಗಳು : ಸಾಂಸ್ಕೃತಿಕ ನಾಯಕರು-ಮೂಲಪುರುಷರು

ಜನಪದ ಇತಿಹಾಸದಲ್ಲಿ ಸ್ಥಾನಗಳಿಸಿದ ವ್ಯಕ್ತಿಗಳು ಸತ್ತ ನಂತರ ದೈವಗಳಾಗುತ್ತಾರೆ. ಜೀವಿತಾವಧಿಯಲ್ಲಿ ಇವರು ಮಾಡಿದರೆನ್ನಲಾದ ವೀರತ್ವದ ಕಲ್ಪನೆ ದೈವತ್ವಕ್ಕೆ ಏರುವಂತೆ ಮಾಡುತ್ತದೆ. ಇವರು ಕೆಲವು ಸವಾಲುಗಳನ್ನು ಎದುರಿಸಿದ ಮೂಲಕ ಜನಪ್ರಿಯತೆಗೆ ಕಾರಣರಾಗಿರುತ್ತಾರೆ. ಇಲ್ಲವೇ ಸಮಸ್ಯೆಗಳನ್ನು ಬಿಡಿಸಲು ಪ್ರಯತ್ನಿಸುತ್ತಿರುವಾಗಲೇ ಅಕಾಲ ಮರಣಕ್ಕೆ ತುತ್ತಾಗಿ ಸಾವನ್ನಪ್ಪಿರುತ್ತಾರೆ. ಈ ಕಾರಣಗಳಿಂದ ರಕ್ಷಕ ದೈವಗಳಾಗಿ ಮಾರ್ಪಡುತ್ತಾರೆ. ಇವರಲ್ಲಿನ ನಾಯಕತ್ವಕ್ಕೂ ಇವರಿಗೆ ಜನಪದರು ನೀಡುವ ಸಾಮಾಜಿಕ ಸ್ಥಾನಮಾನಗಳಿಗೂ ಯಾವ ಸಂಬಂಧವೂ ಇರುವುದಿಲ್ಲ. ಏಕೆಂದರೆ ಇವರು ಬದುಕಿದ್ದಾಗ ಯಾವ ಸ್ಥಾನಮಾನವನ್ನು ಪಡೆದುಕೊಂಡಿರುವುದಿಲ್ಲ. ಆದ್ದರಿಂದ ಬದುಕಿನಲ್ಲಿ ಇವರು ಎದುರಿಸಿದ ಸವಾಲುಗಳು ಮತ್ತು ಆ ಸಂದರ್ಭಗಳ ಕ್ರಿಯಾತ್ಮಕತೆಯಿಂದ ವೀರತ್ವಕ್ಕೆ ಏರುತ್ತಾರೆ. ಉದಾ : ಮಲತಾಯಿಯ ಮೋಹವನ್ನು ಧಿಕ್ಕರಿಸಿದ್ದಕ್ಕಾಗಿ ಕುಮಾರರಾಮ; ಲೌಕಿಕದ ಕಷ್ಟಗಳನ್ನು ಸಹಿಸುತ್ತಲೇ ಕೊನೆಗೆ ಮಳೆಯಾಗಿ ಸುರಿದು ಲೋಕಕ್ಕೆ ಉಪಕಾರ ಮಾಡಿದ್ದಕ್ಕಾಗಿ ಉತ್ತರಾದೇವಿ; ಗಂಡನೊಂದಿಗೆ ಸಹಗಮನ ಸ್ವೀಕರಿಸಿದ್ದಕ್ಕಾಗಿ ಈರೋಬಿ ಹೀಗೆ ಸಾಮಾಜಿಕ ಹಿತಕ್ಕಾಗಿ ಬಲಿಯಾದವರ ವೀರತ್ವದ ಕಲ್ಪನೆ ವಿಶಿಷ್ಟವಾದುದು.

ಸಮುದಾಯಕ್ಕೆ ಮರೆಯಲಾಗದ ಉಪಕಾರ ಮಾಡಿದ ಹಿರಿಯರು ಸತ್ತ ನಂತರ ಸಾಂಸ್ಕೃತಿಕ ವೀರರಾಗಿ ಪೂಜೆಗೆ ಒಳಗಾಗುತ್ತಾರೆ. ಅವರು ನೆಲೆಸಿದ್ದರೆನ್ನಲಾದ ಸ್ಥಳ, ಮನೆ, ಬಳಸುತ್ತಿದ್ದ ಆಯುಧ ವಿಶೇಷಗಳು ಇತ್ಯಾದಿ ಮಹತ್ವ ಪಡೆದು ಆರಾಧಿಸಲ್ಪಡುತ್ತವೆ. ಕಾಲಾನಂತರ ಇಂಥವರ ಬಗ್ಗೆ ಕಥೆ, ಐತಿಹ್ಯ, ಪುರಾಣ, ಆಚರಣೆ, ಸಂಪ್ರದಾಯಗಳು ಬೆಳೆಯಲಾರಂಭಿಸುತ್ತವೆ. ತನ್ನ ಸಾಹಸಗಳಿಂದ ಸಮುದಾಯವನ್ನು ರಕ್ಷಿಸಿದ ಇಲ್ಲವೇ ಹಲವು ಬಗೆಗಳಲ್ಲಿ ತನ್ನ ಕುಲಕ್ಕೆ (ಸಮೂಹಕ್ಕೆ) ಉಪಕಾರಿಯಾಗಿದ್ದ ಮಹಿಳೆ ಸತ್ತ ನಂತರ ಅಮ್ಮನಾಗಿ ಆರಾಧನೆಗೆ ಒಳಪಟ್ಟಿರಬಹುದು. ತ್ಯಾಗ, ನಿಷ್ಠೆ, ಬಲಿದಾನದ ಸಂದರ್ಭಗಳಲ್ಲಿ ಆಕೆ ಆ ಪ್ರದೇಶದ ಸಮುದಾಯದ ದೇವತೆಯಾಗಿ ಮಾರ್ಪಟ್ಟಿರುತ್ತಾಳೆ. ಕಟ್ಟಿಸಿದ ಕೆರೆಯಲ್ಲಿ ನೀರು ಉಳಿಯಲಿ (ನಿಲ್ಲಲಿ) ಎಂದೋ ಕೆರೆಯಕಟ್ಟೆ ಭದ್ರವಾಗಿ ಉಳಿಯಲಿ ಎಂದೋ ಆಚರಣೆಗಳಲ್ಲಿ ಸಿಡಿತಲೆಯಾಗಿಯೋ, ತನ್ನ ಶೀಲ ರಕ್ಷಣೆಗಾಗಿಯೋ ಅಥವಾ ಗಂಡ ತೀರಿಕೊಂಡಾಗ ಮಹಾಸತಿಯಾಗಿಯೋ ಹೀಗೆ ಊರರಕ್ಷಣೆ ಅಥವಾ ತನ್ನ ಸಮುದಾಯದ ರಕ್ಷಣೆಗೆಂದು ಪ್ರಾಣವನ್ನು ಬಲಿಕೊಟ್ಟ ಮಹಿಳೆಯರು ಸಮುದಾಯದ ದೇವತೆಗಳಾಗುತ್ತಾರೆ.

**ಸಾಂಸ್ಕೃತಿಕ ನಾಯಕರು** : ಶಿಷ್ಟ ಸಂಸ್ಕೃತಿಯು ಋಷಿಮೂಲದಿಂದ ಪುರಾಣದ ದೈವಮೂಲದಿಂದ ತಮ್ಮ ಸಾಂಸ್ಕೃತಿಕ ನಾಯಕರನ್ನು ಗುರ್ತಿಸುತ್ತದೆ. ಇವರು ಧರ್ಮರಕ್ಷಕರಾಗಿ ಕಂಡುಬರುತ್ತಾರೆ. ಜಾನಪದ ಹಾಗೂ ಬುಡಕಟ್ಟು ಸಂಸ್ಕೃತಿಯು ಸಾಂಸ್ಕೃತಿಕ ನಾಯಕರನ್ನು ಗುರ್ತಿಸುವಾಗ ಶಿಷ್ಟ ಪ್ರಭಾವಕ್ಕೆ ಒಳಗಾಗಿದ್ದರೂ ತನ್ನದೇ ಆದ ಸಂಸ್ಕೃತಿಯ ಲಕ್ಷಣಗಳ ಮೂಲಕ ಸಾಂಸ್ಕೃತಿಕ ನಾಯಕನನ್ನು ದೃಢೀಕರಿಸುತ್ತದೆ. ಆದ್ದರಿಂದ ಕೆಲವು ಸಾಂಸ್ಕೃತಿಕ ಬುಡಕಟ್ಟುಗಳಲ್ಲಿನ ಸಾಂಸ್ಕೃತಿಕ ನಾಯಕರು ದೇವತೆ ಗಳಿಗಿಂತ ಹೆಚ್ಚು ಆರಾಧನೆಗೊಳ್ಳುತ್ತಾರೆ. ಇವರು ಅದೇ ಸಮುದಾಯದ ನಡುವೆ ಕೆಲವು ವರ್ಷಗಳ ಹಿಂದೆ ಜೀವಿಸಿದ್ದು ಮಡಿದ ವೀರರಾಗಿರುತ್ತಾರೆ. ಆಯಾ ಸಮುದಾಯದಲ್ಲಿ ಒಬ್ಬೊಬ್ಬ ವೀರ ಜನಪ್ರಿಯ ನಾಗಿರುತ್ತಾನೆ. ಕೆಲವರು ತಮ್ಮ ಬುಡಕಟ್ಟಿನ ಸಂಸ್ಕೃತಿಯ ಆಚೆಗೂ ಆರಾಧನೆಗೊಳ್ಳುತ್ತಾರೆ. ಉದಾ : ಕುಮಾರರಾಮ, ಈತನು ಒಬ್ಬ ಐತಿಹಾಸಿಕ ವ್ಯಕ್ತಿಯಾಗಿ ಬುಡಕಟ್ಟು ನಾಯಕನಾಗಿ ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಕೀರ್ತಿಯನ್ನು ಸ್ಥಾಪಿಸಿಕೊಂಡವನು. ಇವನು ಬೇಡ ಬುಡಕಟ್ಟಿನ ಚಿಕ್ಕಪಾಳೆಯ ಕುಮ್ಮಟದುರ್ಗ (ರಾಯಚೂರು ಜಿಲ್ಲೆ)ದ ಕಂಪಿಲನರಾಯ ಮಗ. ೧೩ನೇ ಶತಮಾನದಲ್ಲಿ ಸಣ್ಣ ಪಾಳೆಪಟ್ಟುದಾರನಾಗಿ ಮೆರೆದವನು. ದೆಹಲಿಯ ಸುಲ್ತಾನರ ದಾಳಿಗೆ ತುತ್ತಾಗಿ ಮಡಿದವ. ಆದರೆ ಇವನನ್ನು ಪ್ರಾದೇಶಿಕ ವ್ಯಾಪ್ತಿಯನ್ನು ದಾಟಿದ ಜನಪದ ಸಂಸ್ಕೃತಿಯ ಸಾಂಸ್ಕೃತಿಕ ವೀರನೆಂದು ಒಪ್ಪಿಕೊಳ್ಳುತ್ತಾರೆ. ಈ ಐತಿಹಾಸಿಕ ವೀರನು ಪರಾಕ್ರಮಿಯಾಗಿ ಅನ್ಯ ಸಂಸ್ಕೃತಿಯ ದಾಳಿಯನ್ನು ತಡೆದನೆಂಬುದಕ್ಕಿಂತ ವಿ:ುಗಿಲಾಗಿ ಅವನ ಶೌಚಗುಣ ಮಹತ್ವ ಪಡೆದಿರಬಹುದು. ಇದನ್ನು ಪ್ರಕಟಿಸುವ ಘಟನೆಯ ಕಾಲಗರ್ಭದಲ್ಲಿ ಮರೆಯಾದರೂ ಈ ವ್ಯಕ್ತಿಯ ಸುತ್ತ ಕೆಲವು ಪೌರಾಣಿಕ ಆಶಯಗಳು ಹಬ್ಬಿಕೊಂಡು ಅವನನ್ನು ಅಜರಾಮರನನ್ನಾಗಿಸಿವೆ.

ಕುಮಾರರಾಮನ ಐತಿಹ್ಯವು 'ಸಾರಂಗಧರ'ನೆಂಬ ಹೆಸರಿನಲ್ಲಿಯೂ ದೊರೆಯುತ್ತದೆ. ತನ್ನನ್ನು ಕಾಮಿಸಿದ ಮಲತಾಯಿಗೆ ಅದು ತಪ್ಪೆಂದು ತಿಳಿಸಿ, ಆಕೆಯ ದ್ವೇಷದಿಂದ ಮರಣದಂಡನೆಗೆ ಒಳಗಾದವನೆಂಬುದು ಮುಖ್ಯ ಸಂಗತಿಯಾಗುತ್ತದೆ. ಮರಣದಂಡನೆಯಿಂದ ಹೇಗೋ ಪಾರಾಗಿ ಮುಂದೆ ಮುಸ್ಲಿಂರೊಡನೆ ನಡೆದ ಹೋರಾಟದಲ್ಲಿ ಮಡಿದನೆಂಬುದು ಅವನ ಬದುಕಿನ ದುರಂತವೆನಿಸುತ್ತದೆ. ಇಲ್ಲಿಯೂ ಸುಲ್ತಾನನ ಮಗಳು ಕುಮಾರರಾಮನನ್ನು ಬಯಸಿದ್ದರ ಕಾರಣಕ್ಕಾಗಿಯೇ ಸುಲ್ತಾನನ ಕಡೆಯವರು ಮುತ್ತಿಗೆ ಹಾಕಿದ್ದರೆಂಬ ಆಶಯ ಕಂಡುಬರುತ್ತದೆ. ಈ ಹೋರಾಟದಲ್ಲಿ ಸಾವನ್ನಪ್ಪುವ ಮೂಲಕ ಕುಮಾರರಾಮ ತನ್ನ ಪರದಾರ ಸೋದರತ್ವವೆಂಬ ಶೌಚಗುಣವೆಂಬ ಮೌಲ್ಯವನ್ನು ಉಳಿಸಿಕೊಳ್ಳುತ್ತಾನೆ.

ವೀರನಾದವನು ಶೌಚಗುಣ ಸಂಪನ್ನನಾಗಿರುವುದು ಪರಂಪರೆಯಿಂದ ಬಂದ ಧಾರ್ಮಿಕ ಮೌಲ್ಯಗಳನ್ನು ಗೌರವಿಸುವುದು, ಪ್ರಾಣಿಗಳನ್ನು ಗೆದ್ದು ವಶಪಡಿಸಿಕೊಳ್ಳುವುದು ಹೆಣ್ಣಿನ ಆಕರ್ಷಣೆಗೆ ಬಲಿಯಾಗದಿರುವುದು ಇವೆಲ್ಲ ಪರಂಪರೆಯಲ್ಲಿ ಸಾಂಸ್ಕೃತಿಕ ನಾಯಕನೆನಿಸಿಕೊಳ್ಳುವವನ ಆಶಯಗಳು. ಹೀಗೆ ಜನಪದ ವೀರರು ಅನ್ಯಾಯವನ್ನು ಪ್ರತಿಭಟಿಸುವವರು, ಅಧಿಕಾರಶಾಹಿಯನ್ನು ಎದುರಿಸಿ ಹೋರಾಟ ಮಾಡುವವರು ಶತ್ರುಗಳ ಕುಟಿಲ ತಂತ್ರಗಳಿಗೆ ಬಲಿಯಾಗುವವರು ಆಗಿರುತ್ತಾರೆ. ಇಂಥ ವ್ಯಕ್ತಿಗಳ ಪರಾಕ್ರಮ, ಜನೋಪಕಾರ ಗುಣ, ಶುಚಿತ್ವದ ಬದುಕು ಅವರನ್ನು ನಾಯಕ ಅಥವಾ ವೀರರನ್ನಾಗಿಸುತ್ತವೆ.

**ಸಂಸ್ಕೃತಿಯ ಮೂಲಪುರುಷ** : ಜನಪದ ಸಂಸ್ಕೃತಿಯ ಮೂಲಪುರುಷನಾಗಲಿ, ಸಾಂಸ್ಕೃತಿಕ ವೀರ ಅಥವಾ ಬುಡಕಟ್ಟು ವೀರ ಮುಂತಾದ ಜನಪದ ನಾಯಕರು ಜನಿಸುವಾಗ ಶಿಷ್ಟರಂತೆ ಪೂರ್ವಜನ್ಮದ ಪುಣ್ಯ ವಿಶೇಷಗಳಾವುವೂ ಇರುವುದಿಲ್ಲ. ಅವರಿಗೆ ಸಂಬಂಧಿಸಿದಂತೆ ವೀರತ್ವದ ಕಲ್ಪನೆಯಲ್ಲಿ ಒಂದು ಬಗೆಯ ಕ್ರಿಯಾತ್ಮಕ ಗುಣಧರ್ಮ ಕಂಡುಬರುತ್ತದೆ. ವೀರನಾಗಿ ಸಾಹಸಗಳನ್ನು ಮೆರೆಯಲು ಅವನ ಶೌರ್ಯವೇ ಕಾರಣ ಆತ ದೈವದ ಅವತಾರವಾಗಿರುವುದಿಲ್ಲ. ಆತನ ಶೌರ್ಯಕ್ಕೆ ದೈವದ ಬೆಂಬಲವಿದ್ದರೂ ಅದೇ ಪ್ರಧಾನವಲ್ಲ. "ಈ ಜನಪದ ನಾಯಕರು ಜನಿಸುವಾಗ ಪುಷ್ಪ ವೃಷ್ಟಿಯೂ ಆಗುವುದಿಲ್ಲ. ಯಾವ ದೇವತೆಗಳೂ ಸಂಭ್ರಮಿಸುವುದಿಲ್ಲ. ಅವನ ಜನನದಿಂದ ಊರಿಗೆ ಅಂಥ ಪ್ರಸಿದ್ಧಿ ಏನೂ ಬರುವುದಿಲ್ಲ. ಮತ್ತು ಅವರ ಜನನ ಶುಭಮುಹೂರ್ತದಲ್ಲಿಯೂ ನಡೆಯುವುದಿಲ್ಲ. ಒಂದಾನೊಂದು ಊರಿನಲ್ಲಿ, ಒಂದಾನೊಂದು ಕಾಲದಲ್ಲಿ ಆತ ಎಲ್ಲರಂತೆ ಹುಟ್ಟುತ್ತಾನೆ. ಆತ ಬೆಳೆಯುತ್ತಾ ಇರುವಾಗ ಕೆಲವು ಬಗೆಯ ಸವಾಲುಗಳನ್ನು ಇದಿರಿಸಬೇಕಾಗುತ್ತದೆ. ತೀವ್ರತರದ ಬಿಕ್ಕಟ್ಟುಗಳಿಗೆ ಮುಖಾಮುಖಿಯಾಗಬೇಕಾಗುತ್ತದೆ. ಇಂಥ ಸಂದಿಗ್ಧಗಳಲ್ಲಿ ಕೇವಲ ಮಾನವೀಯವಾಗಿ ನಡೆದುಕೊಳ್ಳುವ ಈ ನಾಯಕರು ಒಂದೋ ಸವಾಲುಗಳನ್ನು ಉತ್ತರಿಸಿ, ಗೆದ್ದು ಜನಪ್ರಿಯರಾಗುತ್ತಾರೆ. ಇಲ್ಲವೇ ಅಕಾಲ ಮರಣಕ್ಕೆ ಒಳಗಾಗಿ ಸತ್ತು ರಕ್ಷಕ ದೈವಗಳಾಗಿ ಮಾರ್ಪಡುತ್ತಾರೆ. ನಾಯಕನ ಇಂಥ ಸಾಧನೆಗಳಿಗೂ ಆತನ ಸಾಮಾಜಿಕ ಸ್ಥಾನಮಾನ ಗಳಿಗೂ ಏನೇನೂ ಸಂಬಂಧ ಇರುವುದಿಲ್ಲ. ಅದರ ಬದಲು ಬದುಕನ್ನು ಅವರು ಇದಿರಿಸುವ ಸಂದರ್ಭ ಗಳಲ್ಲಿ ತೋರುವ ಕ್ರಿಯಾತ್ಮಕತೆಯೇ ಅವರನ್ನು ವೀರರನ್ನಾಗಿಸುತ್ತದೆ."[೨]

ಇವರಿಗೆ ಜನ್ಮ ತಾಳುವ ಅನಿವಾರ್ಯತೆ ಇರುತ್ತದೆ. ಯಾವುದೋ ಲೋಕಕಲ್ಯಾಣದ ಕಾರಣಕ್ಕಾಗಿ ಇವರು ಹುಟ್ಟನ್ನು ಪಡೆಯಬೇಕಾಗುತ್ತದೆ. ವಿಕೋಪದ ಪರಿಸ್ಥಿತಿಗಳ ನಿಯಂತ್ರಣ ಇಲ್ಲವೇ ನಾಶದ ಕಾರಣಕ್ಕಾಗಿ ಇಂಥವರ ಅನಿವಾರ್ಯತೆಯನ್ನು ಬಯಸಿ ಇತರೆ ದೈವಗಣ ಅವತರಿಸುವಂತೆ ಮೊರೆಯಿಟ್ಟು ಸಿದ್ಧಪಡಿಸಿಕೊಳ್ಳುತ್ತಾರೆ. ಹೀಗೆ ಶಿಷ್ಟ ಪುರಾಣದ ವ್ಯಕ್ತಿಪಾತ್ರಗಳು ಪೂರ್ವ ನಿಯೋಜಿತವಾಗಿರುತ್ತವೆ.

ಆದರೆ ಜನಪದ ಪುರಾಣಗಳಲ್ಲಿ ಬರುವ ವ್ಯಕ್ತಿಗಳು ಅಥವಾ ಪಾತ್ರಗಳು ಇದಕ್ಕೆ ವ್ಯತಿರಿಕ್ತವಾಗಿರುತ್ತಾರೆ. ಇವರು ಹುಟ್ಟುವುದು ಎಲ್ಲರಂತೆಯೇ. ಅಂದರೆ ಹುಟ್ಟು ಇವರ ಪಾಲಿಗೆ ಸಿದ್ಧಿಯಲ್ಲ ಸಾಮಾನ್ಯ. ಆದರೆ ಇವರು ಬೆಳೆದಂತೆಲ್ಲ ಸಂದಿಗ್ಧ ಒತ್ತಡಗಳಿಗೆ ಸಿಲುಕಿ ಅವುಗಳನ್ನು ಮೀರಲು ಯತ್ನಿಸುತ್ತಾರೆ. ತಮ್ಮ ಸಾಹಸ ಸಾಧನೆ ಪ್ರಾಮಾಣಿಕತೆಗಳಿಂದಾಗಿ ಸಮೂಹದ ವಿಶ್ವಾಸಗಿಟ್ಟಿಸಿಕೊಳ್ಳುತ್ತಾರೆ. ಇವರಲ್ಲಿನ ಜನಾನುರಾಗದ ಕಾರಣದಿಂದಾಗಿ ಕೆಲವು ಸಾಮಾಜಿಕ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಇಂಥ ಸಂದರ್ಭಗಳು ತುಂಬಾ ಕ್ಲಿಷ್ಟಕರವಾಗಿದ್ದು, ಇವರು ತೋರುವ ಕ್ರಿಯಾತ್ಮಕತೆಯೇ ಇವರ ನಾಯಕತ್ವಕ್ಕೆ ಆಧಾರವಾಗುತ್ತದೆ. ಆದ್ದರಿಂದಲೇ ತಮ್ಮ ಸಮೂಹದ ಮಧ್ಯೆ ನಾಯಕರಾಗಿ ರೂಪುಗೊಳ್ಳುತ್ತಾರೆ. ಇವೆಲ್ಲ ಲಕ್ಷಣಗಳು ಐತಿಹ್ಯಗಳಲ್ಲಿ ಬರುವ ವ್ಯಕ್ತಿಗಳಿಗೆ ಸಲ್ಲುತ್ತವೆ.

ಶಿಷ್ಟ ಪುರಾಣಗಳು ಅಸ್ತಿತ್ವದಲ್ಲಿರುವ ಸಾಮಾಜಿಕ ವ್ಯವಸ್ಥೆಯನ್ನು ಬದ್ಧಗೊಳಿಸುತ್ತವೆ. ಸಾಮಾಜಿಕ ಅಸಮಾನತೆಗಳನ್ನು ಸಮರ್ಥಿಸುವುದಲ್ಲದೆ ಅವುಗಳಿಗೆ ಪೂರಕ ಸಂದರ್ಭಗಳನ್ನು ಒದಗಿಸಿಕೊಡುತ್ತವೆ. ಆದರೆ ಜನಪದ ಪುರಾಣಗಳಲ್ಲಿ ಸಾಮಾಜಿಕ ಸಂಘರ್ಷಗಳು ಬಹಿರಂಗಗೊಳ್ಳುವ ಮೂಲಕ ನ್ಯೂನ್ಯತೆಗಳನ್ನು ಬಯಲಿಗೆಳೆಯುತ್ತವೆ. ಇಲ್ಲಿನ ನಾಯಕ ಅಸಮಾನತೆಯನ್ನು ಸರಿಪಡಿಸಲು ಸಾಹಸ ಮಾಡಬೇಕಾಗುತ್ತದೆ. ಈ ಕಾರಣದಿಂದಲೇ ಅವನು ಕೊನೆಯುಸಿರೆಳೆದ ಸಂದರ್ಭ ಒದಗಿ ಬಂದಾಗ ಅವನ ಸಾಧನೆಯು ಪವಾಡವಾಗಿ ಪರಿವರ್ತನೆಯಾಗುತ್ತದೆ. ಇದು ಜನಪದರು ತಮ್ಮ ನಾಯಕನ ಅಕಾಲ ಮೃತ್ಯುವಿಗೆ ತೋರುವ ಸಹಾನುಭೂತಿಯಾಗಿ ಉಳಿಯುತ್ತದೆ. ಇಂತಹ ನಾಯಕನ ಸಾವಿನ ನಂತರ ಸಾಕಷ್ಟು ಸುದೀರ್ಘವಾಗಿ ಸಾಧನೆಯ ಜಗತ್ತು ಬೆಳೆಯುತ್ತಾ ಹೋಗುತ್ತದೆ. ಅವನು ಬದುಕಿದ್ದಾಗ ಸಾಧಿಸಲಾಗದ್ದು ಎಲ್ಲವೂ ನಂತರ ಸಾಧಿತವಾಗುತ್ತಾ ಹೋಗುತ್ತದೆ. ಏಕೆಂದರೆ ಅವನು ತನ್ನವರ ದೃಷ್ಟಿಯಲ್ಲಿ ದೈವತ್ವಕ್ಕೇರಿರುತ್ತಾನೆ. ಆದ್ದರಿಂದ ಅತಿಮಾನುಷ ಶಕ್ತಿಯಾಗಿ ಪರಿವರ್ತನೆ ಹೊಂದುತ್ತಾನೆ. ಆಗ ಅವನ ಸಾವಿಗೆ ಕಾರಣವಾದ ಶಕ್ತಿಗಳು ನಾಶಹೊಂದುತ್ತವೆ. ಜನಪದ ಪುರಾಣದ ಆಶಯವು ಪಠ್ಯದಿಂದ ಪಠ್ಯಕ್ಕೆ ಭಿನ್ನವಾಗುತ್ತಿರುತ್ತದೆ. ಆಯಾ ಸಂದರ್ಭ ವ್ಯಕ್ತಿ ಕಾಲಘಟ್ಟಗಳಿಗೆ ಅನುಗುಣವಾಗಿ ಹೀಗೆ ವ್ಯತ್ಯಾಸವಾಗುವುದು ತನ್ನ ಮೌಖಿಕತೆಯ ಕಾರಣಕ್ಕಾಗಿ ಎಂದರೆ ತಪ್ಪಾಗಲಾರದು. ಈ ಮೂಲಕ ಹೊಸ ಪರಿವರ್ತನೆಗಳಿಗೆ ಅವಕಾಶ ದೊರೆತಂತಾಗುತ್ತದೆ.

ಕೆಲವು ವೃತ್ತಿ ಕಸುಬುಗಳು ಕಲೆಯ ಮೂಲವನ್ನು ಹೊಂದಿರುತ್ತವೆ. ಆಯಾ ಸಮುದಾಯವು ಕಲೆಯೊಂದಿಗೆ ಉಳಿಸಿಕೊಂಡು ಬಂದಿರುವ ಅನನ್ಯತೆಯನ್ನು ಸಂಬಂಧಿಸಿದ ಐತಿಹ್ಯಗಳು ಬಿಂಬಿಸುತ್ತವೆ. ಗೊರವರು ಮಣಿಮಲ್ಲಾಸುರನ ಕೊಂದ ಶಿವನ ಅವತಾರ ತಾವೆಂದು ಹೇಳುವುದು ಇದಕ್ಕೊಂದು

ನಿದರ್ಶನ. ಕೋಲಾರ ಜಿಲ್ಲೆಯ ಪರಿಸರದಲ್ಲಿ ಇವರು ಸನ್ಯಾಸಿ ಜನಾಂಗವೆನಿಸಿಕೊಳ್ಳುತ್ತಾರೆ. ಹೆಳವರು ತಮ್ಮ ಬುರ್ರಕಥೆಯ ಪ್ರಕಾರವನ್ನು ವಾಲ್ಮೀಕಿಯು ಲವಕುಶರಿಗೆ ರಾಮಾಯಣವನ್ನು ಬೋಧಿಸಲು ಬಳಸಿಕೊಳ್ಳುವ ಮೂಲಕ ಪೋಷಿಸಿದನೆಂದು ಹೇಳುತ್ತಾರೆ. ರಾಮಕಥೆಯನ್ನು ಮೊದಲಿಗೆ ಪ್ರಸ್ತುತಪಡಿಸಿದ್ದು ಬುರ್ರಕಥೆಯ ಮೂಲಕವೇ ಎಂಬುದು ಹೆಳವರ ನಂಬಿಕೆ. ಕಿಳ್ಳೆಕ್ಯಾತರು ತಮ್ಮ ವೃತ್ತಿಕಲೆಯಾದ ತೊಗಲು ಬೊಂಬೆಯಾಟವನ್ನು ಸಂಸ್ಕೃತಿಯ ಮನರಂಜನೆಗಾಗಿ ಬ್ರಹ್ಮನು ರೂಪಿಸಿಕೊಟ್ಟನೆಂದು ಹೇಳುತ್ತಾರೆ. ಈ ಕಾರಣಕ್ಕಾಗಿಯೇ ಬ್ರಹ್ಮನು ತಮ್ಮ ಜಾತಿಯನ್ನು ಸೃಷ್ಟಿಸಿದನೆಂದೂ, ಈ ವಂಶದ ಹೆಣ್ಣು ಮಹಾರಾಷ್ಟ್ರದ ಕಾಳಾಚಾರಿ ಎಂಬುವವನೊಡನೆ ಸಂಬಂಧ ಹೊಂದಿ ಏಳು ಮಕ್ಕಳನ್ನು ಪಡೆದಳೆಂದೂ ಕಾಳಾಚಾರಿಯೇ ಇವರಿಗೆ ತೊಗಲು ಬೊಂಬೆಗಳನ್ನು ಮಾಡುವ ಹಾಗೂ ತೊಗಲುಬೊಂಬೆಯ ಆಟವನ್ನು ಆಡಿಸುವ ವಿದ್ಯೆಯನ್ನು ಕಲಿಸಿದನೆಂದು ಐತಿಹ್ಯವಿದೆ. ಕಲಿಯುಗಕ್ಕಿಂತ ಮುಂಚೆ ಕಾಳಾಚಾರಿಗೆ ದೇವರೇ ತೊಗಲುಬೊಂಬೆಯ ಕಲೆಯನ್ನು ಕಲಿಸಿದ್ದನೆಂದು ನಂಬಿಕೆಯಿದೆ.

ಉದಾಹರಣೆಗೆ ನಟುವರ ನೃತ್ಯಕಲೆಗೆ ಸಂಬಂಧಿಸಿದ ಐತಿಹ್ಯವು ವೃತ್ತಿಯ ವಿವಿಧ ಸಾಮಾಜಿಕ ಆಯಾಮಗಳನ್ನು ವಿವರಿಸುತ್ತದೆ. "ರಂಭಾ, ಊರ್ವಶಿಯರು ದೇವೇಂದ್ರನ ಆಸ್ಥಾನದಲ್ಲಿ ನರ್ತನ ಮಾಡುವವರಾಗಿದ್ದು ಯಾವುದೋ ಕಾರಣಕ್ಕೆ ಭೂಲೋಕಕ್ಕೆ ಬಂದಾಗ, ಅವರು ಈ ಕಲೆಯನ್ನು ಇಲ್ಲಿ ಕಲಿಸಿದ್ದರೆಂದೂ ಅವರಿಂದಲೇ ಈ ಸಂಪ್ರದಾಯ ಭೂಮಿಯಲ್ಲಿ ಆರಂಭವಾಯಿತು" ಎಂದು ಹೇಳುತ್ತಾರೆ. ಅಲ್ಲಿಂದ ಆರಂಭವಾದ ಈ ಪದ್ಧತಿಗೆ ವಂಶಕ್ಕೆ ಒಬ್ಬರನ್ನು ದೇವದಾಸಿಯಾಗಿ ಬಿಡಬೇಕೆಂಬ ಕಟ್ಟುನಿಟ್ಟಿನ ಕ್ರಮ ರೂಢಿಗೆ ಬಂತು. ಹಾಗೆ ಬಿಡದಿದ್ದರೆ ಸಂಸಾರಕ್ಕೆ ಕೇಡು ಉಂಟಾಗುತ್ತದೆ ಎಂಬ ನಂಬಿಕೆಯಿಂದ ಇಲ್ಲಿಯವರೆಗೂ ನಡೆಸಿಕೊಂಡು ಬಂದರಂತೆ. ಭೋಗದವರು, ನಟುವಂಗದವರು, ಕಲಾವಂತರು ಎಂಬ ಹೆಸರುಗಳು ಕೋಲಾರ ಜಿಲ್ಲೆಯಲ್ಲಿ ಪ್ರಚಲಿತವಾಗಿವೆ. ಚಿಂತಾಮಣಿ ಶಿಡ್ಲಘಟ್ಟ, ಗೌರೀಬಿದನೂರು, ಚಿಕ್ಕಬಳ್ಳಾಪುರ ತಾಲೂಕುಗಳಲ್ಲಿ ವಾಸವಾಗಿದ್ದಾರೆ. ದೇವಾಲಯಗಳಲ್ಲಿ ನೃತ್ಯ ಸಂಪ್ರದಾಯವನ್ನು ಮುಂದುವರೆಸಿಕೊಂಡ ಇವರು ಆಂಧ್ರಪ್ರದೇಶದ ಅನಂತಪುರ, ಹಿಂದೂಪುರ ತಾಲೂಕುಗಳಲ್ಲಿ ವ್ಯಾಪಿಸಿದ್ದಾರೆ. ಈ ಸಂಪ್ರದಾಯ ಆರಂಭವಾದ ಹೊಸದರಲ್ಲಿ ಅಂಗಸೌಂದರ್ಯ, ಸಂಗೀತ, ನೃತ್ಯ ಈ ಮೂರು ಅಂಶಗಳನ್ನು ಗಮನಿಸಿ ನರ್ತನ ಮಾಡಲು ವ್ಯಕ್ತಿಗಳನ್ನು ಆರಿಸಿರಬೇಕು. ಸುಂದರಿಯಾದ ಕಲಾವತಿಯರು ದೇವದಾಸಿಯರಾದ ಮೇಲೆ ಸಮಾಜದ ಗಣ್ಯರಿಂದ ಅವರು ಮಕ್ಕಳನ್ನು ಪಡೆಯುವ ಸಂಭವ ಇದ್ದೇ ಇತ್ತು. ಹೀಗೆ ಹುಟ್ಟಿದ ಮಕ್ಕಳೇ ಮುಂದೆ ಪಂಗಡ ಅಥವಾ ಜಾತಿಯಾಗಿರಬೇಕು. ಹೆಣ್ಣು ಮಕ್ಕಳಾದರೆ ಮತ್ತೆ ದೇವರ ಸೇವೆಗೆ ಮೀಸಲು. ಗಂಡು ಮಕ್ಕಳಾದರೆ ನರ್ತನಕ್ಕೆ ಪಕ್ಕವಾದ್ಯ ನುಡಿಸಲು ಉಪಯೋಗಕ್ಕೆ ಬರುತ್ತಿದ್ದರು. ಇವರು ಪ್ರಾಪ್ತವಯಸ್ಕರಾದಾಗ ಮದುವೆಯ ಸಮಸ್ಯೆ ತಲೆದೋರಿರಬೇಕು. ಆಗ ಬೇರೆ

ಬೇರೆ ಜಾತಿಗಳಲ್ಲಿ ಯಾವುದೋ ಕಾರಣಕ್ಕೆ ಕೆಟ್ಟು ಹೋದ ಹೆಂಗಸರನ್ನು ಮದುವೆಯಾಗಿ ಸಂಸಾರ ಆರಂಭಿಸಿದರಂತೆ. 'ಕೆಟ್ಟೋರೆಲ್ಲ ನೆಟ್ಟೋಳೆ' ಎನ್ನುವ ಗಾದೆ ಬಂದಿದೆಯಂತೆ. ಇವರಲ್ಲಿ ಹುಟ್ಟಿದ ಕೂಡಲೇ ಹೆಣ್ಣು ಮಗುವನ್ನು ದೇವರಿಗೆ ಅರ್ಪಿತವೆಂದು ಅನಧಿಕೃತವಾಗಿ ತೀರ್ಮಾನಿಸುತ್ತಿದ್ದರು. ಸಂಗೀತ ನೃತ್ಯಗಳನ್ನು ಕಲಿಸಿ ಮೈನೆರೆದ ಮೇಲೆ ದೇವರಿಗೆ ಒಪ್ಪಿಸುತ್ತಿದ್ದರು. ಕಾಲಕ್ರಮೇಣ ಈ ಪದ್ಧತಿ ಕಡಿಮೆಯಾಗುತ್ತಾ ಒಂದು ಕುಟುಂಬಕ್ಕೆ ಒಬ್ಬರನ್ನು ಬಿಟ್ಟು ಮಿಕ್ಕವರಿಗೆ ಮದುವೆ ಮಾಡುವುದನ್ನು ರೂಢಿಗೆ ತಂದರು.[೨]

**ಸಾಂಸ್ಕೃತಿಕ ವ್ಯಕ್ತಿಗಳು ಹಾಗೂ ವೃತ್ತಿಕಸುಬುಗಳ ಅನನ್ಯತೆ :** ಜಾತಿವ್ಯವಸ್ಥೆಗೆ ಮೂಲ, ವೃತ್ತಿ ಕಸುಬುಗಳಿರಬಹುದು. ನಿರ್ಧಿಷ್ಟವಾಗಿ ಅನುಸರಿಸುವ ವೃತ್ತಿಗಳಿಗೆ ಅನುಗುಣವಾಗಿಯೇ ಜಾತಿಗಳಿಗೆ ಹೆಸರುಗಳು ಕಂಡುಬರುತ್ತವೆ. ಬಹುಪಾಲು ಜಾತಿಸೂಚಕ ಹೆಸರುಗಳು ಕಂಡುಬರುತ್ತವೆ. ಬಹುಪಾಲು ಜಾತಿಸೂಚಕ ಹೆಸರುಗಳು ವೃತ್ತಿಸೂಚಕಗಳಾಗಿಯೂ ಇವೆ. "ಭಾರತೀಯ ಜಾತಿವ್ಯವಸ್ಥೆ ಆಯಾ ಸಮಾಜದ ವೃತ್ತಿಯನ್ನು ಆಧರಿಸಿ ರಚನೆಯಾಗಿದೆ. ಅಂದರೆ ಪ್ರಾಚೀನ ಕಾಲದಲ್ಲಿ ಪ್ರತಿಯೊಂದು ಜಾತಿ ಅಥವಾ ಪಂಗಡಗಳು ಒಂದೊಂದು ಬಗೆಯ ನಿರ್ಧಿಷ್ಟವಾದ ವೃತ್ತಿಯನ್ನವಲಂಬಿಸಿದ್ದರಿಂದ ಅವುಗಳನ್ನೇ ಆಧಾರವಾಗಿಟ್ಟುಕೊಂಡು ಆ ಜನರ ಹೆಸರುಗಳು ಬಳಕೆಯಲ್ಲಿ ಬಂದವು. ಉದಾ: ಮೀನು ಹಿಡಿಯುವವರನ್ನು ಮೀನುಗಾರರೆಂದು ಸುಣ್ಣ ತಯಾರಿಸುವವರನ್ನು ಸುಣಗಾರರೆಂದು, ಚರ್ಮದ ಉದ್ಯೋಗಿಗಳನ್ನು ಚಮ್ಮಾರರೆಂದೂ ಹೀಗೆ ಆಯಾ ಜನರು ವಿಶಿಷ್ಟ ವೃತ್ತಿಗಳನ್ನು ಅವಲಂಬಿಸಿರುವುದರಿಂದ ಈ ಹೆಸರುಗಳು ಅವರಿಗೆ ಕೊಡಲ್ಪಟ್ಟವು."[೩]

ಕೆಲವು ಸಮುದಾಯಗಳು ಮೂಲದಲ್ಲಿ ಇತರೆ ಸಮುದಾಯದೊಂದಿಗೆ ಹೊಂದಿದ್ದ ಸಾಂಸ್ಕೃತಿಕ ಅನನ್ಯತೆಯ ನೆನಪುಗಳನ್ನು ಐತಿಹ್ಯಗಳು ಬಿಂಬಿಸುತ್ತವೆ. ಉದಾಹರಣೆಗೆ ಹೊಲೆಯರ ಹುಡುಗನನ್ನು ಅಗಸರ ವ್ಯಕ್ತಿಯು ಒಟ್ಟಿಗೆ ಕೂಡಿಸಿಕೊಂಡು ಊಟ ಮಾಡಿದನೆಂಬ ಐತಿಹ್ಯ, ಮಾದಿಗರು ಬೇಡರು ತಂದೆ ಮಕ್ಕಳು ಎಂಬ ಐತಿಹ್ಯ, ಸ್ವಗೋತ್ರದಲ್ಲಿ ಮದುವೆಯಾದ ಮಾದಿಗರು ದಕ್ಕಲಿಗರಾದರೆಂಬ ಐತಿಹ್ಯ ಹೀಗೆ ಹಲವಾರು ನಿದರ್ಶನಗಳು ಸಾಮರಸ್ಯದಿಂದ ಪ್ರತ್ಯೇಕತೆಯ ಕಡೆಗೆ ಸಮುದಾಯಗಳು ತಿರುಗಿದ್ದನ್ನು ಹೇಳುತ್ತವೆ. ಸಮುದಾಯಗಳಲ್ಲಿ ತಮ್ಮ ವೃತ್ತಿ ಕಸುಬಿಗೆ ಸಂಬಂಧಿಸಿದಂತೆ ನಿರೂಪಿತವಾಗುವ ಐತಿಹ್ಯಗಳು ವೃತ್ತಿಗೆ ಪೂರಕವಾದ ಕಾರಣವನ್ನು ಒಳಗೊಂಡಿರುತ್ತದೆ.

**ಗಾಣಿಗ** ಸಮುದಾಯದವರು ಎಣ್ಣೆ ತೆಗೆಯುವ ವೃತ್ತಿಗೆ ಸಂಬಂಧಿಸಿದಂತೆ ಹೇಳುವ ಐತಿಹ್ಯದ ಪ್ರಕಾರ "ಜಗತ್ತಿನ ಕತ್ತಲನ್ನು ನಿವಾರಿಸಲು ಶಿವನು ಯೋಚಿಸಿ ಒಂದು ಸಮುದಾಯವನ್ನು ಸೃಷ್ಟಿಸಿದನು.

ಆ ಸಮುದಾಯವು ಶಿವನ ಬೆವರಿನಿಂದ ಹುಟ್ಟಿ ಬಂದಿತು. ಅವರನ್ನು ಎಣ್ಣೆ ತೆಗೆಯುವ ಉದ್ಯೋಗಕ್ಕೆ ನೇಮಿಸಿದನು. ಈ ಸಮುದಾಯದ ಮೂಲಪುರುಷ ಘನಜ್ಯೋತಿ ಎಂಬ ಹೆಸರಿನವನು". ಈ ಐತಿಹ್ಯದಲ್ಲಿ ಕಾಳುಗಳಿಂದ ಎಣ್ಣೆ ತೆಗೆದು ಅದನ್ನು ದೀಪ ಉರಿಸಲು ಬಳಸಿಕೊಳ್ಳುವುದನ್ನು ಸೂಚಿಸಿದ ಸಮುದಾಯದ ವಿವರಗಳಲ್ಲದೆ ಯಾವುದರ ಮೂಲಕ ಎಣ್ಣೆಯನ್ನು ತೆಗೆದರು ಎಂಬುದೂ ಮುಖ್ಯವಾಗುತ್ತದೆ. ಗಾಣದ ಮೂಲಕ ಎಣ್ಣೆ ತೆಗೆದವರು ಗಾಣಿಗರು ಎಂಬುದೂ ಉಳಿದುಬಿಡುತ್ತದೆ.

ನಾಯಿಂದ ಸಮುದಾಯದವರು ದೈವಗಳ ಅಲಂಕಾರದಲ್ಲಿ ನಿಪುಣನಾದ ಸವಿತ ಬ್ರಹ್ಮಶ್ರೀಯ ಮೂಲದವರೆಂದು ತಮ್ಮ ಬಗ್ಗೆ ಹೇಳಿಕೊಳ್ಳುತ್ತಾರೆ. ಅಲ್ಲದೆ ತಮ್ಮ ಪೂರ್ವಿಕರು ದೇವಸಭೆಯಲ್ಲಿ ನಾದಬ್ರಾಹ್ಮಣರೆಂಬ ವಾದ್ಯಕಾರರಾಗಿದ್ದವರೆಂದೂ ಯಾವುದೋ ಅಚಾತುರ್ಯದಿಂದಾದ ಘಟನೆಯಿಂದ ಭೂಲೋಕಕ್ಕೆ ಬಂದರೆಂದೂ ಹೇಳುತ್ತಾರೆ. ಕೆಳಜಾತಿಗಳು ಮೇಲ್ಜಾತಿಗಳೊಂದಿಗೆ ಸಮಾನವಾಗಿ ಬಾಳಲು ತವಕಿಸಿ ಅಪಮಾನಗೊಂಡ ಪ್ರಸಂಗಗಳು ಜನಪದರಲ್ಲಿ ಜನಜನಿತವಾಗಿವೆ. ಅಂಥ ನೆನಪುಗಳು ಆಡುನುಡಿ, ಗಾದೆಮಾತುಗಳಲ್ಲಿ ವ್ಯಕ್ತವಾಗುತ್ತವೆ. ಒಮ್ಮೆ ಅಕ್ಕಸಾಲಿಗರ ಮನೆಗೆ ಅಗಸ, ಕ್ಷೌರಿಕ ಮತ್ತು ಈಡಿಗರ ಯುವಕರು ಹೆಣ್ಣು ಕೇಳಲೆಂದು ಹೋದರು. ಒಬ್ಬನು "ಸರಿಯಾಗಿ ಕೂಡೋ ಅಗಸ" ಎಂದ. ಮತ್ತೊಬ್ಬನು "ಮರ್ಮ ಬಿಡಬೇಡವೋ ಮಂಗಾಳಾ" ಎಂದ. "ಇನ್ನೊಬ್ಬನು ಕೇಳಿಸಿಕೊಂಡೇನೋ ಈಡಿಗಾ" ಎಂದ - ಹೀಗೆ ಇವರ ಜಾತಿಗಳು ತಿಳಿದ ಅಕ್ಕಸಾಲಿಗರು ಹೆಣ್ಣು ಕೊಡಲಿಲ್ಲ ಎಂಬ ಕಥೆಯಿದೆ.

ಬಲಿಜ, ಬಲಜಿಗ, ಬಣಜಿಗ ಎಂದು ಕರೆಯಲ್ಪಡುವ ಸಮುದಾಯವು ಆಂಧ್ರದ ನಾಯ್ಡುಗಳು ತಾವೆಂದು ಹೇಳಿಕೊಳ್ಳುತ್ತಾರೆ. ಇವರು ವ್ಯಾಪಾರ ಕ್ಷೇತ್ರದಲ್ಲಿ ಹೂವು ಹಣ್ಣು ತರಕಾರಿ ಇತ್ಯಾದಿ ಮಾರಾಟ ಮಾಡುತ್ತಾರೆ. ಬಳೆಗಳ ಮಾರಾಟ ಇವರಲ್ಲಿನ ಒಂದು ಪಂಗಡದ ವೃತ್ತಿ ಕಸುಬು ಆಗಿದೆ. ವ್ಯಾಪಾರದಲ್ಲಿ ಇವರು ಜಾಣರು ಎಂಬುದನ್ನು ಸಂಬಂಧಿಸಿದ ಐತಿಹ್ಯವೊಂದು ಸಮರ್ಥಿಸುತ್ತದೆ. ಚಿನ್ನದ ಅಂಗಡಿಯೊಂದರಲ್ಲಿ ಎಲ್ಲ ಜಾತಿಯ ಬೊಂಬೆಗಳನ್ನು ಇಟ್ಟು ಅಭರಣಗಳಿಂದ ಅಲಂಕರಿಸಿ ಪ್ರದರ್ಶನಕ್ಕೆ ಇಟ್ಟಿದ್ದರು. ಎಲ್ಲ ಬೊಂಬೆಗಳ ಆಭರಣಗಳೂ ಹಾಗೆಯೇ ಇದ್ದವು. ಆದರೆ ಬಲಿಜ ಬೊಂಬೆಯು ತನ್ನ ಕೊರಳಿನ ಕಂಠಕ ಮಾಲಾ ಸರವನ್ನು ನುಂಗಿಕೊಂಡಿತ್ತು. ವ್ಯಾಪಾರಿಯು ಸರ ಏನಾಯಿತೆಂದು ಪ್ರಶ್ನಿಸಿದರೆ ಬೊಂಬೆಯು ಬಾಯಿ ಬಿಡುತ್ತಿರಲಿಲ್ಲ. ಬಾಯಿ ಬಿಡೆಂದು ಹೊಡೆದಾಗ ಸರವನ್ನು ನುಂಗಿಬಿಟ್ಟಿತು. ಕೊನೆಗೆ ಅದು ಹೊರಗೆ ಬಾರದೆ ಸಿಕ್ಕಿಕೊಂಡಿತೆಂದು ಕಥೆಯಿದೆ.

ಮತ್ತೊಂದು ಐತಿಹ್ಯದಲ್ಲಿ ಬಲಿಜಿಗರು ಕಣದಲ್ಲಿ ಎಲ್ಲವನ್ನೂ ಗಾಳಿಗೆ ತೂರಿ ತೂರಿ ಗಟ್ಟಿಯಾಗಿರುವುದನ್ನು ಕೊಂಡುಕೊಳ್ಳುತ್ತಿದ್ದರು. ಹೀಗೆ ತಂದಿದ್ದನ್ನು ಮಾರಾಟ ಮಾಡುವಾಗ ಈರುಳ್ಳಿಯ

ಸಿಪ್ಪೆಯೊಂದು ಗಾಳಿಗೆ ಹಾರ್ರಾಹೋಯಿತು. ಅದನ್ನು ಏಳುಬಾರಿ ಹಿಡಿದು ತಂದು ಅದು ಏನೆಂದು ಪರೀಕ್ಷಿಸಿದರು. ಪ್ರತಿ ಸಾರಿ ಹಾರಿಹೋದಾಗಲೂ ಅದು ಮದುವೆ ಮನೆಯಲ್ಲಿದ್ದ ಬಲಿಜಿಗರ ಹೆಂಡತಿಯರ ಸೀರೆಯಲ್ಲಿ ಸೇರಿಕೊಳ್ಳುತ್ತಿತ್ತು. ಹೀಗೆ ಏಳುಸಾರಿ ಅವರು ಸೀರೆ ಬಿಚ್ಚಿ ಹುಡುಕಿಕೊಟ್ಟರು. ಅಂದಿನಿಂದ ಮದುವೆ ಮನೆಯಲ್ಲಿ ಹೆಂಗಸರು ಏಳುಸಲ ಸೀರೆ ಬದಲಾಯಿಸುವ ನಿಯಮ ಬಂತೆಂದು ಹೇಳುತ್ತಾರೆ. ಜಿಲ್ಲೆಯ ಗುಡಿಬಂಡೆ, ಗೌರಿಬಿದನೂರು, ಬಾಗೇಪಲ್ಲಿ ತಾಲೂಕುಗಳಲ್ಲಿ ಜನಪದರಿಂದ ಆರಾಧನೆಗೆ ಒಳಗಾಗುವ ಅಶ್ವತ್ಥಪ್ಪ, ಕೋಡಿರ್ಲಪ್ಪ ಹಾಗೂ ಜಿಲ್ಲೆಯಾದ್ಯಂತ ಆರಾಧಿಸಲ್ಪಡುವ ಕೈವಾರದ ನಾರಾಯಣಪ್ಪ ಇವರುಗಳು ಪ್ರಾದೇಶಿಕವಾಗಿ ಬಲಜಿಗರ ಸಾಂಸ್ಕೃತಿಕ ನಾಯಕರಾಗಿದ್ದಾರೆ. ಇವರಿಗೆ ಸಂಬಂಧಿಸಿದ ಐತಿಹ್ಯಗಳು ಹೀಗಿವೆ :

**ಕೋಡ್ಲೀರಪ್ಪ : ಐತಿಹ್ಯಗಳ ಪ್ರಕಾರ** ಈತ ಕೊರಟಗೆರೆಯ ಬಲಿಜಿಗರ ಯುವಕ. ಸೈನಿಕ (ವೃತ್ತಿಯಲ್ಲಿದ್ದನೆಂದು ಕೆಲವರು ಹೇಳುತ್ತಾರೆ.) ಗೌರೀಬಿದನೂರು ತಾಲೂಕಿನ ನಗರಗೆರೆ ಸಮೀಪ ನಂಜಯ್ಯಗಾರಿ ಪಲ್ಲಿಯ ರೆಡ್ಡಿ ಮನೆತನದ ಹೆಣ್ಣನ್ನು ಅಪಹರಿಸಿ ರಾಜಲದ್ಯಾವರಕೊಂಡದಲ್ಲಿ ನೆಲೆಸಿದ. ಹೆಣ್ಣಿನ ಕಡೆಯವರು ಬೆಟ್ಟಕ್ಕೆ ಮುತ್ತಿಗೆ ಹಾಕಿದರು. ಆದರೆ ಅವನು ಕಟ್ಟಿಸಿದ್ದ 'ಚಿನ್ನೊಕ್ಕರಿ', 'ಪೆದ್ದೊಕ್ಕರಿ' ಎಂಬ ಕುಂಟೆಗಳನ್ನು ದಾಟಲು ಅವರಿಗೆ ಸಾಧ್ಯವಾಗಲಿಲ್ಲ. ಅಲ್ಲದೇ ಸುತ್ತಲೂ ಕೆಂಪು ಸೀಗೆಯನ್ನು ಬೆಳೆಸಿದ್ದ. ಅವರು ಅಡಿಗೆ ಮಾಡಿಕೊಂಡು ಹುಣಸೆಯ ಹುಳಿಯನ್ನು ಹಿಂಡಿ ಎಸೆದಿದ್ದ ಬೀಜಗಳು ಮರಗಳಾಗಿ ಕಾಯಿಬಿಟ್ಟರೂ ಅವರು ತಮ್ಮ ಮುತ್ತಿಗೆಯನ್ನು ಹಿಂತೆಗೆಯಲಿಲ್ಲ. ಕೋಡೀರ್ಲಪ್ಪನ ಹೆಣ್ಣು ಬತ್ತ ಕುಟ್ಟುತ್ತಾ ರಹಸ್ಯವನ್ನು ಹಾಡಿನ ರೂಪದಲ್ಲಿ ಹೇಳಿದಳು. ಎರಡು ಕುಂಟೆಗಳ ತೂಬು ಕೋಡಿ ಕಡಿದರೆ ರಾಜಲದ್ಯಾವರ ಬೆಟ್ಟ ಕೋಡಿಯಾಗುತ್ತದೆಂದಳು. ಆಗ ಅವರು ಕುಂಟೆಗಳನ್ನು ಕಡಿದು ಬೆಟ್ಟಕ್ಕೆ ಲಗ್ಗೆಯಿಟ್ಟರು. ಕೋಡ್ಲೀರಪ್ಪನು ತನ್ನ ಕುದುರೆಯಡಿಗೆ (ಕೆಳಕ್ಕೆ) ಅವಳನ್ನು ಕಟ್ಟಿ ತಾನು ಕುದುರೆಯೇರಿ ಗುಂಡುಕಲ್ಲಿನಲ್ಲಿ ರಂಧ್ರ ಕೊರೆದು ನುಗ್ಗಿದ ಕಾಲುಮುರಿಯಿತು. ಮತ್ತೊಂದು ಬೆಟ್ಟಕ್ಕೆ ಹಾರಿದ. ಅಲ್ಲಿಗೂ ಧಾವಿಸಿ ಅವನನ್ನು ಕೊಂದರು. ಸಾಯುವಾಗ ತನ್ನ ತಪ್ಪನ್ನು ಒಪ್ಪಿಕೊಂಡ. ಹೋರಾಟದಲ್ಲಿ ಮಡಿಯುವವನು ವೀರಸ್ವರ್ಗ ಸೇರುವುದಲ್ಲದೆ ದೇವರಾಗುತ್ತಾನೆಂಬ ನಂಬಿಕೆಯಿಂದ ದೇವರೆಂದು ಆರಾಧಿಸಿಕೊಂಡು ಬಂದರು.

ಸಾಯುವಾಗ ಆತನು ತನ್ನ ಹೆಣ್ಣಿನ ಕಡೆಯವರಿಗೆ ವರಗಳನ್ನು ಬೇಡುವಂತೆ ಹೇಳಿದ. ಅವರು ಬಹಳ ಶ್ರೀಮಂತರಿದ್ದುದರಿಂದ ಏನನ್ನು ಬೇಡಲಿಲ್ಲ. ಏಕೆಂದರೆ ಅವರ ಒಲೆಗಳಲ್ಲಿ ಬಂಗಾರದ ಮೊಳಕೆಯೇಳುತ್ತಿತ್ತು. ಆದ್ದರಿಂದ ಅವರು ನಿನ್ನ ಜಾತ್ರೆಯ ದಿನ ನಾವು ಮೊದಲ ದೀಪದ ಆರತಿ

ಮಾಡಬೇಕು. ಅಂದು ಮೂರು ಬಾರಿ ತಿಂದು ಸ್ನಾನ ಮಾಡದೆ ಹಳೆಯ ಬಟ್ಟೆಗಳನ್ನುಟ್ಟು ದೀಪವನ್ನು ಹೊರುತ್ತೇವೆಂದು ಕೇಳಿಕೊಂಡರು. ಜಾತ್ರೆಯ ದಿವಸ ಕೊರಟಿಗೆರೆಯ ಕೋಡೀರ್ಲಪ್ಪನ ಮನೆಯವರದು ಎರಡನೆಯ ದೀಪದ ಆರತಿಯಾದರೆ, ನಂಜಯ್ಯಗಾರಿ ಹಳ್ಳಿಯವರದು ಮೊದಲ ಆರತಿ. ನಗರಗೆರೆಯಲ್ಲಿ ಗುಡಿಯಿದೆ. ಮೇಲ್ಛಾವಣಿ ಇಲ್ಲ. ಪೂಜೆ ನಡೆಯುತ್ತದೆ. ಕೋಡೀರ್ಲಪ್ಪ ಮೈಮೇಲೆ ಬಂದು ಹೂವಿನ ವರ ಕೊಡುತ್ತಾನೆ.

೨. ಕೋಡೀರ್ಲ ಕೊಂಡದ (ಬೆಟ್ಟ) ಉತ್ತರಕ್ಕೆ ಚಿಕ್ಕನಗರಗೆರೆ ಕುಂಟೆ ಇದೆ. ಅಲ್ಲೊಂದು ನಗರವಿತ್ತಂತೆ. ರೂಕಲು ವಾನ (ಚಿನ್ನದ ನಾಣ್ಯಗಳ ಮಳೆ) ಸುರಿಯುತ್ತಿತ್ತು. ರಾಶಿ ಮಾಡುತ್ತಿದ್ದರು. ಒಮ್ಮೆ ಬೆಂಕಿಯ ಮಳೆ ಬಂತು. ಜನ ಕುಂಟೆಯಲ್ಲಿರುವ ಬಾವಿಗೆ ಬಿದ್ದರು. ನಗರವೆಲ್ಲ ಸುಟ್ಟು ಹೋಯಿತು. ಇದು ಕೋಡೀರ್ಲಪ್ಪನಿಗಿಂತ ಬಹಳ ಹಿಂದಿನ ಕಾಲಕ್ಕೆ ಸಂಬಂಧಿಸಿದ್ದು, ಇಲ್ಲಿ ನೆಲೆಸಿದ್ದ ಒಂದು ಸಂಸ್ಕೃತಿ ಬೆಂಕಿಯಿಂದ ನಾಶವಾದ ಅಂಶ ಇಲ್ಲಿ ಸ್ಪಷ್ಟವಾಗುತ್ತದೆ.

**ಕೈವಾರದ ನಾರಾಯಣಪ್ಪ :** ತಾತಯ್ಯನವರೆಂದೇ ಪ್ರಖ್ಯಾತರಾದ ಕೈವಾರ ನಾರಾಯಣಪ್ಪನವರು ಸುಮಾರು ಹದಿನಾರು ಕೀರ್ತನೆಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ. ಉಳಿದಂತೆ ಇವರ ರಚನೆಗಳು ತೆಲುಗಿನಲ್ಲಿವೆ. ಕನ್ನಡ ಮಾರ್ಗ ಸಾಹಿತ್ಯ ಕೃತಿಗಳಲ್ಲಿ ಕಂಡುಬರುವ ಕಂದಪದ್ಯಗಳು ಇವರ ರಚನೆಗಳಲ್ಲಿ ಇದ್ದರೂ ಇವರ ಶಕ್ತಿ ಇರುವುದು ತೆಲುಗಿನ ದೇಸೀ ಛಂದಸ್ಸಾದ 'ಆಟವೆಲದಿ'ಯಲ್ಲಿ 'ನಾದಬ್ರಹ್ಮಾನಂದ ನಾರೇಯಣ ಕವಿ' ಎಂಬ ಕಾವ್ಯನಾಮದ ಪದ್ಯಗಳು ಆಟವೆಲದಿ ಛಂಧಸ್ಸಿನಲ್ಲಿವೆ. ಅಲ್ಲದೆ ತೆಲುಗಿನಲ್ಲಿ ಆದರಣೆಯನ್ನು ಪಡೆದ ಸೀಸಪದ್ಯ ರಚನೆಗಳೂ ಇವರವಾಗಿವೆ. ಕೀರ್ತನೆಗಳಲ್ಲಿ ಕನ್ನಡದ ದಾಸಪರಂಪರೆಯ ಪ್ರಭಾವ ಕಂಡುಬಂದರೆ ತತ್ವಪದ ರಚನೆಗಳಲ್ಲಿ ತೆಲುಗು ತತ್ವಪದಗಳ ಪ್ರಭಾವವಿರುವುದು ಗೋಚರ ವಾಗುತ್ತದೆ. ತೆಲುಗಿನ 'ಯಾಲಪಾಟಲು'ಗಳನ್ನು ಬಹುಪಾಲು ರಚನೆಗಳು ಹೋಲುತ್ತವೆ. ಅಲ್ಲದೆ ತೆಲುಗಿನ ಕವಿಗಳಾದ ತಾಳ್ಲಪಾಕಅನ್ನಮಾಚಾರ್ಯ ಹಾಗೂ ಭದ್ರಾಚಲ ರಾಮದಾಸರ ಕೀರ್ತನೆಗಳ ಪ್ರಭಾವವನ್ನು ಗುರುತಿಸಬಹುದು.

ಕೈವಾರದ ನಾರಾಯಣಪ್ಪನು ಕಾಲಜ್ಞಾನವನ್ನು ಬರೆದನೆಂದೂ ಬರೆದದ್ದೆಲ್ಲ ಸತ್ಯವಾಗಿದೆಯೆಂದೂ ಕೋಲಾರ ಜಿಲ್ಲೆಯ ಜನಪದ ಪರಂಪರೆಯು ನಾರಾಯಣಪ್ಪನ ನೆನಪನ್ನು ಉಳಿಸಿಕೊಂಡಿದೆ. ಜೀವಿತಾವಧಿ ಯಲ್ಲಿ ನಾರಾಯಣಪ್ಪನನ್ನು ಸವಾಲಾಗಿ ಸ್ವೀಕರಿಸಿದ ಸಂದರ್ಭಗಳಲ್ಲಿ ಮಳೆಬರಿಸುವುದು, ಹಾಳುಬಾವಿಗಳಲ್ಲಿ ನೀರನ್ನು ತರಿಸುವುದು, ಬಡಬಗ್ಗರಿಗೆ ಬಯಸಿದ ಆಹಾರವನ್ನು ಸೃಷ್ಟಿಸಿಕೊಡುವುದು ಮೊದಲಾದ ಪವಾಡಗಳನ್ನು ಮೆರೆದನೆಂದು ಸ್ಥಳೀಯ ಐತಿಹ್ಯಗಳು ದೊರೆಯುತ್ತವೆ. ನಾರಾಯಣಪ್ಪನ ತಂದೆ-

ಕೊಂಡಪ್ಪ, ತಾಯಿ-ಮುದ್ದಮ್ಮ, ಹೆಂಡತಿ-ಮುನಿಯಮ್ಮ, ಮಕ್ಕಳು ದೊಡ್ಡಕೊಂಡಪ್ಪ, ಚಿಕ್ಕಕೊಂಡಪ್ಪ, ಮಗಳು ಮುದ್ದಮ್ಮ ಎಂಬ ವಿವರಗಳು ದೊರೆಯುತ್ತವೆ. ನಾರಾಯಣಪ್ಪನಿಗೆ ಸಂಬಂಧಿಸಿದಂತೆ ದೊರೆಯುವ ಐತಿಹ್ಯಗಳಲ್ಲಿ ಪ್ರಮುಖವಾದವು : ವಿರಸ ದಾಂಪತ್ಯದ ಐತಿಹ್ಯ ಹಾಗೂ ಶ್ಯಾನುಭೋಗ ಮಲ್ಲಯ್ಯನ ಐತಿಹ್ಯ (ವ್ಯಕ್ತಿತ್ವ, ಸಂಗೀತ ಪ್ರತಿಕ್ರಿಯೆಗೆ ಸಂಬಂಧಿಸಿದ್ದು). ಇವು ನಾರಾಯಣಪ್ಪನು ಯೋಗಿಯಾಗಲು ಕಾರಣಗಳೇನೆಂಬುದನ್ನು ದೃಢಪಡಿಸುವ ಐತಿಹ್ಯಗಳ ಪ್ರಕಾರ ಬಳೆ ಮಾರಲೆಂದು ಹೋಗುತ್ತಿದ್ದ ನಾರಾಯಣಪ್ಪನು ಊರೂರಿನ ಹೆಂಗಸರಿಗೆ ಬಿಟ್ಟಿಯಾಗಿ ಬಳೆಗಳನ್ನು ತೊಡಿಸಿ ಬರುತ್ತಿದ್ದ. ಬಡತನದಿಂದ ಬೇಸತ್ತ ಹೆಂಡತಿಯು ಸದಾ ಜಗಳವಾಡುತ್ತಿದ್ದಳು. ಸಂಸಾರದಲ್ಲಿ ಸುಖವಿಲ್ಲದೆ ವೈರಾಗ್ಯದತ್ತ ನಡೆದ. ಹಾಗೂ ಕೈವಾರದ ಶಾನುಭೋಗ ಮಲ್ಲಯ್ಯನೆಂಬ ಬ್ರಾಹ್ಮಣನು ನಾರಾಯಣಪ್ಪನ ಕುಟುಂಬಕ್ಕೆ ಸಾಲ ನೀಡಿದ್ದನು. ಕಷ್ಟದ ಸಂದರ್ಭದಲ್ಲಿ ನಾರಾಯಣಪ್ಪನ ಮಡದಿ ಮುನಿಯಮ್ಮನು ಶ್ಯಾನುಭೋಗನಲ್ಲಿ ಸಾಲ ತಂದಿದ್ದಳು. ಹಣ ಒದಗಿ ಬಂದಾಗ ಸಾಲವನ್ನು ತೀರಿಸಿದರಾದರೂ ಸಾಲಪತ್ರಗಳನ್ನು ಶ್ಯಾನುಭೋಗನು ಹಿಂದಿರುಗಿಸದೆ ಮತ್ತೆ ಮತ್ತೆ ಕಾಡುತ್ತಿದ್ದನು. ನಾರಾಯಣಪ್ಪನ ಪಾಂಡಿತ್ಯದ ಬಗ್ಗೆ ಆತನಿಗೆ ಅಸೂಯೆ ಇತ್ತು. ಊರಿನ ಸಂಗೀತ ಕಛೇರಿಗಳಲ್ಲಿ ಹರಿಕಥಾ ಸಮಾರಂಭಗಳಲ್ಲಿ ಭಜನೆಗಳಲ್ಲಿ ಈತನ ಪ್ರವೇಶವಿರುತ್ತಿತ್ತು. ಪಾಂಡಿತ್ಯದ ಪರಿಜ್ಞಾನವಿಲ್ಲದಿದ್ದರೂ ಜನ ತನ್ನನ್ನು ಹೊಗಳಬೇಕೆಂಬ ತೆವಲು ಮಲ್ಲಣ್ಣನದು. ಇದರಿಂದ ರೋಸಿ ಹೋದ ಊರಿನ ಯುವಕರು ಮಲ್ಲಣ್ಣನನ್ನು ಪರೋಕ್ಷವಾಗಿ ಪ್ರಾಸಬದ್ಧವಾಗಿ ಅಣಕಿಸುತ್ತಿದ್ದರು. ಇದರ ಹಿಂದೆ ನಾರಾಯಣಪ್ಪನ ಕೈವಾಡವಿದೆ ಎಂಬ ಜಿದ್ದು ಮಲ್ಲಣ್ಣನದು. ಆದ್ದರಿಂದ ಈತನು ಭಾರಿ ತೊಂದರೆಗಳನ್ನು ನೀಡುತ್ತಿದ್ದನು. ತನ್ನ ಸಂಸಾರದ ವಿರಸಕ್ಕಿಂತ ಮಲ್ಲಣ್ಣನ ಕಾಟವೇ ಹೆಚ್ಚಾಗ ತೊಡಗಿದ್ದರ ಪ್ರಭಾವದಿಂದ ನಾರಾಯಣಪ್ಪ ವಿರಾಗಿಯಾಗತೊಡಗಿದ.

ತಾತಯ್ಯನವರ ರಚನೆಗಳನ್ನು ಸ್ಥಳೀಯವಾಗಿ ತತ್ವಪದಗಳ ರೂಪದಲ್ಲಿ ಜನ ಸ್ವೀಕರಿಸಿದ್ದಾರೆ. ಭಕ್ತಿಭಾವದಿಂದ ಹಾಡಿ ಹೊಗಳುವ ಮೂಲಕ ಮುಕ್ತಿಗೆ ಸಲ್ಲಬಹುದೆಂದು ನಿರೀಕ್ಷಿಸುತ್ತಾರೆ. ಆದ್ದರಿಂದ ಇವರ ಕೀರ್ತನೆಗಳು ಭಜನೆಗಳಾಗಿ ದೈವಾರಾಧನೆಗಳಲ್ಲಿ ಸ್ತುತಿಗೊಳ್ಳುತ್ತವೆ ಅಲ್ಲದೆ ತಿರಿದು ತಿನ್ನುವ ಕುಂಟ ಕುರುಡರು ಬಸ್‌ಸ್ಟ್ಯಾಂಡ್‌ಗಳಲ್ಲಿ ಹಾಡುತ್ತಿರುತ್ತಾರೆ. ತಂಬೂರಿ ಗಾಯಕರು, ಹಾರ್ಮೋನಿಯಂ ಗಾಯಕರು ಇತ್ಯಾದಿ ವೃತ್ತಿ ಕಲಾವಿದರು ಮನೆ ಮನೆಯ ಮುಂದೆ ನಿಂತು ಹಾಡುತ್ತಾರೆ. ಹೀಗೆ ತಾತಯ್ಯನವರ ಸಂದೇಶ ಜನಮನವನ್ನು ತಟ್ಟಿದೆ. ಅರ್ಥಹೀನ ಸಂಪ್ರದಾಯಗಳ ವಿಡಂಬನೆ, ಜಡ ದೈವಗಳ ಕುರಿತ ವ್ಯಂಗ ಇವರ ರಚನೆಗಳಲ್ಲಿ ಕಂಡುಬರುತ್ತದೆ. ಸತ್ತ ದನಗಳ ಚರ್ಮವನ್ನು ವಿವಿಧ ವಿಧಗಳಲ್ಲಿ ವಾದ್ಯಗಳನ್ನಾಗಿ ಮಾಡಿ ಬಾರಿಸಿದಷ್ಟು ಭಿನ್ನವಾದ ಧ್ವನಿಗಳು ಹೊರಡುತ್ತವೆ. ಆದರೆ ಕಲ್ಲಿನಲ್ಲಿ ಎಂಥ ದೈವವನ್ನು ಮಾಡಿದರೂ ಮಾತನಾಡುವುದಿಲ್ಲ. ಕಲ್ಲುದೈವಗಳನ್ನೇಕೆ ಪೂಜಿಸುತ್ತೀರೆಂದು ಎಚ್ಚರಿಸುತ್ತಾರೆ.

ಜಡದೈವಗಳನ್ನು ಟೀಕಿಸುತ್ತಾ ಮನುಷ್ಯನು ಅಂತರಂಗದಲ್ಲಿ ಅಡಗಿದ ದೈವವನ್ನು ಗೌರವಿಸಬೇಕೆಂದು ಹೇಳುವ ಮೂಲಕ ಮನುಷ್ಯನ ಉನ್ನತೀಕರಣವನ್ನು ಬೆಳಕಿಗೆ ತರುತ್ತಾರೆ. ಮುಗ್ಧ ಜನರಿಂದ ಮೆರೆಯಲ್ಪಡುವ ದೇವತೆಗಳಿಗಿಂತ ಹಸಿವು ಬಾಯಾರಿಕೆಗಳಿಂದ ಬಳಲುವ ಜೀವಂತ ದೈವಗಳನ್ನು ಗಮನಿಸುವಂತೆ ಸೂಚಿಸಿದ್ದಾರೆ. ಅಲ್ಲದೆ ಆಡಂಬರದ ಹಬ್ಬ ಜಾತ್ರೆ, ಉತ್ಸವಗಳನ್ನು ದೊಡ್ಡವರ ಮಕ್ಕಳಾಟಿಕೆಯೆಂದು ವಿಡಂಬಿಸುತ್ತಾ ಇವು ಆರ್ಥಿಕ ನಷ್ಟಕ್ಕೆ ಮೂಲ ಅಪ್ರಯೋಜಕವೆಂದು ಮನವರಿಕೆ ಮಾಡಿದ್ದಾರೆ. ಲೋಕದ ಸೃಷ್ಟಿಪಾಲನೆ, ಲಯ ಈ ಮೂಲಕ ಅಧಿದೇವತೆಗಳಾಗಿ ಬ್ರಹ್ಮ, ವಿಷ್ಣು, ಮಹೇಶ್ವರರು ಅಣ್ಣ ತಮ್ಮಂದಿರಾಗುವುದು ಸಹಜವಾದರೂ ಪುರಾಣಗಳು ಬ್ರಹ್ಮನನ್ನು ವಿಷ್ಣುವಿನ ಮಗನೆಂದು ಸಾರುವುದು ಸರಿಯೇ ಎಂದು ಪ್ರಶ್ನಿಸಿ ಪುರಾಣ ಪ್ರಪಂಚಕ್ಕೆ ಸವಾಲು ಹಾಕುತ್ತಾರೆ. ನಾಮರೂಪಗಳಿಲ್ಲದ ಪರಂಜ್ಯೋತಿ ಸ್ವರೂಪನಾದ ಪರಮಾತ್ಮನ ಪ್ರಕಾರವನ್ನು ಕಂಡು ಪಡೆಯುವ ಸಮಾಧಿ ಸ್ಥಿತಿಯೇ ಪರಮೋಚ್ಚವೆಂದು ಅವರ ಭಾವನೆ. ಈ ಉನ್ನತ ಸ್ಥಿತಿಯಲ್ಲಿ ಬ್ರಹ್ಮ ವಿಷ್ಣುಗಳು ಕಾಣಲಿಲ್ಲ. ಕಾಣದಿರುವ ಅವರನ್ನೂ ಹುಡುಕುವ ಪ್ರಯತ್ನವಾದರೂ ಏಕೆ ಎಂದು ಪ್ರಶ್ನಿಸಿದ್ದಾರೆ.[೪] ಬದಲಾವಣೆಯ ದಿಕ್ಕಿನಲ್ಲಿ ಸಾಮಾಜಿಕ ಆದರ್ಶದ ಆಶಯವನ್ನು ಹೊಂದಿರುವುದೇ ತಾತಯ್ಯನವರ ರಚನೆಗಳ ವಿಶೇಷತೆಯನ್ನಬಹುದು.

ಕೈವಾರದ ನಾರಾಯಣಪ್ಪನವರು ಕಾಲಜ್ಞಾನವನ್ನು ಸಾರಿದರೆಂದೇ ಜನಪದ ವಲಯವು ಆತನನ್ನು ತನ್ನ ಆದರ್ಶದ ರೂಪದಲ್ಲಿ ಉಳಿಸಿಕೊಂಡಿದೆ. ಪುರೋಹಿತ ವರ್ಗದ ಆದರ್ಶಗಳು ಜನಸಾಮಾನ್ಯರ ಶೋಷಣೆಗಳಾಗುವ ಬಗೆ, ಜಾತಿ ವ್ಯವಸ್ಥೆಯ ತಾರತಮ್ಯಗಳನ್ನು ಕುರಿತು ಹೇಳುತ್ತಾ ಜಾತಿಗಳಲ್ಲಿ ಮೇಲು-ಕೀಳುಗಳಿಲ್ಲ ಎಲ್ಲರೂ ಶೂದ್ರರೇ ಎಂದು ತಿಳಿಸುತ್ತಾರೆ. ಮನುಷ್ಯರಲ್ಲಿ ಎರಡೇ ಜಾತಿಗಳಿರುವುದು ಸ್ಪಷ್ಟ. ಅವುಗಳೆಂದರೆ ಗಂಡುಜಾತಿ ಹೆಣ್ಣುಜಾತಿಗಳೆಂದು ಗುರುತಿಸಿದ್ದಾರೆ. ೧. (ಮಗವ ಜಾತುಲು ಮಗುವ ಜಾತುಲು ರೆಂಡೆ ಜಾತುಲು) ಮಗವಾರು ಒಕ ಕುಲಮು ಮಗುವಲು ಒಕ ಕುಲಮು | ವೆದಿಕಿ ಚೂಸಿನ ವೇರೇ - ಕುಲಮುಲೇದು | ಸೃಷ್ಟೀಶ್ವರದು ಎನ್ನಿ ಚಿಕ್ಕಲು ಚೇಶೆಕಾ | ನಾದ ಬ್ರಹ್ಮಾನಂದ ನಾರಾಯಣ ಕವಿ|| (ಪುರುಷರದೊಂದು ಕುಲ ಸ್ತ್ರೀಯರದೊಂದು ಕುಲ | ಹುಡುಕಿ ನೋಡಿದರೂ ಬೇರೆ ಜಾತಿಯಿಲ್ಲ | ಸೃಷ್ಟೀಶ್ವರನು ಎಷ್ಟು ಸಿಕ್ಕುಗಳನ್ನು ತಂದನೋ | ನಾದಬ್ರಹ್ಮ ನಾರಾಯಣ ಕವಿ||)

೨. ಆಶಪಾಶಂಬುಲು ಹತಮಯ್ಯೇ ದನುಕನು | ಚಿತ್ತಮ್ಮಾಲ ನಿಲುಚು ಶಿವುನಿ ಮೀದ| ಚಿತ್ತ ಶುದ್ಧಿಲೇನಿ ಶಿವುನಿ ಪೂಜ ಏಲರಾ | ನಾದ ಬ್ರಹ್ಮಾನಂದ ನಾರೇಯಣ ಕವಿ||[೫] (ಆಸೆ ಪಾಶಗಳು ಹತ ವಾಗೋವರೆಗೂ | ಚಿತ್ತವೇಕೆ ನಿಲ್ಲುವುದು | ಶಿವನ ಮೇಲೆ | ಚಿತ್ತಶುದ್ಧಿ ಇಲ್ಲದ ಶಿವನ ಪೂಜೆ ಏಕೆ)

ಕೈವಾರದ ತಾತಯ್ಯನೆಂದೇ ಪ್ರಸಿದ್ಧರಾದ ನಾರಾಯಣಪ್ಪ ೧೭೩೦ ರಲ್ಲಿ ಜನಿಸಿದವರು.[೬] ಬದುಕಿನ ದಿನಗಳನ್ನು ಕೊನೆಯವರೆಗೂ ಕೈವಾರದಲ್ಲಿ ಕಳೆದರಾದ್ದರಿಂದ ಕೈವಾರದ ತಾತಯ್ಯನೆಂದು ಜನಪ್ರಿಯರಾದರು. ಲೋಕಕಲ್ಯಾಣಕ್ಕಾಗಿ ಶ್ರಮಿಸಿ ಅನುಭಾವಿ, ಕವಿ, ಸಮಾಜ ಸುಧಾರಕರಾಗಿ ಗುರುತಿಸಲ್ಪಟ್ಟರು. ಗಾಜುಲು ಬಲಜಿಗ (ಬಳೆಗಾರ) ಸಮುದಾಯವರಾದ ಕಾರಣ ಊರೂರಿಗೆ ಅಲೆದು ಹೆಂಗಳೆಯರಿಗೆ ಮುತ್ತೈದೆ ಬಳೆ ತೊಡಿಸುವ ವೃತ್ತಿಯನ್ನು ಕೈಗೊಂಡರು. ಲಾಭದಾಯಕವಲ್ಲದ ಈ ವೃತ್ತಿಯಿಂದ ಜೀವನ ನಿರ್ವಹಣೆ ಕಷ್ಟವಾದಾಗ ಸಹಜವಾಗಿಯೇ ಹೆಂಡತಿಯು ಸಂಘರ್ಷಕ್ಕೆ ಇಳಿಯುತ್ತಿದ್ದಳು.

ಹೆಂಡತಿಯು ಗಯ್ಯಾಳಿಯಾದಂತೆಲ್ಲ ಸಂಸಾರದಲ್ಲಿ ಸಂಕಷ್ಟಗಳು ಎದುರಾಗತೊಡಗಿದವು. ಅಸುಖೀ ದಾಂಪತ್ಯದಿಂದ ಬೇಸತ್ತ ತಾತಯ್ಯ ಸಂಸಾರವನ್ನು ತ್ಯಜಿಸಿ ವೈರಾಗ್ಯದೆಡೆಗೆ ಸಾಗಿದರು. ಊರಿನ ಶಾನುಭೋಗರ ಕಿರುಕುಳದಿಂದಾಗಿ ಊರೂರು ಪರದಾಡಿದ ತಾತಯ್ಯನ ಕುಟುಂಬ ಅಕಾಲಮರಣಕ್ಕೆ ತುತ್ತಾಯಿತು. ಇಂಥ ದುರಂತ ಬದುಕಿನ ಏರುಪೇರುಗಳು ತಾತಯ್ಯನ ವಿರಕ್ತಿಯನ್ನು ಗಟ್ಟಿಗೊಳಿಸಿದವು. ಮುಂದೆ ಇವರ ಬದುಕಿನಲ್ಲಿ ಪವಾಡಗಳು ಸಂಭವಿಸಿದವನೆಂದು ಐತಿಹ್ಯಗಳಿಂದ ತಿಳಿದುಬರುತ್ತದೆ. ಬರಗಾಲದಿಂದ ತತ್ತರಿಸುತ್ತಿದ್ದ ವಿಜಯಪುರದ ಬಳಿ ಮಳೆಯನ್ನು ತರಿಸುವ ಪವಾಡವನ್ನು ಮೆರೆದರಂತೆ. ನೀರಿಲ್ಲದ ಬಾವಿಗಳಲ್ಲಿ ಗಂಗಾಭವಾನಿಯನ್ನೇ ಪ್ರತ್ಯಕ್ಷಗೊಳಿಸಿ ನೆಲೆಸುವಂತೆ ಮಾಡಿದರಂತೆ. ಬೆಣಚು ಕಲ್ಲುಗಳನ್ನು ಕಲ್ಲು ಸಕ್ಕರೆಯಾಗಿ ಪರಿವರ್ತಿಸುತ್ತಿದ್ದರಂತೆ. ಹೀಗೆ ಕಡಿಮೆ ಮಳೆ ಬೀಳುವ ಕೋಲಾರ ಜಿಲ್ಲೆಯ ಪ್ರದೇಶದಲ್ಲಿ ನೀರಿನ ಸಂಬಂಧಿ ಪವಾಡಗಳನ್ನು ಯಶಸ್ವಿಗೊಳಿಸಿದರೆಂದರೆ ಅಲ್ಲಿನ ಜನರ ಕೊರತೆಗಳನ್ನು ಕನಸಿನ ಆಶಯಗಳ ಮೂಲಕ ನನಸು ಮಾಡಿದರೆನ್ನಬಹುದು. ತಾತಯ್ಯನವರ ರಚನೆಗಳಲ್ಲಿ ಜನಪದ ಭಾವ ಮತ್ತು ಭಾಷೆಯ ಸ್ವರೂಪ ಸಮೃದ್ಧವಾಗಿ ಅಭಿವ್ಯಕ್ತಗೊಂಡಿದೆ.

**ಗುಡಿಬಂಡೆಯ ಅಶ್ವತ್ಥಪ್ಪ :** ಸಾಮಾನ್ಯ ಮನುಷ್ಯನಿಗೆ ಕೆಲವೊಮ್ಮೆ ಹುಚ್ಚು ಹಿಡಿದು ನಂತರ ಕಾಲಜ್ಞಾನಿ ಇಲ್ಲವೇ ಪವಾಡ ಪುರುಷನಾಗುತ್ತಾರೆಂದು ಹೇಳುತ್ತಾರೆ. ಕಾಲಜ್ಞಾನಿಗಳು ಸೂಫಿಗಳು ತತ್ವ ಪದಕಾರರು ಮುಂತಾದವರ ಜ್ಞಾನವು ಒಂದು ಬಗೆಯ ಹುಚ್ಚೆಂದು ಹೇಳುವವರು ಇದ್ದಾರೆ. ಹೀಗಿರುವಾಗ ಗುಡಿಬಂಡೆಯ ಅಶ್ವತ್ಥಪ್ಪನು ಹೂಮಾರುತ್ತಿದ್ದ. ಅವನ ಹೆಂಡತಿ ವೆಂಕಟಮ್ಮ ಇವರಿಗೆ ಒಂದು ಹೆಣ್ಣು-ಒಂದು ಗಂಡು ಈ ಇಬ್ಬರೇ ಮಕ್ಕಳು, ಬಡತನದ ಬದುಕು. ಹೀಗಿರುವಾಗ ಅಶ್ವತ್ಥಪ್ಪನಿಗೆ ಹುಚ್ಚು ಹಿಡಿದು ಹಾದಿ ಬೀದಿಗಳಲ್ಲಿ ಒದರುತ್ತಾ ಓಡಾಡುತ್ತಿದ್ದ. ಮೊದಮೊದಲು ಎಲ್ಲರೂ ಇವನನ್ನು ಹುಚ್ಚನೆಂದು ಇವನ ಮಾತುಗಳನ್ನು ಲೆಕ್ಕಿಸುತ್ತಿರಲಿಲ್ಲ. ಕಾಲಕಳೆದಂತೆ ಅವನು ಹೇಳುವುದು ಸರಿಯಾಗುತ್ತಿತ್ತು. ಒಂದು ದಿನ ತನ್ನ ಹೆಂಡತಿಗೆ ತಮ್ಮ ಮಗಳು ಗಂಡನ ಮನೆಯಲ್ಲಿ ಸತ್ತಿದ್ದಾಳೆ ಎಂದು ಹೇಳಿದ. ಅವಳು ನಂಬಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಸಾವಿನ ಸುದ್ದಿ ಬಂತು.

ಒಮ್ಮೆ ಬೆಂಗಳೂರಿಗೆ ನಡೆದು ಹೋಗುತ್ತಿದ್ದ. ರಸ್ತೆಯಲ್ಲಿ ಹೋಗುತ್ತಿದ್ದ ತನ್ನೂರಿನ ಪರಿಚಿತರ ಲಾರಿಗೆ ಕೈ ಅಡ್ಡ ಹಾಕಿದ ಅವರು ನಿಲ್ಲಿಸಲಿಲ್ಲ. ಆದರೆ ಅವರು ಬೆಂಗಳೂರನ್ನು ಸಮೀಪಿಸುತ್ತಿದ್ದಂತೆ ಮಾರ್ಗದ ಮಧ್ಯದಲ್ಲಿ ಮತ್ತೆ ಅವರಿಗೆ ಎದುರಾದ. ಅವರು ಲಾರಿಯನ್ನು ಹಿಂದಿರುಗಿಸಿಕೊಂಡು ಬರುವಾಗಲೂ ಈತ ದಾರಿಯಲ್ಲಿ ತನ್ನೂರಿನೆಡೆಗೆ ನಡೆದು ಬರುತ್ತಿದ್ದವನು. ಅವರು ಗುಡಿಬಂಡೆಗೆ ಬರುವ ಮುನ್ನವೇ ಈತ ಗುಡಿಬಂಡೆಯಲ್ಲಿದ್ದ. ಇಂಥ ಪವಾಡಗಳಿಂದ ಈತನನ್ನು ಜನ ಪವಾಡಪುರುಷನೆಂದು ಆರಾಧಿಸತೊಡಗಿದರು. ಒಮ್ಮೆ ಈತನ ಗೆಳೆಯನಾದ ಆಚಾರಿಯು ತನಗೆ ಏನಾದರೂ ಒಳ್ಳೆಯದನ್ನು ಮಾಡು ಎಂದು ಕೇಳಿದ. ಅಶ್ವತ್ಥಪ್ಪನು ಸ್ನೇಹಿತನನ್ನು ಹತ್ತಿರದ ಚೆಲುವೆ ಬೆಟ್ಟದ ಬಳಿಗೆ ಕರೆದೊಯ್ದು ಅಲ್ಲಿನ ಬಾವಿಯೊಳಕ್ಕೆ ಇದ್ದಕ್ಕಿದ್ದಂತೆ ಧುಮುಕಿ ಮಾಯವಾದ. ಆಚಾರಿಯೂ ಧುಮುಕಿದ ಅಲ್ಲೊಂದು ಗುಹೆಯ ಒಳಗೆ ಉಯ್ಯಾಲೆಯಲ್ಲಿ ಕುಳಿತು ಅಶ್ವತ್ಥಪ್ಪ ತೂಗುತ್ತಿದ್ದುದು ಕಾಣಿಸಿತು. ತನ್ನ ಕೈಗೆ ಏನನ್ನಾದರೂ ಕೊಡೆಂದು ಸ್ನೇಹಿತನನ್ನು ಕೇಳಿದ. ಆಚಾರಿಯು ಅಲ್ಲಿಯೇ ಇದ್ದ ಸಗಣಿಯನ್ನು ನೋಡಿ ಸ್ವಲ್ಪ ತೆಗೆದುಕೊಟ್ಟ. ಅಶ್ವತ್ಥಪ್ಪ ಅದನ್ನು ಮುಟ್ಟಿದ ತಕ್ಷಣ ಅದು ಚಿನ್ನವಾಯಿತು. ಅಂದಿನಿಂದ ಆಚಾರಿಗೆ ಅಲ್ಲಿ ಚಿನ್ನ ದೊರೆಯಲಾರಂಭಿಸಿತು.

ಅಶ್ವತ್ಥಪ್ಪನ ಹೆಂಡತಿ ಯಾತ್ರೆಗೆಂದು ಹೊರಟಳು. ಈತ 'ನೀನೀಗ ಹೋಗುವುದು ಬೇಡ ನಾನು ಸಾಯಲಿದ್ದೇನೆ' ಎಂದು ಹೇಳಿ ತಡೆದ. ಅದನ್ನು ನಂಬದೆ ಹೆಂಡತಿಯು ಯಾತ್ರೆ ಮುಗಿಸಿ ಬಂದಳು ಅಷ್ಟರಲ್ಲಿ ಆತ ಸತ್ತು ಹೋಗಿದ್ದ, ಊರಿನ ಜನ ಸಮಾಧಿಯನ್ನು ಮಾಡಿದ್ದರು. ಹೆಂಡತಿಯು ರೋಧಿಸುತ್ತಾ ಸಮಾಧಿಗೆ ತಲೆಯನ್ನು ಕುಟ್ಟುತ್ತಿದ್ದಳು. ಸಮಾಧಿಯಿಂದ ಎದ್ದು ಬಂದು ಅಶ್ವತ್ಥಪ್ಪ ಹೆಂಡತಿಗೆ ದರ್ಶನ ನೀಡಿ ತಾನು ಎಲ್ಲೂ ಹೋಗಿಲ್ಲ ಸಮಾಧಿಯಲ್ಲೇ ಇದ್ದೇನೆ ನೀನು ವಿಧವೆಯಾಗ ಬೇಡವೆಂದು ಹೇಳಿದ. ಆದರೆ ಊರಿನ ಜನ ಬಲತ್ಕಾರವಾಗಿ ವಿಧವೆಯನ್ನು ಮಾಡಿದರು. ಅಂದು ರಾತ್ರಿಯೇ ಬಳೆಗಾರ-ಹೂಗಾರ ಮತ್ತು ಅರಿಶಿನ-ಕುಂಕುಮ ಮಾರುವವನ ಕನಸಿನಲ್ಲಿ ಅಶ್ವತ್ಥಪ್ಪ ಕಾಣಿಸಿಕೊಂಡು ತನ್ನ ಹೆಂಡತಿಗೆ ಬಳೆ ಹೂವು ಅರಿಶಿನ ಕುಂಕುಮಗಳನ್ನು ನೀಡುವಂತೆ ತಿಳಿಸಿದ ಅದರಂತೆ ಅವರು ನೀಡಿದರು. ಮತ್ತೆ ಅವಳು ಗಂಡನ ತಾಳಿಯನ್ನು ಧರಿಸಿಕೊಂಡು ಮುತ್ತೈದೆಯಾಗಿ ಉಳಿದರು. ಆಚಾರಿಯ ವಂಶಸ್ಥರು ಇಲ್ಲಿ ಸಮಾಧಿಯ ಸ್ಥಳದಲ್ಲಿ ವರ್ಷಕ್ಕೊಮ್ಮೆ ಉಚಿತ ಮದುವೆಗಳನ್ನು ಮಾಡಿಸುತ್ತಾರೆ. ಸುತ್ತಮುತ್ತಲ ಊರುಗಳ ಜನ ಈತನನ್ನು ಆರಾಧಿಸುತ್ತಾರೆ.

## ಜಿಲ್ಲೆಯ ಕೆಲವು ಸಮುದಾಯಗಳ ಐತಿಹ್ಯಗಳು

**ತಿಗಳರು :** ತಿಗಳರನ್ನು ತಮಿಳುನಾಡಿನಿಂದ ವಲಸೆ ಬಂದು ಕೋಲಾರ, ಬೆಂಗಳೂರು ಮತ್ತು ತುಮಕೂರು ಪ್ರದೇಶಗಳಲ್ಲಿ ನೆಲೆಸಿದ ಕರಗ ಸಂಪ್ರದಾಯದ ಆರಾಧಕರೆಂದು ಕರೆಯುತ್ತಾರೆ. ಇವರು ತಮ್ಮದು ಅಗ್ನಿಕುಲ, ಶಂಭುಕುಲ, ಪಾಂಡವಕುಲ ಮತ್ತು ಕ್ಷತ್ರಿಯ ಕುಲವೆಂಬ ಹೆಸರುಗಳಿಂದ ಗುರ್ತಿಸಿಕೊಳ್ಳುತ್ತಾರೆ. ತಿಗಳರನ್ನು ಪಳ್ಳಿಯರು ಹಾಗೂ ಬ್ರಾಹ್ಮಣರೆಂದು ಗುರುತಿಸಲಾಗಿದೆ. ತಿಗಳ ಎಂಬುದು ಜಾತಿ, ಕನ್ನಡದ ಮಾಧ್ವ ಬ್ರಾಹ್ಮಣರು, ತಮಿಳಿನ ಸ್ಮಾರ್ತ ಬ್ರಾಹ್ಮಣರನ್ನು ತಿಗಳರೆಂದು ಕರೆಯುತ್ತಾರೆ.[೭] ತಮಿಳುನಾಡಿನಿಂದ ವಲಸೆ ಬಂದ ತೋಟಗಾರರಾದ ತಮಿಳರನ್ನು ಕನ್ನಡಿಗರು ತಿಗಳರೆಂದು ಕರೆದಿರುವುದಾಗಿ ಕಂಡುಬರುತ್ತದೆ. ದ್ರಾವಿಡ ಭಾಷೆಯಲ್ಲಿ 'ತಿ' ಎಂದರೆ ಅಗ್ನಿ ಎಂದರ್ಥ ಬರುವುದರಿಂದ ಇವರು 'ತಿ' ಗಣರು ಬೆಂಕಿಯ ಅಂಶದವರು ಎಂಬ ಹೇಳಿಕೆಗಳೂ ಕಂಡುಬರುತ್ತವೆ. ಕರಗ ಸಂಪ್ರದಾಯದಲ್ಲಿ 'ತ್ರಿ' ಅಂದರೆ ಮೂರು ಕಳಸಗಳಿದ್ದು (ಹೂವಿನ ಕಳಸ, ಮಣ್ಣಿನ ಕಳಸ, ಹಸಿಮಣ್ಣಿನ ಕಳಸ) ಇವುಗಳನ್ನು ಹೊರುವ ಸಮುದಾಯದವರು ತಿಗಳರೆಂದು ಕೆಲವರು ಹೇಳುತ್ತಾರೆ.

ಆದರೆ ತಮಿಳುನಾಡಿನಲ್ಲಿ ಎಲ್ಲೂ 'ತಿಗಳ' ಎಂಬ ಸಮುದಾಯವು ಕಂಡುಬರುವುದಿಲ್ಲ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಕೆಲವು ತಿಗಳರು ತಮ್ಮನ್ನು ವಹ್ನಿಕುಲ ಕ್ಷತ್ರಿಯರ ವಂಶಸ್ಥರೆಂದು ಪಳ್ಳಿಗಳೆಂದು ಹೇಳಿಕೊಳ್ಳುತ್ತಾರೆ. ಆದರೆ ಶಿಷ್ಟ ಮೂಲದ ಅಗ್ನಿಪುರಾಣದ ಪ್ರತಿಪಾದನೆ ತಮಿಳುನಾಡಿನ ವಹ್ನಿಯಾರರಲ್ಲಿ ಮಾತ್ರ ಕಂಡುಬರುತ್ತದೆಯೇ ಹೊರತು ಕರ್ನಾಟಕದ ತಿಗಳರಲಿಲ್ಲ. ವಹ್ನಿಯಾರರಲ್ಲಿ ಕಂಡುಬರುವ ದ್ರೌಪದಿಯ ಆರಾಧನಾ ಆಚರಣೆಗೂ ಇವರ ಕರಗ ಸಂಪ್ರದಾಯದ ಆಚರಣೆಗೂ ತಿಗಳರು ಸಂಬಂಧ ಕಲ್ಪಿಸಿಕೊಳ್ಳುವ ಮೂಲಕ ತಾವು ವಹ್ನಿಕುಲದವರೆಂದು ಸಮರ್ಥಿಸಿಕೊಳ್ಳುತ್ತಾರೆ. ಅಲ್ಲದೆ ತಮ್ಮ ವಂಶದ ಮೂಲವನ್ನು ಪಾಂಡವರೊಂದಿಗೆ ಗುರ್ತಿಸಿಕೊಳ್ಳುತ್ತಾರೆ. ವಹ್ನಿಯಾರರು ತಾವು ಪಳ್ಳಿಗಳು ಆಂಗೀರಸನ ಮೂಲಕ ಅಗ್ನಿದೇವನ ಕುಲಕ್ಕೆ ಸೇರಿದವರೆಂದು ಪೌರಾಣಿಕ ಆಧಾರವನ್ನು ಸಾಬೀತುಪಡಿಸುತ್ತಾರೆ. ಇವರಲ್ಲಿ ತಿಗಳರು ಜನಪದ ನೆಲೆಯನ್ನು, ವಹ್ನಿಯಾರರು ಶಿಷ್ಟ ನೆಲೆಗಳನ್ನು ಸಾದರಪಡಿಸುತ್ತಾರೆ.

**ಚಾರಿತ್ರಿಕ ಮೂಲ :** ವಹ್ನಿಕುಲ ಕ್ಷತ್ರಿಯರಲ್ಲಿ ತಮ್ಮ ಮೂಲದ ಬಗ್ಗೆ ಪ್ರಚಲಿತವಿರುವ ಐತಿಹ್ಯ ಹೀಗಿದೆ: ಬ್ರಹ್ಮನು ಒಮ್ಮೆ ಯಜ್ಞವನ್ನು ಮಾಡುವಾಗ, ಅಗ್ನಿಕುಂಡದಿಂದ ಮೂವರು ವೀರರು ಹುಟ್ಟಿ ಬರುತ್ತಾರೆ. ಅವರಲ್ಲಿ 'ಭೃಗು' ಎಂಬುವವನನ್ನು ವರುಣನು, 'ಕವಿ'ಯನ್ನು ಬ್ರಹ್ಮನು, 'ಅಂಗೀರಸ'ನೆಂಬುವವನನ್ನು ಅಗ್ನಿಯೂ ತಮ್ಮ ಸಂತಾನವಾಗಿ ಸ್ವೀಕರಿಸಿದರು. ಈ ಅಂಗೀರಸನ ಮೂಲಕ ಅಗ್ನಿ ಸಂತಾನವನ್ನು ಗುರ್ತಿಸಿಕೊಂಡವರೇ ವಹ್ನಿಕುಲಕ್ಷತ್ರಿಯರು ಇವರನ್ನು ಅಂಗೀರಸಲು, ಅಗ್ನಿಜರು ಎಂದೂ ಕರೆಯುತ್ತಿದ್ದರು.

ವಹ್ನಿಕುಲದವರೆಂದು ಹೇಳಿಕೊಳ್ಳುವ ಕರ್ನಾಟಕದ ತಿಗಳರನ್ನು ಕೇಳಿದಾಗ ತಾವು ತಮಿಳುನಾಡಿನ ಕಂಚಿಯ ಸುತ್ತಮುತ್ತಲಿನ ಪ್ರದೇಶಗಳಿಂದ ನವಾಬರ ಕಾಲದಲ್ಲಿ ಕರ್ನಾಟಕಕ್ಕೆ ಬಂದಿರುವುದಾಗಿ ಹೇಳಿಕೊಳ್ಳುತ್ತಾರೆ. ಕೆಲವರು ಉದ್ಯೋಗದ ನಿಮಿತ್ತ ಬಂದಂತೆಯೂ ಮತ್ತೆಕೆಲವರು ಚೆದುರಿ ಬಂದಂತೆಯೂ ಹೇಳುವುದುಂಟು. ಹೀಗೆ ಬಂದವರೆಲ್ಲರೂ ಬಹುಶಃ ಒಂದೇ ಪಂಗಡ ಅಥವಾ ಸಮುದಾಯದವರು ಇರಲಿಕ್ಕಿಲ್ಲ. ಏಕೆಂದರೆ ಆ ಕಾಲದಲ್ಲಿ ತಮಿಳುನಾಡಿನಿಂದ ಬಂದವರೆಲ್ಲರಿಗೂ ತಿಗುಳರೆಂಬುವ ಪದವನ್ನು ಇಟ್ಟು ತಿಗುಳಸೆಟ್ಟಿ, ತಿಗುಳಪಳ್ಳಿ, ತಿಗಳಹೊಲೆಯರಾಗಿ ಕರೆದಿರುತ್ತಾರೆ. ಇವರು ಚೋಳರ ಕಾಲದಲ್ಲೇ ಕರ್ನಾಟಕಕ್ಕೆ ಬಂದಿರಬಹುದು. ಏಕೆಂದರೆ ಚೋಳರು ಹನ್ನೊಂದನೆಯ ಶತಮಾನದಲ್ಲಿ ಮೈಸೂರಿನ ಸ್ವಲ್ಪ ಭಾಗವನ್ನು ಆಕ್ರಮಿಸಿ, 'ವಿಕ್ರಮ ಚೋಳ ಮಂಡಲ'ವನ್ನು ಸ್ಥಾಪಿಸಿದಾಗ ತಮಿಳರು ಕರ್ನಾಟಕಕ್ಕೆ ಬಂದು ನೆಲೆಸಿದ ಸಾಧ್ಯತೆಗಳಿವೆ. ಹೀಗೆ ಕರ್ನಾಟಕ ಮತ್ತು ತಮಿಳುನಾಡುಗಳ ಮಧ್ಯೆ ಆಡಳಿತಾತ್ಮಕ ಸಂಬಂಧಗಳೇರ್ಪಡುವ ಸಂದರ್ಭಗಳಲ್ಲಿ ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಜನ ಹೋಗಿ ಬಂದು ನೆಲೆಸುವಂಥ ಸಾಂಸ್ಕೃತಿಕ ಸನ್ನಿವೇಶಗಳು ರಚನೆಯಾಗಿವೆ. ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಹೈದರಾಲಿಯು ತಮಿಳುನಾಡಿನಲ್ಲಿ ನಡೆಸಿದ ದಂಡಯಾತ್ರೆಯ ಕಾಲದಲ್ಲಿ ಅಲ್ಲಿನ ವಹ್ನಿಕುಲದವರ ತೋಟಗಾರಿಕೆಯ ನೈಪುಣ್ಯದಿಂದ ಪ್ರಭಾವಿತನಾಗಿ ಅವರನ್ನು ಇಲ್ಲಿಗೆ ಕರೆತಂದಂತೆ ಕಂಡುಬರುತ್ತದೆ.

**ಸಾಂಸ್ಕೃತಿಕ ಅನನ್ಯತೆ :** ತಿಗಳರು ತಮ್ಮ ಭಾಷೆ, ಸಂಸ್ಕೃತಿ ಮತ್ತು ಆರ್ಥಿಕ ಚಟುವಟಿಕೆಗಳಿಂದ ತಮ್ಮದೇ ಆದ ಸಾಂಸ್ಕೃತಿಕ ವಿಶಿಷ್ಟತೆಯನ್ನು ಉಳಿಸಿಕೊಂಡಿದ್ದಾರೆ. ಕರ್ನಾಟಕದಲ್ಲಿರುವ ಎಲ್ಲ ತಮಿಳರೂ ತಿಗಳರಲ್ಲ. ಅಥವಾ ಕರ್ನಾಟಕದ ಎಲ್ಲ ತಮಿಳರನ್ನೂ ತಿಗಳರೆಂದು ಕರೆಯುವುದೂ ಇಲ್ಲ. ಆದರೆ, ತಾವು ವಹ್ನಿಕುಲದವರೆಂದು ಹೇಳಿಕೊಳ್ಳುವ, ಕರಗ ಸಂಪ್ರದಾಯದ ಆಚರಣೆಯೊಂದಿಗೆ ತಮ್ಮನ್ನು ಗುರ್ತಿಸಿಕೊಳ್ಳುವ, ಕರ್ನಾಟಕದ ತಮಿಳರಲ್ಲಿ ಒಂದು ಭಾಷಿಕ ವರ್ಗವಾಗಿ ಕಾಣಿಸಿಕೊಂಡಿರುವ ಗುಣಲಕ್ಷಣಗಳುಳ್ಳವರು ತಿಗಳರಾಗುತ್ತಾರೆ. ಏಕೆಂದರೆ ಇವರ ಮಾತೃಭಾಷೆ ತಮಿಳೇ ಆದರೂ ತುಮಕೂರು, ಚನ್ನಪಟ್ಟಣ ಹಾಗೂ ರಾಮನಗರ ಮತ್ತು ಮೈಸೂರಿನ ಭಾಗಗಳಲ್ಲಿನ ತಿಗಳರು ಕನ್ನಡ ಮಾತನಾಡುತ್ತಾರೆ. ಕೋಲಾರ ಮತ್ತು ಬೆಂಗಳೂರಿನ ಕಡೆಗಳಲ್ಲಿ ವಾಸವಾಗಿರುವವರು ಕನ್ನಡ-ತೆಲುಗು ಮಿಶ್ರಿತ ತಮಿಳು ಭಾಷೆಯನ್ನು ಆಡುತ್ತಾರೆ. ಹೀಗೆ ತಮ್ಮ ಮಾತೃಭಾಷೆಯೊಂದಿಗೆ ಸ್ಥಳೀಯ ಶಬ್ದಗಳನ್ನೊಳಗೊಂಡ ಉಪಭಾಷೆಗಳನ್ನು ರೂಪಿಸಿಕೊಂಡಿರುವುದು ಇವರ ವಿಶೇಷ. ಹೈದರಾಲಿಯು ದಕ್ಷಿಣ ಭಾರತದಲ್ಲಿ ದಂಡಯಾತ್ರೆ ಮಾಡಿದಾಗ ವೀರಾವೇಶದಿಂದ ಹೋರಾಡಿದ ರಸರುಚಿಯುಳ್ಳ ಹಣ್ಣು ತರಕಾರಿ ತೋಟಗಾರರಾದ ವಹ್ನಿಕುಲ ಕ್ಷತ್ರಿಯರ ಧೈರ್ಯ ಮತ್ತು ವೃತ್ತಿಯನ್ನು ಬಹಳವಾಗಿ ಮೆಚ್ಚಿಕೊಂಡನೆಂದು ಪ್ರತೀತಿ. ತಾನು ಮೈಸೂರಿಗೆ ಹಿಂದಿರುಗುವಾಗ ಕೆಲವು ತೋಟಗಾರರ ಮತ್ತು ಸೈನಿಕರ

ಕುಟುಂಬಗಳನ್ನು ಕರೆತಂದು ಶ್ರೀರಂಗಪಟ್ಟಣದ ಗಂಜಾಂನಲ್ಲೂ ಬೆಂಗಳೂರಿನಲ್ಲೂ ಆಶ್ರಯ ಪಡೆದನೆಂದು ತಿಳಿದು ಬಂದಿದೆ. ಅವರಿಂದ ಬೆಂಗಳೂರಿನಲ್ಲಿ ಲಾಲ್‌ಬಾಗ್, ಶ್ರೀರಂಗಪಟ್ಟಣದಲ್ಲಿ ದರಿಯಾದೌಲತ್‌ಬಾಗ್ ಉದ್ಯಾನವನಗಳನ್ನು ಹೂವಿನ ತೋಟ, ಹಣ್ಣುಗಳ ತೋಟಗಳನ್ನು ನಿರ್ಮಿಸಿದನೆಂದು ಹೇಳಲಾಗುತ್ತದೆ.[*]

ಕರಗ ಸಂಪ್ರದಾಯವನ್ನು ಆಚರಿಸುತ್ತಿದ್ದ ತಿಗಳರು ಕರ್ನಾಟಕದಲ್ಲಿ ಬಹಳ ಹಿಂದಿನಿಂದಲೂ ನೆಲೆಸಿದ್ದರೆಂಬುದಕ್ಕೆ ಕೆಲವು ಲಿಖಿತ ನಿದರ್ಶನಗಳು ದೊರೆಯುತ್ತವೆ. ಕ್ರಿ.ಶ. ೧೦೦೭ರ ಶಾಸನವೊಂದರಲ್ಲಿ ಕನ್ನಡ ನಾಡಿನ ದೊರೆ ಸತ್ಯಾಶ್ರಯನಿಗೆ ತಿಗುಳಮಾರಿ ಎಂಬ ಬಿರುದು ಇದ್ದಿತೆಂದು ತಿಳಿದುಬರುತ್ತದೆ. ಇವನ ಆಸ್ಥಾನ ಕವಿ ರನ್ನನ 'ಗದಾಯುದ್ಧ' ಕಾವ್ಯದಲ್ಲಿ ದ್ರೌಪದಿಯು ದೇವತೆಗಳು ಮತ್ತು ಅಸುರರ ಯುದ್ಧಕ್ಕೆ ಕರಗ ಹೊತ್ತಳೆಂದು ವರ್ಣಿಸಲಾಗಿದೆ. ಇದಕ್ಕೂ ಮೊದಲು ಹಾಗೂ ನಂತರದ ಕನ್ನಡ ಕಾವ್ಯಗಳಲ್ಲಿ, ಶಾಸನಗಳಲ್ಲಿ 'ತಿಗಳ' ಮತ್ತು 'ಕರಗ'ದ ಬಗ್ಗೆ ಉಲ್ಲೇಖಗಳು ಇವೆಯಾದರೂ ಅಧ್ಯಯನದ ಪ್ರಸ್ತುತತೆಯ ಹಿನ್ನೆಲೆಯಲ್ಲಿ ಕೋಲಾರ ಪರಿಸರದ ಲಿಖಿತ ಆಧಾರಗಳನ್ನು ಸಮರ್ಥಿಸುವುದಾದರೆ : ೧೪೨೮ರ ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿ ಬಳಿಯ ಕುಡುವತಿಗೆಯ ದತ್ತಿ ಶಾಸನವೊಂದರಲ್ಲಿ "ನಮ್ಮಗೆ ಕುಲದೈವ ಭೈರವರ ಜನ ಜನಕ ತಾನು ಮನೆದೇವರು ಕರಗದಮ್ಮನ ಪತಿ ತಾನಾದ ಕಾರಣ ನಮ್ಮಂಗೆ ದೇವತಾಂತರವಿಲ್ಲ ಎಂಬ ಉಲ್ಲೇಖವನ್ನು ಗಮನಿಸಬಹುದು. (ಇದಕ್ಕೆ ಸಂಬಂಧಿಸಿದ ವಿವರಣೆಯನ್ನು ಮುಳಬಾಗಿಲಿನ ಅರಸರಿಗೆ ಸಂಬಂಧಿಸಿದ ಅಧ್ಯಾಯದಲ್ಲಿ ಪ್ರಸ್ತುತಪಡಿಸ ಲಾಗಿದೆ.) ಅಲ್ಲದೇ, ಮುಳಬಾಗಿಲಿನ ಶಾಸನವೊಂದರಲ್ಲಿ, "ಯಿಟ್ಟಯ್ಯನು ಕಣ್ಣಯ್ಯಗೆ ಬಿಟ್ಟ ಕರಗ ಮಾನ್ಯ ಹೊಲ" ಎಂದು ಉಲ್ಲೇಖಿಸಲಾಗಿದೆ.

**ಪೌರಾಣಿಕ ಹಿನ್ನೆಲೆ :** ಪ್ರತಿಯೊಂದು ಜನಾಂಗವು ತನ್ನದೇ ಆದ ವಿಶಿಷ್ಟ ಕುಲಪುರಾಣಗಳನ್ನು ಹೊಂದಿರುತ್ತವೆ. ಅಂತೆಯೇ ತಿಗಳಜನಾಂಗವು ಹಲವು ರೀತಿಯ ಕುಲಪುರಾಣಗಳನ್ನು ಹೊಂದಿದೆ. ಒಂದು ಪುರಾಣಕತೆಯಂತೆ, ಪಾಂಡವರು ವನವಾಸವನ್ನು ಮುಗಿಸಿಕೊಂಡು ಹಿಂದಿರುಗುತ್ತಿದ್ದಾಗ ದಾರಿಯಲ್ಲಿ ಬಡವನೊಬ್ಬ ಸೌತೇಕಾಯಿ ಗಿಡಗಳನ್ನು ಬೆಳೆಸಿ ಅವುಗಳನ್ನು ಕಾಯುತ್ತಿದ್ದನು. ಮುಂದೆ ಹೋಗುತ್ತಿದ್ದ ಭೀಮ ಅಹಂಕಾರದಿಂದ ಸೌತೇಗಿಡಗಳನ್ನು ಕಾಲಿನಿಂದ ಒದ್ದು ಬುಡಸಮೇತ ಕಿತ್ತು ಗಿಡಗಳನ್ನು ಹೆಗಲ ಮೇಲೆ ಹಾಕಿಕೊಂಡು ಹೋದನು. ಬಡವನ ಕಣ್ಣೀರನ್ನು ಕಂಡು ಮರುಗಿದ ಧರ್ಮರಾಯನು ಭೀಮನಿಗೆ ಬುದ್ಧಿ ಹೇಳಿ ಸೌತೇಕಾಯಿ ಗಿಡಗಳನ್ನು ತಾನು ತೆಗೆದುಕೊಂಡು ಕಯ್ಯಾರೆ ಗುಣಿ ತೋಡಿ ನೆಟ್ಟು ಮುಂದಕ್ಕೆ ಹೋದನು. ಆಗ ಸೌತೆ ಒಂದಕ್ಕೆ ಹತ್ತಾಗಿ, ನೂರಾಗಿ ಸಾವಿರ ಲಕ್ಷವಾಗಿ ಇಮ್ಮಡಿಸಿತು. ತೋಟಗಾರಿಕೆಯಲ್ಲಿ ತಿಗಳ ಜನಾಂಗ ಪ್ರಸಿದ್ಧವಾಗಲು ಈ ಘಟನೆಯೇ ಪ್ರೇರಣೆ ಆಯಿತು.

ಇನ್ನೊಂದು ಪುರಾಣವು ಮೇಲಿನ ಕತೆಯನ್ನೇ ಹೋಲುತ್ತಿದ್ದು ಇದಕ್ಕಿಂತ ಸ್ವಲ್ಪ ಭಿನ್ನವಾಗಿದೆ. ಪಾಂಡವರು ಸ್ವರ್ಗಾರೋಹಣ ಮಾಡುತ್ತಿರುವ ಸಂದರ್ಭದಲ್ಲಿ ಒಂದು ಘಟನೆ ನಡೆಯುತ್ತದೆ. ಒಬ್ಬ ತಿಗಳನು ಸೌತೇತೋಟವನ್ನು ನೋಡಿಕೊಳ್ಳಲು ತನ್ನ ಮಗಳನ್ನು ಕಾವಲಿಟ್ಟು ಮನೆಗೆ ಹೊರಡುತ್ತಾನೆ. ಸೌತೇತೋಟವನ್ನು ಕಂಡ ಪಾಂಡವರು ಹಸಿವು ನೀಗಿಸಿಕೊಳ್ಳಲು ಆ ಹುಡುಗಿಯನ್ನು ಸೌತೇಕಾಯಿ ಕೊಡುವಂತೆ ಕೇಳುತ್ತಾರೆ. ಆ ಹುಡುಗಿಯು ಉಚಿತವಾಗಿ ಸೌತೇಕಾಯಿ ಕೊಡಲು ನಿರಾಕರಿಸುತ್ತಾಳೆ. ಆಗ ಭೀಮನನ್ನು ಹೊರತುಪಡಿಸಿ ಎಲ್ಲರೂ ತಮ್ಮ ಬಳಿಯಿದ್ದ ಒಂದೊಂದು ಒಡವೆಯನ್ನು ಕೊಟ್ಟು ಸೌತೇಕಾಯಿಯನ್ನು ತೆಗೆದುಕೊಳ್ಳುತ್ತಾರೆ. ಭೀಮನು ಮಾತ್ರ ಏನನ್ನು ಕೊಡದೆ ಆ ಹುಡುಗಿಯನ್ನು ಹೆದರಿಸಿ ಸೌತೇಕಾಯಿಯನ್ನೆಲ್ಲ ತಿಂದುಹಾಕುತ್ತಾನೆ. ಭೀಮನ ದೈತ್ಯಾಕಾರವನ್ನು ಕಂಡ ಬಾಲಕಿಯು ಭಯಭೀತಳಾಗಿ ಹೆದರಿ ಪ್ರಾಣಬಿಡುತ್ತಾಳೆ. ಆ ಹುಡುಗಿಯ ತಂದೆಯು ಮರಳಿ ತೋಟಕ್ಕೆ ಬಂದಾಗ ಸೌತೇಗಿಡಗಳೆಲ್ಲವೂ ನಾಶವಾಗಿ ತನ್ನ ಮಗಳು ಕೆಳಗೆ ಸತ್ತು ಬಿದ್ದಿರುವುದನ್ನು ಕಂಡು ಕುಪಿತನಾಗುತ್ತಾನೆ. ಇದಕ್ಕೆ ಕಾರಣರಾದವರನ್ನು ಕೊಲ್ಲುತ್ತೇನೆ ಎಂದು ಅವರನ್ನು ಹುಡುಕುತ್ತಾ ಹೊರಡುತ್ತಾನೆ. ಅಲ್ಲಿಗೆ ಬಂದ ಬಾಲಕಿಯ ತಂದೆಯ ಕೋಪವನ್ನು ಕಂಡ ಧರ್ಮರಾಯನು ಆತನನ್ನು ಸಾಂತ್ವನಗೊಳಿಸುತ್ತಾನೆ. ಭೀಮನಿಂದ ನಾಶವಾಗಿದ್ದ ಸೌತೇತೋಟವನ್ನು ಅವನಿಂದಲೇ ಪುನಃ ಸರಿಪಡಿಸುತ್ತಾನೆ. ಸತ್ತ ಹುಡುಗಿಯನ್ನು ಪುನಃ ಬದುಕಿಸುತ್ತಾನೆ. ಹುಡುಗಿಯ ತಂದೆಯು ಧರ್ಮಜನ ಪಾದಗಳ ಮೇಲೆ ಬಿದ್ದು ಕ್ಷಮೆ ಕೇಳುತ್ತಾನೆ. ಧರ್ಮಜನ ಸತ್ಯದ ಮಹಿಮೆಯನ್ನು ಅರಿತ ತಿಗಳನು ಅವರನ್ನೆಲ್ಲ ಅಲ್ಲಿಯೇ ನೆಲೆಸುವಂತೆ ಕೇಳಿಕೊಳ್ಳುತ್ತಾನೆ. ಆಗ ಧರ್ಮಜನು ನಾವು ಇನ್ನು ಮುಂದೆ ಇಲ್ಲಿರಲು ಸಾಧ್ಯವಿಲ್ಲ. ನಮ್ಮ ಕಾಲ ಮುಗಿಯಿತು ಎಂದು ಹೇಳುತ್ತಾನೆ. ತಿಗಳನು, ನೀವು ನಮ್ಮವರು ಎಂದು ಹೇಳಿಕೊಳ್ಳಲು ಏನಾದರೂ ನೆನಪಿನ ವಸ್ತು ಕೊಟ್ಟು ಹೋಗಿ ಎನ್ನುತ್ತಾನೆ. ಪಾಂಡವರು ತಮ್ಮ ಬಳಿಯಿದ್ದ ಒಂದೊಂದು ಒಡವೆಯನ್ನು ಕೊಡುತ್ತಾರೆ. ಆ ಹುಡುಗಿಯು ದ್ರೌಪದಿಯ ಕುರಿತು 'ಅಮ್ಮ ನನಗೇನಾದರೂ ನೀಡಮ್ಮ' ಎನ್ನುತ್ತಾಳೆ. ದ್ರೌಪದಿಯು ತನ್ನ ಬಳಿ ಇದ್ದ ಕಳಶವನ್ನು ಆಕೆಗೆ ನೀಡಿ ಇಂದಿನಿಂದ ನೀವು ನಮ್ಮ ಕುಲದವರಾಗಿ ಎಂದು ಆಶೀರ್ವದಿಸುತ್ತಾಳೆ. ಅಂದು ನೀಡಿದ ಕಳಶವೇ ಇಂದಿನ ಕರಗ.[೯]

ಮತ್ತೊಂದು ಪುರಾಣವು ಈ ಮೇಲಿನ ಎರಡು ಕತೆಗಳನ್ನು ಹೋಲುತ್ತಿದ್ದು ಅವೆರಡಕ್ಕಿಂತ ಸ್ವಲ್ಪ ಭಿನ್ನವಾಗಿದೆ. ತಿಗಳರು ವಿದುರನ ಕುಲಕ್ಕೆ ಸೇರಿದವರು ಎಂಬ ಪ್ರತೀತಿ ಇದೆ. ಪಾಂಡವರು ಅರಣ್ಯವಾಸ ಮುಗಿಸಿ ಹಿಂದಿರುಗಿ ಬರುತ್ತಿರುವಾಗ ಒಂದು ಘಟನೆ ನಡೆಯುತ್ತದೆ. ವಿದುರನ ಸಂಬಂಧಿಕನೊಬ್ಬ ಸೌತೇಗಿಡಗಳನ್ನು ಚೆನ್ನಾಗಿ ಬೆಳೆಸಿ ಅದನ್ನು ನೋಡಿಕೊಳ್ಳಲು ತನ್ನ ಮಗಳನ್ನು ಕಾವಲಿಟ್ಟು ಮನೆಗೆ ಹೊರಡುತ್ತಾನೆ. ಹಸಿವಿನಿಂದ ಬಳಲಿ ಬರುತ್ತಿದ್ದ ಪಾಂಡವರು ಆ ಹುಡುಗಿಯನ್ನು ಸೌತೇಕಾಯಿ

ಕೊಡುವಂತೆ ಕೇಳುತ್ತಾರೆ. ಹುಡುಗಿಯು ಸೌತೇಕಾಯಿ ಕೊಡಲು ನಿರಾಕರಿಸುತ್ತಾಳೆ. ಧರ್ಮರಾಯ, ದ್ರಾಪದಿ, ಅರ್ಜುನ, ನಕುಲ ಸಹದೇವ ಇವರುಗಳು ಒಂದೊಂದು ವಸ್ತುಗಳನ್ನು ಕೊಟ್ಟು ಸೌತೇಕಾಯಿಯನ್ನು ತೆಗೆದುಕೊಳ್ಳುತ್ತಾರೆ. ಭೀಮನು ಮಾತ್ರ ಏನೂ ಕೊಡದೆ ಸೌತೇಕಾಯಿಯನ್ನು ಕೀಳಲು ಹೋಗುತ್ತಾನೆ. ಆ ಹುಡುಗಿಯು ಅದನ್ನು ಅಡ್ಡಿಪಡಿಸುತ್ತಾಳೆ. ಇದರಿಂದ ಕೋಪಗೊಂಡ ಭೀಮನು ಅವರೆಲ್ಲ ನಿನಗೆ ಏನು ಕೊಟ್ಟಿದ್ದಾರೆ ತೋರಿಸು ಎಂದು ಕೇಳುತ್ತಾನೆ. ಹುಡುಗಿಯು ಅವರು ಕೊಟ್ಟ ವಸ್ತುಗಳನ್ನೆಲ್ಲ ತೋರಿಸುತ್ತಾಳೆ. ದ್ರೌಪದಿ ನೀಡಿದ ಮಾಂಗಲ್ಯವನ್ನು ಕಂಡು ಕೋಪಗೊಂಡ ಭೀಮನು ಇದನ್ನು ನಿನಗೆ ಕೊಟ್ಟವರು ಯಾರು? ಎಂದು ಗದರಿಸುತ್ತಾನೆ. ಭೀಮನ ರೌದ್ರಾವತಾರವನ್ನು ಕಂಡ ಹುಡುಗಿ ಹೆದರಿ ಪ್ರಾಣ ಬಿಡುತ್ತಾಳೆ. ಹುಡುಗಿಯ ತಂದೆಯು ಇದನ್ನು ಕಂಡು ಕೋಪಗೊಂಡು ಈ ಅನಾಹುತಕ್ಕೆ ಕಾರಣ ಯಾರು? ಎಂದು ಹುಡುಕುತ್ತಾ ಬರುತ್ತಾನೆ. ಧರ್ಮರಾಯನು ಆತನನ್ನು ಸಮಧಾನಗೊಳಿಸಿ ಸತ್ತ ಹುಡುಗಿಯನ್ನು ಬದುಕಿಸುತ್ತಾನೆ.

ತಿಗಳರು ಕರಗ ಸಂಪ್ರದಾಯದೊಂದಿಗಿನ ಸಂಬಂಧವನ್ನು ೫ ನೆಲೆಗಳಲ್ಲಿ ಗುರ್ತಿಸಿಕೊಂಡಿದ್ದಾರೆ. ೧. ವಹ್ನಿಕುಲ ಕ್ಷತ್ರಿಯರು ೨. ಪಾಂಡವರು ೩. ದ್ರೌಪತಿ ೪. ವೀರಕುಮಾರರು ೫. ಪೋತರಾಜು

**ವಹ್ನಿಕುಲ ಕ್ಷತ್ರಿಯರು :** ದ್ರೌಪದಿಯ ಆರಾಧಕರಾದ ತಮಿಳುನಾಡಿನ ವಹ್ನಿಕುಲ ಕ್ಷತ್ರಿಯರೊಂದಿಗೆ ತಮ್ಮನ್ನು ಸಮೀಕರಿಸುವ ಮೂಲಕ ಸಂಬಂಧವನ್ನು ಪಡೆಯುತ್ತಾರೆ. ಇದು ಭೌಗೋಳಿಕ (ಪ್ರಾದೇಶಿಕ) ಅನನ್ಯತೆಯನ್ನು ಬೆಳೆಸಿಕೊಂಡಿರುವ ಕುರುಹಾಗಿ ಕಂಡುಬರುತ್ತದೆ. 'ವಹ್ನಿಕುಲ'ದವರ ದ್ರೌಪದಿಯ ಆರಾಧನೆ ತಮಿಳುನಾಡಿನದಾದರೆ ದ್ರೌಪದಿಯು ಅನುಸರಿಸುತ್ತಿದ್ದಳೆಂಬ ಕರಗದ ಅನುಕರಣೆ ಕರ್ನಾಟಕದ ತಿಗಳರದಾಗಿದೆ. ಈ ಮೂಲಕ ಪುರಾಣ ಪ್ರತಿಮೆಗೆ ಮತ್ತೊಂದು ಆಯಾಮವು ಆಚರಣಾತ್ಮಕವಾಗಿ ದೊರೆತಂತಾಗಿದೆ. ಕರಗವು ಕಳಸ ಸಂಪ್ರದಾಯದ ಒಂದು ಮಜಲು. ಕಳಸ ಫಲವಂತಿಕೆಯ ಸಂಕೇತ. ಕಳಸದೊಳಗಿನ ನೀರು ಹಾಗೂ ಕಳಸದ ಪರಿಕರಗಳೆಲ್ಲ ಹೊಸ ಸೃಷ್ಟಿಯ ಆಶಯದ ಇಂಗಿತವಾಗುತ್ತವೆ. ಆದರೆ ವಹ್ನಿಕುಲ ಕ್ಷತ್ರಿಯರ ಮೂಲದ ಬಗ್ಗೆ ಇರುವ ಪುರಾಣದಲ್ಲಿ ಪ್ರಸ್ತಾಪಿತವಾಗುವ ಯಜ್ಞಕುಂಡದ ಬೆಂಕಿ ಹಳೆಯ ವಾತಾವರಣವನ್ನು ಸುಟ್ಟು ನಾಶ ಮಾಡುವ ಮೂಲಕ ಮತ್ತೆ ಹೊಸ ಸೃಷ್ಟಿಗೆ ನಾಂದಿಯಾಗುತ್ತದೆ.

ಇಲ್ಲಿ ಅಗ್ನಿ ಮತ್ತು ನೀರು ಇವೆರಡನ್ನು ಪ್ರತ್ಯೇಕವಾಗಿ ಪೂಜಿಸುವ ವಹ್ನಿಕುಲ ಮತ್ತು ತಿಗಳರನ್ನು ಗಮನಿಸಿದಾಗ ತಿಗಳರು ತಮ್ಮ ಸಂಸ್ಕೃತಿಯನ್ನು ವಹ್ನಿಕುಲನೊಂದಿಗೆ ಗುರುತಿಸಿಕೊಂಡಿದ್ದಾರೆಯೇ ಹೊರತು ವಹ್ನಿಕುಲವೆಂಬುವವರು ತಾವು ತಿಗಳರೆಂದು ಹೇಳಿಕೊಳ್ಳುವುದಿಲ್ಲ. ಇವರೆಡರ ಮೂಲ

ಮಾತೃದೇವತೆಯ ಆರಾಧನೆಯೆಂದೆನಿಸಿದರೂ ವಹ್ನಿಕುಲ ಮೂಲದ ಪುರಾಣದಲ್ಲಿ (ಭೃಗು/ಅಂಗೀರಸ ಉದ್ಭವ) ಆರಂಭಕ್ಕೆ ಮಾತೃ ಆರಾಧನೆಯ ಮೇಲೆ ಹಿಡಿತ ತಂದಿದ್ದನ್ನು ಹೇಳುತ್ತದೆ. ತಿಗಳರ ಕರಗದ ಆಚರಣೆಯಲ್ಲಿ ಮಾತೃದೇವತೆಯನ್ನು ಓಲೈಸುವುದನ್ನು ಕಾಣುತ್ತೇವೆ.

**ಪಾಂಡವರ ಮೂಲ :** ತಿಗಳರು ಪಾಂಡವರ ವಂಶಸ್ಥರೆಂದು ಹೇಳಿಕೊಳ್ಳುತ್ತಾರೆ. ಆದರೆ, ಪಾಂಡವರಿಗೆ ಸಂಬಂಧಿಸಿದ ಪೌರಾಣಿಕ ಘಟನೆಗಳೊಂದಿಗೆ ಸಂಬಂಧವಿರುವುದು ಕಂಡುಬರುವುದಿಲ್ಲ. ಆದರೆ ಪಾಂಡವರು ಮತ್ತು ತಿಗಳ ವ್ಯಕ್ತಿಗಳು ಭೇಟಿ ಮಾಡಿದ ಜನಪದ ಅಂಶಗಳು ವ್ಯಕ್ತವಾಗುತ್ತವೆ. ತಿಗಳರು ಸೌತೇಕಾಯಿಯ ಬೆಳೆಯನ್ನು ರೂಢಿಸಿಕೊಂಡು ತೋಟಕ್ಕೆ ಕಾವಲಿರುವ ಸಂದರ್ಭದಲ್ಲಿ ಅಲ್ಲಿಗೆ ಬಂದಿದ್ದ ಪಾಂಡವರೊಂದಿಗೆ ಸಂದರ್ಭಗಳೇರ್ಪಟ್ಟಂತೆ ಐತಿಹ್ಯಗಳು ದೊರೆಯುತ್ತವೆ. ಅಂದರೆ ಇವರು ತೋಟಗಾರಿಕೆಯ ವೃತ್ತಿಯನ್ನು ರೂಪಿಸಿಕೊಂಡ ಸಂದರ್ಭದೊಂದಿಗೆ ಪಾಂಡವರ ನೆನಪುಗಳನ್ನು ಅನ್ವಯಿಸಿಕೊಂಡಿರುವುದು ಕಂಡುಬರುತ್ತದೆ.

**ದ್ರೌಪದಿಯ ಮೂಲ :** ದ್ರೌಪದಿಯನ್ನು ಕಷ್ಟದ ಸಂದರ್ಭಗಳಿಂದ ಪಾರು ಮಾಡಲು ಬೆಂಕಿಯಿಂದ ಹುಟ್ಟಿ ಬಂದ ವೀರಕುಮಾರರ ವಹ್ನಿಕುಲ ಪರಂಪರೆ ತಮ್ಮದೆಂದು ಹೇಳಿಕೊಳ್ಳುತ್ತಾರೆ.

**ವೀರಕುಮಾರರು :** ಕತ್ತಿ ಹಿಡಿದು ಸಂಕಷ್ಟಗಳನ್ನು ಎದುರಿಸಿ ಶತ್ರುಗಳನ್ನು ಮಟ್ಟ ಹಾಕುವ ವೀರಕುಮಾರರು ರಾಜತ್ವದ ಒಂದು ಭಾಗವಾಗುವುದರಿಂದ ಇವರು ಕ್ಷತ್ರಿಯರಾಗುತ್ತಾರೆ. ಇಂಥ ವಂಶಸ್ಥರು ತಮ್ಮವರೆಂದು ಈ ಮೂಲಕ ದೃಢಪಡಿಸಿಕೊಳ್ಳುತ್ತಾರೆ. ಈ ಪರಂಪರೆಯ ವೀರಕುಮಾರರು ತಮ್ಮ ತಾಯಿಯನ್ನು (ದ್ರೌಪದಿಯನ್ನು) ರಕ್ಷಿಸಿಕೊಳ್ಳಲು ಹೋರಾಟಕ್ಕೆ ಸಿದ್ಧರಾಗುವಲ್ಲಿ ಮಾತೃಮೌಲ್ಯದ ರಕ್ಷಣೆ ಪ್ರಮುಖವಾಗುತ್ತದೆ.

**ಪೋತರಾಜು ಮೂಲ :** ಜನಪದ ಆಚರಣೆಯ ಪೋತರಾಜು ಗಾವು ಸಿಗಿಯುವ ಪದ್ಧತಿ ಕರಗದ ಶಿಷ್ಟತನದೊಂದಿಗೆ ಉಳಿಸಿಕೊಂಡ ಅನನ್ಯತೆಯಿದು.

**ಕೊಮಟಿಗರು :** ಕೋಲಾರ ಜಿಲ್ಲೆಯ ವ್ಯಾಪಾರ ಕ್ಷೇತ್ರಕ್ಕೆ ಹೆಸರಾದ ತೆಲುಗು ಮೂಲದ ಶೆಟ್ಟರು ಕೋಮಟಿಗಳು. ಇವರು ಮಧ್ಯಭಾರತದಿಂದ ಆಂಧ್ರಕ್ಕೆ ಬಂದು ನೆಲೆಸಿದ್ದವರು. ಕರ್ನಾಟಕದಲ್ಲಿ ಅದರಲ್ಲೂ ಕೋಲಾರ ಜಿಲ್ಲೆಯಲ್ಲಿ ಸಂಸ್ಕೃತಿಯನ್ನು ಗುರುತಿಸಿಕೊಂಡದ್ದನ್ನು ಗಮನಿಸಬಹುದು. ಪುರಾಣದ ಪ್ರಕಾರ ಕೋಮಟಿಗರು ಉಗ್ರ ತಪಸ್ಸನ್ನು ಆಚರಿಸಿದ ಕಾರಣವಾಗಿ ಸ್ವರ್ಗದಲ್ಲಿ ವಾಸಿಸಲು ಆಹ್ವಾನ ಸಿಕ್ಕಿತು. ಅವರ ನಿರಂತರ ಗೈರುಹಾಜರಿಯಿಂದಾಗಿ ಇಹಲೋಕದ ವಸ್ತು ಸ್ಥಿತಿ ಏರುಪೇರಾಯಿತು. ಹೀಗಾಗಿ ವಿಷ್ಣುವು ಅವರನ್ನು ಮತ್ತು ಮಾನವ ಕಲ್ಯಾಣಕ್ಕಾಗಿ ಭೂಲೋಕಕ್ಕೆ ಹಿಂದಿರುಗುವಂತೆ

ಹೇಳಿದನು. ಆದರೆ ಅವರು ಹಾಗೆ ಮಾಡಲು ನಿರಾಕರಿಸಿದರು. ಆಗ ವಿಷ್ಣುವು ಶಿವನನ್ನು ಕರೆಸಿ ಅವರಿಗೆ ಹಿಂತಿರುಗುವಂತೆ ಬುದ್ಧಿ ಹೇಳು ಎಂದನು. ಶಿವನು ಒಂದು ಹಸುವನ್ನು ಹಿಡಿದುಕೊಂಡು ಬಂದು ಕೋಮಟಿಗಳೆಲ್ಲರೂ ಅದರ ಬಲಗಿವಿಯನ್ನು ಪ್ರವೇಶಿಸುವಂತೆ ಹೇಳಿದನು. ಅವರು ಅಲ್ಲಿ ವೈಭವವಾದ ಪಟ್ಟಣಗಳನ್ನು ಉಲ್ಲಾಸಕರವಾದ ದೇವಸ್ಥಾನಗಳನ್ನು ಕಂಡು ತಮಗೆ ಅಲ್ಲಿ ವಾಸಿಸಲು ಒಪ್ಪಿಗೆ ನೀಡಬೇಕೆಂದು ಪ್ರಾರ್ಥಿಸಿದರು. ಶಿವನು ಒಪ್ಪಿಗೆ ಕೊಟ್ಟ ನಂತರ ಅವರೆಲ್ಲರೂ ವೇಗವಾಗಿ ತಮ್ಮ ಹೊಸ ಸ್ವರ್ಗಲೋಕದತ್ತ ಧಾವಿಸಿದರು. ಆದರೆ ಇದ್ದಕ್ಕಿದ್ದ ಹಾಗೆ ದಳ್ಳುರಿ ಕಾಣಿಸಿಕೊಂಡು ಅವರನ್ನು ನಾಶ ಮಾಡುತ್ತ ಬಂದಿತು. ಆಗ ಕೋಮಟಿಗಳು ತಮ್ಮನ್ನು ಕಾಪಾಡುವಂತೆ ಶಿವನನ್ನು ಕೇಳಿಕೊಂಡರು. ಇಹಲೋಕಕ್ಕೆ ಹಿಂತಿರುಗುವ ಕರಾರಿನ ಮೇಲೆ ಶಿವನು ಅವರನ್ನು ಕಾಪಾಡಿದನು. ಅದೇ ರೀತಿ ಅವರು ಮಾಡಿದರು. ಶಿವನು ಅವರಿಗೆ ಗೋಮಟಿ (ಹಸುವಿನಿಂದ ಹೊರಬಂದವನು) ಎಂದು ಹೆಸರು ಕೊಟ್ಟನು. (ಕನ್ನಡ ಜಾನಪದ ವಿಶ್ವಕೋಶ, ಪು.೫೫೪)

ಕೋಲಾರ ಜಿಲ್ಲೆಯ ಕೋಮಟಿಗಳಿಗೆ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಪೆನುಗೊಂಡ ಆರಾಧನಾ ಕ್ಷೇತ್ರವಾಗಿದೆ. ಈ ಅನನ್ಯತೆಗೆ ಮೂಲವಾದ ಐತಿಹ್ಯ ಹೀಗಿದೆ : ಬರ್ಮಾ ಮತ್ತು ಇಂಡಿಯಾದ ಮಧ್ಯದಲ್ಲಿ ಅಸ್ಸಾಂಗೆ ಸೇರಿದ 'ಪಾಟ್ನಾಯ್ ಹಿಲ್ಸ್' ಎನ್ನುವ ಬೆಟ್ಟಗಳಿವೆ. ಅಲ್ಲಿರುವ ಪಾರ್ವತಿಯ ಜಾತಿಗಳಲ್ಲಿ ಒಂದು ಜಾತಿಯವರನ್ನು ಕಾಮ್ಯೊಗಳೆಂದು ಕರೆಯುತ್ತಾರೆ. ಈ ಕಾಮ್ಯೊಯವರ ದೇವತೆಗೆ ಕೋಮಟೇಶ್ವರಿ ಎಂಬ ಹೆಸರಿದೆ. ಕೋಮಟೇಶ್ವರಿ ಎಂಬ ದೇವತಾ ವಿಗ್ರಹವನ್ನು ಮಹಾಭಾರತ ಯುದ್ಧದಲ್ಲಿ ನರಕಾಸುರನ ಮಗನಾದ ಭಗದತ್ತನು ತನ್ನ ಬಲಭುಜದ ಮೇಲೆ ಧರಿಸಿದುದಾಗಿ ಹೇಳಿದೆ. ಪಾಟ್ನಾಯ ಬೆಟ್ಟಗಳಿಗೆ ಮಣಿಪುರ ಸಮೀಪವಾಗಿದೆ. ಶ್ರೀಕನ್ಯಾಕಾ ಪುರಾಣದಲ್ಲಿನ ಚಿತ್ರಕಂಠನೆಂಬ ಗಂಧರ್ವನು ಮಣಿಪುರಧೀಶನು. ಪಾಟ್ನಾಯ ಶಬ್ದವು ಪತಕೋಮವಾಗಿ ಅದರ ತದ್ಭವವು ದೊಡ್ಡ ಬೆಟ್ಟವಾಗಿದೆ. ಆಗ ಆ ಪಾಟ್ನಾಯ ಬೆಟ್ಟಗಳ ಮೇಲಿನ ಕಾಮ್ಯೊಗಳು ಪೂರ್ವದಲ್ಲಿ ಅಲ್ಲಿದ್ದವರ ಅಡಶಿಷ್ಟವಾಗಿರಬಹುದು. ಗೋಯರ ಶಬ್ದವು ಕೋಮಟಿ ಕೋಮ್ಮಿಯಾಗಬಹುದು. ಆ ಬೆಟ್ಟಗಳಲ್ಲಿದ್ದ ಜಾತಿಗಳಿಗೆ ಸಹಜ ಪರಿಸ್ಥಿತಿಯಾಗಿ ಗೋಸಂರಕ್ಷಣೆ ವೃತ್ತಿಯಾಗಿರುವುದರಿಂದ "ಗವೀಂಯತಸ್ಯಾಸ್ತಿ ಗೋಮಠೀತಿ" ಎಂಬ ವ್ಯುತ್ಪತ್ತಿ ಪ್ರಕಾರವಾಗಿ ಕೋಮಟಿ ಶಬ್ದ ಮರೆಯಾಗಿದೆ. ಕೋಮಟಿ ಪದವು ವೈಶ್ಯ ಶಬ್ದ ಪರ್ಯಾಯವಾಗಿದೆ. ಪಾಟ್ನಾಯ ಬೆಟ್ಟಗಳ ತಾಲ್ಲೂಕು ಪಾಟ್ನಾಯ. ಇದು ಪತಕೋಯ ಆಗಿದೆ. ಪತ ಅಂದರೆ ದೊಡ್ಡಕೋಯ. ಅಂದರೆ ಬೆಟ್ಟ ಎಂದರ್ಥ. ತೆಲುಗಿನಲ್ಲಿ ಪೆನುಗೊಂಡ ಅಂದರೆ ದೊಡ್ಡಬೆಟ್ಟ ಎಂದು. ಪತಕೋಯ ಶಬ್ದದ ಜ್ಞಾಪಕಾರ್ಥವಾಗಿ ಅಲ್ಲಿಂದ ವ್ಯಾಪಿಸಿದ ವೈಶ್ಯರು ತಮ್ಮ ಪಟ್ಟಣಕ್ಕೆ ಅಲ್ಲಿ ಬೆಟ್ಟವಿಲ್ಲದಿದ್ದರೂ 'ಪೆನುಗೊಂಡ' ಎಂದು ಹೆಸರಿಟ್ಟಿದ್ದಾರೆ. (ಕನ್ನಡ ಜಾನಪದ ವಿಶ್ವ ಕೋಶ, ಪು.೫೬೦)

ಅರುಂಧತಿಗೆ ಕೋಮಟಿಗಳು ಮತ್ತು ಮಾದಿಗರು ಸಹೋದರರೆಂದು ಜನಪದ ನಂಬಿಕೆ. ಇವರ ಆಶೀರ್ವಾದದಿಂದ ಕೋಮಟಿಗಳಿಗೆ ಐಶ್ವರ್ಯ ಲಭಿಸಿತು. ಹಾಗೆಯೇ ಮಾದಿಗರಿಗೆ ಇವಳ ಶಾಪದ ಕಾರಣದಿಂದಾಗಿ ಬಡತನ ಬಂದಿತೆಂದು ಐತಿಹ್ಯವಿದೆ. ಇದು 'ಅಂಗಡಿ ಬೀಮು ತಂಗಡಿ ಕಟ್ಲು-ವುಲ್ಲೇಲುಗು ಮಲ್ಲಂಗಜಿ' (ಅಂಗಡಿ ಅಕ್ಕಿ-ತಂಗಟೆ ಸೌದೆ; ಪುರಲೆ ಬೆಳಕು, ಗುನುಗುರಾಗಿ ಗಂಜಿ) ಎಂಬ ಗಾದೆಮಾತಿನಲ್ಲಿ ಅಡಗಿದೆ. ಇವುಗಳು ತನ್ನ ಮಾದಿಗ ಸಹೋದರರಿಗೆ ಲಭಿಸಲಿ ಎಂದು ಅರುಂಜ್ಯೋತಿ ಮಾದಿಗರಿಗೆ ಶಾಪ ನೀಡಿದಳೆಂದು ಐತಿಹ್ಯವಿದೆ. ವಶಿಷ್ಠ, ಅರಂಜ್ಯೋತಿಯೊಂದಿಗೆ ಹೊರಟಾಗ ನಾವೂ ನಿಮ್ಮ ಜತೆ ಬರುತ್ತೇವೆ ಎಂದು ಬಂದ ಕೋಮಟಿ ಅಣ್ಣಂದಿರಿಗೆ ಅರಂಜ್ಯೋತಿ ನಿಮ್ಮ ವಂಶ ಇರುವವರೆಗೆ ಕಾಸಿಗೆ ಕಾಸು ಕೂಡಿ ಕೋಟಿಯಾಗಿ ಹೆಡೆ ಬಿಚ್ಚಲಿ ಎಂದು ಹಾರೈಸಿ ಹೊರಡುತ್ತಾಳೆ. ಆದ್ದರಿಂದಲೇ ಕೋಮಟಿಗರು ಕೋಟ್ಯಾಧೀಶರಾಗಿರುವುದು ಮತ್ತು ಮಾದಿಗರು ಬಡವರಾಗಿರುವುದು ಎಂದು ನಂಬುತ್ತಾರೆ.[೮೦]

ವೈಶ್ಯರ ಸಂಪತ್ತಿನ ಬಗ್ಗೆ ಇರುವ ಐತಿಹ್ಯದ ಪ್ರಕಾರ, ಒಮ್ಮೆ ಲಕ್ಷ್ಮಿ ಭೂಲೋಕಕ್ಕೆ ಬಂದಳು. ಬಹಿಷ್ಠೆಯಾಗಿದ್ದರಿಂದ ಸ್ನಾನ ಮಾಡಲು ಯಾವ ಜಾತಿಯವರ ಮನೆಗೆ ಹೋದರೂ ಯಾರೂ ಸೇರಿಸಲಿಲ್ಲ. ವೈಶ್ಯರ ಮನೆಗೆ ಹೋದಳು. ಬಹಳ ಪ್ರೀತಿ-ವಿಶ್ವಾಸದಿಂದ ಶೆಟ್ಟಿ ಬರಮಾಡಿಕೊಂಡ. ತಾನು ನೀರು ತರುವುದಾಗಿ ಹೇಳಿ ಹೋದ. ತಾನು ಬರುವವರೆಗೂ ಮನೆ ಬಿಟ್ಟು ಹೋಗಬಾರದೆಂದು ಹೊರಡುವಾಗ ಅವಳಿಂದ ಕೈ ಭಾಷೆ ತೆಗೆದುಕೊಂಡ. ಆಕೆ ಲಕ್ಷ್ಮಿ ಎಂಬುದನ್ನು ತಿಳಿದಿದ್ದ ಆತ ತನ್ನ ಮನೆಯಲ್ಲೇ ಅವಳು ನೆಲೆಸಲೆಂದು ಬಾವಿಗೆ ಹಾರಿ ಪ್ರಾಣ ಬಿಟ್ಟ. ಕೊಟ್ಟ ಮಾತಿನಂತೆ ಆಕೆ ಶೆಟ್ಟರ ಮನೆಯಲ್ಲಿ ನೆಲೆಸಿದಳು.

**ಕೋಮಟಿಗಳ ತೆಲುಗು ಮೂಲಕ್ಕೆ ಸಂಬಂಧಿಸಿದವರೆಂದು ಸಮರ್ಥಿಸುವ ಐತಿಹ್ಯವು ಹೀಗಿದೆ :** ಕೋಮಟಿಗಳು ಸ್ವರ್ಗಲೋಕದಿಂದ ಇಹಲೋಕಕ್ಕೆ ಇಳಿದು ಬಂದು ಶಿವನ ಅಪ್ಪಣೆಯ ಮೇರೆಗೆ ವಿಶ್ವಕರ್ಮನು ನಿರ್ಮಿಸಿದ ಹದಿನೆಂಟು ಪಟ್ಟಣಗಳಲ್ಲಿ ನೆಲೆಸಿದರು. ಅರವತ್ತನಾಲ್ಕು ಯೋಜನೆಗಳಷ್ಟು ವಿಸ್ತಾರವಾದ ಪ್ರದೇಶದಲ್ಲಿ ಈ ಪಟ್ಟಣಗಳು ಹರಡಿಕೊಂಡಿವೆ. ಅದರ ಪೂರ್ವದಲ್ಲಿ ಗೋದಾವರಿ, ದಕ್ಷಿಣದಲ್ಲಿ ಸಮುದ್ರ, ಪಶ್ಚಿಮದಲ್ಲಿ ಗೋಸ್ತನಿ ಮತ್ತು ಉತ್ತರದಲ್ಲಿ ಗಂಗಾನದಿಯು ಆವರಿಸಿದೆ. ಇವುಗಳಿಗೆ ಪೆನುಗೊಂಡೆಯು ರಾಜಧಾನಿಯಾಗಿತ್ತು. ಇಲ್ಲಿ ನಗರೇಶ್ವರಸ್ವಾಮಿ ಮತ್ತು ಜನಾರ್ಧನ ಸ್ವಾಮಿ ದೇವಾಲಯಗಳಿವೆ. ಕುಸುಮ ಶ್ರೇಷ್ಠಿಯು ಅಲ್ಲಿಗೆ ಅಧಿಪತಿಯಾಗಿದ್ದನು. ಅವನ ಧರ್ಮಪತ್ನಿ ಕುಸುಮಾಂಬೆ. ಬಹಳ ಕಾಲ ಮಕ್ಕಳಾಗದಿದ್ದುದರಿಂದ ಪುತ್ರಕಾಮೇಷ್ಠಿಯಾಗ ಮಾಡಿ ಒಬ್ಬ ಮಗ, ಒಬ್ಬ ಮಗಳನ್ನು ಪಡೆದನು. ಮಗನಿಗೆ ವಿರೂಪಾಕ್ಷ ಎಂದೂ ಮಗಳಿಗೆ ವಾಸವಿ ಎಂದೂ ನಾಮಕರಣ ಮಾಡಿದರು. ಆ ಹುಡುಗಿ ವರ್ಣಿಸಲು ಅಸಾಧ್ಯವಾದ ಸೌಂದರ್ಯವನ್ನು ಪಡೆದಿದ್ದಳು.

ಚಂದ್ರವಂಶಕ್ಕೆ ಸೇರಿದ ವಿಜಯಾರ್ಕನ ಮಗನಾದ ವಿಷ್ಣುವರ್ಧನನು ರಾಜಮಂಡ್ರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳುತ್ತಿದ್ದನು. ಒಮ್ಮೆ ತನಗೆ ಸೇರಿದ ಪ್ರದೇಶದಲ್ಲಿ ವಿನೋದ ಪ್ರವಾಸವನ್ನು ಕೈಗೊಂಡನು. ಸಾಮಂತ ಪ್ರಭುಗಳು ಗೌರವಾದರಗಳಿಂದ ಇದಿರುಗೊಂಡು ಕಪ್ಪ ಕಾಣಿಕೆಗಳನ್ನಿತ್ತು ಸತ್ಕರಿಸಿ ಬೀಳ್ಕೊಡುತ್ತಿದ್ದರು. ರಾಜಧಾನಿಗೆ ಹಿಂದಿರುಗುವಾಗ ಪೆನುಗೊಂಡೆಗೆ ಬಂದನು. ಪೆನುಗೊಂಡೆಯ ಸೌಂದರ್ಯ ವೈಭವಗಳು, ಕುಸುಮ ಶ್ರೇಷ್ಠಿಯ ಹಿರಿಮೆ ಗರಿಮೆಗಳು ಅವನನ್ನು ಮುಟ್ಟಿದ್ದವು. ಕುತೂಹಲದಿಂದಲೇ ಪೆನುಗೊಂಡೆಯತ್ತ ಪ್ರಯಾಣ ಮಾಡಿದ. ಊರಿಗೆ ಹತ್ತಿರ ಬರುತ್ತಿದ್ದಂತೆಯೆ ಕೋಟೆ ಕೊತ್ತಲಗಳು, ಉನ್ನತ ಸೌಧಗಳು, ಗುಡಿ ಗೋಪುರಗಳು ಕಣ್ಣನ್ನು ಸೆಳೆದವು. ರಾಜಧೂತರಿಂದ ಅವನ ಆಗಮನವನ್ನು ಅರಿತ ಹಿರಿಯರು, ರಾಜರು ಅವನನ್ನು ಸ್ವಾಗತಿಸಿ ಪಟ್ಟಣದಲ್ಲಿ ಮೆರವಣಿಗೆ ಕರೆದುಕೊಂಡು ಹೋದರು. ಆಗ ಊರಿನ ಮಹಿಳೆಯರು ಅವನಿಗೆ ಆರತಿ ಬೆಳಗಿದರು. ಅವರಲ್ಲಿ ಎದ್ದು ಕಾಣುವ ಸೌಂದರ್ಯವನ್ನು ಹೊಂದಿದ್ದ ವಾಸವಾಂಬೆಯನ್ನು ಕಂಡ ತಕ್ಷಣ ರಾಜನು ಪ್ರೇಮಪಾಶಕ್ಕೆ ಸಿಲುಕಿದನು. ತನಗೆ ಅವಳನ್ನು ಮದುವೆ ಮಾಡಿಕೊಡಬೇಕೆಂದು ಮಂತ್ರಿಗಳ ಮೂಲಕ ಪ್ರಾರ್ಥಿಸಿದನು. ಒಪ್ಪುವುದಾದರೆ ತನ್ನ ಅರ್ಧ ರಾಜ್ಯವನ್ನು ಬಹುಮಾನವಾಗಿ ಕೊಡುವುದಾಗಿ ಕುಸುಮ ಶ್ರೇಷ್ಠಿಗೆ ಸೂಚಿಸಿದನು.

ಕುಸುಮ ಶ್ರೇಷ್ಠಿಯು ಅದನ್ನು ನಿರಾಕರಿಸಿ ಶಾಸ್ತ್ರಗಳು ಇದಕ್ಕೆ ವಿರುದ್ಧವಾಗಿವೆ ಎಂದು ಹೇಳಿದನು. ಆಗ ರಾಜನು ಅವನ ಪಟ್ಟಣವನ್ನು ನಾಶ ಮಾಡಿ ಅವನನ್ನು ಖೈದಿಯಾಗಿ ತೆಗೆದುಕೊಂಡು ಹೋಗುವುದಲ್ಲದೆ ವಾಸವಿಯನ್ನು ಬಲತ್ಕಾರವಾಗಿ ಹೊತ್ತುಕೊಂಡು ಹೋಗಿ ಮದುವೆಯಾಗುವುದಾಗಿ ಹೆದರಿಸಿದನು. ಶ್ರೇಷ್ಠಿ ಮತ್ತು ಅವನ ಸಹ ಬಂಧುಗಳು ಬಹುಕಾಲ ಚರ್ಚೆ ಮಾಡಿ ಈ ಕೂಡಲೇ ದುಡುಕಿ ಉತ್ತರ ಕೊಡುವುದು ಸರಿಯಲ್ಲ. ಏಕೆಂದರೆ ವಿಷ್ಣುವರ್ಧನನು ಅಜೇಯವಾದ ಸೈನ್ಯದೊಡನೆ ಬಂದು ಊರಿನ ಹೊರವಲಯದಲ್ಲಿದ್ದಾನೆ. ಅವನ ಮನಸ್ಸೀಗ ಸ್ಥಿಮಿತದಲ್ಲಿಲ್ಲ. ಕಾಲ ತಳ್ಳುವುದೇ ಇದಕ್ಕೆ ತಕ್ಕ ಉಪಾಯ. ಅದೂ ಅಲ್ಲದೆ ರಾಜನಿಗೆ ಹೆಣ್ಣು ಕೊಡುವ ವಿಷಯ ಕುಲಕ್ಕೆ ಸಂಬಂಧಿಸಿದ ಪ್ರಶ್ನೆಯಾಗಿದೆ. ಏಳುನೂರ ಹದಿನಾಲ್ಕು ಗೋತ್ರ ಬಾಂಧವರನ್ನೇ ಕರೆದು ಅವರ ಅಭಿಪ್ರಾಯದಂತೆ ನಡೆಯುವುದೇ ವಿಹಿತ ಎಂಬ ತೀರ್ಮಾನಕ್ಕೆ ಬಂದರು. ಕೂಡಲೇ ಮಂತ್ರಿಯನ್ನು ಬರಮಾಡಿಕೊಂಡು ರಾಜನಿಗೆ ಅಮೂಲ್ಯವಾದ ರತ್ನಾಭರಣಗಳನ್ನು, ವಸ್ತ್ರಭೂಷಣಗಳನ್ನು ಕಾಣಿಕೆಯಾಗಿತ್ತು ಸಾಮ್ರಾಟರು ತನ್ನ ಕುಮಾರಿಯನ್ನು ಬಯಸಿದುದು ನನ್ನ ಪುಣ್ಯವೇ ಸರಿ. ಆದರೆ ಅದು ಮತಧರ್ಮದ ಪ್ರಶ್ನೆಯಾಗಿದೆ. ಬಂಧು ಬಾಂಧವರನ್ನೆಲ್ಲ ಕರೆಸಿ ವಿಚಾರ ಮಾಡಿ ನಿರ್ಧರಿಸಬೇಕಾಗಿದೆ. ಆದುದರಿಂದ ಪ್ರಭುಗಳು ನಮ್ಮ ಪರವಾಗಿ ಸ್ವಲ್ಪ ಕಾಲಾವಕಾಶವನ್ನು ಕೊಡುವಂತೆ ಪ್ರಾರ್ಥಿಸಬೇಕೆಂದು ಮಂತ್ರಿಯಲ್ಲಿ ಬೇಡಿದರು. ಇಂಥ

ಗಹನವಾದ ವಿಷಯಗಳಲ್ಲಿ ಆತುರ ಸಲ್ಲದು ಎಂದು ಮಂತ್ರಿಗಳಿಗೂ ತಿಳಿದಿತ್ತು. ಅವನು ವಿಷ್ಣುವರ್ಧನನ ಸಾಹಸ, ಪರಾಕ್ರಮ ಮತ್ತು ವೈಭವಗಳನ್ನು ಹೊಗಳಿ ವಾಸವಾಂಬೆಯನ್ನು ಕೊಡುವುದು ಒಳಿತೆಂದು ಹೇಳಿ, ಹಿಂದಕ್ಕೆ ಹೋಗಿ ರಾಜನಿಗೆ ಬುದ್ಧಿವಾದವನ್ನು ಹೇಳಿದನು. ದುಡುಕಿದರೆ ಧರ್ಮಚ್ಯುತಿ, ವಿಶ್ವಾಸದ್ರೋಹ, ಬಂಧುತ್ವಕ್ಕೆ ನಾಶ, ಮಿಗಿಲಾಗಿ ವಾಸವಿ ಕೈಬಿಟ್ಟು ಹೋಗಬಹುದೆಂದು ವಿವರಿಸಿದನು. ವಿಷ್ಣುವರ್ಧನನಿಗೂ ಅವನ ಮಾತು ಸರಿ ಎಂದು ತೋರಿತು. ವಾಸವಿಯನ್ನೇ ಚಿಂತಿಸುತ್ತ ತನ್ನ ರಾಜಧಾನಿಗೆ ಪ್ರಯಾಣ ಮಾಡಿದ.

ಕುಸುಮಶ್ರೇಷ್ಠಿಯು ಹದಿನೆಂಟು ನಗರಗಳಲ್ಲಿ ವಾಸವಾಗಿದ್ದ ಏಳುನೂರು ಹದಿನಾಲ್ಕು ಗೋತ್ರಜರನ್ನೆಲ್ಲ ಕರೆಸಿ ಸಭೆ ಸೇರಿಸಿದನು. ಸಭೆಯಲ್ಲಿ ಅಧಿರಾಜನು ವಾಸವಿಯನ್ನು ಮದುವೆ ಮಾಡಿಕೊಡಲು ಕೇಳಿದ ವಿಷಯವನ್ನು ವಿವರಿಸಿದನು. ಕುಲಬಾಂಧವರು ಬಹಳವಾಗಿ ಆಲೋಚಿಸಿದರು. ಬಹಳ ಕಾಲ ಸಾಧಕ-ಬಾಧಕಗಳನ್ನು ಕುರಿತು ಚರ್ಚಿಸಿದರು. ಚರ್ಚೆಯು ಮುಂದುವರಿದಂತೆ ಸಭೆಯಲ್ಲಿ ಇದ್ದವರಲ್ಲಿಯೇ ಎರಡು ಪಂಗಡಗಳಾದವು. ಮೊದಲ ಗುಂಪಿನಲ್ಲಿ ಆರುನೂರ ಹನ್ನೆರಡು ಗೋತ್ರದವರು ಲೌಕಿಕ ದೃಷ್ಟಿಯುಳ್ಳವರಾಗಿ ಅನುಚಾನವಾಗಿ ಬಂದ ಧರ್ಮವನ್ನು ಬಿಡಬಾರದು. ಅಧಿರಾಜನಿಗೆ ವಾಸವಿಯನ್ನು ಕೊಟ್ಟು ಮದುವೆಯನ್ನು ಮಾಡಬೇಕು ಎಂದರು. ಎರಡನೆಯ ಗುಂಪಿನ ನೂರಎರಡು ಗೋತ್ರದವರು ವಾಸವಿಯನ್ನು ಶಾಸ್ತ್ರ ವಿರುದ್ಧವಾಗಿ ರಾಜನಿಗೆ ಕೊಟ್ಟು ಮದುವೆಯನ್ನು ಮಾಡಬಾರದು ಎಂದರು. ಬಹುಸಂಖ್ಯಾತ ಗೋತ್ರದವರ ಮಾತಿಗೆ ಮನ್ನಣೆ ಬರಲಿಲ್ಲ. ಅವರಿಗೆ ಕೋಪ ಬಂದಿತು. ಸಭೆಯನ್ನು ಬಿಟ್ಟು ಹೋದರು. ಪೆನುಗೊಂಡೆಯಲ್ಲಿ ಏನೇನು ನಡೆಯಿತೆಂಬುದು ಚಾರರ ಮೂಲಕ ವಿಷ್ಣುವರ್ಧನನಿಗೆ ತಿಳಿಯಿತು. ಅವನಿಗೆ ಬಹಳ ಕೋಪ ಬಂದಿತು. ತನ್ನ ಇಷ್ಟಕ್ಕೆ ವಿರುದ್ಧವಾಗಿ ನಡೆಯುವ ಇವರಿಗೆ ಎಷ್ಟು ಧೈರ್ಯ, ನನ್ನ ಶಕ್ತಿಯನ್ನು ಇವರಿಗೆ ಅರ್ಥೈಸುತ್ತೇನೆ ಎಂದು ಗುಡುಗಿದನು. ಕೂಡಲೇ ಸೈನ್ಯವನ್ನು ಸಿದ್ಧಪಡಿಸಿ ಪೆನುಗೊಂಡೆಯ ಮೇಲೆ ಹೊರಡಲು ಅಪ್ಪಣೆ ಇತ್ತನು. ಇದರ ನಾಯಕತ್ವವನ್ನು ತಾನೇ ವಹಿಸಿದನು. ಯಾರು ಎಷ್ಟು ತಡೆದರೂ ಪ್ರಯೋಜನವಾಗಲಿಲ್ಲ. ವಿಷ್ಣುವರ್ಧನನು ಬಿರುಗಾಳಿಯಂತೆ ಬರುತ್ತಿರುವ ಸಮಾಚಾರವು ಕುಸುಮಶ್ರೇಷ್ಠಿಗೆ ತಿಳಿಯಿತು. ಕೂಡಲೇ ಮಂತ್ರಿಗಳ, ಸೈನ್ಯಾಧಿಕಾರಿಗಳ ಸಭೆ ಕರೆದು ಸಮಾಲೋಚನೆ ಮಾಡಿದನು. ಸೈನ್ಯವನ್ನು ಸಜ್ಜಾಗಿಸಿ ನಗರ ರಕ್ಷಣೆಗೆ ಎಲ್ಲ ವ್ಯವಸ್ಥೆಯನ್ನು ಮಾಡಿದನು.

ಈ ವಿಷಯದಲ್ಲಿ ಕುಸುಮಶ್ರೇಷ್ಠಿಗೆ ತನ್ನ ಮಗಳ ಅಭಿಪ್ರಾಯವನ್ನು ಕೇಳುವುದು ಸೂಕ್ತ ಎನ್ನಿಸಿತು. ಅವಳನ್ನು ಬರಮಾಡಿಕೊಂಡು ನಡೆದುದನ್ನೆಲ್ಲಾ ವಿವರಿಸಿ ಹೇಳಿದನು. ವಾಸವಿ ಎಲ್ಲವನ್ನು ಕೇಳಿದಳು. ಬಹುಕಾಲ ಆಳವಾಗಿ ಆಲೋಚಿಸಿದಳು. ಅನಂತರ ತನ್ನ ತಂದೆಯವರನ್ನು ಕುರಿತು

ಬಹುಸಂಖ್ಯಾತ ಗೋತ್ರಜರು ರಾಜ್ಯ ಬಿಟ್ಟು ಹೋದುದರಲ್ಲಿ ತಪ್ಪಿಲ್ಲ. ಬದಲಾಗುತ್ತಿರುವ ಕಾಲಕ್ಕೆ ಹೊಂದಲಾರದವರು ಅವರು. ಅವರಿಗೆ ಅದೇ ಸರಿ ಎನ್ನಿಸಿದೆ. ಅಡ್ಡಿ ಮಾಡಬೇಡಿ. ದೇಶ ವಿಶಾಲವಾಗಿದೆ. ಎಲ್ಲಿಯಾದರೂ ಸುಖವಾಗಿರಲಿ ಎಂದಳು. ಆಮೇಲೆ ನಮ್ಮ ರಾಜ್ಯದ ಮೇಲೆ ಅಧಿರಾಜನು ದಂಡೆತ್ತಿ ಬರಬಹುದೇ? ನಿನಗೆ ಒಪ್ಪಿಗೆ ಇರದಿರುವಾಗ ಬಲತ್ಕಾರವಾಗಿ ನಿನ್ನನ್ನು ಅವನಿಗೆ ಒಪ್ಪಿಸಬಹುದೇ ಎಂದು ಕುಸುಮಶ್ರೇಷ್ಠಿ ಕೇಳಿದನು. ವಾಸವಿಯು ಮುಗುಳುನಗೆ ಸೂಸುತ್ತಾ ನೀನೇನು ಅಜ್ಞಾನಿಯಲ್ಲ. ದೇಶ ರಕ್ಷಣೆ, ಧರ್ಮರಕ್ಷಣೆ ಮತ್ತು ಪ್ರಜಾಹಿತವೆ ರಾಜನ ಕರ್ತವ್ಯಗಳಾಗಿವೆ. ವಿಷ್ಣುವರ್ಧನನು ಮಾಡುತ್ತಿರುವುದು ತಪ್ಪು ಕೆಲಸ. ತಾನು ಒಂದು ಹೆಣ್ಣನ್ನು ಮದುವೆಯಾಗಬೇಕೆಂಬ ಆಸೆಗೆ ಯುದ್ಧವನ್ನೇ ಮಾಡಿ ಸಾವಿರಾರು ಜನರಿಗೆ ಸಾವು ನೋವು ಬಡಿಸಲು ಸಿದ್ಧನಾಗಿದ್ದಾನೆ. ತಾವು ಬಯಸಿದ ಕನ್ಯೆಗೆ ತನ್ನನ್ನು ಮದುವೆಯಾಗಲು ಒಪ್ಪಿಗೆ ಇದೆಯೇ ಇಲ್ಲವೇ ಎಂದು ತಿಳಿಯುವಷ್ಟು ಅವನಿಗೆ ಸೌಜನ್ಯವಿಲ್ಲ ಎಂದು ಹೇಳಿದಳು. ದಿಕ್ಕು ತೋಚದೆ ನಿಂತಿದ್ದ ಅಣ್ಣ ವಿರೂಪಾಕ್ಷನಿಗೂ ನಿನ್ನ ಕರ್ತವ್ಯವನ್ನು ನೀನು ಮಾಡು, ನನ್ನ ಬಗೆಗೆ ಆಲೋಚಿಸಬೇಡ ಎಂದು ಸಮಾಧಾನಪಡಿಸಿದಳು.

ಅಷ್ಟರಲ್ಲಿ ರಾಜನು ಅನೇಕ ರಾಯಭಾರಿಗಳನ್ನು ಕಳುಹಿಸಿದನು. ಅವರು ವೈಶ್ಯರ ಸದಾಚಾರ, ದಾನ ಧರ್ಮ, ಪರೋಪಕಾರ ಬುದ್ಧಿಗಳನ್ನು ಕಂಡು ಆಶ್ಚರ್ಯ ಸಂತೋಷ ಹೊಂದಿ ಹಿಂದಿರುಗದೆ ಅಲ್ಲಿಯೇ ನಿಂತರು. ರಾಯಭಾರಿಗಳು ಹಿಂದಿರುಗದಿದ್ದಾಗ ಕೆಲವು ಸೇನೆಯನ್ನು ಕಳುಹಿಸಿದನು. ಆ ವೈಶ್ಯರ ಪಟ್ಟಣಗಳಿಗೆ ದಾಳಿ ಇಟ್ಟ ಅವರೂ ವೈಶ್ಯರ ಯೋಗ್ಯತೆಯನ್ನು ಗಮನಿಸಿ ಮುಗ್ಧರಾಗಿ ಅವರನ್ನು ಆಶ್ರಯಿಸುವುದು ಒಳ್ಳೆಯದು, ಕಾಮವಶನಾದ ರಾಜನ ಸೇವೆಗಿಂತ ಇದು ಮೇಲೆಂದು ಪೆನುಗೊಂಡೆಯಲ್ಲಿಯೇ ಉಳಿದರು. ಅವರಿಗೂ ಅವರ ವಂಶಜರಿಗೂ ವೈಶ್ಯರು ಅಭಯವನ್ನಿತ್ತರು. (ಅಂಥ ಭಟರ ಸಂತತಿಯವರೇ ಇಂದಿನ ವೀರಮುಷ್ಠಿಗಳು. ಅವರು ವಾಸವಿಯೊಂದಿಗೆ ಅಗ್ನಿಪ್ರವೇಶ ಮಾಡಿದ ೧೦೨ ಗೋತ್ರದವರ ಚಿಹ್ನೆಯಾಗಿ ಅವರ ತಲೆಗಳ ಬೊಂಬೆಗಳಿಂದ ಆಲಂಕೃತರಾಗಿ ರಾಜರಿಂದ ವೈಶ್ಯರಿಂದ ನಡೆಯುವ ಶುಭಕಾರ್ಯಗಳಲ್ಲಿ ಬಂದು ಅವರಿಂದ ಸನ್ಮಾನಿತರಾಗುತ್ತಿದ್ದರು. ಈಗ ಅವರು ಬರುವುದು ಅಪರೂಪವಾಗಿದೆ.)

ವಿಷ್ಣುವರ್ಧನನು ಕೋಪಗೊಂಡವನಾಗಿ ಹೆಚ್ಚು ಸೈನ್ಯದೊಡನೆ ಪೆನುಗೊಂಡೆಯ ಮೇಲೆ ದಾಳಿ ಮಾಡಲು ಹೊರಟನು. ಈ ಸಮಾಚಾರವು ಕುಸುಮಶ್ರೇಷ್ಠಿಗೆ ತಿಳಿಯಿತು. ಪ್ರಾಣವನ್ನಾದರೂ ಬಿಟ್ಟು ಮಾನವನ್ನು ರಕ್ಷಿಸಬೇಕೆಂಬ ಆರ್ಯೋಕ್ತಿಯಂತೆ ೧೦೨ ಗೋತ್ರಜರು ವಾಸವಿ ಕನ್ಯೆಯೊಡನೆ ಅಗ್ನಿಪ್ರವೇಶ ಮಾಡಲು ನಿರ್ಧರಿಸಿದರು. ೧೦೨ ಅಗ್ನಿಕುಂಡಗಳು ಸ್ಥಾಪಿತವಾಗಿ ಅಗ್ನಿ ಪ್ರತಿಷ್ಠೆ ಮಾಡಿದರು. ವಾಸವಿಯು ಅಲ್ಲಿ ನೆರೆದಿದ್ದ ಕುಲಜನರನ್ನು ಕುರಿತು ಹೀಗೆ ಹೇಳಿದಳು: "ನಿಮ್ಮ ಮನೆಗಳಲ್ಲಿ ಲಕ್ಷ್ಮಿ ಸರಸ್ವತಿಯರು

ತಾಂಡವವಾಡುತ್ತಿರಲಿ, ಇಲ್ಲ ಎಂಬುದು ನಿಮ್ಮಲ್ಲಿ ಇಲ್ಲವಾಗಲಿ, ದಾನಧರ್ಮ, ಪರೋಪಕಾರ ದೈವಭಕ್ತಿ, ದೇಶಭಕ್ತಿ, ದೀನರಕ್ಷಣೆ, ಅತಿಥಿ ಅಭ್ಯಾಗತ ಪೂಜೆಗಳಲ್ಲಿ ನಿಮ್ಮ ಶ್ರದ್ಧೆ ಹೆಚ್ಚಾಗಲಿ. ವಿದ್ಯೆ ವಾಣಿಜ್ಯಗಳಲ್ಲಿ ನಿಮ್ಮ ಹೆಸರು ವಿಶ್ವವ್ಯಾಪಿಯಾಗಲಿ. ಸರ್ವವಿಧವಾದ ರಾಜಸನ್ಮಾನಗಳಿಗೆ ನೀವು ಪಾತ್ರರಾಗಬೇಕು. ನಿಮ್ಮೊಡನೆ ರಾಜಾಧಿರಾಜರು ಪ್ರಕಾಶಿಸಲಿ, ನಿಮ್ಮೊಡನೆ ಪಂಡಿತರು, ಕವೀಶ್ವರರು ಜಗದ್ಗುರು ಪ್ರಾಯಜ್ಞಾನ ಸಮುದ್ರರು ಹೆಚ್ಚಾಗಿ ಪ್ರಕಾಶಿಸಲಿ, ಯಜ್ಞ ಯಾಗಾದಿ ಷಟ್ಕರ್ಮ ನಿರತರಾಗಿ ಧರ್ಮಧರಣ ದೀಕ್ಷಾಬದ್ಧರಾಗಿ ನನ್ನನ್ನು ವಾಸವಿ ಕನ್ಯಕಾ ಪರಮೇಶ್ವರಿ ಎಂಬುದಾಗಿ ಕರೆಯಿರಿ ಜಗದಾದ್ಯಂತ ಹೆಸರು ಗಳಿಸುತ್ತೇನೆ" ಎಂದು ಹೇಳಿ ಅಗ್ನಿಪ್ರವೇಶ ಮಾಡುತ್ತಿರುವಾಗ ವಿರೂಪಾಕ್ಷನ ನಾಯಕತ್ವದಲ್ಲಿ ಬಾಲನಾಗರು, ಒಂದು ದ್ವಾರದಿಂದ ಪುರ ಪ್ರವೇಶ ಮಾಡುತ್ತಿದ್ದ ಸೈನ್ಯವನ್ನು ಎದುರಿಸಿ ಓಡಿಸಿದರು.

ಮತ್ತೊಂದು ದ್ವಾರದಿಂದ ಪುರ ಪ್ರವೇಶ ಮಾಡಿದ ವಿಷ್ಣುವರ್ಧನನು ಅಗ್ನಿಕುಂಡಗಳಲ್ಲಿ ಬೆಂದು ಬಿದ್ದಿದ್ದ ಸ್ತ್ರೀ ಪುರುಷರನ್ನು ನೋಡಿ ತಲೆಯೊಡೆದು ಮರಣಿಸಿದ. ಪೆನುಗೊಂಡೆ ಪ್ರಾಂತ್ಯದವರಿಗೆ ಸೈನಿಕರು ತೊಂದರೆ ಕೊಟ್ಟಿದ್ದರಿಂದ ಪೂರ್ವಜರು ಅಗ್ನಿಪ್ರವೇಶ ಮಾಡಿದುದರಿಂದ ತಮಗೂ ಕಷ್ಟ ಬರಬಹುದೆಂದು ಉಳಿದವರು ಕಾನನವನ್ನು ಪ್ರವೇಶ ಮಾಡಿದರು. ಗೂಢಾಚಾರದಿಂದ ಕಷ್ಟಗಳಾಗಬಹುದೆಂದು ಭಾವಿಸಿ ಋಷಿ ಗೋತ್ರಗಳಿಗೆ ಬದಲಾಗಿ ಸಾಂಕೇತಿಕ ಗೋತ್ರನಾಮಗಳನ್ನು ಧರಿಸಿದಂತೆ ಕಂಡುಬರುತ್ತದೆ. ಈ ರೀತಿಯಾಗಿ ಬಾಲನಾಗರ ತಂದೆ ತಾಯಿಗಳು ಭಸ್ಮೀಭೂತರಾದರು.

ಮತ್ತೊಂದು ಐತಿಹ್ಯದ ಪ್ರಕಾರ ೧೦೨ ಗೋತ್ರಗಳಲ್ಲಿ ಒಬ್ಬರಿಗೆ ಸಂತಾನವಿರದುದರಿಂದ ಆ ಕುಟುಂಬಕ್ಕೆ ಲಾಭ ಎಂದು ಹೆಸರಿಟ್ಟು ವ್ಯಾಪಾರದಲ್ಲಿ ಅಳೆಯುವಾಗ ಒಂದು ಎಂಬುದಕ್ಕೆ ಬದಲಾಗಿ ಲಾಭ ಎಂದು ನಂತರ ಎರಡು ಎಂದು ಹೇಳುವುದು ರೂಢಿಯಾಗಲಿ ಎಂದು ನಿರ್ಣಯಿಸಿದರು. ವಿರೂಪಾಕ್ಷನನ್ನು ಮುಂದು ಮಾಡಿಕೊಂಡು ಪುರ ಪ್ರವೇಶ ಮಾಡಿದರು. ರಾಜ ನರೇಂದ್ರನು ಪುನಃ ರಾಜ್ಯಭಾರವನ್ನು ಅವನಿಗೆ ವಹಿಸಿಕೊಟ್ಟನು. ೧೦೨ ಗೋತ್ರದ ಕುಟುಂಬದವರು ಸತ್ತ ತಮ್ಮ ಹಿರಿಯರಿಗೆ ಉತ್ತರ ಕ್ರಿಯಾದಿಗಳನ್ನು ನಡೆಸಿ ಕಾಶಿ, ರಾಮೇಶ್ವರ ಮುಂತಾದ ಪುಣ್ಯಕ್ಷೇತ್ರಗಳನ್ನು ದರ್ಶಿಸಿ ವಾಸವಾಂಬೆಯ ಗೌರವಾರ್ಥವಾಗಿ ಪೆನುಗೊಂಡೆಯಲ್ಲಿ ಒಂದು ದೇವಾಲಯ ಕಟ್ಟಿಸಿದರು. ಆ ದೇವಾಲಯದಲ್ಲಿ ಅವಳ ಮೂರ್ತಿಯನ್ನು ಸ್ಥಾಪಿಸಿ ಅದನ್ನು ಪೂಜಿಸುತ್ತ ಬಂದರು. ಈ ದುರಂತ ಘಟನೆಗಳು ನಡೆಯಿತೆಂದು ಹೇಳಲಾಗುವ ನಿರ್ದಿಷ್ಟ ಸ್ಥಳಗಳನ್ನು ಈಗಲೂ ಪೆನುಗೊಂಡೆಯಲ್ಲಿ ತೋರಿಸುವರು. ವಿಷ್ಣುವರ್ಧನನು ತಂಗಿದ್ದ ತೋಟವೇ ಈಗಿನ ವನಂಪಲ್ಲಿಯಾಗಿದೆ ಎಂದು ಹೇಳುವರು. ಈಗ ಮುಚ್ಚಿ ಹೋಗಿರುವ ನಾಗಸಮುದ್ರದ ಕೆರೆಯ ಉತ್ತರ ಭಾಗದಲ್ಲಿ ವಾಸವಿಯು ಪ್ರವೇಶಿಸಿದ

ಅಗ್ನಿಕುಂಡ ಇದ್ದ ಸ್ಥಳ ಹಾಗೂ ಈ ಕೆರೆಯ ದಡದಲ್ಲಿ ಉಳಿದ ೧೦೨ ಗೋತ್ರಗಳ ಅಗ್ನಿಕುಂಡಗಳು ಇದ್ದವೆಂದು ಹೇಳುವರು. ಈ ಕೆರೆಯಲ್ಲೀಗ ಸಾಗುವಳಿ ಮಾಡುವರು. ಇದು ನಗರೇಶ್ವರಸ್ವಾಮಿಯ ದೇವಾಲಯದ ವಾಯುವ್ಯ ದಿಕ್ಕಿನಿಂದ ಸುಮಾರು ಎರಡು ಫರ್ಲಾಂಗ್ ದೂರದಲ್ಲಿದೆ. ವಾಸವಿಯು ಅಗ್ನಿಪ್ರವೇಶ ಮಾಡಿದ ಮಾರನೆಯ ದಿನವೇ ಅಗ್ನಿಕುಂಡದ ಬೂದಿಯಲ್ಲಿ ಅವಳ ಚಿನ್ನದ ಮೂರ್ತಿಯೊಂದು ಸಿಕ್ಕಿತೆಂದು ನಂಬಿಕೆ. ಅದನ್ನು ನಗರೇಶ್ವರ ದೇವಾಲಯದಲ್ಲಿ ಸ್ವಾಮಿಯ ಪಕ್ಕದಲ್ಲಿಯೇ ಇರಿಸಿದ್ದರು. ಅನೇಕ ವರ್ಷಗಳು ಕಳೆದ ನಂತರ ಭಕ್ತನೊಬ್ಬನ ಕನಸಿನಲ್ಲಿ ಬಂದು ಶಿಲಾವಿಗ್ರಹವನ್ನು ಪ್ರತಿಷ್ಠಿಸುವಂತೆ ಅಪ್ಪಣೆ ಮಾಡಿದಳಂತೆ. ಅದರಂತೆ ಚಿನ್ನದ ವಿಗ್ರಹಕ್ಕೆ ಪ್ರತಿಯಾಗಿ ಶಿಲಾವಿಗ್ರಹವನ್ನಿಟ್ಟರೆಂಬ ಇನ್ನೊಂದು ಪ್ರತೀತಿಯೂ ಇದೆ. (ಕನ್ನಡ ಜಾನಪದ ವಿಶ್ವಕೋಶ, ಪು.೫೬೦)

**ಸಾಂಸ್ಕೃತಿಕ ನಾಯಕಿ ವಾಸವಿಗೆ ಸಂಬಂಧಿಸಿದ ಐತಿಹ್ಯದಂತೆ,** ಪ್ರಾಚೀನ ಕಾಲದಲ್ಲಿ ಕೋಮಟಿಗಳು ನೆಲೆಸಿದ ಊರುಗಳಲ್ಲಿದ್ದ ದೇವಾಲಯಗಳಿಗೆ ಒಬ್ಬ ಅರ್ಚಕಿಯನ್ನು ನಿಯಮಿಸುವ ಸಂಪ್ರದಾಯವಿದ್ದಿತು. ಆಕೆ ಸಾಮಾನ್ಯವಾಗಿ ಆ ಊರಿನ ಪೆದ್ದಶೆಟ್ಟಿ ಅಥವಾ ನಗರ ಶ್ರೇಷ್ಠಿಯ ಹಿರಿಯ ಮಗಳೇ ಆಗುತ್ತಿದ್ದಳು. ವಿಷ್ಣುವರ್ಧನನು ಪೆನುಗೊಂಡೆಗೆ ಬಂದಾಗ ಆ ಊರಿನ ರಾಜನಾದ ಕುಸುಮ ಶ್ರೇಷ್ಠಿಯು ರಾಜಧಾನಿಗೆ ಬಂದ ವಿಷ್ಣುವರ್ಧನನ್ನು ತಮ್ಮ ದೇವಾಲಯಕ್ಕೆ ಕರೆದುಕೊಂಡು ಹೋದನು. ಅಲ್ಲಿ ಅರ್ಚಕಿಯಾಗಿದ್ದ ವಾಸವಿಯು ಯೋಗಿನಿಯ ಪೂಜೆ ಮಾಡಿ ತೀರ್ಥ ಪ್ರಸಾದವನ್ನು ವಿಷ್ಣುವರ್ಧನನಿಗೆ ಕೊಟ್ಟಳು. ಅಪೂರ್ವ ರೂಪರಾಶಿಯಾದ ವಾಸವಿಯನ್ನು ಕಂಡ ಅವನು ಅವಳಲ್ಲಿ ಮೋಹಿತನಾಗಿ ಮದುವೆ ಮಾಡಿಕೊಡಬೇಕೆಂದು ಕೋರಿದನು. ದೇವಿಪೂಜೆಗೆ ಅಂಕಿತಳಾಗಿರುವ ಕನ್ಯೆಯನ್ನು ಇತರರಿಗೆ ಕೊಡುವುದು ನ್ಯಾಯ ವಿರುದ್ಧವೆಂದೂ, ಆತ್ಮಗೌರವಕ್ಕೆ ಭಂಗವೆಂದೂ ನಿರ್ಣಯಿಸಿದರು. ಆದರೆ ೬೧೨ ಗೋತ್ರದವರು ವಿಶೇಷ ಶಾಸ್ತ್ರಾಂಗ ಬಂದಾಗ ಸಾಮಾನ್ಯ ಶಾಸ್ತ್ರಾಂಶವನ್ನೂ ಬಿಡಬಹುದೆಂದರು. ೧೦೨ ಗೋತ್ರದವರು ಆಗಬಾರದೆಂದು ಅವಳೊಡನೆ ಅಗ್ನಿಪ್ರವೇಶ ಮಾಡಿದರು.

**ನಿಜಒಕ್ಕಲಿಗ :** ಹೆಳವರು ತಮ್ಮ ಮೂಲವನ್ನು ಗುರುತಿಸಿಕೊಳ್ಳುವಲ್ಲಿ ಒಂದು ಕತೆ ಇದೆ. ಅವರು ತಾವೂ ಒಕ್ಕಲಿಗರ ಒಂದು ವರ್ಗವೆಂದು ತಿಳಿದುಕೊಂಡಿದ್ದಾರೆ. ಕುರುಹೊಳೆ ಎಂಬ ಹೊಳೆಯ ತೀರದ ಗ್ರಾಮದ ಗೌಡಗಳು ಹನ್ನೆರಡು ವರ್ಷ ಬದುಕಿ ಬಾಳಿ ನೂರೊಂದು ಕುಲ ನೂರೊಂದು 'ಪಣಕಟ್ಟು' ಹಂಚಿಕೊಳ್ಳಬೇಕೆಂದು ನಿರ್ಧರಿಸಿ ನಿಂತಿದ್ದವನು 'ನಿಜಒಕ್ಕಲಿಗ'ನಾದನು. ಹೀಗೆ ಒಕ್ಕಲಿಗರಲ್ಲೇ ಹಲವಾರು ವರ್ಗಗಳು ಉಗಮವಾದವೆಂದು ತಿಳಿದು ಬಂದಿದೆ. ಅವರಲ್ಲಿದ್ದ ಹೆಳವನೊಬ್ಬನ ಕುಲ, ಮುಂದೆ 'ಹೆಳವಕುಲ'ವಾಯಿತು.

**ಮೊರಸು ಒಕ್ಕಲಿಗ** : ಮೊರಸು ಒಕ್ಕಲಿಗರನ್ನು ರೆಡ್ಡಿ-ಒಕ್ಕಲಿಗ ಮೊರಸುಗಳೆಂದೂ ಕರೆಯುತ್ತಾರೆ. ಒಂದು ವಿವರಣೆಯ ಪ್ರಕಾರ ಇವರ ಪೂರ್ವಜರು ತಮಿಳುನಾಡಿನಲ್ಲಿರುವ ಕಂಚಿಯ ಬಳಿಯಲ್ಲಿ ಮೊರಸುನಾಡು ಸ್ಥಳಕ್ಕೆ ಸೇರಿದವರಾದ್ದರಿಂದ ಇವರಿಗೆ ಮೊರಸುಗಳೆಂಬ ಹೆಸರಿದೆ. ಇವರು ಕೋಲಾರ, ಬೆಂಗಳೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಐತಿಹ್ಯದ ಪ್ರಕಾರ ಭಸ್ಮಾಸುರನಿಗೆ ಕೃಷ್ಣನಿರುವ ಜಾಗವನ್ನು ತನ್ನ ತೋರುಬೆರಳಿನಿಂದ ತೋರಿಸಿದ ಒಕ್ಕಲಿಗನಿಗೆ ಕೃಷ್ಣನು ಶಾಪ ನೀಡಿದನು. ಅದರಂತೆ ಆತನ ಸಂತತಿಗೆ ತೋರುಬೆರಳನ್ನು ಭೈರವೇಶ್ವರನಿಗೆ ಬಲಿಕೊಡುವ ಪದ್ಧತಿ ಆಚರಣೆಗೆ ಬಂತು.

**ರೆಡ್ಡಿ ಒಕ್ಕಲಿಗ** : ಒಕ್ಕಲಿಗರ ಒಂದು ಪಂಗಡವಾದ ರೆಡ್ಡಿಗಳು, ರೆಡ್ಡಿ, ಕಾಪು, ಕಾಪುಲುಗಳೆಂಬ ಹೆಸರುಗಳಲ್ಲಿ ಕೋಲಾರ, ಬಳ್ಳಾರಿ, ರಾಯಚೂರು, ಗುಲ್ಬರ್ಗಾ ಮತ್ತು ಬೀದರ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಬೆಂಗಳೂರು ಜಿಲ್ಲೆಯ ದಕ್ಷಿಣ ಭಾಗಗಳಲ್ಲಿ ತುಮಕೂರು ಮತ್ತು ಕೋಲಾರಗಳಲ್ಲಿ ಬಹಳ ಹಿಂದಿನಿಂದಲೂ ಇದ್ದಾರೆ. ಇವರ ಪೂರ್ವಜರು ಸುಮಾರು ನೂರೈವತ್ತು ವರ್ಷಗಳ ಹಿಂದೆ ಗುಂಟೂರಿನಿಂದ ಮೂರು ಜನ ಸಹೋದರರು ವಲಸೆ ಬಂದರು. ಒಂದು ಕಾಲದಲ್ಲಿ ಇವರು ನೇಗಿಲಮನೆ, ಬಿಲ್ಲೆಮನೆ, ಉರಗನೆಟ್ಟಿಮನೆ, ನಡುವಿನಮನೆ ಇತ್ಯಾದಿ ಬೆಡಗುಗಳನ್ನು ಹೊಂದಿದ್ದರಾದರೂ ಅವು ಈಗ ಅಸ್ತಿತ್ವದಲ್ಲಿಲ್ಲ. ಇವರೊಂದಿಗೆ ಕುರುಬರು ತಮ್ಮ ಅನನ್ಯತೆಯನ್ನು ಗುರುತಿಸಿಕೊಳ್ಳುತ್ತಾರೆ.

**ರೆಡ್ಡಿ ಮತ್ತು ಕುರುಬರ ಸಂಬಂಧದ ಬಗ್ಗೆ ಪ್ರಚಲಿತವಿರುವ ಐತಿಹ್ಯದ ಪ್ರಕಾರ** ಕುರುಬರು ಹೆಂಡತಿಯ ಮಕ್ಕಳು ಹಾಗೂ ರೆಡ್ಡಿಗಳು ಗೌಡನ ಕೂಡಿಕೆಯಾದವಳ ಮಕ್ಕಳು ಎಂಬ ಐತಿಹ್ಯವಿದೆ. ಆದ್ದರಿಂದಲೇ ಹೆಂಡತಿಯ ಮಕ್ಕಳಾದ ಕುರುಬರಿಗೆ ಹತ್ತಿನೂಲಿನ ಕಂಕಣ, ಬತ್ತದ ಅಕ್ಷತೆ, ವಸ್ತ್ರದ ಹೊದಿಕೆ ಆಚರಣೆಗಳಲ್ಲಿ ವಡೇರಪ್ಪನ ಮಾರ್ಗದರ್ಶನದ ಹಕ್ಕುಗಳು ದೊರೆತವು. ಕೂಡಿಕೆಯಾದವಳ ಮಕ್ಕಳಾದ ರೆಡ್ಡಿಗಳಿಗೆ ಕುರಿಉಣ್ಣೆಯ ಕಂಕಣ, ಜೋಳದ ಅಕ್ಷತೆ, ಕಂಬಳಿಯ ಹೊದಿಕೆ ಮತ್ತು ಆಚರಣೆಗಳಿಗೆ ಅರ್ಚಕನ ಮಾರ್ಗದರ್ಶನದ ಹಕ್ಕುಗಳು ಲಭಿಸಿದವು ಎಂದು ಐತಿಹ್ಯಕ್ಕೆ ನಿದರ್ಶನವನ್ನು ಕೊಡುತ್ತಾರೆ.

ಮತ್ತೊಂದು ಅಭಿಪ್ರಾಯದಂತೆ, ಮೊದಲಿಗೆ ಕುರುಬರು ಕಾಪುಗಳಾಗಿದ್ದರು. ಇವರ ಪೂರ್ವಜರಾದ ಮಾಸಿರೆಡ್ಡಿ ಮತ್ತು ನೀಲಮ್ಮ ಕಟ್ಟಿಗೆ ಮಾರಿ ಜೀವಿಸುತ್ತಿದ್ದರು. ಇವರಿಗೆ ಆರು ಜನ ಗಂಡು ಮಕ್ಕಳು. ಅವರ ಬಡತನವನ್ನು ಕಂಡು ಕನಿಕರಿಸಿದ ಶಿವನು ಜಂಗಮ ವೇಷ ಧರಿಸಿ ಇವರ ಮನೆಗೆ ಭಿಕ್ಷಕ್ಕೆ ಬಂದನು. ಆಗ ನೀಲಮ್ಮನಿಗೆ ವಿಭೂತಿ ಕೊಟ್ಟು ಉಂಡಾಲ ಪದ್ಮಣ್ಣನೆಂಬ ಮಗನು ಹುಟ್ಟಿದ ಮೇಲೆ

ನಿಮಗೆ ಏಳಿಗೆ ಆಗುತ್ತದೆ ಎಂದು ಹೇಳಿದನು. ಪದ್ಮಣ್ಣ ಆರು ಜನ ಸಹೋದರರಂತಲ್ಲ. ಅವನು ಎಂದಿಗೂ ಜಮೀನಿನ ಕೆಲಸಕ್ಕೆ ಹೋಗುತ್ತಿರಲಿಲ್ಲ. ಆದ್ದರಿಂದ ಇವನನ್ನು ಮುಗಿಸಲು ಅಣ್ಣಂದಿರು ಹುತ್ತದ ಮೇಲೆ ಕಟ್ಟಿಗೆ ಚೂರುಗಳನ್ನು ಹಾಕಿ ಅದನ್ನು ಸುಡಲು ಇವನಿಗೆ ಹೇಳಿದರು. ಅದರೊಳಗಿನ ಹಾವು ಇವನನ್ನು ಕೊಲ್ಲುತ್ತದೆ ಎಂದು ಭಾವಿಸಿದರು. ಆದರೆ ಅದರಿಂದ ಹಾವಿನ ಬದಲು ದೊಡ್ಡ ಕುರಿ ಹಿಂಡು ಕಾಣಿಸಿಕೊಂಡಿತು. ಎಂದೂ ಕಾಣದ ಈ ಕರಿ ಪ್ರಾಣಿಗಳಿಂದ ಹೆದರಿದ ಉಂಡಾಲ ಪದ್ಮಣ್ಣ ಅಲ್ಲಿಂದ ಓಡತೊಡಗಿದ. ಆಗ ಶಿವನು ಪ್ರತ್ಯಕ್ಷನಾಗಿ ಅವುಗಳನ್ನು ಇವನ ಜೀವನ ನಿರ್ವಹಣೆಗಾಗಿಯೇ ಸೃಷ್ಟಿಸಲಾಗಿದೆಯೆಂದೂ ಅವನು ಅವನ್ನು ಸಾಕಿ, ಅವುಗಳ ಹಾಲಿನಿಂದ ಜೀವಿಸಬೇಕೆಂದೂ ಹೇಳಿದನು. ಶಿವನು ಇವನಿಗೆ ಹಾಲು ಕರೆಯುವುದನ್ನೂ ಕಾಯಿಸುವುದನ್ನೂ ಹೇಳಿಕೊಟ್ಟು, ಬೆಂಕಿ ತರಲು ರಾಕ್ಷಸರಿರುವ ದೂರದೂರಿಗೆ ಕಳುಹಿಸಿಕೊಟ್ಟನು. ಈ ರಾಕ್ಷಸರು ಒಂದು ಬ್ರಾಹ್ಮಣ ಹುಡುಗಿಯನ್ನು ಬಂಧನದಲ್ಲಿ ಇರಿಸಿಕೊಂಡಿದ್ದರು. ಇವಳು ಪದ್ಮಣ್ಣನನ್ನು ಪ್ರೇಮಿಸಿದಳು. ಶತ್ರು ನಾಶಕ್ಕಾಗಿಯೇ ತೋಡಿದ್ದ ಕಂದಕಗಳ ಮೇಲೆ ಹಾಸುಗೆ ಹಾಸಿಕೊಂಡು ಹೇಗೋ ಇವರಿಬ್ಬರು ರಾಕ್ಷಸರ ಹಿಡಿತದಿಂದ ಪಾರಾದರು. ತನ್ನ ಪ್ರಿಯಕರನನ್ನು ರಕ್ಷಿಸಲು ಆ ಹುಡುಗಿಯು ಇವನನ್ನು ಹಲ್ಲಿಯನ್ನಾಗಿ ಮಾರ್ಪಡಿಸಿದಳು. ನಂತರ ಅವನ ಕುರಿ ಹಿಂಡು ಇದ್ದ ಸ್ಥಳಕ್ಕೆ ಇಬ್ಬರೂ ಬಂದರು. ಅಲ್ಲಿ ಪದ್ಮಣ್ಣ ಇವಳನ್ನೂ ತನ್ನ ಜಾತಿಯವಳೇ ಆದ ಇನ್ನೊಬ್ಬಳನ್ನೂ ಮದುವೆಯಾದನು. ಇಬ್ಬರಿಗೂ ಗಂಡುಮಕ್ಕಳು ಹುಟ್ಟಿದರು. ಈ ಮಕ್ಕಳ ಮದುವೆಯಲ್ಲಿ ಕುರುಬ ಜಾತಿ ಹೆಂಡತಿಯ ಮಗನಿಗೆ ದಾರದ ಕಂಕಣವನ್ನೂ, ಬ್ರಾಹ್ಮಣ ಹೆಂಡತಿಯ ಮಗನಿಗೆ ಉಣ್ಣೆಯ ಕಂಕಣವನ್ನು ಕಟ್ಟಲಾಯಿತು. ಅಂದಿನಿಂದ ಕುರುಬ ಹೆಂಡತಿಯ ಮಗನ ಸಂತತಿಯವರಿಗೆ ಅತ್ತಿ (ಹತ್ತಿ) ಕಂಕಣದವರು ಎಂದೂ, ಬ್ರಾಹ್ಮಣ ಹೆಂಡತಿಯ ಮಗನ ಸಂತತಿಯವರಿಗೆ ಉಣ್ಣಿ (ಉಣ್ಣೆ) ಕಂಕಣದವರೆಂದೂ ಹೆಸರಾಯಿತು. ಎರಡನೆಯವರನ್ನು ಕೀಳು ಎಂದು ಭಾವಿಸಲಾಗುತ್ತದೆ. ಏಕೆಂದರೆ ಅವರು ಜಾತಿ ಮಿಶ್ರಣದಿಂದ ಹುಟ್ಟಿದವರು. (ಕನ್ನಡ ಜಾನಪದ ವಿಶ್ವಕೋಶ, ಪು.೫೭) ಕುರುಬರಿಗೆ ಹಾಲು ಮತದವರು ಎಂದೂ ಹೆಸರಿದೆ. ಏಕೆಂದರೆ ರೇವಣ ಸಿದ್ಧೇಶ್ವರನು ತಮ್ಮನ್ನು ಹಾಲಿನಿಂದ ಸೃಷ್ಟಿಸಿದನೆಂದು ಅವರಿಗೆ ನಂಬಿಕೆಯಿದೆ.

**ಕುರುಬರ ಹಾಲುಮತದ ಮೂಲವನ್ನು ಕುರಿತಂತೆ** ಒಮ್ಮೆ ಜಾಂಬ ಋಷಿಯು ಶಿವ-ಪಾರ್ವತಿಯರಿಗೆ ನಮಸ್ಕರಿಸಿದ. ಅವನ ಭಕ್ತಿಗೆ ಮೆಚ್ಚಿದ ಪಾರ್ವತಿಯ ಮೊಲೆಗಳಲ್ಲಿ ಹಾಲು ಸುರಿಯಲಾರಂಭಿಸಿತು. ಅವಳು ಒಂದೊಂದು ಮೊಲೆಯ ಹಾಲನ್ನೂ ಒಂದೊಂದು ಮುದ್ದೆಯನ್ನಾಗಿ ಮಾಡಿದಳು. ಶಿವನು ಬಲಮೊಲೆಯ ಹಾಲಿಗೆ ಗಂಡಿನ ರೂಪವನ್ನೂ, ಎಡಮೊಲೆಯ ಹಾಲಿಗೆ ಹೆಣ್ಣಿನ ರೂಪವನ್ನೂ ಕೊಟ್ಟು ಪ್ರಾಣ ನೀಡಿದ. ಅವರು ಮುದ್ದುಗೊಂಡ, ಮುದ್ದವ್ವೆಯೆಂಬ ಹೆಸರುಗಳಿಂದ ಸತಿ-ಪತಿಗಳಾಗಿ ಶಿವನ

ಆದೇಶದ ಮೇರೆಗೆ ಕುರಿ ಕಾಯಲು ಭೂಮಿಗೆ ಬಂದರು. ನಂತರ ಅವರ ಸಂತತಿಯೂ ಇದೇ ವೃತ್ತಿಯನ್ನು ಮಾಡುತ್ತಾ ಕುರುಬರಾದರು. ಮುದ್ದುಗೊಂಡನನ್ನು ಆದಿಗೊಂಡನೆಂದೂ ಕರೆಯುತ್ತಾರೆ. ಇವನ ಕಿರಿಯ ಮಗ ಪದ್ಮಗೊಂಡ ಇವನಿಗೆ ಇಬ್ಬರು ಹೆಂಡಂದಿರು. ಇವರ ಪ್ರತ್ಯೇಕ ಸಂತಾನಗಳು ಹತ್ತಿ ಕಂಕಣ ಮತ್ತು ಉಣ್ಣೆ ಕಂಕಣದವರು. ಪದ್ಮಗೊಂಡನು ಕುರಿ ಕಾಯುತ್ತಿರುವಾಗ ರಾಕ್ಷಸಿಯ ಅಧೀನದಲ್ಲಿದ್ದ ಚೆಲುವೆಗೆ ಮನಸೋಲುತ್ತಾನೆ. ರಾಕ್ಷಸಿಯನ್ನು ಕೊಂದು ಅವಳನ್ನು ಕಾಡಿನಲ್ಲಿ ಮದುವೆಯಾಗುತ್ತಾನೆ. ಆದ್ದರಿಂದ ಆಗ ಹತ್ತಿ ನೂಲಿಗೆ ಬದಲಾಗಿ ಉಣ್ಣೆಯ ನೂಲಿನ ಕಂಕಣವನ್ನು ಕಟ್ಟುತ್ತಾನೆ. ಅಂದಿನಿಂದ ಅವಳ ಸಂತತಿಗೆ ಉಣ್ಣೆಯ ನೂಲಿನ ಕಂಕಣ ಬಂತು. ಸತ್ತ ರಾಕ್ಷಸಿಯು ತೋಳವಾಗಿ ಕುರಿಗಳಿಗೆ ಕಂಟಕವಾಗುತ್ತಾಳೆ. ಒಂದೇ ತಾಯಿಯ ಮಕ್ಕಳು ಸತಿ-ಪತಿಗಳಾಗುವುದು ಜನಾಂಗಗಳ ಮೂಲದಲ್ಲಿ ಅನಿವಾರ್ಯವಾಗಿದೆ.

ಕುರುಬರ ಸಾಂಸ್ಕೃತಿಕ ವೀರ ಬೀರಲಿಂಗ ಕುರಿತ ಐತಿಹ್ಯದಂತೆ ಬೀರಲಿಂಗನ ಜನನದಿಂದ ಸೋದರಮಾವನಿಗೆ ಕೇಡುಂಟಾಗುತ್ತದೆಂದು ನಂಬಿ ಅವನ ಮಾವನು ಮಗುವನ್ನು ಕೊಲ್ಲಿಸಲು ಪ್ರಯತ್ನಿಸುತ್ತಾನೆ. ಕಟುಕರನ್ನು ಕರೆದು ಕಾಡಿನಲ್ಲಿ ಈ ಕೂಸನ್ನು ಕತ್ತರಿಸಿ ಬರುವಂತೆ ಆಜ್ಞಾಪಿಸುತ್ತಾನೆ. ಕೂಸನ್ನು ಕೊಲ್ಲಲಾಗದೆ ಕೊಲೆಗಡುಕರು ಕಾಡಿನಲ್ಲಿ ಅರಳಿಯ ಮರದ ಟೊಂಗೆಗೆ ತೊಟ್ಟಿಲನ್ನು ಕಟ್ಟಿ ಹಿಂದಿರುಗುತ್ತಾರೆ. ಮಾಯವ್ವನೆಂಬುವವಳು ಮಗುವನ್ನು ಸಾಕುತ್ತಾಳೆ. ಇವನು ಬೆಳೆದು ದೊಡ್ಡವನಾದ ಮೇಲೆ ಶಿವನು ಇವನನ್ನು ಪದ್ಮಗೊಂಡನಿಗೆ ಜೊತೆ ಮಾಡಿ ಕುರಿಗಳನ್ನು ಕಾಯುವ ವೃತ್ತಿಯನ್ನು ನೇಮಿಸುತ್ತಾನೆ. ಈ ಹಿನ್ನೆಲೆಯಲ್ಲಿ ಇವರ ಕುರುಬ ದ್ಯಾವರ ಆಚರಣೆ ಗಮನಾರ್ಹವಾದುದು. ಇದು ಹಲವಾರು ವರುಷಗಳಿಗೊಮ್ಮೆ ನಡೆಯುವುದು. ಬೀರೇ ದೇವರು ಕುರುಬರ ಕುಲದೇವರು. ಕುರುಬ ಜನಾಂಗದವರು ಇರುವ ಹಲವಾರು ಕಡೆ ಈ ಜಾತ್ರೆ ನಡೆಯುತ್ತದೆ. ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನ ಬೈರಕೂರಿನಲ್ಲಿ ನಡೆಯುವ 'ಕುರುಬರ ದ್ಯಾವರ' ಜಾತ್ರೆ ಪ್ರಸಿದ್ಧವಾದುದು. (ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪು.೭೧೭) ಹಾಗೆಯೇ ಬೀರದೇವರ ಡೊಳ್ಳುಕುಣಿತವನ್ನು ಸಮರ್ಥಿಸುವ ಐತಿಹ್ಯದ ಪ್ರಕಾರ ಜವರೇಖೆ ಎಂಬ ತಟ್ಟೆಯಲ್ಲಿ ಇದರ ಮೂಲದ ಬಗ್ಗೆ ಬರೆದಿದೆಯಂತೆ. ಈಶ್ವರನ ಕೈಲಿರುವ ಢಮರುಗ ಇದರ ಮೂಲವಿರಬೇಕೆಂದು ಹೇಳುತ್ತಾರೆ. ಇದು ಮೂಲದಲ್ಲಿ ಕುರಿಗಳಿಂದ ಹುಟ್ಟಿ ಬಂದಿದೆಯೆಂದೂ ಹೇಳುತ್ತಾರೆ. ಬೀರದೇವರಿಗೆ ಸಂಬಂಧಿಸಿದ ಹಾಡುಗಳನ್ನು ಡೊಳ್ಳು ಕುಣಿತದಲ್ಲಿ ಹಾಡುತ್ತಾರೆ.

ತೊಗರ (ಟಗರು?) ಜೋಗಿಗಳೆಂಬುವವರು ಈ ಜನದ ದೇವರ ಬಿರುದು ಹೊತ್ತುಕೊಂಡು ಓಡಾಡುವವರ ಹತ್ತಿರ ಇದು ಸಿಗುತ್ತದೆಯಂತೆ. ತೂಬುಗೆರೆ, ನಗರಗೆರೆ ಮುಂತಾದ ಜಾಗಗಳಲ್ಲಿ

ಇವರಿದ್ದಾರೆ. ಹಿಂದೆ ಮರಾಠಿಗರ ಕಂಡೇರಾಯ (ಖಂಡೋಬ?) ಎಂಬ ದೇವತೆಗೆ ಈ ಡೊಳ್ಳಿನ ಶಬ್ದ ಬೇಕೇ ಬೇಕಂತೆ. ಮರಾಠಿಗರ ಮದುವೆಗೂ ಈ ಶಬ್ದ ಬೇಕೇ ಬೇಕಂತೆ. ಈ ಡೊಳ್ಳಿನ ಶಬ್ದ ಕೇಳಿದ ಕೂಡಲೆ ಮೈಮೇಲೆ ಬರುತ್ತಿತ್ತಂತೆ. ಶಿವನು ಡೊಳ್ಳಾಸುರನೆಂಬ ರಾಕ್ಷಸನನ್ನು ಕೊಂದು ಅವನ ಶರೀರವನ್ನು ಡೊಳ್ಳನ್ನಾಗಿ ಮಾಡಿಕೊಂಡು ಕುಣಿದನೆಂಬ ಪುರಾಣದ ಹಿನ್ನೆಲೆ ಇದೆ.

ಮತ್ತೊಂದು ಪ್ರಸಂಗದ ಪ್ರಕಾರ, ಒಂದು ದಿನ ಪರಶಿವ ಮತ್ತು ಪಾರ್ವತಿ ಹೊತ್ತು ಕಳೆಯಲು 'ನೆತ್ತ' ಆಡಲು ಕುಳಿತರಂತೆ. ಸೋತವರು ತಮ್ಮ ಸರ್ವಸ್ವವನ್ನು ಬಿಟ್ಟುಕೊಟ್ಟು ಕೈಲಾಸದಿಂದ ಹೊರಬಿದ್ದು ಯಾರಿಗೂ ಕಾಣದಂತೆ, ವಾಸಿಸಬೇಕು ಎಂದು ಜಿದ್ದು ಕಟ್ಟಿದ್ದರು. ಆಟದಲ್ಲಿ ಶಿವ ಸೋತು ಭೂಲೋಕಕ್ಕೆ ಬಂದು ಒಂದು ಕಲ್ಲುಗವಿಯಲ್ಲಿ ಕಲ್ಲಾಗಿ ಬಿದ್ದ. ಇವನ ಕಾವಲಿಗಾಗಿ ಮಾಯಾಮೂರ್ತಿ ಮಾಯೆ ರೂಪದಿಂದ ಸುಳಿದಾಡುತ್ತಿದ್ದು ಗಿನ, ಪಕ್ಷ, ಮಾಸಗಳು ಉರುಳಿದವು. ಶಿವನಿಲ್ಲದ ಜಗತ್ತು ಶಿವನಿಗಾಗಿ ಗೋಳಾಡಿತು. ಪಾರ್ವತಿಗೆ ಲೋಕಪಾಲನೆಯ ಭಾರ ಸಾಕಾಗಿ ಶಿವನ ಹುಡುಕಾಟಕ್ಕೆ ವಾಯುದೇವರನ್ನು ಕಳುಹಿಸಿದರೂ ಏನೂ ಪ್ರಯೋಜನವಾಗಲಿಲ್ಲ. ಅನಂತರ ನಾರದ ಶಿವನ ನೆಲೆಯನ್ನು ಪತ್ತೆ ಹಚ್ಚಿ ಮಾಯಾಮೂರ್ತಿಯನ್ನು ಸಂಹರಿಸಿ ಶಿವನನ್ನು ಕರೆದು ತರುವಾಗ ಶಿವ ತನಗೆ ಕಾವಲಿದ್ದ ಸ್ವಾಮಿನಿಷ್ಠ ಮಾಯಾಮೂರ್ತಿಯ ಕಳೇಬರವನ್ನು ಬಿಟ್ಟು ಬರಲಾರದೆ ಅದರಿಂದ ಡೊಳ್ಳು ಮಾಡಿಕೊಂಡ. ನಾರದ ಇದನ್ನು ಬಾರಿಸುತ್ತ ಹಾಡುತ್ತ ಕೈಲಾಸಕ್ಕೆ ಬಂದ. ಈಗಲೂ ಡೊಳ್ಳುಪದಗಳ ಆರಂಭದಲ್ಲಿ ಬರುವ 'ದೇವಿ ನಿಮ್ಮಯ ದೇವರ ಬಂದಾನ ಬನ್ನಿರೇ' ಎಂಬ ಮಾತು ನಾರದ ಪಾರ್ವತಿಗೆ ಹೇಳಿದ್ದೆಂದೂ 'ಸ್ವಾಮಿ ನಮ್ಮಯ ದೇವರ ಬಂದಾನ ಬನ್ನಿರೇ' ಎಂಬ ಮಾತು ಪಾರ್ವತಿ ತನ್ನ ಗಂಡ ಬಂದದ್ದನ್ನು ಕಂಡು ಸಂಭ್ರಮದಿಂದ ಸಖಿಯರನ್ನು ಕರೆದದ್ದೆಂದೂ ನಂಬಿಕೆಯಿದೆ.

ಕೋಲಾರ ಜಿಲ್ಲೆಯ ಗುಡಿಬಂಡೆ, ಬಾಗೇಪಲ್ಲಿ, ಗೌರೀಬಿದನೂರು ಹಾಗೂ ತುಮಕೂರು ಜಿಲ್ಲೆಯ ಕೊರಟಗೆರೆ, ಮಧುಗಿರಿ ತಾಲೂಕುಗಳಲ್ಲಿ ಕುರುಬರ ಪ್ರಾದೇಶಿಕ ಸಾಂಸ್ಕೃತಿಕ ವೀರನ ಜಲ್ಲಿ ನಡೆಯುತ್ತದೆ. ದಾಲ್ಬುರ್ಗಪ್ಪನ ದೇವಾಲಯದಲ್ಲಿ ವಿಗ್ರಹಕ್ಕೆ ಬದಲು ಪೆಟ್ಟಿಗೆ ಇದ್ದು ಅದರ ಒಳಗೆ ದಾಲ್ಬುರ್ಗಪ್ಪನವೆಂದು ಹೇಳಲಾದ ಬಟ್ಟೆಗಳು ಇರುತ್ತವಂತೆ. ಇವುಗಳಿಗೆ ನಿಗದಿತ ದಿನದಂದು ಪೂಜೆ ಸಲ್ಲಿಸುತ್ತಾರೆ. ಸುಮಾರು ಹನ್ನೊಂದು ದಿನಗಳು ದಾಲ್ಬುರ್ಗಪ್ಪನ ಜಾತ್ರೆ ನಡೆಯುತ್ತದೆ. ಕುರುಬರ ಹೊರತಾಗಿ ಬೇರೆಯವರು ಪಾಲ್ಗೊಳ್ಳುವುದಿಲ್ಲ. ಈ ಜಾತ್ರೆಯ ಸಂದರ್ಭದಲ್ಲಿ ಮಾತ್ರ ಕುರುಬರ ಮಕ್ಕಳಿಗೆ ಚೌಲ, ನಾಮಕರಣ, ಹುಟ್ಟುಗೂದಲು ತೆಗೆಸುವ ಶಾಸ್ತ್ರ ಇತ್ಯಾದಿ ಆಚರಣೆಗಳು ನಡೆಯುತ್ತವೆ. ಈ ಜಾತ್ರೆಯು ಪ್ರತಿ ವರ್ಷ ನಡೆಯುವುದಿಲ್ಲ. ಆರು ವರ್ಷ ಅಥವಾ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುತ್ತದೆ. ಅಲ್ಲಿಯವರೆಗೆ ಮಕ್ಕಳಿಗೆ ಸಂಬಂಧಿಸಿದ ಆಚರಣೆಗಳು ಮುಂದೂಡಲ್ಪಟ್ಟಿರುತ್ತವೆ.

ದಾಲ್ಬುರ್ಗಪ್ಪನು ಈ ಪ್ರದೇಶದಲ್ಲಿ ಕುರಿ ಸಾಕಾಣಿಕೆಯನ್ನು ಕುರುಬರಿಗೆ ರೂಢಿಸಿಕೊಟ್ಟ ಸಾಂಸ್ಕೃತಿಕ ವೀರನಾಗಿದ್ದಾನೆ. ಕುರಿಮಂದೆಗೆ ದಾಳಿಯಿಟ್ಟ ಚಿರತೆಗಳನ್ನು ಎದುರಿಸಿ ಹೋರಾಟ ಮಾಡಿ ಹುತಾತ್ಮನಾದವನು. ಈ ಮರಣದ ನೆನಪನ್ನು ಪ್ರಾದೇಶಿಕವಾಗಿ ಆಚರಿಸುತ್ತಾರೆ.

"ಬೇಡರು ಬಹುಶಃ ಬೇಟೆಗಾರರು. ಕುಜುಂಬರು ಬಹುಶಃ ಬೆಟ್ಟಗುಡ್ಡಗಳಲ್ಲಿ ದುರ್ಗಗಳನ್ನು ಮಾಡಿಕೊಂಡು ಬದುಕುತ್ತಿದ್ದ ಹಿಂದುಳಿದ ಜನಾಂಗ. ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ತೊಂದರೆ ಕೊಡುತ್ತಿದ್ದ ಜನಾಂಗಗಳಿವು. ಕುಜುಂಬರು ಬೇಡರಂತೆ ಸುಸಂಘಟಿತರಾಗಿದ್ದಂತೆ ಕಾಣುವುದಿಲ್ಲ. ಬೇಡರ ಪಡೆಗಳು ಬಂದು ತುರುಗಳನ್ನು ಅಪಹರಿಸಿದ ನಿದರ್ಶನಗಳು ಶಾಸನಗಳಲ್ಲಿವೆ. ದಾರಿಗಟ್ಟಿ ಲೂಟಿ ಮಾಡುತ್ತಿದ್ದ ಬೇಡರನ್ನು ನಯಸೇನನು ಹೆಸರಿಸುತ್ತಾನೆ. ಬೇಡರು ಕಾಡಿನ ಅಂಚುಗಳಲ್ಲಿಯೂ ಬಯಲು ನಾಡಿನ ಊರುಗಳಲ್ಲಿಯೂ ವಾಸಿಸುತ್ತಿದ್ದುದುಂಟು. ಬೇಡರ ಪಡೆಗಳಂತೆ ಕುಜುಂಬರ ಪಡೆಗಳು ಇದ್ದಂತೆ ಶಾಸನಾಧಾರಗಳಿಲ್ಲ".[೧೧]

ತಮಿಳಿನಲ್ಲಿ ಕುಜುಂಬು ಎಂಬುದರ ಅರ್ಥ ಕೋಟೆ ಎಂದು. ಕನ್ನಡದಲ್ಲಿ ಕುಜುಂಬ ಎಂದರೆ ಕೋಟೆಯಲ್ಲಿ ವಾಸಿಸುವವನು ಎಂದರ್ಥ. ಹಾಗೆಯೇ ಕುಜುಂಬ ಎಂದರೆ ಬೆಟ್ಟ ಗುಡ್ಡಗಳಲ್ಲಿ ವಾಸಿಸುವ ಜನಾಂಗದ ವ್ಯಕ್ತಿ ಎಂಬ ಅರ್ಥವೂ ಲಭಿಸುತ್ತದೆ.

**ಬೇಡರು :** ಕೋಲಾರ ಜಿಲ್ಲೆಯಲ್ಲಿ ಕಂಡುಬರುವ ಬೇಡರು ನಾಯಕ, ಪಾಳೆಯಗಾರ, ತಳವಾರ, ವಾಲ್ಮೀಕಿ ಮೊದಲಾದ ಹೆಸರುಗಳಿಂದ ಗುರುತಿಸಲ್ಪಡುತ್ತಾರೆ. ಬೇಡರ ಬೊಮ್ಮಣ್ಣನೆಂಬ ವ್ಯಕ್ತಿಯನ್ನು ತಮ್ಮ ಸಂಸ್ಕೃತಿಯ ಮೂಲಪುರುಷನೆಂದೂ ಆದಿಜಾಂಬವನು ಈತನ ಸಹೋದರನೆಂದೂ ತಮ್ಮ ಮೂಲವನ್ನು ಗುರುತಿಸಿಕೊಳ್ಳುತ್ತಾರೆ. ವಾಲ್ಮೀಕಿ ಮತ್ತು ಬೇಡರ ಕಣ್ಣಪ್ಪನನ್ನು ತಮ್ಮ ಸಾಂಸ್ಕೃತಿಕ ನಾಯಕರೆಂದು ಗೌರವಿಸುತ್ತಾರೆ. ಪ್ರಾದೇಶಿಕವಾಗಿ ಬೇಡರ ಪಾಳೆಯಪಟ್ಟುಗಳು ಅಸ್ತಿತ್ವದಲ್ಲಿದ್ದು ಆಡಳಿತಾತ್ಮಕವಾಗಿ ಮೆರೆದ ದಿನಗಳ ನೆನಪುಗಳನ್ನು ಮೌಖಿಕ ಪರಂಪರೆಯಲ್ಲಿ ಉಳಿಸಿಕೊಂಡು ಬಂದಿದ್ದಾರೆ. ಬೇಟೆಗಾರಿಕೆಯ ಮೂಲವೃತ್ತಿಯಿಂದ ಮುಂದುವರೆದು ಕೃಷಿ, ಪಶುಪಾಲನೆಗಳವರೆಗೆ ಬೆಳವಣಿಗೆ ಹೊಂದಿದ್ದಲ್ಲದೆ ಸೈನಿಕರಾಗಿ ಪಾಳೆಯಗಾರರಾಗಿ ಆಡಳಿತಾತ್ಮಕವಾಗಿ ಸ್ಪಂದಿಸಿದ ನೋವು ನಲಿವುಗಳಿಗೆ ಸಂಬಂಧಿಸಿದಂತೆ ಇವರಲ್ಲಿ ಐತಿಹ್ಯಗಳು ಕಂಡುಬರುತ್ತವೆ. ಸಂಬಂಧಿಸಿದ ಐತಿಹ್ಯಗಳನ್ನು ಆಯಾ ವರ್ಗೀಕರಣದಲ್ಲಿ ವಿಶ್ಲೇಷಿಸಿರುತ್ತೇನೆ.

ಮೂಲತಃ ಇವರು ಶಿವನ ಆರಾಧಕರಾಗಿದ್ದು ನಂತರ ಕೆಲವರು ವಿಷ್ಣುವಿನ ಆರಾಧಕರಾದರೆಂದು ತಿಳಿದುಬರುತ್ತದೆ. ಅಡವಿ ಚಂಚರಿಗೂ ತಮಗೂ ಸಹೋದರ ಸಂಬಂಧವಿದ್ದಿತೆಂದು ಹೇಳುವುದರೊಂದಿಗೆ ಚಂಚುಲಕ್ಷ್ಮಿಯನ್ನು ಮದುವೆಯಾದ ನರಸಿಂಹಸ್ವಾಮಿಯು ತಮ್ಮ ಆರಾಧ್ಯ ದೈವವೆಂದು ಐತಿಹ್ಯಗಳನ್ನು

ಕಟ್ಟಿಕೊಡುತ್ತಾರೆ. ಪಾರ್ವತಿ, ನಾಗಲಮ್ಮ, ಕನ್ನಿಕಲಮ್ಮ ಇತ್ಯಾದಿ ದೇವತೆಗಳು ಇವರ ಕುಲದೇವತೆಗಳು ತಮ್ಮ ಮನೆತನಗಳಲ್ಲಿ ಮಹಾಸತಿಯರಾಗಿರುವ ಮಹಿಳೆಯರನ್ನು ಇದೇ ಸಾಲಿಗೆ ಸೇರಿಸುತ್ತಾರೆ. ಬಲವಂತವಾಗಿ ಕೊಂಡವೇರುವ ಸಂದರ್ಭಗಳು ಬಂದಾಗ ಮಹಾಸತಿಯಾಗುವಂತೆ ಒತ್ತಾಯ ತಂದು ತೌರುಮನೆ ಹಾಗೂ ಗಂಡನ ಮನೆಯವರಿಗೆ ಬಲಿಯಾದ ಹೆಣ್ಣು ಶಾಪ ಹಾಕಿದ ನಿದರ್ಶನಗಳು ಐತಿಹ್ಯಗಳಾಗಿವೆ. ಪಾರ್ವತಿ ಬೇಡರ ಹೆಣ್ಣು ಮಗಳು. ಶಿವನೊಂದಿಗೆ ಜಗಳವಾಡಿದಳು. ನನ್ನ ತೌರುಮನೆಯವರಿಗೆ ವರ ಕೊಡು ಎಂದು. ಒಂದು ದಿನ ಶಿವನು ದೊಡ್ಡದೊಂದು ಸಮಾರಂಭಕ್ಕೆ ಬೇಡರನ್ನು ಆಹ್ವಾನಿಸಿದ. ಎಲ್ಲರೂ ಊಟಕ್ಕೆ ಕುಳಿತಾಗ ತಾನು ಮೊಲದ ರೂಪ ತಾಳಿ ಬಂದ. ಆಗ ಬೇಡರು ಊಟ ಬಿಟ್ಟು ದೊಣ್ಣೆ ಹಿಡಿದು ಬೇಟೆಯಾಡಲು ಸಿದ್ಧರಾದರು. ಪಾರ್ವತಿಗೆ ಅಪಮಾನವಾಗಿ ಔತಣದ ಅಡಿಗೆಗಳನ್ನು ಹುತ್ತಕ್ಕೆ ಹಾಕಿದಳು. ಹುತ್ತದೊಳಗಿನಿಂದ ಈಸಿಳ್ಳು (ಹುತ್ತದ ಕೀಟಗಳು) ಬಂದವು. ಬೇಡರು ಅವುಗಳನ್ನು ಹಿಡಿದು ತಿಂದರು. ನಂತರ ಶಿವನಲ್ಲಿ, ತಮ್ಮ ಮೂಲಪುರುಷನಾದ ಬೇಡರ ಬೊಮ್ಮಣ್ಣನು ತಂದಿರುವ ನಾರು ಮಲತಾಡು, ಕೋರಿ ಪುಟ್ಟಕೋಸಿ (ನಾರಿನ ಉಡದಾರ, ಕೋರಿ ಲಂಗೋಟಿ), ತೋಲು ಕುಲಾಯಿ, ಬಂದರಿ ರುಡ್ಡಿಕಟ್ಟೆ (ಚರ್ಮದ ಟೊಪ್ಪಿ, ಬೇಟೆಯ ದೊಣ್ಣೆ), ಚೆಂಪಕಿ ಸ್ಯಾರಿಡು ಮಲ್ಲೆಲು ಬೇಕೆಂದ. (ಕೆನ್ನೆಗೆ ಬೊಗಸೆಯಷ್ಟು ಹೇನಿನ ಸೀರು) - ಇವು ತಮ್ಮ ವಂಶಕ್ಕೆ ಶಾಶ್ವತವಾಗಿ ಉಳಿಯಲಿ ಎಂದು ಬೇಡಿದರು. ಜಿಲ್ಲೆಯ ಜನಪದ ವಲಯದಲ್ಲಿ ಋತುಮತಿ ಆಚರಣೆಯ ಗುಡಿಸಲು ಶಾಸ್ತ್ರ (ಗುಡ್ಲುಶಾಸ್ತ್ರ) ಮಾಡುವಾಗ ರಾತ್ರಿಯಿಡೀ ಕಾವಲಿರುತ್ತಾರೆ. ಬೇಡರ ಬೊಮ್ಮಣ್ಣ ಬಂದು ಹೆಣ್ಣನ್ನು ಅಪಹರಿಸುತ್ತಾನೆಂಬ ನಂಬಿಕೆ ಇದಕ್ಕೆ ಕಾರಣ.

ಮಾದಿಗ ಮತ್ತು ಬೇಡನ ಸಂಬಂಧವನ್ನು ವಿವರಿಸುವ ಐತಿಹ್ಯದಂತೆ ಜಾಂಬವ ಭೂಮಿಯ ಸೃಷ್ಟಿಯಲ್ಲಿ ಮೊದಲು ಹುಟ್ಟಿದವನು. ಆದಿಯಲ್ಲಿ ಹುಟ್ಟಿದ್ದರಿಂದ ಆದಿಜಾಂಬವ (ಮಾದಿಗ) ಎನಿಸಿಕೊಂಡ. ನಂತರ ಬೇಡರ ಬೊಮ್ಮಣ್ಣ ಹುಟ್ಟಲು ಭೂಮಿಯನ್ನು ಸೀಳಿದರೆ, ಇವನು ಕಾಲಲ್ಲಿ ಒಸಗುತ್ತಿದ್ದ. ಕೊನೆಗೆ ಮುಳ್ಳಿನ ಪೊದೆಗಳಲ್ಲಿ ಹುಟ್ಟಿದ ಬೇಡರ ಬೊಮ್ಮಣ್ಣ ಒಂದು ತಂಗಟೆ ಬರ್ಲು ತೆಗೆದುಕೊಂಡು ಹೊಡೆಯತೊಡಗಿದ. ಮಾದಿಗ ಕೊನೆಗೆ ನೀನು ತಂದೆ ನಾನು ಮಗ ಎಂದು ಒಪ್ಪಿಕೊಂಡ. ಅಂದಿನಿಂದ 'ಮೂರು ತಿಂಗಳ ಮಾದಿಗನಿಗೆ, ಆರು ತಿಂಗಳ ತಂಗಟೆ ಬರ್ರೆ' ಎಂಬ ಗಾದೆ ಪ್ರಚಲಿತವಾಯಿತೆಂದು ಹೇಳುತ್ತಾರೆ. ಮಾದಿಗರ / ನಾಯಕರ ಗೋತ್ರಗಳು ಒಂದೇ ಹೋಲಿಕೆಗೆ ಬಂದವು. ಮಾದಿಗರು ಚಪ್ಪಲಿ, ಕಪಿಲೆಬಾನೆ ಇತ್ಯಾದಿ ಚರ್ಮದ ವಸ್ತುಗಳನ್ನು ಬೇಡರಿಗೆ ಉಚಿತವಾಗಿ ಕೊಡಬೇಕೆಂದು, ಶುಭ-ಅಶುಭ ಸಮಾರಂಭಗಳಲ್ಲಿ ಪರಸ್ಪರರು ಪಾಲ್ಗೊಳ್ಳಬೇಕೆಂದು ಗ್ರಾಮೀಣ ಪ್ರದೇಶದ ನಿಯಮವಿದೆ.

**ಭತ್ತದ ಕೃಷಿ ಹಾಗೂ ಬೇಡರಿಗೆ ಸಂಬಂಧಿಸಿದ ಐತಿಹ್ಯದಂತೆ,** "ಒಮ್ಮೆ ಬೇಡರು ಬಹಳ ಭತ್ತ ಬೆಳೆದಿದ್ದರು. ಹೆಚ್ಚಾಗಿ ಬೆಳೆದಿದ್ದರಿಂದ ಮನೆಯಲ್ಲೆಲ್ಲಾ ರಾಶಿ ರಾಶಿ ಮಾಡಿದ್ದರು. ಓಡಾಡುವಾಗಲೆಲ್ಲ ತುಳಿಯುತ್ತಿದ್ದರು. ಚೆಲ್ಲಾಪಿಲ್ಲಿಯಾದ ಭತ್ತದ ಕಾಳನ್ನು ಕಸದ ಜೊತೆ ಗುಡಿಸಿ ಚೆಲ್ಲುತ್ತಿದ್ದರು, ಆದರೆ ಒಕ್ಕಲಿಗರು ಭತ್ತವನ್ನು ಬಹಳ ಜೋಪಾನವಾಗಿ ವ್ಯವಸ್ಥೆ ಮಾಡಿಕೊಳ್ಳುತ್ತಿದ್ದರು. ಆದ್ದರಿಂದ ಭತ್ತ "ಕಾಪೋನಿ ಕಡ ಗಾಟಿಲಾ ಐನಾ ಉಂಟಾನು, ಬಾಯೋನಿ ನೆಟ್ಟಿ ಇಂಟ್ಲಾ ಉಂಡೆಲ್ಲು" ಒಕ್ಕಲಿಗನ ಕೊನೆಯ ಕೊಟ್ಟಿಗೆಯಲ್ಲಾದರೂ ಇರುತ್ತೇನೆ. ಬೇಡನ ನಡುಮನೆಯಲ್ಲಿ ಇರಲ್ಲ) ಎಂದು ಮುನಿಸಿಕೊಂಡು ಒಕ್ಕಲಿಗನ ಮನೆಗೆ ಹೊರಟಿತು. ಕೋಪಗೊಂಡ ಬೇಡರು ಭತ್ತಕ್ಕೆ ಮೂಗುದಾರ ಹಾಕಿ ಮನೆಗೆ ಒಕ್ಕಲಿಗರ ಮನೆಯಿಂದ ತಮ್ಮ ಮನೆಗೆ ಎಳೆದುತಂದರು. ಅಂದಿನಿಂದ ಭತ್ತದ ತುದಿಯಲ್ಲಿ ತೂತು ಉಳಿಯಿತು." ಈ ಐತಿಹ್ಯವು ಬೇಡರು ಬೇಟೆಗಾರಿಕೆಯಿಂದ ಕೃಷಿಕ ವೃತ್ತಿಗೆ ತೊಡಗಿದಾಗ ಆದ ಅನುಭವಗಳ ಸೋಜಿಗವನ್ನು ಹೇಳುತ್ತದೆ.

**ಬೇಡ-ಲಿಂಗಾಯತ ಸಂಬಂಧವನ್ನು ನಿರೂಪಿಸುವ ಐತಿಹ್ಯವೊಂದು ಹೀಗಿದೆ :** ನರಿ ಸಸ್ಯಾಹಾರಿ ಆಗಬೇಕೆಂದು ತಪಸ್ಸು ಮಾಡಿ ಲಿಂಗ ಪಡೆಯಿತು. ಶಿವ ಪರೀಕ್ಷೆ ಮಾಡಲೆಂದು ಎಲ್ಲೂ ಬೇರೆ ಆಹಾರ ಸಿಗದಂತೆ ಮಾಡಿ ಏಡಿ ಮೀನುಗಳನ್ನು ಸೃಷ್ಟಿಸಿದ. ಬೆಳಿಗ್ಗೆ ಲಿಂಗ ತೆಗೆದಿಟ್ಟು ಸ್ನಾನ ಮಾಡಿ ಸೂರ್ಯ ನಮಸ್ಕಾರ ಮಾಡುತ್ತಿದ್ದ ನರಿ ಲಿಂಗ ತೆಗೆದಿಟ್ಟು ಮೀನುಗಳನ್ನು ತಿನ್ನತೊಡಗಿತು. ಬೇಟೆಗೆಂದು ಬೇಡರವನು ಹೊರಟಿದ್ದ. ನಾಯಿಗಳು ನರಿಯನ್ನು ಓಡಿಸಿದವು. ಬೇಡರವನು ಗಿಡದಲ್ಲಿ ನೇತಾಡುತ್ತಿದ್ದ ವಿಚಿತ್ರ ವಸ್ತುವನ್ನು ಆಶ್ಚರ್ಯದಿಂದ ಕೊಂಡೊಯ್ದು ಒಬ್ಬ ವ್ಯಕ್ತಿಗೆ ಕೊಟ್ಟ. ಅವನು ಅದನ್ನು ಕಂಡು ಶಿವಲಿಂಗವೆಂದು ತಿಳಿದು ಹಾಕಿಕೊಂಡು ಪೂಜೆ ಮಾಡಿಕೊಂಡ. ಅವನೇ ಲಿಂಗಾಯಿತ.

**ಮ್ಯಾಸಬೇಡ-ಊರಬೇಡ ಪಂಗಡಗಳು :** ಬೇಡರು ಶ್ರೀಶೈಲದ ಕಡೆಯಿಂದ ಪಶುಗಳನ್ನು ಮೇಯಿಸಿಕೊಳ್ಳುತ್ತಾ ಕರ್ನಾಟಕದ ಕಡೆಗೆ ಬಂದರೆಂದೂ ತಿಳಿಯುತ್ತದೆ. ಹಿಂದೆ ಒಬ್ಬ ಮುಂದೆ ಒಬ್ಬ ಪಶುಗಳನ್ನು ಮೇಯಿಸುತ್ತಿದ್ದರು. ಹಿಂದಿನವನು ಆಕಳ ಕರುವಿನ ಕಾಲು ಮುರಿದು ತಿನ್ನಲು ಶುರು ಮಾಡಿದನಂತೆ. ಅದಕ್ಕೆ ಮುಂದಿನವನು ನೀನು ಗೋಮಾಂಸ ತಿಂದೆ ನೀನು ಬ್ಯಾಡ ಅಂತ ಅವನನ್ನು ಬಿಟ್ಟು ಮುಂದೆ ಬಂದನಂತೆ ಮುಂದೆ ಬಂದವನು ಊರು ಬೇಡ ಆದ. ಹಿಂದೆ ಉಳಿದವನು ಮ್ಯಾಸಬೇಡ ಆದನಂತೆ. ಹೀಗೆ ಮೇಯಿಸುವವರು > ಮೇಸುವವರು > ಮ್ಯಾಸರು ಎಂಬುದಾಗಿ ಪಲ್ಲಟವಾಗಿರಬಹುದು. ಗೌರಿಬಿದನೂರು ತಾಲೂಕಿನ ನಗರಗೆರೆಯ ಪ್ರದೇಶದಲ್ಲಿ ಮ್ಯಾಸಬೇಡರಿದ್ದಾರೆಂದು ಶೇಷಶಾಸ್ತ್ರಿಯವರು ಅಭಿಪ್ರಾಯಪಡುತ್ತಾರೆ.

ಊರುನಾಯಕ ಅಥವಾ ಊರುಬೇಡರು ದನದ ಮಾಂಸವನ್ನು ತಿನ್ನುವುದಿಲ್ಲ. ಮ್ಯಾಸನಾಯಕರು ಕೋಳಿ ಮತ್ತು ಹಂದಿಯ ಮಾಂಸವನ್ನು ತಿನ್ನುವುದಿಲ್ಲ. ಅದಕ್ಕೆ ಕಾರಣವಾದ ಐತಿಹ್ಯ : ಮ್ಯಾಸನಾಯಕರ "ಪೆಟ್ಟಿಗೆ ದೇವತೆಗಳ ಲಕ್ಷ್ಮಿ"ಯನ್ನು ಶತ್ರುಗಳು ಕೊಂಡೊಯ್ದು ಮಲ-ಮೂತ್ರಗಳ ಸಾಗರದಲ್ಲಿ ಬಚ್ಚಿಟ್ಟಿದ್ದರು. ಹಂದಿಯೊಂದು ಮಲ-ಮೂತ್ರಗಳನ್ನು ತಿಂದು ಲಕ್ಷ್ಮಿಯನ್ನು ಹುಡುಕಿಕೊಟ್ಟಿತು. ಆ ಗೌರವಕ್ಕಾಗಿ ಹಂದಿಯನ್ನು ತಿನ್ನುವುದಿಲ್ಲ. ಒಮ್ಮೆ ಮ್ಯಾಸನಾಯಕರು ಗೊಲ್ಲರ ಕೋಳಿ ಹುಂಜವನ್ನು ಕದ್ದು ತಂದಿದ್ದರು. ಗೊಲ್ಲರು ಹುಂಜಕ್ಕಾಗಿ ಹುಡುಕುತ್ತಾ ಇವರ ಹಟ್ಟಿಗೆ ಬಂದರು. ಹಟ್ಟಿಯಲ್ಲಿ ಬುಟ್ಟಿಯ ಕೆಳಗೆ ಬಚ್ಚಿಟ್ಟಿದ್ದ ಹುಂಜವು ಕೊಕ್ಕೋಕೋ ಎಂದು ಕೂಗಿತು. ಇದರಿಂದ ಅಪಮಾನಿತರಾಗಿ ಕೋಳಿ ತಿನ್ನುವುದಕ್ಕೆ ನಿಷೇಧಿಸಿದರು.

**ದಕ್ಕಲರು** : ಕೋಲಾರದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ದಕ್ಕಲರು ಹೆಚ್ಚಾಗಿ ಕಂಡುಬರುತ್ತಾರೆ. ಜಿಲ್ಲೆಯಾದ್ಯಂತ ಮಾದಿಗರಿರುವ ಊರುಗಳಲ್ಲಿ ಆತಿಥ್ಯ ಪಡೆದು ಮಾದಗರಿಂದ ಮಾತ್ರ ಭಿಕ್ಷೆ ಪಡೆಯುವ ವಿಶಿಷ್ಟ ಸಂಪ್ರದಾಯದವರಿವರು. ಒಮ್ಮೆ ಶಿವನ ಮದುವೆಗೆ ಆಭರಣಗಳನ್ನು ತಯಾರಿಸಲು ಒಬ್ಬ ಅಕ್ಕಸಾಲಿಗನನ್ನು ಕರೆಯಿಸಲಾಯಿತಂತೆ. ಅವನ ಬಳಿ ಆಭರಣಗಳನ್ನು ತಯಾರಿಸುವ ಯಾವ ಉಪಕರಣಗಳೂ ಇಲ್ಲದಿದ್ದ ಕಾರಣ, ಜಾಂಬಮುನಿಯು ತನ್ನ ಮಗನನ್ನೆ ಬಲಿಕೊಟ್ಟ ಫಲವಾಗಿ ಆಭರಣ ತಯಾರಿಸಲಾಯಿತಂತೆ. ಆದರೆ ಶಿವನ ಕೃಪೆಯಿಂದ ಮತ್ತೆ ಜೀವ ಪಡೆದ ಜಾಂಬ ಮುನಿಯ ಮಗ ತನ್ನ ತಂದೆಯಲ್ಲಿಗೆ ಬಂದಾಗ ತಂದೆ ತನ್ನ ಮಗನನ್ನು ಗುರುತಿಸದಂತಾಗಿ, ಮನೆಗೆ ಪ್ರವೇಶ ನೀಡದೆ, ಬೆನ್ನೆಲುಬಿನಿಂದ ಬದುಕಿ ಉಳಿದ ನೀನು ಡಕ್ಕಲ ಎಂಬ ಹೆಸರಿನಿಂದ ಮಾದಿಗರ ಮನೆಯಲ್ಲಿ ಭಿಕ್ಷೆ ಬೇಡಿ ಬದುಕೆಂದು ಹೇಳಿದನಂತೆ. ಹೀಗೆ ದಕ್ಕಲ ಎಂಬ ಪದವು ಜಾಂಬ ಮುನಿಯಿಂದ ಸೃಷ್ಟಿಗೊಂಡಿತೆಂಬ ಕಥೆ ಇದೆ.

ತೆಲುಗಿನಲ್ಲಿ ಡಕ್ಕಲ್ / ಡೊಕ್ಕ ಎಂಬುದಕ್ಕೆ ಬೆನ್ನೆಲುಬು ಎಂಬ ಪದವಿದ್ದು ಬೆನ್ನೆಲುಬಿನಿಂದ ಮತ್ತೆ ಜೀವ ಪಡೆದವನು ಎಂಬ ಅರ್ಥವನ್ನು ನೀಡುತ್ತದೆ. ಹೀಗೆ ಪುನಃ ಜೀವ ಪಡೆದ ದಕ್ಕಲ ಮುನಿಯ ವಂಶಸ್ಥರೇ ದಕ್ಕಲರೆಂದು ಹೇಳುತ್ತಾರೆ. ದಕ್ಕಲರು ಮೂಲತಃ ಅಲೆಮಾರಿಗಳಾಗಿದ್ದರಿಂದ ಇವರಿಗೆ ಒಂದು ನಿಗದಿತ ಸ್ಥಳ ಕಂಡುಬರುವುದಿಲ್ಲ. ಸಾಮಾನ್ಯವಾಗಿ ಇವರು ತಮ್ಮ ವಾಸಕ್ಕಾಗಿ ಊರಿನ ಮಾದಿಗರ ಕೇರಿಯ ಸಮೀಪದ ಬಯಲು ಅಥವಾ ಮರಗಳ ಕೆಳಗೆ ವಸತಿಯನ್ನು ನಿರ್ಮಿಸಿಕೊಳ್ಳುತ್ತಾರೆ. ಆದಿಜಾಂಬವ ಜಾತಿಯಲ್ಲಿನ ಉಪಜಾತಿ ಎಂದು ಗುರುತಿಸಿಕೊಳ್ಳುವ ದಕ್ಕಲರು ಮಹಾರಾಷ್ಟ್ರದಲ್ಲಿ ಮಾಂಗರ ಉಪಜಾತಿಯವರಾಗಿದ್ದಾರೆ. ಆಂಧ್ರದ ತೆಲುಗು ಮಾದಿಗರಲ್ಲಿ ಹಾಗೂ ಕರ್ನಾಟಕದ ಮಾದಿಗರಲ್ಲಿ ಉಪಜಾತಿಯವರಾಗಿ ಕಂಡುಬರುತ್ತಾರೆ. ಮಾದಿಗರೊಂದಿಗೆ ಅಣ್ಣ ತಮ್ಮಂದಿರ ಭಾವನೆ ಇರುವುದರಿಂದ ವೈವಾಹಿಕ ಸಂಬಂಧಗಳಿಲ್ಲ.

**ಮಾದಿಗರು :** ಇವರು ಕೋಲಾರ ಜಿಲ್ಲೆಯಲ್ಲಿ ಆದಿಕರ್ನಾಟಕ, ಆದಿಜಾಂಬವ ಎಂಬಿತ್ಯಾದಿ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಜಿಲ್ಲೆಯ ಬಹುಪಾಲು ಮಾದಿಗರು ಮೂಲತಃ ಆಂಧ್ರ ಪ್ರದೇಶದವರಿರಬಹುದು. ತೆಲುಗು ಇವರ ಮಾತೃಭಾಷೆ. ಇವರನ್ನು ಎಡಗೈ ಬಣ್ಣದವರೆಂದು ಗುರುತಿಸುತ್ತಾರೆ. ಆದಿಜಾಂಬವನನ್ನು ತಮ್ಮ ಮೂಲಪುರುಷನೆಂದು ಗುರುತಿಸಿಕೊಂಡಿದ್ದಾರೆ. ಐತಿಹ್ಯದ ಪ್ರಕಾರ, ಭೂಮಿಗೂ ಮೊದಲು ಆದಿಜಾಂಬವ ಹುಟ್ಟಿದ. ನಂತರ ಸಮಸ್ತ ಸೃಷ್ಟಿಗೆ ಕಾರಣನಾದ. ಈತನು ತನ್ನ ಮಗಳಾದ ಮತಂಗ ಕನ್ಯೆಯ ಬೆನ್ನಿನ ಚರ್ಮವನ್ನು ಬಗೆದು ತುಂಡುಗಳಾಗಿ ಕತ್ತರಿಸಿ ಒಂದೊಂದು ಗುಂಪಿಗೂ ಒಂದೊಂದು ತುಂಡು ಹಂಚಿ ಕುಲಗಳನ್ನಾಗಿ ಹೆಸರಿಸಿದನಂತೆ. ಕೊನೆಯಲ್ಲಿ ಉಳಿದ ತುಂಡನ್ನು ಮೊಂಡರ ತುಂಡು ಎಂದನಂತೆ. ಸಿಂದ್ ಮಾದಿಗರೆಂಬ ಮಾದಿಗರ ಒಳಪಂಗಡದಲ್ಲಿ ಆದಿಜಾಂಬವ ಭೂಮಿಗಿಂತ ಆರು ತಿಂಗಳು ಮೊದಲು ಹುಟ್ಟಿದನೆಂದೂ, ಬ್ರಹ್ಮನ ಸೃಷ್ಟಿಗೂ, ಜಗತ್ತಿನ ಸೃಷ್ಟಿಗೂ ಈತನೇ ಮೂಲಕರ್ತನೆಂಬ ಐತಿಹ್ಯದ ವಿವರಗಳು ದೊರೆಯುತ್ತವೆ.

ಮತ್ತೊಂದು ಐತಿಹ್ಯದಂತೆ, ಆದಿಜಾಂಬವನ ಮತ್ತೊಬ್ಬ ಮಗಳು ಅರಂಜ್ಯೋತಿಯನ್ನು ವಸಿಷ್ಠ ಋಷಿಯು ಮೆಚ್ಚಿ ಮದುವೆಯಾಗುತ್ತಾನೆ. ಆಗ ಅವಳ ಮಾದಿಗ ಅಣ್ಣಂದಿರು ಅದಕ್ಕೊಪ್ಪದೆ ಅವಳನ್ನು ಕತ್ತು ಹಿಡಿದು ಹೊಸ್ತಿಲಾಚೆಗೆ ದೂಡುತ್ತಾರೆ. ಆದರೆ ಅವಳ ಕೋಮಟಿ ಅಣ್ಣಂದಿರು ಆ ವಿವಾಹವನ್ನು ಪ್ರತಿಭಟಿಸಲಿಲ್ಲ. ಆ ಸಂದರ್ಭದಲ್ಲಿ ನೊಂದ ಅರಂಜ್ಯೋತಿಯು ಮಾದಿಗರಿಗೆ ದರಿದ್ರ ಬರಲೆಂದು ಕೋಮಟಿಗಳಿಗೆ ಸಂಪತ್ತು ಒದಗಲೆಂದು ಬಯಸಿದಳು. ಅರಂಜ್ಯೋತಿಯನ್ನು ಮರಳು ಮಾಡಿದ ವಸಿಷ್ಠನು ಆದಿಜಾಂಬವ ಬಳಿ ಇದ್ದ ವೇದ ಪಂಚಾಂಗಗಳನ್ನು ಅಪಹರಿಸಿಕೊಂಡು ಹೋದನೆಂದು ಹೇಳುತ್ತಾರೆ. ಅಂದಿನಿಂದ ಬ್ರಾಹ್ಮಣರು ಮಾದಿಗರ ಕೇರಿಯ ಒಳಗೆ ಪ್ರವೇಶಿಸುವುದಾಗಲಿ ಮನೆಯೊಳಗೆ ಪ್ರವೇಶಿಸುವುದಾಗಲಿ ಅನಿಷ್ಟ ಎಂಬ ನಂಬಿಕೆ ಇದೆ. ಅಕಸ್ಮಾತ್ ಬ್ರಾಹ್ಮಣನ ಪ್ರವೇಶವಾದರೆ ಅವನ ಅಂಗಿಯ ತುಂಡನ್ನು ಹರಿದು ಇಟ್ಟುಕೊಳ್ಳಬೇಕು. ಸಗಣಿ-ನೀರು ಎರಚಿ ಪೊರಕೆಯಿಂದ ಹೊಡೆದು ಹೊರಗಟ್ಟಬೇಕು ಎಂಬ ನಿಯಮ ಮಾದಿಗರಲ್ಲಿದೆಯಂತೆ. ಮಾದಿಗರು ತಾವು ಕೋಮಟಿಗಳು ಒಂದಾನೊಂದು ಕಾಲದಲ್ಲಿ ಅಣ್ಣತಮ್ಮಂದಿರೆಂದು ತಮ್ಮ ಭ್ರಾತೃತ್ವದ ಸಂಬಂಧವನ್ನು ಕೋಮಟಿಗಳೊಂದಿಗೆ ಗುರುತಿಸಿಕೊಳ್ಳುತ್ತಾರೆ. ಕೋಮಟಿಗಳ ಮನೆಗಳಲ್ಲಿ ಮದುವೆಗಳಾದರೆ ಕುಟುಂಬದ ಮುಖ್ಯಸ್ಥ ರಹಸ್ಯವಾಗಿ ಬಂದು ತಮ್ಮ ಮನೆಯ (ಗುಡಿಸಿಲಿನ) ಸೂರಿಗೆ ಮದುವೆಯ ಸುದ್ದಿ ಹೇಳಿ ಹೊರಟುಹೋಗುತ್ತಾನೆಂದು ಗ್ರಾಮೀಣ ಪ್ರದೇಶದ ಮಾದಿಗರಲ್ಲಿ ನಂಬಿಕೆಯಿದೆ. ಆದರೆ ಕೋಮಟಿಗಳು ಇಂಥ ಸಂಬಂಧ ಮೂಲದ ಬಗ್ಗೆ ಒಪ್ಪಿಕೊಳ್ಳುವುದಿಲ್ಲ. ಸಿಂದ್ ಮಾದಿಗರು ತಮ್ಮ ಕುಲದೇವತೆ ಯಲ್ಲಮ್ಮನನ್ನು ಆದಿಜಾಂಬವನ ಮೊಮ್ಮಗಳೆಂದು ಆರಾಧಿಸುತ್ತಾರೆ. ಈಕೆಯು ಜಾಂಬತಾತ ಮತ್ತು ಆದಿಶಕ್ತಿಯರ ಸಂಬಂಧದಿಂದ

ಉದ್ಭವಿಸಿದ ನವಿಲಿನ ಮೊಟ್ಟೆಯಿಂದ ಹುಟ್ಟಿಬಂದವಳೆಂದು ಐತಿಹ್ಯವಿದೆ. ಈಕೆಯೇ ಸಮಸ್ತಸೃಷ್ಟಿ, ಸಮಸ್ತಶಕ್ತಿಗಳ ಸಮ್ಮಿಳನವೆಂಬುದು ಇವರ ಪ್ರಾಚೀನ ನಂಬಿಕೆ. ಆದ್ದರಿಂದಲೇ ಸತ್ತ ಮೇಲೆ ಆಕೆಯ ಮಕ್ಕಳಾದವರೆಲ್ಲ ಆಕೆಯ ಮಡಿಲು ಸೇರಬೇಕೆಂಬ ಆದಮ್ಯ ಹಂಬಲದಿಂದಾಗಿ ಯಲ್ಲಮ್ಮನ ಅವತಾರವೇ ಆದ ಭೂಮಿಯನ್ನು ತಾಯಿಯೋಪಾದಿಯಲ್ಲಿ ಮಗು ತಬ್ಬಿ ಹಿಡಿಯುವುದಕ್ಕೆ ಅನುಕೂಲವಾಗಲೆಂದು ಹಾಗೆ ಮಲಗಿಸುತ್ತಿರಬಹುದು.[೧೨] (ಮಾಸ್ಟೀಕರಲ್ಲಿಯೂ ಈ ಪದ್ಧತಿ ಕಂಡುಬರುತ್ತದೆ.)

ಮಾದಿಗರು ಯುದ್ಧಗಳಲ್ಲಿ ಭಾಗವಹಿಸುತ್ತಿದ್ದರೆಂಬುದಕ್ಕೆ ತೆಲುಗಿನ ಜಾನಪದ ಸಾಹಿತ್ಯದಲ್ಲಿ ಆಧಾರಗಳಿವೆ. ಕಾಟಮ ರಾಜುವಿನ ತಮ್ಮನಾದ ಚೆನ್ನಯ್ಯಬಾಲುಡು ಕಾರಂಪೂಡಿಯ ಮೇಲೆ ಯುದ್ಧವನ್ನು ಘೋಷಿಸಿದ. ಅಣ್ಣನಾದ ಕಾಟಮರಾಜವನ್ನು ಸಹಾಯಕ್ಕೆ ಕರೆದ. ಅವನು ಮತ್ತೊಂದು ಯುದ್ಧದಲ್ಲಿ ನಿರತನಾಗಿದ್ದ ಕಾರಣ ತಮ್ಮನ ನೆರವಿಗೆ ಬರಲು ಆಗಲಿಲ್ಲ. ಆಗ ಚೆನ್ನಯ್ಯಬಾಲುಡು ಮಾದಿಗರನ್ನು ತನ್ನ ಸಹಾಯಕ್ಕೆ ಬರುವಂತೆ ಕೇಳಿಕೊಂಡ. ಆ ಮೇರೆಗೆ ಅವರು ಸಹಾಯಕ್ಕೆ ಬಂದರು. ಅಂದಿನ ಯುದ್ಧದಲ್ಲಿ ಜಯವನ್ನು ಗಳಿಸಿದರು.[೧೩] ಮಾದಿಗರು ಯುದ್ಧ ಜಯಿಸಿಕೊಟ್ಟ ಇನ್ನೊಂದು ಪ್ರಸಂಗ ಕುರಿತು ಸಿಂದ್ ಕತೆಯಲ್ಲಿ ಉಲ್ಲೇಖವಿದೆ. 'ನೆಲ್ಲೂರು ಸೀಮೆಯಲ್ಲಿ ತಮ್ಮ ಗೋವುಗಳ ಹಿಂಡನ್ನು ನಾಶ ಮಾಡಲು ಬಂದ ಶತ್ರುಗಳನ್ನು ಸಂಹರಿಸಲು ಗೊಲ್ಲರಾಜ ಮಸಿಲಿನಾಯುಡು ಹೋಗುತ್ತಾನೆ. ಅವನು ಸೋತು ಹಿಮ್ಮೆಟ್ಟುತ್ತಿರುವ ಸುದ್ದಿ ಕೇಳಿ ಇನ್ನು ಬಾಲ್ಯಾವಸ್ಥೆಯಲ್ಲಿರುವ ಗೊಲ್ಲರ ಸಾಕು ಮಗನಾಗಿದ್ದ ಮನ್ನೆಡುಬೀರನ್ನ ತಾನೇ ಯುದ್ಧಕ್ಕೆ ಮುಂದಾಗುತ್ತಾನೆ. ಇದನ್ನು ಸಿಂದ್ ಕತೆಯಲ್ಲಿ 'ಮನ್ನೆಡು ಬೀರನ್ನ ಕದಿಲ್ಯಾಡೆ ಕತ್ತೂಲ ನೀಡಲ ತೋ' - (ಮನ್ನೆಡು ಬೀರಣ್ಣ ಕದಿಲ್ಯಾನೆ ಕತ್ತಿಗಳ ನೆರಳಲ್ಲಿ) ಎಂದು ವರ್ಣಿಸಲಾಗಿದೆ.[೧೪]

ಹೀಗೆ ಹೊರಟ ಬೀರಣ್ಣ ಹಾಲು ಹೊಳೆಯ ಒಡ್ಡಿನಲ್ಲಿದ್ದ ಬೃಹತ್ ಮತ್ತಿ ಮರವನ್ನು ಕತ್ತಿಯಿಂದ ಒಂದೇ ಏಟಿಗೆ ಕತ್ತರಿಸುತ್ತಾನೆ. ಆ ಮರ ಉರುಳಿದ ಸದ್ದಿಗೇನೆ ಶತ್ರು ಸೈನ್ಯ ಚದುರಿ ಚೆಲ್ಲಾಪಿಲ್ಲಿಯಾಗುತ್ತದೆ. ಈ ಬೀರಣ್ಣನನ್ನು ಮಾದಿಗರಾಗಲಿ ಗೊಲ್ಲರಾಗಲಿ ಇನ್ನು ಮರೆತಿಲ್ಲ. ಮಾದಿಗರ ಮದುವೆಯಲ್ಲಿ ಈತನ ಹೆಸರಿನಲ್ಲಿ 'ಬೀರಣ್ಣ ಗುಡಿ ಉಪವಾಸ' ಎನ್ನುವ ನೃತ್ಯವೊಂದಿದೆ. ಹೆಣ್ಣಿನ ಕಡೆಯ ಸಹೋದರ ಸಂಬಂಧಿಗಳು ಉಪವಾಸ ಇದ್ದು ಚಪ್ಪರದ ದಿನ ಊರಿನ ಹೊರಗೆ ಹೋಗಿ ಬೀರಣ್ಣನಿಗೆ ಎಡೆ ಇಕ್ಕಿ ಪೂಜಿಸಿ ತಮ್ಮ ಈ ವ್ರತವನ್ನು ಅಂತ್ಯಗೊಳಿಸುತ್ತಾರೆ. ಗೊಲ್ಲರು ಕೂಡ ತಮ್ಮ ಮದುವೆಗೆ ಮಾದಿಗರನ್ನು ಆಹ್ವಾನಿಸಿ ಅವರಿಂದ ಈ 'ಬೀರಣ್ಣನ ಗುಡಿ' ವ್ರತಾಚರಣೆ ಮಾಡಿಸುತ್ತಾರೆ.

**ಹೊಲೆಯರು** : ಮಾಲ, ಆದಿದ್ರಾವಿಡ, ಹೊಲೆಯ ಇತ್ಯಾದಿ ಹೆಸರುಗಳಿಂದ ಜಿಲ್ಲೆಯಾದ್ಯಂತ ಕಂಡುಬರುವ ಈ ಸಮುದಾಯವು ದಲಿತ ಸಮೂಹವನ್ನು ಪ್ರತಿನಿಧಿಸುತ್ತದೆ. ವಿಶ್ವಾಮಿತ್ರನು ಹರಿಶ್ಚಂದ್ರನ

ಸತ್ಯವನ್ನು ಪರೀಕ್ಷೆ ಮಾಡಲೆಂದು ಸೃಷ್ಟಿಸಿದ ಮಾತಂಗಿ ಕನ್ಯೆಯರ ವಂಶಸ್ಥರು ಹೊಲೆಯರೆಂದು ಐತಿಹ್ಯವಿದೆ. ಆದ್ದರಿಂದಲೇ ಹೊಲತಿಯರು ಸುಂದರವಾಗಿ ಮತ್ತು ಲಕ್ಷಣವಾಗಿ ಇರುವುದು. ಹೊಲೆಯರಿಗೆ ಚುರುಕು ಬುದ್ಧಿ ಇರುವುದೂ ಇದೇ ಕಾರಣದಿಂದಲೇ ಎಂದು ಹೇಳುತ್ತಾರೆ.

**ಹೊಲೆಯ-ಅಗಸ ಸಂಬಂಧವನ್ನು ಕುರಿತ ಐತಿಹ್ಯವು ಹೀಗಿದೆ :** ಅಕ್ಕಸಾಲಿಗರ ಮನೆಯಲ್ಲಿ ಹೊಲೆಯರ ಮಾಲುಮೇಲುಕುಮಾರರು (ರಾಜಕುಮಾರರು) ಹೆಣ್ಣು ಕೇಳಲು ಹೋದರು. ಒಡೆಗದ್ದೆ ಕೊಯ್ದು ಉಗುರಿನಲ್ಲಿ ಬತ್ತ ಸುಲಿದು ಅಕ್ಷತೆಗೆ ಅಕ್ಕಿ ತರಬೇಕು. ಮತ್ತಿ ಮರ ನೆಲಕ್ಕೆ ಬೀಳದಂತೆ ಕಡಿದು ಮದುಮಗನ ಬೆನ್ನ ಮೇಲೆ ಇರಿಸಿಕೊಂಡು, ಅದರಲ್ಲಿ (ಮಸಂಗವಾದ್ಯ) ಮದ್ದಳೆವಾದ್ಯ ಇರಿಸಿಕೊಂಡು ವಾದ್ಯವನ್ನು ಮಾಡಿಕೊಂಡು ಮದುವೆಗೆ ಬರಬೇಕು ಎಂಬ ನಿಬಂಧನೆ ಮಾಡಿದರು. ಬೆನ್ನೊಡ್ಡಿ ಹೊಲೆಯ ಸತ್ತ. ರಾಜ ಸತ್ತದ್ದರಿಂದ ಹೊಲೆಯರ ವಂಶವನ್ನು ನಾಶ ಮಾಡುತ್ತ ಬಂದರು. ಸಣ್ಣ ಹುಡುಗನೊಬ್ಬ ತಪ್ಪಿಸಿಕೊಂಡು ಬಟ್ಟೆ ಒಗೆಯುತ್ತಿದ್ದ ಅಗಸನ ಆಶ್ರಯ ಬೇಡಿದ. ಅಗಸ ಬಾನೆಯ ಕೆಳಗೆ ಬಚ್ಚಿಟ್ಟ. ಅಟ್ಟಿಸಿಕೊಂಡು ಬಂದವರು ಅವನನ್ನು ಪತ್ತೆ ಹಚ್ಚಿ ಕೊಲ್ಲಲು ಹೋದಾಗ ತನ್ನ ಮಗನೆಂದು ಹೇಳಿದ. ಜೊತೆಯಲ್ಲಿ ಊಟ ಮಾಡಿದರೆ ನಂಬುವುದಾಗಿ ಹೇಳಿದರು. ಬಾಳೆ ಎಲೆಯಲ್ಲಿ ಊಟ ಕಲಿಸಿ ಅರ್ಧ ಹೊಲೆಯನ ಕಡೆ ನೂಕಿ ನಡುವೆ ಗೆರೆ ಹಾಕಿದ ಅಗಸ. ಬಾಳೆ ಎಲೆಯಲ್ಲಿ ಗೆರೆಯು ಅಂದಿನಿಂದ ಬಂದಿತು. ಹಾಗೆಯೇ ಅಗಸನಿಗೆ ಹೊಲೆಯ ಮಗನಾದ. ಅಗಸರ ಸಾವು ಸಂಸ್ಕಾರದ ಆಚರಣೆಗಳಲ್ಲಿ ಹೊಲೆಯರು ಪಾಲ್ಗೊಳ್ಳುತ್ತಾರೆ.

ಮತ್ತೊಂದು ಕಥೆಯ ಪ್ರಕಾರ, ಮಾಲುಮೇಲುಕುಮಾರ ಹೆಂಡ್ತಿ ಮನೆಗೆ ಹೋಗುತ್ತಿದ್ದ. (ಪಿಚ್ಚಕಿಗುವ್ವ) ಗುಬ್ಬಿಗೆ ಹೊಲೆಯ ಮಾಲುಮೇಲುಕುಮಾರ ನೇಣುಬಲೆಯ ಉರುಲು ಹರಡಿರುತ್ತಾರೆ. (ಉರುಲು ಹಾಕುತ್ತಿರುತ್ತಾನೆ.) ಗುಬ್ಬಿಯೊಂದು ಗೂಡು ಕಟ್ಟಿತ್ತು. ಹುಲ್ಲ ಪೊದೆಯಲ್ಲಿ ೧೨ ಜೊತೆ ನೇಗಿಲು ಕಟ್ಟಿಕೊಂಡು ಒಕ್ಕಲಿಗರು ಉಳಲು ಬರುತ್ತಾರೆ. ದನಗಳು ಅಲ್ಲಿಗೆ ಬರುವಷ್ಟರಲ್ಲಿ ಉಷ್ ಎನ್ನುತ್ತಾನೆ. ಹುಲಿಯೋ ಏನೋ ಬಂದಿದೆ ಎಂದು ತಿಳಿದು ನೇಗಿಲು ಮೇಟಿಗಳನ್ನು ಹಿಡಿದು ಬರುತ್ತಾರೆ. ಏನೆಂದು ವಿಚಾರಿಸಲು ಗುಬ್ಬಿಯನ್ನು ಹಿಡಿಯಲು ಕಾಯುತ್ತಿರುವುದಾಗಿ ಹೇಳುತ್ತಾನೆ. ಕೋಪಗೊಂಡು ಅವನನ್ನು ಚೆನ್ನಾಗಿ ಹೊಡೆದು ಅಲ್ಲೇ ಇದ್ದ ಗೊಬ್ಬರದ ಗುಡ್ಡಕ್ಕೆ ಅವನನ್ನು ಒರಗಿಸುತ್ತಾರೆ. ಅತ್ತೆ ಮನೆಗೆ ಹೋಗುತ್ತಿದ್ದವನನ್ನು ಕರೆದು ಸಂದೇಶ ಕಳುಹಿಸುತ್ತಾನೆ.

ಮಾಲುಮೇಲುಕುಮಾರ್ದು ಮಾಟವೈಪು ತಪ್ಪಿ; ಮಹವೇರಿಗುಡ್ಡಮುಕಿ ಒರಗಿನಾಡು. ಒಸೆ ಒಸೆಗಾರಮ್ಮತ ಪಚ್ಚನಿ ಪಲ್ಲಕ್ಕಿ, ನೋಟಿಮೇಳಂ, ಚೇತಿತಾಳಂ, ಪುತ್ತಾರಿಚಂಬುಲೋ ನೀಳ್ಳು, ವೇಗನ ರಾಕಾಪೋತೆ ಶೀಘ್ರುನ ಸೇರುಕೊಂಟಾಡಂಟ ಅನಿ ಚೆಪ್ಪಂಡಿ ಎಂದು ಹೇಳಿಕಳುಹಿಸುತ್ತಾನೆ. ಅರ್ಥಮಾಡಿಕೊಂಡು

ಅತ್ತೆ-ಮಗಳು ಬರುತ್ತಾರೆ. (ಮಾಲುಮೇಲು ಕುಮಾರನು ಮಾತಿನ ವರಸೆಗೆ ತಪ್ಪಿ ಮಹಾಮೇರು ಗುಡ್ಡಕ್ಕೆ ಆತುಕೊಂಡಿದ್ದಾನೆ. ಏನೇ ಏನೇ ಯವರ ಅಮ್ಮನನ್ನು ಹಸುರಿನ ಪಲ್ಲಕ್ಕಿ (ಚಟ್ಟ), ಬಾಯಿಯ ಮೇಳ ಕೈಯ್ಯ ತಾಳ (ಅಳುತ್ತಾ- ಬಾಯಿ ಬಡೆದುಕೊಳ್ಳುತ್ತಾ ಸಣ್ಣ ಗಡಿಗೆಯಲ್ಲಿ ನೀರು ತೆಗೆದುಕೊಂಡು ವೇಗವಾಗಿ ಬರದಿದ್ರೆ ಶೀಘ್ರವಾಗಿ ಸೇರಿಕೊಳ್ಳುತ್ತಾನೆಂದು ಹೇಳಿ ಎಂದು ಸುದ್ದಿಯನ್ನು ತಲುಪಿಸುತ್ತಾನೆ. ಇದನ್ನು ಅರ್ಥೈಸಿಕೊಂಡ ಅವನ ಹೆಂಡತಿ ಹಾಗೂ ಅವನ ಹೆಂಡತಿಯ ತಾಯಿ ಶವಸಂಸ್ಕಾರದ ಸಿದ್ಧತೆಗಳೊಂದಿಗೆ ಬರುತ್ತಾರೆ.) ಈ ಐತಿಹ್ಯದ ಪ್ರಕಾರ ಕೋಲಾರ ಜಿಲ್ಲೆಯಲ್ಲಿ ಯಾವುದೋ ಒಂದು ಕಾಲಘಟ್ಟದಲ್ಲಿ ಅಕ್ಕಸಾಲಿಗರ ಪ್ರಾಬಲ್ಯವಿದ್ದ ಸೂಚನೆಗಳು ಕಂಡುಬರುತ್ತವೆ. ಆಂಧ್ರಪ್ರದೇಶದ ಅನುಭಾವಿ ಕವಿಯಾಗಿ, ಕಾಲಜ್ಞಾನಿಯಾಗಿ ಪ್ರಸಿದ್ಧಿ ಪಡೆದ ವೀರಬ್ರಹ್ಮಯ್ಯನು ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರದ ಅಕ್ಕಸಾಲಿಗರ ಸಮುದಾಯಕ್ಕೆ ಸೇರಿದವನೆಂಬ ಐತಿಹ್ಯವು ಪ್ರಚಲಿತವಿದೆ.

**ವೀರಬ್ರಹ್ಮಯ್ಯ** : ಚಿಕ್ಕಬಳ್ಳಾಪುರದ ವೀರಭೋಜಾಚಾರಿ-ಪಾಪಮ್ಮ ಎಂಬ ದಂಪತಿಗಳು ಕಾಶಿಯಾತ್ರೆಗೆ ಹೋಗಿ ಅಲ್ಲಿ ಋಷಿಗಳನ್ನು ಮಕ್ಕಳ ಫಲ ಕೇಳುತ್ತಾರೆ. ಅನಾಥ ಮಗುವೊಂದನ್ನು ಋಷಿಗಳು ಕೊಟ್ಟು ಹೊಡೆಯದೆ ಬಡಿಯದೆ ಸಾಕಬೇಕೆನ್ನುತ್ತಾರೆ. ಜೊತೆಗೆ ಒಂದು ಲಿಂಗವನ್ನು ಕೊಡುತ್ತಾರೆ. ಮಗುವನ್ನು ತಂದ ಮೇಲೆ ವೀರಭೋಜಾಚಾರಿಯೂ ತೀರಿಕೊಂಡ ೧೨ ವರ್ಷಗಳ ಬಳಿಕ ಹುಡುಗ ದೇಶಾಂತರ ಹೊರಟ. ಪಾಪಮ್ಮನು ಸತ್ತ ಮೇಲೆ ಮತ್ತೊಮ್ಮೆ ಬಂದು ಕರ್ಮ ತೀರಿಸಿ ಹೊರಟ. ಆಂಧ್ರದ ಒಂದು ಊರಲ್ಲಿ ಗೋವಿಂದರೆಡ್ಡಿ-ಅಚ್ಚಮ್ಮನ ಮನೆಯಲ್ಲಿ ಜನ ಕಾಯುತ್ತಿದ್ದ. ಮೇಯಲು ಬಿಟ್ಟು ಒಂದು ಕಡ್ಡಿಯಿಂದ ಎಲ್ಲೆ (ಗೆರೆ) ಹಾಕಿ ಕಾಲಜ್ಞಾನ ಬರೆಯುತ್ತಿದ್ದ. ಇದನ್ನು ನೋಡಿದ ಅಚ್ಚಮ್ಮನು ಮಹಿಮಾವಂತನನ್ನು ದನಕಾಯಲು ನೇಮಿಸಿದ್ದಕ್ಕಾಗಿ ಅಚ್ಚಮ್ಮ ಕ್ಷಮೆ ಕೋರಿದಳು. ಅವಳ ಮಗ ಕುರುಡನಿಗೆ ಕಣ್ಣು ಬರುವಂತೆ ಬೇಡಿದಳು. ಹಿಂದಿನ ಜನ್ಮದಲ್ಲಿ ಆತ ತಾಯಿಯ ಮಾತು ಕೇಳಿ ಹೆಂಡತಿಯ ಕಣ್ಣು ಕಿತ್ತಿದ್ದ, ಆ ಪಾಪ ಪರಿಹಾರವಾದರೆ ಮಾತ್ರ ಕಣ್ಣು ಬರುತ್ತದೆ ಎಂದು ಹೇಳಿದ, ಮುಂದೆ ಈತನೇ ಆಂಧ್ರಪ್ರದೇಶದಲ್ಲಿ ವೀರಬ್ರಹ್ಮಯ್ಯನೆಂಬ ಅವಧೂತ ಕವಿಯಾಗಿ ಪ್ರಾವೀಣ್ಯ ಪಡೆದ ಎಂದು ಐತಿಹ್ಯವಿದೆ.

**ಮಾಸ್ತೀಕರು** : ಕೋಲಾರ ಜಿಲ್ಲೆಯಲ್ಲಿ ಕಂಡುಬರುವ ಮಾಸ್ತೀಕರಲ್ಲಿ ಮಾದಿಗ ಮಾಸ್ತೀಕರು ಮತ್ತು ಮಾಲ ಮಾಸ್ತೀಕರು ಎಂದು ಎರಡು ವಿಧ. ಹೊಲೆಯ ಮಾಸ್ತೀಕರ ಮೂಲಪುರುಷನಾದ ಚನ್ನಯ್ಯದಾಸು ಮಾದಿಗಮಲ್ಲನಾದ ಆದಿಜಾಂಬವನಿಂದ ಹೊಲೆಯ ಹೆಣ್ಣುಮಕ್ಕಳ ಮಾನ ಕಾಪಾಡಿದನೆಂಬ ದಂತಕಥೆ ಇದ್ದು ಈ ಕಾರಣದಿಂದಾಗಿಯೇ ಹೊಲೆಯ ಹೆಣ್ಣು ಮಕ್ಕಳು ತಮ್ಮ ಮಾನ ಕಾಪಾಡಿದವನನ್ನು

ತಮ್ಮ ಮಗನೆಂದೇ ಭಾವಿಸಿ, ಆತನನ್ನು ಆತನ ಸಂತತಿಯವರನ್ನು ಸಾಕುವ ಮಾತು ನೀಡಿದರಂತೆ. ಹೊಲೆಯರ ಮಕ್ಕಳೆಂದು ಕರೆದುಕೊಳ್ಳುವುದರ ಹಿಂದೆ ಈ ಕಥೆಯ ಸಮರ್ಥನೆಯಿದೆ. ಜಿಲ್ಲೆಯ ಕಾಗತಿ, ಹೊದಲಿ, ಗುಮ್ಮರೆಡ್ಡಿಪುರ ಮುಂತಾದ ಎಡೆಗಳಲ್ಲಿ ಮಾದಿಗ ಮಾಸ್ಟೀಕರ ಮಠಗಳು ಹಿಂದೆ ಇದ್ದುವೆಂದು ಹೇಳುತ್ತಾರೆ. ಮಾಸ್ಟೀಕರೊಂದಿಗೆ ಕೆಲವು ಕುಲಗಳು ಹುಟ್ಟಿಕೊಂಡಿದ್ದರ ಬಗ್ಗೆ ಐತಿಹ್ಯವೊಂದು ಹೀಗೆ ವಿವರಣೆಯನ್ನು ಒದಗಿಸುತ್ತದೆ. 'ಒಡಹುಟ್ಟಿದ ಅಕ್ಕನ ತಗೊಂಡೋದವನು ದಕ್ಕೋನಾದ, ತಂಗಿ ತಗೊಂಡೋದವನನ್ನು ಹಳಮಕ್ಕಳು ಮಾಡಿದರು. ಮಾತಿಗೆ ತಪ್ಪಿದೋನು ಮಾಸ್ಟಿಕ'[೧೫] ಎನ್ನುತ್ತಾರೆ.

ಮಾಸ್ಟೀಕರು ತಮ್ಮ ಜನಾಂಗದ ಹೆಸರಿನ ನಿಷ್ಪತ್ತಿಯನ್ನು ವಿವರಿಸುವುದು ಹೀಗೆ : ಹನುಮಂತರಾವ್ ಎಂಬ ಮಾದಿಗ ಕುಲದಾತ ಕಂಚಿಯ ಕಾಮಾಕ್ಷಿ ತೇರನೆತ್ತಿ ಎಳೆದು, ರಾಜರ ಅಂಬಾರಿ ಆನೆಯ ಮೇಲೆ ಮೆರವಣಿಗೆಯ ಗೌರವ ಪಡೆದು, ರಾಜರಿಂದ ಆನೆಯ ಮೇಲೆ 'ಮಹಾರೀಕ್' ಎಂದು ಹೊಗಳಿಸಿಕೊಂಡನಂತೆ. ಈ ಮಹಾರೀಕ್ ಎಂಬ ಬಿರುದು, ಹೊಗಳಿಕೆಯೇ ಕ್ರಮೇಣ ಬಳಕೆಯಲ್ಲಿ ಮಾಸ್ಕೀಕ್ ಎಂದಾಗಿದೆ. ಹೊಲೆಯ ಮಾಸ್ಟೀಕರಲ್ಲೂ ಇಂತಹುದೇ ಐತಿಹ್ಯವಿದೆ. ಹೊಲೆಯ ಕುಲದ ಚೆನ್ನಯ್ಯದಾಸು ಎಂಬಾತ ಹೊಲೆಯ ಕುಲದ ಹೆಣ್ಣುಗಳ ಮಾನಹರಣ ಮಾಡುತ್ತಿದ್ದ ಮಾದಿಗ ಕುಲದ ಆದಿಜಾಂಬವಂತನನ್ನು ಕುಸ್ತಿಯಲ್ಲಿ ಸೋಲಿಸಿ ಸಾಯಿಸುತ್ತಾನೆ. ಆಗ ರಾಜರು ಚೆನ್ನಯ್ಯದಾಸುವನ್ನು ಅಂಬಾರಿ ಆನೆಯ ಮೇಲೆ ಮೆರವಣಿಗೆ ತೆಗೆಸಿ ಆನೆ ಮೇಲೆ 'ಮಾಲ (ಹೊಲೆಯ) ಮಹಾರೀಕ್' ಎಂದು ಹೊಗಳಿದರಂತೆ. ಎರಡೂ ಒಳಪಂಗಡಗಳ ವಿಷಯದಲ್ಲಿಯೂ ಮಹಾರೀಕ್ ಎಂಬ ಸಾಮಾನ್ಯ ಹೊಗಳಿಕೆಯ ಪದವೇ ಅವರ ಜನಾಂಗದ ಹೆಸರಿನ ಮೂಲವಾಗಿರುವುದು ಕೂಡ ಕುತೂಹಲಕಾರವಾಗಿದೆ. ಹೊಲೆಯ ಮಾಸ್ಟೀಕರ ಪುರಾಣ ಕಥೆಯೊಂದರಲ್ಲಿ ಕೂಡ ಆದಿಜಾಂಬವಂತನು ಹೊಲೆಯ ಮಾಸ್ಟೀಕನನ್ನು ನಿನ್ನಕ್ಕನ ಮಾಲ್‌ರೀಕ್ ಎಂದು ಬೈಯುವ ಪ್ರಸಂಗ ಕೂಡ ಮೇಲಿನ ಮಾಸ್ಟೀಕರ ಜನಾಂಗದ ಹೆಸರಿನ ಪದ ನಿಷ್ಪತ್ತಿಯನ್ನೇ ಹೆಚ್ಚು ಸಮರ್ಥಿಸುತ್ತಿರುವಂತಿದೆ.

ಮತ್ತೊಂದು ಐತಿಹ್ಯದ ಪ್ರಕಾರ, ಹಿಂದೆ ಕಂಚಿ ಪಟ್ಟಣವನ್ನು ಯದುವಂಶದ ಯಯಾತಿ ಎಂಬ ದೊರೆ ಆಳುತ್ತಿದ್ದನಂತೆ. ಅದೇ ಪಟ್ಟಣದ ಮಾದಿಗರ ಕೇರಿಯಲ್ಲಿ ಮೂವರು ಅಣ್ಣ ತಮ್ಮಂದಿರಿದ್ದರಂತೆ. ಇವರಲ್ಲಿ ಚಿಕ್ಕವನು ಹನುಮಂತರಾವ್ ಗರಡಿ ವಿದ್ಯೆಯನ್ನು ಕಲಿತಿದ್ದ. ಆ ಪಟ್ಟಣದ ಸುತ್ತಲೂ ಇದ್ದ ಭಯಂಕರ ಅಡವಿಯಲ್ಲಿ ಸಿಂಹಗಳು ಹೆಚ್ಚಾಗಿದ್ದವು. ಅವು ಊರ ಕೋಟೆಯಲ್ಲೇ ವಾಸಿಸತೊಡಗಿದವು. ನಿರ್ಭೀತಿಯಿಂದ ಕಂಚಿ ಪಟ್ಟಣದೊಳಕ್ಕೂ ನುಗ್ಗಿ ಜನರನ್ನು ತಿನ್ನತೊಡಗಿದವು. ಈ ರೀತಿಯ ಹಿಂಸೆಯನ್ನು ತಾಳಲಾರದೆ ರಾಜನು ಸಿಂಹಗಳನ್ನು ಕೊಂದ ವೀರನಿಗೆ ತಕ್ಕ ಬಹುಮಾನ ಕೊಡುವುದಾಗಿ ಡಂಗೂರ ಹಾಕಿಸಿದ. ಆಗ ಹನುಮಂತರಾವು ಮುಂದೆ ನುಗ್ಗಿ ಕಾಡಿನ ಸಿಂಹಗಳನ್ನೆಲ್ಲಾ ಕೊಂದ. ದೊರೆ ಆತನನ್ನು ಜಗಜಟ್ಟಿಯನ್ನಾಗಿ ನೇಮಿಸಿಕೊಂಡ.[೧೬]

**ಬುಡಬುಡಕಿ ಸಮುದಾಯ :** ಇವರು ಗ್ರಾಮೀಣ ವಲಯದಲ್ಲಿ ಭವಿಷ್ಯ ನುಡಿಯುವ ಒಂದು ಸಮುದಾಯ. ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದಲ್ಲಿ ವ್ಯಾಪಕವಾಗಿ ನೆಲೆಸಿದ್ದಾರೆ. ಬುಡಬುಡಿಕಿ ಎನ್ನುವ ಪದ ಭಿಕ್ಷೆ ಬೇಡುವಾಗ ಬಳಸುವ ಬುಡಬುಡು ಎಂದು ಶಬ್ದ ಮಾಡುವ ಸಾಧನದಿಂದ ಬಂದಿರಬಹುದು. ಆಂಧ್ರಪ್ರದೇಶದಲ್ಲಿ ಇವರನ್ನು ಬುಡಬುಡಿಕಿ ಎಂದು ಉಚ್ಚರಿಸುತ್ತಾರೆ. ಐತಿಹ್ಯದಂತೆ ಶಿವನು ದಕ್ಷಬ್ರಹ್ಮನ ದಂಡನ್ನು ಸಂಪೂರ್ಣವಾಗಿ ನಾಶ ಮಾಡಿದಾಗ ಪಾರ್ವತಿದೇವಿಯು "ಸ್ವಾಮಿ ನನ್ನ ವಂಶ ಸರ್ವನಾಶವಾಗದಂತೆ ಮಾತ್ತೊಂದು ನಡೆಸಿಕೊಡಬೇಕೆಂದು ಬೇಡಿದಳಂತೆ. ಆಗ ಶಿವನು ದಕ್ಷಬ್ರಹ್ಮನ ರಕ್ತದಿಂದ ಒಬ್ಬನ್ನು ಸೃಷ್ಟಿಸಿದನೆಂದೂ ಅವನು ಮೇಲೇಳುವಾಗ ಬಡಬಡಿಸುತ್ತಾ ಎದ್ದು ಕುಳಿತನೆಂದೂ, ಆಗ ಅವನಿಗೆ ಶಿವನು ತನ್ನ ಕೈಯಲ್ಲಿದ್ದ ಡಮರನ್ನು ನೀಡಿ ಸೂರ್ಯ ಚಂದ್ರರಿರುವ ತನಕ ಜೀವಿಸು" (ಕರ್ನಾಟಕ ರಾಜ್ಯಕೋಶ ಸಂ.೪, ಪು.೭೧) ಎಂದು ಆಶೀರ್ವದಿಸಿ ಕಳುಹಿಸಿಕೊಟ್ಟನೆಂದೂ ಅವನೇ ಬುಡಬುಡಿಕೆಯವನೆಂದು ಹೇಳುವರು.

ಶಿವ-ಪಾರ್ವತಿ ಭಕ್ತಾದಿಗಳ ಬೇಡಿಕೆ-ಇಷ್ಟಗಳನ್ನು ಪೂರೈಸುತ್ತಿದ್ದರು. ಭಕ್ತಾದಿಗಳು ತಮಗೆ ಬೇಕಾದ್ದನ್ನೆಲ್ಲ ಬೇಡಿ ಪಡೆಯುತ್ತಿದ್ದರು. ಒಬ್ಬ ಭಕ್ತ ಶಿವನನ್ನು ನಿನ್ನ ಡಮರುಗ ಬೇಕು ಕೊಡೆಂದು ಕೇಳಿದ. ಅದರಂತೆ ಶಿವನಿಂದ ಪಡೆದ. ಅದನ್ನು ನುಡಿಸುತ್ತಾ ಜನರ ಭವಿಷ್ಯ, ಇಷ್ಟ-ಅನಿಷ್ಟ, ಕಾರ್ಯ-ಕೇಡುಗಳನ್ನು ಹೇಳುವ ವೃತ್ತಿಯನ್ನು ಮಾಡಿಕೊಂಡ. ಸಂತತಿಯಿಂದ ಸಂತತಿಗೆ ಇದು ಸತತವಾಗಿ ಸಾಗಿ ಬಂದಿದೆ ಎಂಬ ಐತಿಹ್ಯವಿದೆ. ಮತ್ತೊಂದು ಐತಿಹ್ಯದಂತೆ "ಒಮ್ಮೆ ಶಿವ ಪಾರ್ವತಿಯರು ತಮ್ಮ ಭಕ್ತರಿಗೆ ವರಗಳನ್ನು ನೀಡುತ್ತಾ ಇದ್ದರಂತೆ. ಬಂದ ಬಡವರಿಗೆ ಅವರು ಬೇಡಿದ್ದನ್ನು ದಾನ ಮಾಡಿದರು. ಕೊನೆಗೆ ಇವರ ಕೈಯಲ್ಲಿದ್ದುದೆಲ್ಲ ಮುಗಿದಾಗ ಬುಡಬುಡಿಕೆಯ ಜನಾಂಗದವರು ಬಂದು ಬೇಡತೊಡಗಿದರು. ಆಗ ಪಾರ್ವತಿ ಅವರನ್ನು ಬರಿಗೈಯಲ್ಲಿ ಕಳುಹಿಸಲೊಪ್ಪದೆ, ಶಿವನ ಕೈಯಲ್ಲಿದ್ದ ಡಮರುವನ್ನೇ ಅವರಿಗೆ ದಾನ ಮಾಡಿಸಿದಳಂತೆ." ಇದನ್ನೇ ತಮ್ಮ ಉಪಜೀವನದ ಆಧಾರವಾಗಿಟ್ಟುಕೊಂಡು ಇವರು ಬದುಕುತ್ತಿದ್ದಾರೆ.[೭೬]

**ಮೇದರು :** ಮೇದರು ಆಂಧ್ರ ತಮಿಳುನಾಡಿಗೆ ಸಮೀಪದ ಕರ್ನಾಟಕದ ಗಡಿಪ್ರದೇಶಗಳಿಂದ ಬಂದವರು. ಕೆಲವು ಕುಟುಂಬಗಳು ಆಂಧ್ರಪ್ರದೇಶ ಹಾಗೂ ತಮಿಳುನಾಡಿನಿಂದ ಬಂದವು. ಗುಂತಕಲ್‌ನಿಂದ ೬೦ ಮೈಲಿ ದೂರದಲ್ಲಿರುವ ಆದಿಮಲ್ಲಮ್ಮನೆಂಬ ದೇವತೆ ಸೇಲಂ ಮೇದರ ಮೂಲದೈವ. ಈ ಪ್ರದೇಶವು ಗುಂಟೂರಿನ ಹತ್ತಿರದಲ್ಲಿದೆ. ಕೋಲಾರ ಜಿಲ್ಲೆಯಲ್ಲಿ ಕಂಡುಬರುವ ಮೇದರು ಕೆಲವು ತೆಲುಗು ಮೂಲದವರು ಮತ್ತೆ ಕೆಲವರು ತಮಿಳು ಮೂಲದವರು. ಕೋಲಾರ ಕೆ.ಜಿ.ಎಫ್. ಮಾಲೂರು ಮುಳುಬಾಗಿಲು ಕಡೆಗಳಲ್ಲಿ ತಮಿಳು ಮೇದರು, ಉಳಿದೆಡೆಗಳಲ್ಲಿ ತೆಲುಗು ಮೇದರರು ಸಾಮಾನ್ಯವಾಗಿ

ಕಂಡುಬರುತ್ತಾರೆ. ಈ ಬುಡಕಟ್ಟಿನವರನ್ನು ಮೇದ, ಮೇದಾರ, ಮ್ಯಾದರ, ಮೇದಾರಿ, ಮೇದಕಾಳ್, ಮ್ಯಾದ, ಮೇದರ್ಲು ಅಥವಾ ಮೇದರಕಾರನ್ ಬುರುಡ ಬುಡ್ಡರ ಗೌರಿಗಳು ಎಂದು ಕರೆಯಲಾಗಿದೆ. ಕನ್ನಡ ಮೇದರರನ್ನು ಮೇದ, ಮೇದಾರ, ಮ್ಯಾದರ ಎಂದು ಸಂಬೋಧಿಸಿದರೆ, ಮೇದಕಳ್, ಮೇದರಕಾರನ್ ಮುಂತಾಗಿ ತೆಲುಗು ಮಾತನಾಡುವವರನ್ನು ಹೆಸರಿಸುತ್ತಾರೆ. ಮೇದರ ವೃತ್ತಿಮೂಲಕ್ಕೆ ಸಂಬಂಧಿಸಿದ ಐತಿಹ್ಯಗಳು ಹೀಗಿವೆ : ೧. ಪಾರ್ವತಿಗೆ ಮೊರಗಳನ್ನು ಮಾರಲು ಸೃಷ್ಟಿಸಲ್ಪಟ್ಟ ವ್ಯಕ್ತಿಯ ಪರಂಪರೆಗೆ ಇವರು ಸೇರಿದವರು. ಶಿವನ ವಾಹನ ನಂದಿಯು ಕಬ್ಬಿಣದ ಕಾಳುಗಳನ್ನು ತಿಂದು ಮೆಲುಕು ಹಾಕುತ್ತಾ ಇರುವಾಗ ನಂದಿಯ ಬಾಯಿಯಿಂದ ಹುಟ್ಟಿದವನು ಮೂಲ ಮೇದ. ಶಿವನು ತನ್ನ ಮೈ ಮೇಲಿನ ಹಾವುಗಳನ್ನು ಬಿದಿರು ಬೆತ್ತಗಳನ್ನಾಗಿ ಸೃಷ್ಟಿಸಿದಾಗ ಈ ಮೇದನು ತನ್ನ ಕಲಾಕೌಶಲ್ಯದಿಂದ ಅವುಗಳನ್ನು ಬುಟ್ಟಿಗಳಾಗಿ ರೂಪಿಸಿದ. ಇದರಿಂದ ಸಂಪ್ರೀತನಾದ ಶಿವನು ಬೆಲೆ ಬಾಳುವಂಥ ವಜ್ರ-ವೈಢೂರ್ಯಗಳನ್ನು ಬುಟ್ಟಿಗೆ ತುಂಬಿಸಿ ನೀಡಿದ. ಆದರೆ ಮೇದನು ಅವುಗಳನ್ನು ಬೇಡವೆಂದು ಹೇಳಿದ. ತನ್ನ ವೃತ್ತಿಗೆ ಪ್ರತಿಫಲವಾಗಿ ಹಿಡಿಗೂಳು ಸಾಕೆಂದು ಬೇಡಿದ. ೨. ಒಮ್ಮೆ ಪಾರ್ವತಿಗೆ ಮೊರ ಬೇಕಾಗಿತ್ತು. ಹಾಗೆಂದು ಶಿವನಲ್ಲಿ ಹೇಳಿದಳು. ಶಿವನು ತನ್ನ ವಾಹನ ನಂದಿಗೆ "ಬಿದಿರು ಹೆಣೆಯುವ ಮನುಷ್ಯನನ್ನು ತಯಾರಿಸುವಂತೆ ಹೇಳಿದನು. ನಂದಿಯು ಮೆಲುಕು ಹಾಕುವಾಗ ಮನುಷ್ಯನೊಬ್ಬನು ಹುಟ್ಟಿದ. ಪಾರ್ವತಿಯ ಕೋರಿಕೆಯನ್ನು ತೀರಿಸುವಂತೆ ಅವನಿಗೆ ಹೇಳಿದ. ನಂದಿಯು ಒಂದು ಹಾವಿನ ತಲೆಯನ್ನು ಬೆಟ್ಟದಲ್ಲಿ ನೆಟ್ಟು ಬಿದಿರನ್ನು ಬೆಳೆಸಿದ". ಆ ಬಿದಿರಿನಿಂದ ಮೇದನು ಮೊರ ಹೆಣೆದು ಕೊಟ್ಟ.

ಒಮ್ಮೆ ದಕ್ಷನು ತಾನು ಮಾಡಲಿರುವ ಯಜ್ಞಕ್ಕಾಗಿ ತನ್ನ ಅಳಿಯ ಹಾಗೂ ಮಗಳಾದ ಶಿವ ಪಾರ್ವತಿಯರನ್ನು ಆಹ್ವಾನಿಸಲು ಮನೆಗೆ ಬರುತ್ತಾನೆ. ಬಂದವನೇ ಶಿವನಿಗೆ ನಮಸ್ಕರಿಸುತ್ತಾನೆ. ಆದರೆ ಶಿವನು ತಪೋಮಗ್ನನಾದುದರಿಂದ ದಕ್ಷನನ್ನು ಗಮನಿಸುವುದಿಲ್ಲ. ಇದರಿಂದ ದಕ್ಷನು ಕುಪಿತಗೊಳ್ಳುತ್ತಾನೆ, ಹಿಂದಿರುತ್ತಾನೆ. ಪಾರ್ವತಿಯು ತಂದೆಯ ಮನೆಯ ಯಜ್ಞಕ್ಕೆ ಹೋಗುತ್ತಾಳೆ. ಅಲ್ಲಿ ತನಗೆ ಗೌರವಾದರಗಳು ಸಿಗಲಿಲ್ಲವೆಂದು ಕಣ್ಣೀರು ಹಾಕುತ್ತಾಳೆ. ಇದರಿಂದ ಭೂಮಿಯೇ ಬಾಯಿ ತೆರೆಯುತ್ತದೆ. ಪಾರ್ವತಿಯು ಅದರಲ್ಲಿ ಅದೃಶ್ಯಳಾಗುತ್ತಾಳೆ. ಮುಂದೆ ಅವಳು ಹಿಮವಂತನ ಮಗಳಾಗಿ ಹುಟ್ಟಿ ಶಿವನನ್ನು ಮದುವೆಯಾಗುತ್ತಾಳೆ. ಆಗ ಪಾರ್ವತಿಯು ಒಂದು ವ್ರತವನ್ನು ಮಾಡುತ್ತಾಳೆ. ಇದರಲ್ಲಿ ಬ್ರಾಹ್ಮಣರಿಗೆ ದಾನ ಕೊಡಲು ಮೊರಗಳ ಅವಶ್ಯಕತೆ ಇರುವುದಾಗಿ ಶಿವನಿಗೆ ಹೇಳಿದಳು. ಶಿವನು ಹಾವೊಂದನ್ನು ಬಿದಿರನ್ನಾಗಿ ಪರಿವರ್ತಿಸಿ ಗಣಪತಿ ಮತ್ತು ಇತರ ಗಣಗಳನ್ನು ಮನುಷ್ಯರನ್ನಾಗಿ ಪರಿವರ್ತಿಸಿದ. ಇವರು ಪಾರ್ವತಿಗೆ ಮೊರಗಳನ್ನು ಹೆಣೆದುಕೊಟ್ಟರು. ಅಲ್ಲದೆ ಮಹೇಂದ್ರಚಲದ ಗಂಧರ್ವ ಕನ್ಯೆಯರನ್ನು ಮದುವೆಯಾದರು. ಇವರಿಂದ ಹುಟ್ಟಿದ ಸಂತತಿಯು ಬಿದಿರಿನಿಂದ ವಸ್ತುಗಳನ್ನು ಹೆಣೆಯುವ ವೃತ್ತಿಯನ್ನೇ ಮುಂದುವರೆಸಿಕೊಂಡರು.

ಮೇದರಲ್ಲಿ ಎರಡು-ಮೂರು ಗುಂಪುಗಳಿದ್ದು, ಕೆಲವು ಕುಟುಂಬಗಳು ಆಂಧ್ರಪ್ರದೇಶದ ಕಡೆಯಿಂದ ಮತ್ತೆ ಕೆಲವು ಕುಟುಂಬಗಳು ತಮಿಳುನಾಡಿನ ಕಡೆಯಿಂದ ಕರ್ನಾಟಕಕ್ಕೆ ಬಂದಂಥವುಗಳಾಗಿವೆ. ಮತ್ತೆ ಕೆಲವರು ಕರ್ನಾಟಕದವರೇ ಆಗಿದ್ದಾರೆ. ಈ ವ್ಯತ್ಯಾಸವನ್ನು ಅವರ ಮಾತೃಭಾಷೆಯ ಆಧಾರದ ಮೇಲೆ ಗುರುತಿಸಬಹುದು. ಕೋಲಾರ ಜಿಲ್ಲೆಯ ಮೇದರನ್ನು ಗಮನಿಸಿದಾಗ ತೆಲುಗು ಮೇದರು ಆಂಧ್ರಪ್ರದೇಶದ ಗಡಿಭಾಗಗಳ ಕೋಲಾರದ ತಾಲೂಕುಗಳಲ್ಲಿಯೂ ತಮಿಳು ಮೇದರು ತಮಿಳುನಾಡಿನ ಗಡಿಭಾಗಗಳಲ್ಲಿಯೂ ಕಂಡುಬರುತ್ತಾರೆ. ಕೋಲಾರ, ಬಂಗಾರಪೇಟೆ, ದೇಗನಿಕೋಟೆ, ಮಾಲೂರು ಮುಂತಾದ ಕಡೆಗಳಲ್ಲಿ ತಮಿಳು ಮೇದರನ್ನು ಕಂಡರೆ, ಗೌರೀಬಿದನೂರು, ಮುಳಬಾಗಿಲು, ಶಿಡ್ಲಘಟ್ಟ, ಚಿಂತಾಮಣಿ, ಗುಡಿಗಂಡೆ, ಬಾಗೇಪಲ್ಲಿ ತಾಲೂಕುಗಳಲ್ಲಿ ತೆಲುಗು ಮೇದರು ಕಂಡುಬರುತ್ತಾರೆ.

"ಆಂಧ್ರ-ಗುಂತಕಲ್‌ನಿಂದ ೬೦ ಮೈಲಿ ದೂರದಲ್ಲಿ ಆದಿಮಲ್ಲಮ್ಮನೆಂಬ ದೇವತೆ ತೆಲುಗು ಮೇದರ ಮೂಲ ದೈವ. ಈ ಪ್ರದೇಶವು ಗುಂಟೂರಿನ ಹತ್ತಿರದಲ್ಲಿದೆ. ೬೦ ಮೈಲಿ ದೂರದ ಬೆಟ್ಟದ ಮೇಲೆ ಈ ದೇವಾಲಯವಿದೆ. ಇಂಥ ಬೆಟ್ಟ-ಗುಡ್ಡ ಪ್ರದೇಶಗಳಲ್ಲಿಯೇ ಹಿಂದೆ ಮೇದರ ನೆಲೆಗಳಿದ್ದವು. ಈಗಲೂ ಅಂಥ ದೇವತೆಗಳ ಗುಡಿಗಳು ಬಿದಿರು ಕಾಡುಗಳಲ್ಲಿ ಹಾಗೂ ಗುಡ್ಡಗಳಲ್ಲಿ ಕಾಣಬಹುದಾಗಿದೆ. ಗುಡ್ಡ ಪ್ರದೇಶದ ಈ ಮೇದರು ತಮ್ಮ ಮೂಲ ನೆಲೆಯಿಂದ ಹೊರಡಲು ಕಾರಣ ತಮ್ಮ ಉದ್ಯೋಗಕ್ಕೆ ಅಗತ್ಯವಾದ ಸಮೃದ್ಧ ಬಿದಿರು ಕಾಡುಗಳಿರುವ ಸ್ಥಳಗಳನ್ನು ಹುಡುಕಲೋಸುಗ, ಕೆಲವರು ತಮ್ಮ ಬೀಡುಗಳನ್ನು ತೊರೆದು ಪೇಟೆಯ ಸ್ಥಳಕ್ಕೆ ಬಂದು ನೆಲೆಸಿದರೆ ಮತ್ತೆ ಕೆಲವರು ತಮ್ಮ ವೃತ್ತಿಗೆ ಆದ್ಯತೆಯಿರುವ ಹೆಚ್ಚು ಬಿದಿರು ದೊರೆಯುವ ಕರ್ನಾಟಕದ ಹಲವು ಪ್ರದೇಶಗಳಿಗೆ ವಲಸೆ ಬಂದು ನೆಲೆಸಿದರು." ಮೊದಲು ಬಿದಿರು ದೊರೆಯುವ ಗುಡ್ಡ ಪ್ರದೇಶಗಳಲ್ಲಿ ವಾಸಿಸುತ್ತಾ ಬಿದಿರಿನ ವಸ್ತುಗಳನ್ನು ಹೆಣೆದು ಊರುಗಳಿಗೆ, ನಗರ ಪಟ್ಟಣ ಪ್ರದೇಶಗಳ ಸಂತೆಗಳಿಗೆ ಹೀಗೆ ಹೊತ್ತುಕೊಂಡು ಹೋಗಿ ಮಾರುತ್ತಿದ್ದರು. ಇತ್ತೀಚೆಗೆ ಪಟ್ಟಣ ಪ್ರದೇಶಗಳಲ್ಲಿ ನೆಲೆಸಿ ನಿರ್ದಿಷ್ಟ ಸ್ಥಳಗಳಲ್ಲಿ ತಮ್ಮ ವಸ್ತುಗಳ ವ್ಯಾಪಾರವನ್ನು ಕೈಗೊಂಡಿದ್ದಾರೆ. ಸಂತೆ ನಡೆಯುವ ದಿನಗಳಂದು ಅಲ್ಲಿಗೆ ತೆಗೆದುಕೊಡು ಹೋಗಿ ಮಾರುತ್ತಾರೆ. ಕೃಷಿ ಚಟುವಟಿಕೆಗಳು ನಡೆಯುವ ಕಾಲದಲ್ಲಿ ಹಳ್ಳಿಗಳಿಗೆ ಹೊತ್ತೊಯ್ದು ಮಾರುತ್ತಾರೆ. ಬಿದಿರು ತರಲು ಕಾಡಿನ ಗುಡ್ಡ ಪ್ರದೇಶಗಳಿಗೆ ಆಗಾಗ ಹೋಗುತ್ತಾರೆ. ಕಡಿದ ಬಿದಿರನ್ನು ತಮ್ಮ ವಾಸಸ್ಥಾನಗಳಿಗೆ ಸಾಗಿಸಿಕೊಂಡು ಬರುತ್ತಾರೆ. ಮತ್ತೆ ಅದು ಮುಗಿಯುವವರೆಗೆ ಕಾಡಿನ ಕಡೆಗೆ ಹೋಗುವುದಿಲ್ಲ.

**ಕೊರಮರು :** ಕೊರಮರು ಮೂಲತಃ ತಮಿಳುನಾಡಿನವರು. ದಕ್ಷಿಣ ಭಾರತದ ಅಲೆಮಾರಿ ಬುಡಕಟ್ಟಿಗೆ ಸೇರಿದವರು. ಕರ್ನಾಟಕದಲ್ಲಿ ಕೊರಮ, ಕೊರಮಶೆಟ್ಟಿ, ಕುಂಚಿ ಕೊರಮರು, ಭಜಂತ್ರಿ,

ಕೊರಚ, ಕೊರವ ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಜನಾಂಗದ ಜೊತೆಯಲ್ಲಿಯೇ ಅವರವರು ಅನುಸರಿಸುವ ವೃತ್ತಿಯ ಹೆಸರೂ ಕೂಡಿಕೊಂಡು ಇವರು ಗುರುತಿಸಲ್ಪಡುತ್ತಾರೆ.

**ಐತಿಹ್ಯಗಳು :** ೧. ಒಂದು ಸಲ ಪಾರ್ವತಿಯು ಬೆಲೆಬಾಳುವ ಹರಳುಗಳನ್ನು ಹಾವಿನ ಹೊಟ್ಟೆಯಲ್ಲಿ ತುಂಬಿ ಅದರಿಂದ ತೊಟ್ಟಿಲನ್ನು ತಯಾರಿಸಿಕೊಡುವಂತೆ ಮೇದಾರನೊಬ್ಬನಿಗೆ ಹೇಳಿದಳು. ಮೇದಾರನು ಹಾವನ್ನು ಕತ್ತರಿಸಿ ಸೀಳಲು ಯತ್ನಿಸುವಾಗ ಅದರ ಹೊಟ್ಟೆಯಲ್ಲಿನ ಹರಳುಗಳ ಕರಕರ ಧ್ವನಿಗೆ ಹೆದರಿ ಹಾವನ್ನು ಮುಟ್ಟಲು ಹಿಂಜರಿದ. ಆಗ ಪಾರ್ವತಿಯು ಕೊರಚನಿಗೆ ಆ ಕೆಲಸವನ್ನು ವಹಿಸಿದಳು. ಅವನು ಬಿದಿರನ್ನು ಸೀಳುವಂತೆ ಹಾವನ್ನು ಸೀಳಿ ತೊಟ್ಟಿಲನ್ನು ತಯಾರಿಸಿಕೊಟ್ಟ. ಇದರಿಂದ ಸಂತೃಪ್ತಳಾದ ಪಾರ್ವತಿ ಕೊರಚನಿಗೆ ತಾನು ಕಣಿ ಹೇಳಲು ಬಳಸುತ್ತಿದ್ದ ಬಿದಿರಿನ ಮಾಂತ್ರಿಕ ದಂಡವನ್ನು ಮತ್ತು ಮೊರವನ್ನು ಕೊಟ್ಟಳು. ಇದರಿಂದ ಕೊರವರ ಹೆಣ್ಣುಮಕ್ಕಳು ಕಣಿ ಹೇಳುವುದನ್ನು ರೂಢಿಸಿಕೊಂಡರು. ೨. ಕಣಿ ಹೇಳುವ ನೆಪದಲ್ಲಿ ವನವಾಸದಲ್ಲಿದ್ದ ಧರ್ಮರಾಯನನ್ನು ಓರ್ವ ಹೆಣ್ಣುಮಗಳು ಪ್ರೀತಿಸಿ ಕೂಡಿದಳು. ಅವಳ ಸಂತತಿಯೇ ಕೊರವರು. ಆದ್ದರಿಂದಲೇ ಕೊರವರ ಹೆಣ್ಣುಮಕ್ಕಳು ಕಣಿ ಹೇಳುವುದನ್ನು ರೂಢಿಸಿಕೊಂಡಿದ್ದಾರೆ.

ಕೊರಮರು ತಮ್ಮ ಭಾಷೆಯನ್ನು ತಮ್ಮ ತಮ್ಮಲ್ಲಿಯೇ ಕುಳುವ ಭಾಷೆ ಎಂದು ಕರೆಯುತ್ತಾರೆ. ತಮ್ಮನ್ನು ಕುಳುವರು ಎಂದು ಪರಿಚಯಿಸಿಕೊಳ್ಳುತ್ತಾರೆ. ಕೊರಮರಲ್ಲಿ ಕೆಲವರು ತಮ್ಮ ಭಾಷೆಯನ್ನು ಕೊಂಗಭಾಷೆ ಎನ್ನುತ್ತಾರೆ. ಕೊಂಗರು ತಮಿಳುನಾಡಿನವರು ಎಂಬುದು ಮುಖ್ಯವಾಗುತ್ತದೆ. ಕೊರಚ - ಕೊರ್ಚ - ಕೊರವ ಎಂಬ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಕೊರವ, ಕುರುವ ಎಂಬುದು ಆಂಧ್ರದ ಒಂದು ಆದಿವಾಸಿ ಜನಾಂಗ. ಕೊರಚ, ಕೊರಮ, ಕೊರವಂಜಿ, ಕೊರಚಿ, ಕೊರಮಶೆಟ್ಟಿ, ಕೊರವ, ಕೊರವನ್, ಕೊರಚರ್, ಕೊರವಂಜಿ, ಕುಂಚೆಕೊರವ, ಭಜಂತ್ರಿ, ಭಜಂತ್ರಿ ಕೈಕಾಡಿ, ಯರಕುಲ ಇತ್ಯಾದಿ ಒಳಪಂಗಡಗಳು ಕರ್ನಾಟಕ ಆಂಧ್ರದ ಗಡಿಪ್ರದೇಶಗಳಲ್ಲಿ ಕಂಡುಬರುತ್ತವೆ. ಬೇಟೆ ಇವರ ಮೂಲ ಕಸುಬು. ದೊರೆಯುವ ಪ್ರಾಣಿ ಚರ್ಮಗಳಿಂದ ವಾದ್ಯಗಳನ್ನು ತಯಾರಿಸಿ ನುಡಿಸುತ್ತಾರೆ. ತೆಲುಗು, ತಮಿಳು ಸೇರಿದ ಕುಳಿರ್ ಇವರ ಭಾಷೆಯಾಗಿದೆ.

೩. ಅಗ್ನೀಶ್ವರನ ಮಗ ವೇಣುಡು ನೇರವಾಗಿ ಬ್ರಹ್ಮನಿಂದ ಭೂಮಿಗೆ ಬಂದು ಇಡೀ ಭೂಮಂಡಲಕ್ಕೆ ರಾಜನಾಗುತ್ತಾನೆ. ಕೆಲಕಾಲದ ನಂತರ ಇದ್ದಕ್ಕಿದ್ದಂತೆ ತೀರಿಕೊಳ್ಳುತ್ತಾನೆ. ಅವನಿಗೆ ಮಕ್ಕಳು ಇಲ್ಲವಾದ್ದರಿಂದ ಸಿಂಹಾಸನಕ್ಕೆ ಅವನ ಉತ್ತರಾಧಿಕಾರಿ ಇಲ್ಲವೆಂಬ ಕೊರಗಿನಲ್ಲಿ ಪ್ರಜೆಗಳು ಅವನ ಶವಸಂಸ್ಕಾರವನ್ನು ಮಾಡಲೇ ಇಲ್ಲ. ಹಾಗೆಯೇ ಅವನ ದೇಹವನ್ನು ಉಳಿಸಿಕೊಂಡರು. ಈ

ಸಮಸ್ಯೆಯನ್ನು ಪರಿಹರಿಸಲೆಂದು ಏಳು ಗ್ರಹಗಳು ಸಭೆ ಸೇರಿ ಸತ್ತ ವೇಣುಡುವಿನ ಬಲತೊಡೆಯಿಂದ ಒಬ್ಬನನ್ನು ಸೃಷ್ಟಿಸಿದವು. ಅವನು ಅತಿ ಎತ್ತರವಾಗಿ, ಬಹಳ ಕಪ್ಪಾಗಿ ದುರ್ನಾತದಿಂದ ಕೂಡಿದ್ದ. ಇದರಿಂದ ಅಸಮಾಧಾನಗೊಂಡ ಏಳೂ ಗ್ರಹಗಳು ಶಿವನಿಗೆ ನಿಶುಡು ಎಂದು ಹೆಸರಿಸಿದರು. ಮತ್ತೊಮ್ಮೆ ವೇಣುಡುವಿನ ಬಲತೊಡೆಯಿಂದ ಮತ್ತೊಬ್ಬನನ್ನು ಸೃಷ್ಟಿ ಮಾಡಿದರು. ತೇಜಸ್ವಿಯೂ, ಸ್ಫುರದ್ರೂಪಿಯೂ, ಯೋಗ್ಯನೂ ಆಗಿದ್ದ ಇವನಿಗೆ ಪೂತು ಚಕ್ರವರ್ತಿ ಎಂದು ನಾಮಕರಣ ಮಾಡಿ ಸಿಂಹಾಸನದಲ್ಲಿ ಕೂರಿಸಿದರು. ಇದರಿಂದ ಅಸಮಾಧಾನಗೊಂಡ ನಿಶುಡು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದ. ಪ್ರತ್ಯಕ್ಷನಾದ ಬ್ರಹ್ಮನು “ನಿನಗೆ ಯಾವ ವರ ಬೇಕೋ ಕೇಳಿಕೋ” ಎಂದಾಗ ನಾನು ಈ ಭೂಮಿಯ ಒಡೆಯನಾಗಬೇಕು ಎಂದು ಕೇಳಿಕೊಂಡ. ಅದಕ್ಕೆ ಬ್ರಹ್ಮನು “ಈಗಾಗಲೇ ನಾಡಿನ ಒಡೆಯನಾಗಿ ಪೂತು ಚಕ್ರವರ್ತಿ ಆಳುತ್ತಿರುವುದರಿಂದ ನೀನು ಕಾಡಿನ ಒಡೆಯನಾಗು” ಎಂದು ಆಶೀರ್ವಾದ ಮಾಡಿದ. ಅಂದಿನಿಂದ ನಿಶುಡು ಹಾಗೂ ಅವನ ಸಂತತಿ ಕಾಡಿನಲ್ಲೇ ಉಳಿದು ಕಾಡನ್ನು ರಕ್ಷಿಸುತ್ತಾ ಬಂದರು. ಇವರನ್ನು ಕೊರವರೆಂದು ಕರೆಯುತ್ತಾರೆ.

ಪುರಾಣದ ಪ್ರಕಾರ ವನವಾಸದಲ್ಲಿದ್ದ ಧರ್ಮರಾಜನನ್ನು ಮೋಹಿಸಿದ ಕಾಡಿನ ಜನರ ಹೆಣ್ಣೊಬ್ಬಳು ಕಣಿ ಹೇಳುವ ಕೊರವಂಜಿಯ ವೇಷದಲ್ಲಿ ಅವನನ್ನು ಕೂಡಿದಳು. ಆ ಸಂತತಿಯವರೇ ಕೊರವರು. ೪. ಶಿವನ ಹೆಂಡತಿ ಪಾರ್ವತಿಯು ಒಮ್ಮೆ ಮೇದಾರನನ್ನು ಕರೆಸಿ ಹಾವಿನ ಹೊಟ್ಟೆಯಲ್ಲಿರುವ ಬೆಲೆ ಬಾಳುವ ವಜ್ರಗಳಿಂದ ಸುಂದರವಾದ ಬುಟ್ಟಿಯೊಂದನ್ನು ಮಾಡಿಕೊಡುವಂತೆ ಹೇಳುತ್ತಾಳೆ. ಆದರೆ ಮೇದಾರ ಹಾವನ್ನು ಕತ್ತರಿಸಲು ತನ್ನಿಂದ ಸಾಧ್ಯವಿಲ್ಲವೆಂದು ಹೇಳುತ್ತಾನೆ. ಆಗ ಅದೇ ಹಾವನ್ನು ಕೊರವನಿಗೆ ಕೊಟ್ಟು ತೊಟ್ಟಿಲು ಮಾಡಿಕೊಡಲು ಹೇಳುತ್ತಾಳೆ. ಅದರಂತೆ ಕೊರವನು ಹಾವನ್ನು ಕತ್ತರಿಸಿ ಸುಂದರವಾದ ತೊಟ್ಟಿಲನ್ನು ಮಾಡಿ ವಜ್ರಗಳಿಂದ ಅಲಂಕರಿಸಿ ನೀಡಿದ. ಇದರಿಂದ ಸಂತೋಷಗೊಂಡ ಪಾರ್ವತಿಯು ಕುಕ್ಕೆ ಹಾಗೂ ಮೊರವನ್ನು ಉಡುಗೊರೆಯಾಗಿ ಕೊಟ್ಟಳು. ಅಂದಿನಿಂದ ಕೊರವರು ಕುಕ್ಕೆ ಮೊರಗಳನ್ನು ಮಾಡುವ ವೃತ್ತಿಯನ್ನು ಕೈಗೊಂಡರು.

ಸಂಶೋಧಕರು ಗುರುತಿಸಿರುವ ಹಾಗೆ ಕೊರವಂಜಿ ಅಥವಾ ಕೊರಮ ಬುಡಕಟ್ಟು ತಮಿಳುನಾಡಿಗೆ ಸೇರಿದ್ದು. ಇದನ್ನು ಅವರ ಭಾಷೆ ಮತ್ತು ಅವರ ಕುಲಾಚಾರಗಳಿಂದ ದೃಢಪಡಿಸಬಹುದು. ತಮಿಳುನಾಡಿನ ತಂಜಾವೂರು ಭಾಗದಲ್ಲಿ ಇಂದಿಗೂ ಕೊರವಂಜಿ ನೃತ್ಯ ಪ್ರಸಿದ್ಧವಾಗಿದೆ. ತಮಿಳಿನ ನಾಟಕಗಳಲ್ಲಿ ಕುರುಟ್ಟಿಯ ಪಾತ್ರ ಬರುತ್ತದೆ. ಇದೊಂದು ವಿಶಿಷ್ಟವಾದ ಪಾತ್ರ. ಇಂಥ ಪಾತ್ರಗಳನ್ನು ನಾಟಕಗಳನ್ನು ಕುರವಂಜಿಗಳೆಂದು ಕರೆಯುತ್ತಾರೆ. ಇಂಥ ಮೂವತ್ತಾರು ಕುರುವಂಜಿಗಳಿರುವುದಾಗಿ ತಿಳಿದುಬರುತ್ತದೆ.

**ಕೊರವಂಜಿ :** ಪಾರ್ವತಿಯು ಒಮ್ಮೆ ಹಾವೊಂದನ್ನು ಕೊಂದು ಅದರಲ್ಲಿ ವಜ್ರ ವೈಢೂರ್ಯಗಳನ್ನು ತುಂಬಿ ತನ್ನ ಮಗುವಿಗೆ ಒಂದು ತೊಟ್ಟಿಲನ್ನು ಮಾಡಿಕೊಡುವಂತೆ ಮೇದರವನಿಗೆ ಹೇಳಿದಳು. ಅವನು ಭಯದಿಂದ ಹಿಂದೆ ಮುಂದೆ ನೋಡಿದಾಗ ಅದೇ ಮಾತನ್ನು ಕೊರಚನಿಗೆ ಹೇಳಿದಳು. ಆಗ ಅವನು ಯಾವ ಮಾತನ್ನೂ ಆಡದೆ ತೊಟ್ಟಿಲನ್ನು ಮಾಡಿಕೊಟ್ಟಾಗ ಆ ಕೊರಚನ ಹೆಂಡತಿಗೆ ತನ್ನಲ್ಲಿದ್ದ ಮಂತ್ರದಂಡ ಮತ್ತು ಮೊರವನ್ನಿತ್ತು ಭವಿಷ್ಯ ಹೇಳುವ ಶಕ್ತಿಯನ್ನು ಅನುಗ್ರಹಿಸಿದಳು. ಅಲ್ಲದೆ ಧರ್ಮರಾಯನು ವನವಾಸದಲ್ಲಿದ್ದಾಗ ಅವನನ್ನು ಮೋಹಿಸಿದ ಹೆಣ್ಣೊಬ್ಬಳು ಭವಿಷ್ಯಗಾರ್ತಿಯಂತೆ ವೇಷ ಹಾಕಿಕೊಂಡು ಅವನಲ್ಲಿಗೆ ಹೋಗಿ ಅವನನ್ನು ವರಿಸಿದಳು. ಆಕೆಯ ಮಕ್ಕಳೇ ಕೊರವರು. ಶಕ್ತಿದೇವತೆ ಇವರ ಕುಲದೈವವೆಂದೂ ಕೃಷ್ಣನೇ ಇವರ ಮೂಲಪುರುಷನೆಂದೂ ಹೇಳುತ್ತಾರೆ. ಕಣಿ ಹೇಳುವುದು, ಹಚ್ಚೆ ಹುಯ್ಯುವುದು ವೃತ್ತಿಯಾದರೆ ಬುಟ್ಟಿ, ತಟ್ಟಿ ಹೆಣೆಯುವುದು ಉಪವೃತ್ತಿ. (ಕರ್ನಾಟಕ ಜನಪದ ಕಲೆಗಳ ಕೋಶ, ಪು.೨೩೪) ಕೊರವಂಜಿಯಲ್ಲಿ ವಿವಾಹಿತ - ಅವಿವಾಹಿತ ಹೆಣ್ಣು ಮಕ್ಕಳು ಹೆಚ್ಚಾಗಿ ಕಣಿ ಕೇಳುತ್ತಾರೆ. ಕೊರವಂಜಿಯೂ ಒಂದು ಹೆಣ್ಣಾದ್ದರಿಂದ ತಮ್ಮ ಸಮಸ್ಯೆಗಳನ್ನೂ ಮನಸ್ಸಿನ ತುಮುಲಗಳನ್ನೂ ಅವಳಲ್ಲಿ ತೋಡಿಕೊಂಡರೆ ಅವಳು ಅರ್ಥೈಸಿಕೊಂಡು ಜಾಣ್ಮೆಯಿಂದ ಪರಿಹಾರಗಳನ್ನು ಸೂಚಿಸುತ್ತಾಳೆ. ಆದ್ದರಿಂದ ಗ್ರಾಮೀಣ ವಲಯಗಳ ಹೆಣ್ಣು ಮಕ್ಕಳಿಗೆ ಪುರುಷ ವರ್ಗದವರು ಹೇಳುವ ಭವಿಷ್ಯಕ್ಕಿಂತ (ಕುರುವಾಮ ಭವಿಷ್ಯ ಗಿಣಿಶಾಸ್ತ್ರ ಇತ್ಯಾದಿ) ಕೊರವಂಜಿಯ ಕಣಿಶಾಸ್ತ್ರ ಆಪ್ಯಾಯಮಾನವಾಗುತ್ತದೆ.

ಬಹಳ ಹಿಂದಿನಿಂದಲೂ ಜನಸಾಮಾನ್ಯ ವರ್ಗದ ಸ್ತ್ರೀಯರಷ್ಟೇ ಅಲ್ಲದೆ, ಅರಮನೆಯ ರಾಣಿಯರೂ ಕೊರವಂಜಿಯಲ್ಲಿ ಅವಳ ಕಣಿಯಲ್ಲಿ ಭರವಸೆ ಇಡುತ್ತಿದ್ದರು. ವಸವಾಸದಲ್ಲಿದ್ದ ಧರ್ಮರಾಯನನ್ನು ಕೊರಮರ ಹೆಣ್ಣು ಮಗಳು ವರಸಿ ಕೂಡಿದ್ದರಿಂದ ಅವಳ ಸಂತಾನವಾದ ಕೊರವಂಜಿಯರಿಗೆ ಧರ್ಮರಾಯನಿಗೆ ಗೊತ್ತಿದ್ದ ಭವಿಷ್ಯ ಕಾಲಜ್ಞಾನದ ತಿಳುವಳಿಕೆ ಕರಗತವಾಯಿತು ಎನ್ನುತ್ತಾರೆ. ತಮಿಳಿನ ಕೊರವಂಜಿ ಕಥೆಗಳು ರಾಮಾನುಜಾಚಾರ್ಯರ ಕಾಲದಲ್ಲಿ ಕನ್ನಡಕ್ಕೆ ಪ್ರವೇಶ ಪಡೆದಿರಬಹುದು. ೧೭ನೇ ಶತಮಾನದ ಚಿಕ್ಕದೇವರಾಯನ ಕಾಲದಲ್ಲಿ ಕನ್ನಡದಲ್ಲಿ ಇಂಥ ಕಥೆಗಳ ಉಗಮವಾಗಿದೆ. ವಿಜಯನಗರ ಕಾಲದಲ್ಲಿ ತೆಲುಗಿನ ಸಂಪರ್ಕ ಹೆಚ್ಚಾಗತೊಡಗಿತು. ಆದ್ದರಿಂದ ತೆಲುಗಿನಲ್ಲಿ ಜನಪ್ರಿಯವಾದ ಭಾಮಾಕಲಾಪ, ಕೂಚುಪುಡಿಗಳು ಕನ್ನಡ ನಾಡಿಗೆ ವಲಸೆ ಬಂದವು. "ಕೊರವಂಜಿಯ ಪಾತ್ರ ಕನ್ನಡ ನೆಲದ್ದಲ್ಲ. ಆಂಧ್ರ ಮತ್ತು ತಮಿಳುನಾಡಿನಿಂದಲೇ ನಮ್ಮಲ್ಲಿಗೆ ಬಂದು ಪ್ರಸಿದ್ಧಿ ಪಡೆಯಿತು."

**ಕೊರವಂಜಿಯ ಕುರಿತ ಪುರಾಣ-ಐತಿಹ್ಯಗಳು :** ದ್ವಾಪರಯುಗದಲ್ಲಿ ಕೃಷ್ಣನು ಕೊರವಂಜಿಯು ವೇಷಧರಿಸಿ ರುಕ್ಮಿಣಿಯಲ್ಲಿಗೆ ಹೋಗಿ ತಮ್ಮ ಪ್ರೇಮದ ಪರಿಯನ್ನು ವಿವರಿಸುತ್ತಾನೆ. ಕಣಿಯನ್ನು ಕೇಳುತ್ತಾ ನಾಚಿ ನೀರಾಗುತ್ತಿದ್ದ ರುಕ್ಮಿಣಿಯ ಅಂತರಂಗದ ಬಯಕೆಯನ್ನು ಅರ್ಥೈಸಿಕೊಂಡು ತನ್ನ ನಿಜ ರೂಪವನ್ನು ತೋರುತ್ತಾನೆ. ಅವಳು ಮತ್ತಷ್ಟು ನಾಚಿಕೆಯಿಂದ ಓಡಿ ಮರೆಯಾಗುತ್ತಾಳೆ. ಅಂದಿನಿಂದ ಅವರ ಪ್ರೇಮ ಗಟ್ಟಿಗೊಳ್ಳುತ್ತದೆ. ಹೀಗೆ ಕೃಷ್ಣನು ರುಕ್ಮಿಣಿಯೊಂದಿಗೆ ಮದುವೆಗೆ ಮುಂಚೆ ತನ್ನ ಪ್ರೇಮವನ್ನು ತೋಡಿಕೊಳ್ಳಲು ಕೊರವಂಜಿಯ ವೇಷ ಧರಿಸಿದ್ದ. ಪಾರಿಜಾತ ಕಥೆಯಲ್ಲಿ ಕೃಷ್ಣನೇ ಸಮಯೋಚಿತವಾಗಿ ಸತ್ಯಭಾಮೆಯಲ್ಲಿಗೆ ಕೊರವಂಜಿಯಾಗಿ ಬರುವ ಸಂದರ್ಭವಿದೆ.

ಕಲಿಯುಗದಲ್ಲಿ ವೆಂಕಟೇಶ್ವರನು ಪದ್ಮಾವತಿಯನ್ನು ವರಿಸಲು ಕೊರವಂಜಿಯ ವೇಷ ಧರಿಸಿದ್ದ. "ಎರಕ ಚೆಪ್ಪುತಾನಮ್ಮ ಎರಕ; ಪದ್ಮಾವತೀ ನೀಕಿ ಪೆಳ್ಳಿ ಯೋಗಂ ಉಂದಿ; ಅಂತ-ಇಂತಟಿ ವಾಡು ಕಾದು ನೀವಾಡು; ಏಡುಕೊಂಡಲ ಮೀದ ವೆಲಸಿ ಉಂಟಾಡು; ಒಡ್ಡಿ ಕಾಸುಲವಾಡು ವೆಂಕಟೇಶ್ವರಡು; ಮನಸುಲೋನೇ ನುವ್ವು ಮುರಿಸಿ ಪೋತುನ್ನಾವು; ಸಿಗ್ಗುಲೋನೇ ಸಿನ್ನಬೋತುನ್ನಾವು - ಔನಾ; ಸಿಗ್ಗೆಂದುಕು ಪಡುತಾವು ಚೆಪ್ಪೂ!" (ತೆಲುಗು) - ("ಕಣಿ ಹೇಳುತೀನಮ್ಮ ಕಣಿ; ಪದ್ಮಾವತೀ ನಿನಗೆ ಮದುವೆ ಯೋಗ ಉಂಟು; ಅಂತ ಇಂತವನಲ್ಲ ನಿನ್ನವನು; ಏಳು ಬೆಟ್ಟದ ಮೇಲೆ ನೆಲೆಸಿದವನು; ಒಡ್ಡಿ ಕಾಸಿನವನು ವೆಂಕಟೇಶ್ವರನು; ಮನಸ್ಸಿನಲ್ಲೇ ನಿನಗೆ ಖುಷಿ ಆಗುತ್ತಿದೆ; ಸಿಗ್ಗಿನಲ್ಲೇ ನಿನಗೆ ಸಂಕೋಚವಾಗುತ್ತಿದೆ-ಹೌದಾ; ನಾಚಿಕೆ ಯಾಕೆ ಹೇಳು!") ಎಂದು ಅವಳ ಮನೋಭಿಲಾಷೆಯನ್ನು ತಿಳಿದುಕೊಳ್ಳುತ್ತಾನೆ. ಮುಂದೆ ಮದುವೆಯಾಗುತ್ತಾನೆ.

ಕೌಸಲ್ಯೆಗೆ ರಾಮನ ವನವಾಸದ ಬಗ್ಗೆ ಯುದ್ಧದ ಬಗ್ಗೆ ಪಾರ್ವತಿಯು ಕೊರವಂಜಿಯಾಗಿ ಬಂದು ಹೇಳುತ್ತಿದ್ದಳು. ತ್ರೇತಾಯುಗದಲ್ಲಿ ಸೀತೆಯು ರಾವಣನ ಅಶೋಕವನದಲ್ಲಿ ಬಂಧಿತಳಾಗಿ ಪರಿತಪಿಸುತ್ತಿದ್ದ ಸೀತೆಯನ್ನು ಹನುಮಂತನು ಕೊರವಂಜಿಯ ವೇಷದಲ್ಲಿ ಭೇಟಿಯಾದ. ನಂತರ ತಾನು ರಾಮಭಂಟ ಹನುಮಂತನೆಂಬ ನಿಜ ಸಂಗತಿಯನ್ನು ಸೀತೆಗೆ ಹೇಳಿ ಭರವಸೆ ತುಂಬಿದನೆಂದು ಇವರಲ್ಲಿ ಐತಿಹ್ಯವಿದೆ. ಹೆಣ್ಣಿನ ವೇಷದಲ್ಲಿ ಅಶೋಕವನ ಪ್ರವೇಶ ಪಡೆದದ್ದು ಸಮಯೋಚಿತವೆನಿಸುತ್ತದೆ. ಶಿವನ ಹೆಂಡತಿ ಪಾರ್ವತಿಗೆ ಕೊರವಂಜಿಯು ಕಣಿ ಹೇಳಿ ನಿನ್ನ ಪತಿಯಾದ ಪರಶಿವನು ಪರಸ್ತ್ರೀಗೆ ಒಲಿದಿದ್ದಾನೆ. ಅವಳನ್ನು ಕೂಡಿ ಕಳೆದಿದ್ದಾನೆ. ಮುಡಿಯಲ್ಲಿ ಧರಿಸಿದ್ದಾನೆ ಎಂದು ಹೇಳುತ್ತಾಳೆ. (ಹೇಳಿದಳು) ಇದರಿಂದ ಪಾರ್ವತಿಗೆ ಶಿವನ ರಹಸ್ಯ ಬಯಲಾಯಿತು. ಅವಳು ಶಿವನಿಗೆ ಜಳಕ ಮಾಡಿಸುವ ನೆಪದಲ್ಲಿ ತಲೆಗೆ ಸೀಗೇಕಾಯಿ ಹಾಕಿ ಬಿಸಿನೀರು ಸುರಿದು ಚೆನ್ನಾಗಿ ತಲೆಯನ್ನು ಉಜ್ಜಿದಳು. ತಾಳಲಾರದೆ ಗಂಗೆ ಕೆಳಗೆ ಬಿದ್ದಳು. ಅಲ್ಲಿಂದ ಗಂಗೆ ಗೌರಿ ಜಗಳ ಆರಂಭವಾಯಿತು.

**ಡೊಂಬರು :** ಇವರು ಆಂಧ್ರದಿಂದ ವಲಸೆ ಬಂದವರಿರಬಹುದು. ತೆಲುಗು ಮಾತನಾಡುವ ಪ್ರದೇಶದಲ್ಲಿ ಹೆಚ್ಚಾಗಿ ಕಾಣಸಿಗುತ್ತಾರೆ. ತಮ್ಮ ವೃತ್ತಿಕಲೆ ದೊಂಬರಾಟದಿಂದ ಜನಪದದಲ್ಲಿ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಂಡಿದ್ದಾರೆ.

**ಐತಿಹ್ಯ :** ಒಬ್ಬ ರೆಡ್ಡಿಗೆ ಇಬ್ಬರು ಹೆಂಡತಿಯರು. ಕಿರಿಯ ಹೆಂಡತಿಗೆ ಹುಟ್ಟಿದ ಮಗ ಹುಟ್ಟಿನಿಂದಲೇ ಅಂಗಹೀನ. ಇದು ಅನಿಷ್ಟಕಾರಕ ಎಂದು ಜೋಯಿಸರು ಹೇಳಿದ್ದಕ್ಕೆ ಆ ಮಗುವನ್ನು ತೊರೆದು ಬಿಡುವಂತೆ ತನ್ನ ಕಿರಿಯ ಹೆಂಡತಿಗೆ ಆಜ್ಞಾಪಿಸಿದ. ಮಗುವಿಗಾಗಿ ಕರುಳು ಮಿಡಿದ ಆ ತಾಯಿ ಮಗುವನ್ನು ದನದ ಕೊಟ್ಟಿಗೆಯಲ್ಲಿ ಬಚ್ಚಿಟ್ಟಳು. ಅದರಿಂದಾಗಿ ಅನೇಕ ದನಕರುಗಳು ಸಾವಿಗೀಡಾದವು. ಬೇಸತ್ತ ತಾಯಿ ಆ ಮಗುವನ್ನು ಗುಪ್ತವಾಗಿ ಒಬ್ಬ ಭಿಕ್ಷುಕನಿಗೆ ಒಪ್ಪಿಸಿದಳು. ಆ ಭಿಕ್ಷುಕ ಮಗುವನ್ನು ಒಂದು ಬಾವಿಗೆ ಎಸೆದ. ಮಗು ಸಾಯಲಿಲ್ಲ. ಬದಲಿಗೆ ಜೋರಾಗಿ ಅಳತೊಡಗಿದಳು. ಆ ರೋದನ ಕೇಳಿ ಪಾರ್ವತಿ ಪರಮೇಶ್ವರರು ಬಂದು ಮಗುವಿನ ಅಂಗಾಂಗ ಬರುವಂತೆ ಕರುಣಿಸಿದರು. ಬಾವಿಯ ತಳದಿಂದಲೇ ಮಿಂಚಿನಂತೆ ನೆಗೆದು ಅವರ ಪಾದಕ್ಕೆರಗಿದ. ಪಾರ್ವತಿ ಪರಮೇಶ್ವರರು ಮಾಯವಾದರು. ಆ ಬಳಿಕ ಹುಡುಗ ಬೀದಿಯಲ್ಲಿ ಕಸರತ್ತುಗಾರರ ಗುಂಪು ಸೇರಿಕೊಂಡು ಅಲೆದಾಟದ ಕಾಲದಲ್ಲಿ ಒಬ್ಬಳನ್ನು ಕೂಡಿಕೊಂಡ. ಅವಳ ಸಂತಾನವೇ ಡೊಂಬರು.

ಡೊಂಬರರು ಮತ್ತು ಕೊರಚರು ಅಣ್ಣ-ತಮ್ಮಂದಿರೆಂಬ ನಂಬಿಕೆ. ಆದರೆ ಈಗ ಪ್ರತ್ಯೇಕವಾಗಿ ಬದುಕುತ್ತಿದ್ದಾರೆ. ಇದಕ್ಕೆ ಕಾರಣವಾದ ಐತಿಹ್ಯ : ಹೆಣ್ಣಿಗೆ ಕನ್ಯಾಶುಲ್ಕವನ್ನು ಕೊಟ್ಟು ಮದುವೆಯಾಗುತ್ತಿದ್ದ ಕಾಲದಲ್ಲಿ ಈ ಸಹೋದರರು ವಿವಾಹಕ್ಕಾಗಿ ಕನ್ಯಾನ್ವೇಷಣೆ ನಡೆಸಿದರು. ಒಬ್ಬಳೇ ಕನ್ಯೆಯನ್ನು ಇಬ್ಬರೂ ನೋಡಿದರು. ಅಣ್ಣನು ತನ್ನನ್ನು ಮದುವೆಯಾದರೆ ಇಪ್ಪತ್ತು ವರಹ ಕೊಡುವುದಾಗಿ ಹೇಳಿದ. ತಮ್ಮನು ತಾನು ಇಪ್ಪತ್ತೈದು ವರಹ ತೆರ ಕೊಡಲು ಸಿದ್ಧನಿರುವುದಾಗಿ ತಿಳಿಸಿದ. ಇದರಂತೆ ಹೆಚ್ಚು ಕನ್ಯಾ ತೆರವನ್ನು ಕೊಟ್ಟ ತಮ್ಮನಿಗೇ ಕನ್ಯೆಯನ್ನು ವಿವಾಹ ಮಾಡಿಕೊಟ್ಟರು. ಈ ಕಾರಣದಿಂದ ಅಣ್ಣ-ತಮ್ಮಂದಿರಲ್ಲಿ ವೈಷಮ್ಯ ಮೂಡಿತು. ಅಣ್ಣ ಡೊಂಬರನಾದ, ತಮ್ಮ ಕೊರಮನಾದ.

**ಡೊಂಬರರ ವೃತ್ತಿ-ಜಾತಿಗೆ ಸೇರುತ್ತಾ ಹೋದವರ ಐತಿಹ್ಯಗಳು :** ಸಮಾಜದಲ್ಲಿ ಅವಹೇಳನಕ್ಕೆ ಗುರಿಯಾದವರು, ತಿರಸ್ಕಾರಕ್ಕೆ ಒಳಗಾದವರು ಸಮಾಜದಿಂದ ಬಹಿಷ್ಕೃತರಾಗುವುದು ಸಾಮಾನ್ಯ ಸಂಗತಿ. ಇಂಥವರಿಗೆ ಡೊಂಬರಲ್ಲಿ ಆಶ್ರಯ ದೊರೆಯುತ್ತಿತ್ತು. ತಮ್ಮ ಸಮಾಜ ಸಂಸ್ಕೃತಿಯಿಂದ ಹೊರಹಾಕಲ್ಪಟ್ಟವರು ಡೊಂಬರಲ್ಲಿ ಸೇರುವ ಮೂಲಕ ತಮ್ಮ ದುಸ್ಥಿತಿಯಿಂದ ಸ್ವತಂತ್ರರಾಗುತ್ತಿದ್ದರು ಎಂಬುದನ್ನು ಕೆಲವು ಐತಿಹ್ಯಗಳ ಮೂಲಕ ಗಮನಿಸಬಹುದು.

೧. ಒಬ್ಬ ರೆಡ್ಡಿಯ ೨ನೇ ಹೆಂಡತಿಯ ಮಗನೊಬ್ಬ ಅಂಗವಿಕಲನಾಗಿದ್ದ ಕಾರಣ ಬಾವಿಗೆ ತಳ್ಳುತ್ತಾರೆ. ಶಿವ ಪಾರ್ವತಿಯರು ಅವನನ್ನು ರಕ್ಷಿಸಿ ದೊಂಬರನಲ್ಲಿಗೆ ಸೇರಿಸುತ್ತಾರೆ. ಅವನು ದೊಂಬರ ಕನ್ಯೆಯನ್ನು ಮದುವೆಯಾದ. ಅವನ ಸಂತಾನ ದೊಂಬರರಾದರು. ೨. ರೆಡ್ಡಿಯೊಬ್ಬನಿಗೆ ಇಬ್ಬರು ಹೆಂಡತಿಯರಿದ್ದರು. ಎರಡನೇ ಹೆಂಡತಿಯು ತೋಟದ ಮನೆಯಲ್ಲಿಯೂ ಮೊದಲನೆಯವಳು ಊರಿನ ಮನೆಯಲ್ಲಿಯೂ ಇದ್ದರು. ಎರಡನೆಯವಳಿಗೆ ಹೆರಿಗೆಯಾಗಿ ಹೆಣ್ಣು ಮಗುವನ್ನು ಹಡೆದಳು. ಮೊದಲನೆಯ ಹೆಂಡತಿಗೆ ಗಂಡನ ಎರಡನೇಯ ಸಂಬಂಧ ಗೊತ್ತಾಯಿತು. ಅವಳು ಗಲಾಟೆ ಮಾಡಿದಳು. ಮೊದಲನೆಯವಳಿಗೆ ಹೆದರಿದ ರೆಡ್ಡಿಯು ತನ್ನ ಎರಡನೆಯ ಹೆಂಡತಿ ಹಾಗೂ ಅವಳ ಮಗಳನ್ನು ಹೊರಗೆ ಹಾಕಿದ. ಅವರಿಗೆ ಹಗ್ಗ, ಬಿದಿರುಗಳ ತಟ್ಟೆ ಇತ್ಯಾದಿಗಳನ್ನು ಕೊಟ್ಟ. ಅವನು ಕೊಟ್ಟ ಪರಿಕರಗಳನ್ನು ಉಪಯೋಗಿಸಿಕೊಂಡು ಅವುಗಳ ಮೂಲಕ ದೊಂಬರಾಟವಾಡುತ್ತಾ ಜೀವನ ನಡೆಸಿದರು. ಇದಕ್ಕೆ ಪೂರಕವಾದ ಮತ್ತೊಂದು ಐತಿಹ್ಯದಲ್ಲಿ ಬೀದಿಪಾಲಾದ ರೆಡ್ಡಿಯ ಹೆಂಡತಿ ಹಾಗೂ ಮಗಳು ದೊಂಬರಾಟವನ್ನು ರೂಢಿಸಿಕೊಂಡಿದ್ದರಿಂದ ಮಗಳನ್ನು ಯಾರೂ ಮದುವೆಯಾಗುವುದಿಲ್ಲ. ಅವಳು ದೊಂಬರ ಚಿನ್ನಸಾನಿ ಎಂದು ಕರೆಯಿಸಿಕೊಂಡಳು ಎಂದು ತಿಳಿದುಬರುತ್ತದೆ.[೧]

ಹಾಗೆಯೇ ಕಂಪಿಲನ ಕಿರಿಯ ರಾಣಿ ರತ್ನಾಜಿಯು ಹಿರಿಯ ರಾಣಿ ಹರಿಯಲಾದೇವಿಯ ಮಗ ಕುಮಾರರಾಮನನ್ನು ಮೋಹಿಸಿದ್ದರಿಂದ ಕಂಪಿಲನು ಅವಳನ್ನು ತ್ಯಜಿಸುತ್ತಾನೆ. ಬೀದಿಪಾಲಾದ ಅವಳು ದೊಂಬರರನ್ನು ಸೇರಿ ದೊಂಬರಾಟ ಮಾಡುತ್ತಾ ಜೀವನ ಸಾಗಿಸುತ್ತಾಳೆ. ಅವಳಿಗೆ ಹೆಣ್ಣು ಮಕ್ಕಳು ಜನಿಸುತ್ತವೆ. ಅವರೂ ಅದೇ ವೃತ್ತಿಯಲ್ಲಿ ತೊಡಗಿಸಿಕೊಳ್ಳುತ್ತಾರೆ. ಹೀಗೆ ನಿರಾಶ್ರಿತರಾಗಿ ಸಮಾಜದಿಂದ ಬಹಿಷ್ಕರಿಸಲ್ಪಟ್ಟ ಹೆಣ್ಣುಗಳಿಗೆ ದೊಂಬರರಲ್ಲಿ ಆಶ್ರಯ ದೊರೆತಿರುವುದಲ್ಲದೆ, ಅಂಥ ದೊಂಬರ ಸಂತತಿಯ ಹೆಣ್ಣುಗಳನ್ನು ವೇಶ್ಯೆಯರೆಂದು ಗುರುತಿಸುವುದು ವಾಡಿಕೆಯಾಗಿದೆ. ಉದಾ : ಕಂಪಿಲನು ರತ್ನಮ್ಮಾಜಿಯನ್ನು ಹೊರಗೆ ಓಡಿಸಿದನು. ಜೀವನೋಪಾಯಕ್ಕೆ ಅವಳು ವೇಶ್ಯೆಯಾದಳು. ಅವಳ ಮಕ್ಕಳು ಕೂಡ ಬೀದಿ ಕಸರತ್ತು ಮಾಡುತ್ತ ವೇಶ್ಯೆಯರಾದರು. ಇವರೇ ಮುಂದೆ ದೊಂಬರಾದರು.[೨] ಐತಿಹ್ಯದ ಪ್ರಕಾರ ಕಂಪಿಲನು ರತ್ನಾಜಿಯ ವಿಷಯದಲ್ಲಿ ತನ್ನ ಮಗ ಕುಮಾರರಾಮನದು ತಪ್ಪಿದೆಯೆಂದು ದುಡಿಕಿ ಅವನ ಶಿರಚ್ಛೇದನ ಮಾಡುವಂತೆ ಮಂತ್ರಿಗಳಿಗೆ ಆಜ್ಞಾಪಿಸುತ್ತಾನೆ. ಆದರೆ ಮಂತ್ರಿಯು ಜಾಣನಾಗಿದ್ದರಿಂದ ಕುಮಾರರಾಮನನ್ನು ಕೊಲ್ಲದೆ ಅವನ ಹೋಲಿಕೆ ಇರುವ ಮತ್ತೊಬ್ಬ ವ್ಯಕ್ತಿಯ ಶಿರಚ್ಛೇದನ ಮಾಡಿಸುತ್ತಾನೆ. ಆ ಹೋಲಿಕೆಯ ಮನುಷ್ಯನು ರತ್ನಾಜಿಯು ಅನ್ಯಾಯವಾಗಿ ಆರೋಪ ಹೊರಿಸಿದ್ದರ ಪರಿಣಾಮವಾಗಿ ತಾನು ಸಾಯಬೇಕಾಗಿದೆಯೆಂದು ನೊಂದು ಅವಳ ಸಂತತಿಗೆ ಗಂಡು ಮಕ್ಕಳಾಗದೆ ಇರಲಿ ಎಂದು ಶಪಿಸಿದನಂತೆ. ಅಂದಿನಿಂದ ದೊಂಬರರಿಗೆ ಗಂಡು ಸಂತತಿ ಕ್ಷೀಣಿಸಿತೆಂದು ಹೇಳುತ್ತಾರೆ.

**ಕವಲೆತ್ತಿನವರು ಅಥವಾ ಕೋಲೆಬಸವನ ಆಟದವರು :** ಆಂಧ್ರದ ಗೊಲ್ಲರು-ಗೋವುಗಳನ್ನು ಮೇಯಿಸುವವರು. ಇವರು ಗೋವಳ, ಗೋಪಾಲರು. ಕುರಿ ಕಾಯುವವರು ಕುರುಬರು ಎಂದು ಹೇಳಿಕೊಳ್ಳುತ್ತಾರೆ. "ಕವಲೆತ್ತಿನವರು ಕಾಡುಗೊಲ್ಲರಲ್ಲಿ ರಾಮೇಗೌಡನ ಕುಲಕ್ಕೆ (ಬಣ) ಸಂಬಂಧಿಸಿದವ ರಾಗಿದ್ದಾರೆ". ಕುರುಬರು-ಹತ್ತಿ ಕಂಕಣದವರೆಂದು ಹೇಳುತ್ತಾರೆ. ಆಂಧ್ರದ ವಾರಂಗಲ್ ಜಿಲ್ಲೆಯ ನಲಗೊಂಡ ಇವರ ಗುರುಸ್ಥಾನ.

ಐತಿಹ್ಯದಂತೆ ರಾಮತಾತ ಇವರ ಮೂಲಪುರುಷ. ಸಾಂಸ್ಕೃತಿಕ ವೀರ ರಾಮತಾತನ ವಂಶದವರೆಂದು ನಾಗರ ಪಂಚಮಿಯ ನಂತರದ ಐದನೆಯ ದಿನ ರಾಮತಾತನ ಹಬ್ಬ ಮಾಡುತ್ತಾರೆ. ರಾಮ ಎಂಬ ಹೆಸರಿನ ಗೊಲ್ಲನು ಎತ್ತು ತೆಗೆದುಕೊಂಡು ಹೋದವನು ತಿರುಗಿ ಬರಲೇ ಇಲ್ಲ. ಕುರುಬರ ಹೆಣ್ಣನ್ನು ಮದುವೆಯಾಗಿ ಶತ್ರುಗಳಿಂದ ಕೊಲ್ಲಲ್ಪಡುತ್ತಾನೆ. ನಂತರ ತನ್ನ ತಾಯಿಯ ಕನಸಿಗೆ ಬಂದು ತನ್ನ ಸಾವಿನ ವೃತ್ತಾಂತವನ್ನು ಹೇಳುತ್ತಾನೆ. ಬಂಧು ಬಳಗದವರು ಅವನನ್ನು ಕೊಂದ ಸ್ಥಳಕ್ಕೆ ಹೋಗಿ ನೋಡಿದಾಗ ಅವನ ಕೂದಲು ಹಾಗೂ ಎಲುಬಿನ ಚೂರುಗಳು ದೊರೆಯುತ್ತವೆ. ಆದರೆ ತನ್ನ ಶತ್ರುಗಳನ್ನು ಏನೂ ಮಾಡುವುದೂ ಬೇಡ, ತಾನೇ ಅವರನ್ನು ನೋಡಿಕೊಳ್ಳುವುದಾಗಿ ಕನಸಿನಲ್ಲಿ ಎಚ್ಚರಿಸಿದ್ದರಿಂದ ಸುಮ್ಮನಾಗುತ್ತಾರೆ. ಅವರು ಹಿಂದಿರುಗಿ ಮನೆಗೆ ಬರುವಷ್ಟರಲ್ಲಿ ಶತ್ರುಗಳೆಲ್ಲರೂ ಸತ್ತಿರುತ್ತಾರೆ. ಅಂದಿನಿಂದ ಅವನ ವಂಶಸ್ಥರು ರಾಮತಾತ ಅವತಾರ ಪುರುಷನೆಂದು ನಂಬಿ ಪೂಜಿಸುತ್ತಾರೆ.

**ಕವಲೆತ್ತಿನ ಕಸುಬಿನ ಬಗ್ಗೆ ಐತಿಹ್ಯ :** ಹಿಂದೆ ಒಬ್ಬ ರಾಕ್ಷಸ ತಪಸ್ಸು ಮಾಡಿ ಬ್ರಹ್ಮನ ವರ ಪಡೆದು ಮೂರು ಲೋಕಗಳನ್ನು ಗೆದ್ದ. ಅವನ ಉಪಟಳವನ್ನು ಹತ್ತಿಕ್ಕಲು ತ್ರಿಮೂರ್ತಿಗಳು ಯೋಚನೆ ಮಾಡಿ ಒಂದು ಯೋಜನೆಯನ್ನು ರೂಪಿಸಿಕೊಂಡರು. ಶಿವ ಮತ್ತು ವಿಷ್ಣು ತಮ್ಮ ಆಯುಧ/ಅಸ್ತ್ರಗಳನ್ನು ಅಲಂಕಾರದ ಒಡವೆಗಳನ್ನಾಗಿಸಿ ನಂದಿಯನ್ನು ಅಲಂಕರಿಸಿದರು. ಶಿವನು ತನ್ನ ಡಮರುಗವನ್ನು ವಾಲಗವನ್ನಾಗಿ ಪರಿವರ್ತಿಸಿಕೊಂಡ ವಿಷ್ಣುವು ಸುದರ್ಶನ ಚಕ್ರವನ್ನು ಗಂಟೆಯನ್ನಾಗಿಸಿ ನಂದಿಯ ಕೊರಳಿಗೆ ಹಾಕಿದ. ಶಿವ ವಾಲಗ ನುಡಿಸುತ್ತಾ ವಿಷ್ಣು ಬಸವನನ್ನು ಆಡಿಸುತ್ತಾ ರಾಕ್ಷಸನ ರಾಜ್ಯಕ್ಕೆ ಹೋದರು. ಬಸವನ ಆಟವನ್ನು ನೋಡಿ ಮೆಚ್ಚಿದ ರಾಕ್ಷಸ ನಿಮಗೆ ಏನು ಬಹುಮಾನ ಬೇಕೆಂದು ಕೇಳಿಕೊಳ್ಳಿರಿ ಎಂದ. ಆಗ ಅವರು ಅವನ ರಾಜ್ಯವನ್ನು ಕೊಡಬೇಕೆಂದು ಕೇಳಿಕೊಂಡರು. ಇದರಿಂದ ಸಿಟ್ಟುಗೊಂಡ ರಾಕ್ಷಸನು ಬಸವನ ಸಮೇತ ವಿಷ್ಣು, ಶಿವನನ್ನು, ಬಸವಣ್ಣನನ್ನೂ ಒಮ್ಮೆಲೇ ನುಂಗಿದನು. ಇವರು ಎಲ್ಲರೂ ಅವನ ಹೊಟ್ಟೆಯನ್ನು ಸೀಳಿ ಹೊರಗೆ ಬಂದರು. ಬಸವನ ಕೊಂಬುಗಳಿಗೆ ಸಿಕ್ಕಿಕೊಂಡ ರಾಕ್ಷಸನ ಕರಳುಗಳು ಹಾರಗಳಾದವು. ಅಂದಿನಿಂದ ದುಷ್ಟಸಂಹಾರಕ್ಕಾಗಿ ಈ ವೃತ್ತಿಯನ್ನು ಕವಲೆತ್ತಿನವರು ಅನುಸರಿಸಿಕೊಂಡು ಬಂದರು ಎಂಬ ಈ ಐತಿಹ್ಯವು ಕಲೆಯನ್ನು ವೃತ್ತಿಯನ್ನಾಗಿ ರೂಢಿಸಿಕೊಂಡದ್ದನ್ನು

ವಿವರಿಸುತ್ತದೆ. "ಕವಲೆತ್ತಿನವರು ಕೆಲವರು ತಾವು ಕುರುಬರೆಂದೂ ಅದರಲ್ಲಿ ಹತ್ತಿ ಕಂಕಣದವರೆಂದು ಹೇಳಿಕೊಳ್ಳುತ್ತಾರೆ".

**ಕೋಲೆಬಸವ :** ಊರಲ್ಲಿ ದೇವರಿಗೆಂದು ಬಿಟ್ಟ ಗೂಳಿ, ಕಪಿಲೆ ಅಥವಾ ರೈತರಿಂದ ಬೇಡಿ ತಂದ ಕರುಗಳು ಇವರು ಆಡಿಸುವ ಕವಲೆತ್ತುಗಳು. ಆಂಧ್ರಪ್ರದೇಶದ ಕೆಲವು ಊರುಗಳಲ್ಲಿ ಭಕ್ತರು ತಿರುಪತಿ ವೆಂಕಟರಮಣನ ಹೆಸರಿನ ಮೇಲೆ ಕರುವನ್ನು ಬಿಟ್ಟಿರುತ್ತಾರೆ. ಕರುವನ್ನು ದೀಕ್ಷೆ ಕೊಡುವಾಗ ಊರ ಜನರು ಶುಭದಿನದಂದು ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿ ಕರುವಿನ ಬೆನ್ನ ಚಿಪ್ಪೆಯ ಮೇಲೆ ತಿರುಪತಿಯ ಸಂಕೇತವೆಂದು ಶಂಖ, ಚಕ್ರದ ಗುರುತಿನ ಬರೆ ಕೊಡುತ್ತಾರೆ. ಬರೆ ಕೊಟ್ಟ ಮೇಲೆ ಆ ಕರುವು ಊರಿಗೆ ಸೇರಿದ್ದು. ಅದು ರೈತರ ಹೊಲದಲ್ಲಿ ಮೇಯ್ದರೂ ಜನ ಏನು ಮಾಡುವಂತಿಲ್ಲ. ಹೋರಿ ದೊಡ್ಡದಾದ ಮೇಲೆ ಊರವರಿಗೆ ಇತರ ಸಾಕಿದ ಹೋರಿಗಳಿಗೆ ಹೊಡೆಯಲು ಆರಂಭಿಸಿದರೆ ಅಂಥ ಹೋರಿಗಳನ್ನು ಕೋಲೆಬಸವರಿಗೆ ಆಟ ಆಡಿಸಲು ಕೊಟ್ಟು ಬಿಡುತ್ತಾರೆ. ದಾನವಾಗಿ ಪಡೆದುಕೊಂಡ ಹೋರಿ ಕಪಿಲೆಗಳನ್ನು ತರಬೇತಿ ನೀಡಿ ಆಡಿಸುವ ವೃತ್ತಿ ಕೋಲೆಬಸವರದ್ದು. ಕೋಲೆಬಸವರ ಆಟ ಆಡಿಸುವವರು ತಿರುಪತಿಗೆ ಹೋಗಿ ಅಲ್ಲಿಯ ಸಾಧುಸಂತರಿಂದ ದೀಕ್ಷಾ ಪಡೆದು ತೀರ್ಥ ತರುತ್ತಾರೆ. ಮನೆಯ ಮುಂದೆ ತಿರುಪತಿ ಹೆಸರಿನ ಝುಂಡಾ ನೆಡುತ್ತಾರೆ. ಐದು ದಿನಗಳವರೆಗೆ ಹೋರಿಯ ಪೂಜೆ ಮಾಡಿ ಅದರ ಬಾಯಲ್ಲಿ ತಿರುಪತಿಯಿಂದ ತಂದಿರುವ ತೀರ್ಥ ಹಾಕುತ್ತಾರೆ. ಅಂದಿನಿಂದ ಅದನ್ನು ಸಾಕ್ಷಾತ್ ನಂದಿ ಎಂದು ಪೂಜೆ ಮಾಡುತ್ತಾರೆ.

**ಗೊಲ್ಲರ ಕೋಲೆಬಸವನ ವೃತ್ತಿಕಲೆಗೆ ಸಂಬಂಧಿಸಿದ ಐತಿಹ್ಯ :** ಕೈಲಾಸದಲ್ಲಿ ಶಿವ ಪಾರ್ವತಿಯರು ಏಕಾಂತದಲ್ಲಿ ಕುಳಿತುಕೊಂಡಾಗ, ನಂದಿಗೆ ಕರೆದು, ಭೂಮಿ ಮೇಲೆ ಪ್ರದಕ್ಷಣೆ ಹಾಕಿ, ಪ್ರತಿ ದಿನ ಒಂದು ಹೊತ್ತು ಊಟ, ಮೂರು ಹೊತ್ತು ಸ್ನಾನ ಮಾಡಿ ನನ್ನ (ಶಿವನ) ಸ್ಮರಣೆ ಮಾಡಲು ಹೇಳಬೇಕೆಂದು ಆಜ್ಞಾಪಿಸುತ್ತಾನೆ. ಶಿವನ ಅಪ್ಪಣೆಯ ಮೇರೆಗೆ ಭೂಮಿಗೆ ಬಂದ ನಂದಿ ಜನರನ್ನು ಉದ್ದೇಶಿಸಿ ಶಿವನು ಹೇಳಿದ ಸಂದೇಶ ಹೇಳುತ್ತಾನೆ. ಅದಕ್ಕೆ ಜನರು ಒಪ್ಪದೆ ಒಂದು ಹೊತ್ತು ಸ್ನಾನ ಮೂರು ಹೊತ್ತು ಊಟ ಬೇಕೆಂದು ಹೇಳುತ್ತಾರೆ. ಬೇಸತ್ತ ನಂದಿ ಕೈಲಾಸಕ್ಕೆ ಹೋಗಿ ನಡೆದ ಘಟನೆಯನ್ನು ಶಿವನ ಮುಂದೆ ಹೇಳುತ್ತಾನೆ. ಆಗ ಕೋಪಿತನಾದ ಶಿವ ನಂದಿಗೆ ಕೆಡವಿ ಚಪ್ಪಲಿಯಿಂದ ಹೊಡೆದಾಗ ಮೇಲಿನ ಹಲ್ಲುಗಳು ಬಿದ್ದು ರಕ್ತ ಹರಿಯಿತು. ಸಿಟ್ಟಿನಿಂದ ಭೂಮಂಡಲ ಇರುವವರೆಗೆ ನಿನ್ನ ವಂಶಸ್ಥರಿಗೆ ಮೇಲಿನ ಹಲ್ಲುಗಳು ಬಾರದಿರಲಿ, ನೀನು ಭೂಮಿ ಮೇಲೆ ಹೋಗು, ನಿನ್ನನ್ನು ಆಟ ಆಡಿಸಿ ಹೊಟ್ಟೆ ತುಂಬಿಸಿಕೊಳ್ಳುವಂಥ ಜನಾಂಗವೇ ತಯಾರಾಗಲಿ, ಶಂಖ ಚಕ್ರ ನನ್ನ ಗುರ್ತು, ಸನಾಮಿ ಡೋಲಕಿ ಅವರ ವಾದ್ಯವಾಗಲೆಂದು ಶಪಿಸಿದನಂತೆ. ಕೈಲಾಸದಿಂದ ಭೂಮಿಗೆ ಬರುವುದು ನಂದಿಗೆ

ಇಷ್ಟವಿರಲಿಲ್ಲ. ಆಗ ಗಂಗೆಯ ಹತ್ತಿರ ಹೋಗಿ ನಡೆದ ವಿಷಯ ಹೇಳುತ್ತಾನೆ. ಆಗ ನಂದಿಗೆ ಸಮಾಧಾನ ಮಾಡಿ, ಹೆದರಬೇಡ ಭೂಮಂಡಲದಲ್ಲಿ ನಿನ್ನನ್ನು ಸ್ವಾಗತಿಸುವ ಜನರೇ ಇದ್ದಾರೆ. ಅವರು ನಿನ್ನನ್ನು ಸರಿಯಾಗಿ ನೋಡಿಕೊಳ್ಳುತ್ತಾರೆ. ಅವರಿಗೂ ಒಂದು ವೃತ್ತಿ ಆಗುತ್ತದೆ. ಇದು ಪುಣ್ಯದ ಕೆಲಸ ಹೋಗು ಎಂದು ಹುರಿದುಂಬಿಸುತ್ತಾಳೆ. ಗಂಗೆಯ ಮಾತಿಗೆ ಓಗೊಟ್ಟು ಭೂಮಿಗೆ ಬರುತ್ತದೆ. ಇತ್ತ ಜನರು ನಂದಿಗೆ ಅದ್ದೂರಿಯ ಸ್ವಾಗತ ನೀಡುತ್ತಾರೆ. ಕೆಲವು ದಿನಗಳಾದ ಮೇಲೆ ನಂದಿಗೆ ತರಬೇತಿ ಕೊಟ್ಟು ಆಟ ಕಲಿಸಿದರು. ಆಟ ಕಲಿತ ಮೇಲೆ ರೈತರ ಮನೆಗಳ ಮುಂದೆ ಪ್ರದರ್ಶನ ಮಾಡಿದರು. ಮೂಕ ಪ್ರಾಣಿಯ ಆಟ ನೋಡಿ ರೈತಾಪಿ ಜನರು ಕಾಳುಕಡಿ, ದುಡ್ಡು ದುಗ್ಗಾಣಿಗಳನ್ನು ಕೊಡತೊಡಗಿದರು.

ಹೀಗೆಯೇ ಮುಂದುವರೆದು ಜೀವನ ತುಂಬಿಸಿಕೊಳ್ಳತೊಡಗಿದರು. ಗಂಗೆಯ ಆಶೀರ್ವಾದದಿಂದ ಭೂಮಿಗೆ ಬಂದುದರಿಂದ ಗಂಗೆತ್ತಿನವರೆಂದು ಕರೆಯುತ್ತಾರೆ. ಆಂಧ್ರಪ್ರದೇಶದ ನಲಗೊಂಡ ಮತ್ತು ಕಂದಲವಾರು ಕೋಲೆಬಸವರ ಗುರುಸ್ಥಾನವಾಗಿದೆ. ತಮ್ಮ ಗುರುಗಳಿಗೆ 'ಯಾಮಯ್ಯ' ಎಂದು ಕರೆಯುತ್ತಾರೆ. ಇವರು ವರ್ಷಕ್ಕೊಮ್ಮೆ ಕೋಲೆಬಸವರು ವಾಸಿಸುವ ಹಳ್ಳಿಗಳಿಗೆ ಭೇಟಿ ಕೊಡುತ್ತಾರೆ. ಆಂಧ್ರದಲ್ಲಿ ಗಂಗೆತ್ತಿನವರು ವಾಸಿಸುವ ಹಟ್ಟಿಗಳಲ್ಲಿ ರಾಮಸೀತೆಯರ ದೇವಸ್ಥಾನ ಇದೆಯಂತೆ. ದೇವಸ್ಥಾನದ ಎದುರಿಗೆ ತಮ್ಮ ಕುಲ ಸಂಕೇತಾರಾಧನೆಯ ಝುಂಡಾ ನೆಟ್ಟಿರುತ್ತಾರೆ. ಗುರುವಿನ ಪ್ರತಿನಿಧಿಯಾಗಿ ಇವರಲ್ಲಿಯೇ ಒಬ್ಬನು ಮುಖ್ಯಸ್ಥನಾಗಿರುತ್ತಾನೆ. ಮದುವೆ ಮುಂಜಿಗಳಂಥ ಧಾರ್ಮಿಕ ಕಾರ್ಯಗಳು ಇವರ ಮುಂದಾಳತ್ವದಲ್ಲಿಯೇ ನೆರವೇರುತ್ತವೆ.

ಆಂಧ್ರದಲ್ಲಿ ಗಂಗೆತ್ತಿನವರು ಶ್ರೀಶೈಲ ಮಲ್ಲಿಕಾರ್ಜುನ, ತಿರುಪತಿ ವೆಂಕಟರಮಣನಿಗೆ ನಡೆದು ಕೊಳ್ಳುತ್ತಾರೆ. ಕರ್ನಾಟಕದಲ್ಲಿಯ ಕೋಲೆಬಸವರು ವೆಂಕಯ್ಯಸ್ವಾಮಿ, ಕ್ಯಾಟದೇವರಿಗೆ ನಡೆದುಕೊಳ್ಳುತ್ತಾರೆ. ಮಹಾರಾಷ್ಟ್ರದಲ್ಲಿಯೇ ನಂದಿ ಬೈಲವಾಲೆ ತಿರುಮಾಳಿಯರ ಪ್ರಕಾರ, ಇವರ ಮೂಲಪುರುಷ ರಾಮಬಾಬಾ. ಇವನ ಸಮಾಧಿ ವಡಾಪುರದಲ್ಲಿದೆ. ಹೀಗೆ ಕೋಲೆಬಸವರಿಗೆ ರಾಮತಾತ ಮಹಾನ್ ಪುರುಷ.

**ಕುರುಮಾಮ :** ಕೊಂಡಮಾಮ, ಕುರುಕೊಂಡಯ್ಯ, ಕೊಂಡದೊರ, ಕೊಲುದೊರ ಇತ್ಯಾದಿ ಹೆಸರುಗಳಿರುವ ಭವಿಷ್ಯ ಹೇಳುವ ಒಂದು ಜನಾಂಗ. ಇವರ ಮೂಲನಿವಾಸಿಗಳು ಆಂಧ್ರಪ್ರದೇಶದವರು. ತೆಲುಗು ಇವರ ಮಾತೃಭಾಷೆ. ಬೆಜವಾಡ, ಶ್ರೀಶೈಲ, ಭದ್ರಾಚಲ, ಬಳ್ಳಾರಿ ಕಡೆಗಳಿಂದ ಕರ್ನಾಟಕಕ್ಕೆ ಬಂದು ಅಲ್ಲಲ್ಲಿ ನೆಲೆಸಿದ್ದಾರೆ. ಕೋಲಾರ ಜಿಲ್ಲೆಯ ವೃತ್ತಿಕಲಾವಿದರ ಸಮುದಾಯಗಳಲ್ಲಿ ಇವರೂ ಸೇರುತ್ತಾರೆ. ಐತಿಹ್ಯದ ಪ್ರಕಾರ ಈ ಜನಾಂಗದ ಮೂಲಗುರುಗಳು ಶ್ರೀಶೈಲದ ಮಲ್ಲಿಕಾರ್ಜುನನ ಆರಾಧಕರು. ಇವರ ಮೂಲಪುರುಷರು ಒಮ್ಮೆ ಭದ್ರಾಚಲಕ್ಕೆ ಭೇಟಿ ಕೊಟ್ಟು, ರಾಮದಾಸರನ್ನು

ಕಂಡರಂತೆ. ಅದರ ಫಲವಾಗಿ ರಾಮನ ಭಕ್ತರಾಗಿ ಪರಿವರ್ತನೆಯಾದರೆಂದು ಹೇಳುತ್ತಾರೆ. ಅಂದಿನಿಂದ ರಾಮನನ್ನು ಧ್ಯಾನಿಸುತ್ತ ಆತನಂತೆಯೇ, ಮುಡಿಕಟ್ಟಿ ಏಕನಾದವನ್ನು ಹಿಡಿದು ಭವಿಷ್ಯ ಹೇಳಲು ಹೊರಟರಂತೆ. ಇವರು ನವಿಲು, ಗಿಳಿ, ಪಾರಿವಾಳ, ಗರುಡ ಮುಂತಾದ ಪಕ್ಷಿಗಳ ಮಾಂಸವನ್ನು ತಿನ್ನುವುದಿಲ್ಲ.

ಭವಿಷ್ಯ ಹೇಳುವ ಕಲೆಯನ್ನು ರೂಢಿಸಿಕೊಂಡದ್ದಕ್ಕಾಗಿ ಇವರಲ್ಲಿ ದೃಢಪಡಿಸುವ ಐತಿಹ್ಯವೊಂದು ಪುರಾಣ ಮೂಲವನ್ನು ಬಳಸಿಕೊಳ್ಳುವ ಪರಿ ಹೀಗಿದೆ. ಕೈಲಾಸದಲ್ಲಿ ಒಂದು ದಿನ ಹೆಂಗಸರು ಅಡಿಗೆ ಮಾಡಲಿಲ್ಲ. ಆದ್ದರಿಂದ ಹೆಂಗಸರೇ ಅಡಿಗೆ ಮಾಡಿಕೊಂಡರು. ಈ ಸುದ್ದಿಯು ಪಾರ್ವತಿಗೆ ತಿಳಿಯಿತು. ಅವಳು ಕೋಪಗೊಂಡು ಕೈಲಾಸವಾಸಿಗಳಿಗೆ ಅಪಮಾನವಾಗುವಂತೆ ಶಪಿಸಿದಳು. ಅವಳ ಶಾಪದಂತೆ ಅವರು ಭೂಲೋಕದಲ್ಲಿ ಕೊಂಡರಾಜರಾಗಿ ಹುಟ್ಟಿದರು. ಅಲೆಮಾರಿಗಳಾಗಿ ಒಂದೊಂದು ಊರಿನಲ್ಲೂ ಮೂರು ಮೂರು ಕಲ್ಲುಗಳ ಒಲೆಗಳನ್ನು ಇಟ್ಟುಕೊಂಡು ಅವುಗಳ ಮೇಲೆ ಅಡಿಗೆ ಮಾಡಿಕೊಂಡು ಮುಂದೆ ಸಾಗುವುದನ್ನು ರೂಢಿಸಿಕೊಂಡರು. ತಮ್ಮ ವೃತ್ತಿಗೆ ಸಂಬಂಧಿಸಿದಂತೆ ಇವರು ಒದಗಿಸುವ ಕಾರಣವನ್ನು ನಂಬಲು ಆಧಾರಗಳಿಲ್ಲವಾದರೂ ಸ್ತ್ರೀ ಮೂಲದಿಂದ ತಮ್ಮ ಸಂಸ್ಕೃತಿಯ ಆರಂಭವನ್ನು ಗುರ್ತಿಸಿಕೊಂಡಿರುವುದು ಸ್ಪಷ್ಟವಾಗುತ್ತದೆ.

**ಚಂಚರು :** ಅಡವಿಚಂಚರು ಅಥವಾ ಚಂಚು ಚಂಚರು ಎಂಬ ಬುಡಕಟ್ಟು ಜನಾಂಗ ಆಂಧ್ರಪ್ರದೇಶದ ಮೂಲದವರು. ಕೋಲಾರ ಜಿಲ್ಲೆಯ ಗಡಿಭಾಗಕ್ಕೆ ಅಂಟಿಕೊಂಡ ಆಂಧ್ರದ ಕರ್ನೂಲ್, ನೆಲ್ಲೂರ್, ಚಿತ್ತೂರು, ಅನಂತಪುರ ಜಿಲ್ಲೆಗಳಿಂದ ಪ್ರಸರಣಗೊಂಡಿದ್ದಾರೆ. ಕೋಲಾರ ಜಿಲ್ಲೆಯಲ್ಲಿ ಯಾನಾದಿ, 'ಇರುಳ' ಎಂಬ ಹೆಸರುಗಳಿಂದ ಇವರನ್ನು ಕರೆಯುತ್ತಾರೆ. ಈ ಪ್ರದೇಶಗಳ ಬೇಡ ಜನಾಂಗದ ಕೆಲವು ಪಂಗಡಗಳವರು ಅಡವಿ ಚಂಚರನ್ನು ತಮ್ಮ ಅಣ್ಣ-ತಮ್ಮಂದಿರೆಂದು ಹೇಳಿಕೊಳ್ಳುತ್ತಾರೆ. ವಿಷ್ಣು ನರಸಿಂಹಾವತಾರ ತಾಳಿ ಅಡವಿ ಚಂಚರ ಹೆಣ್ಣು ಮಗಳನ್ನು ವರಿಸಿ ಮದುವೆಯಾದನೆಂದು ನಂಬಿಕೆ.

**ಪೌರಾಣಿಕ ಹಿನ್ನೆಲೆ :** ವಿಷ್ಣು ಮತ್ತು ಲಕ್ಷ್ಮಿ ಸರಸವಾಡುತ್ತಾ ಪರಸ್ಪರ ಛೇಡಿಸಿಕೊಳ್ಳುತ್ತಾರೆ. ಲಕ್ಷ್ಮಿಯು ಭೂಮಿಯಲ್ಲಿ ತನ್ನನ್ನು ಹುಡುಕಲು ಯಾರಿಗೂ ಸಾಧ್ಯವಾಗುವುದಿಲ್ಲವೆನ್ನುತ್ತಾರೆ. ವಿಷ್ಣು ತಾನು ಹುಡುಕುತ್ತೇನೆಂದು ಪಣ ತೊಡುತ್ತಾನೆ. ಸ್ಪರ್ಧೆಗಿಳಿದ ಲಕ್ಷ್ಮಿಯು ಭೂಮಿಗೆ ಇಳಿದು ತನ್ನ ರೂಪರಾಶಿಯನ್ನು ಒಂದು ಗಿಡದಲ್ಲಿ ಅಡಗಿಸಿಡುತ್ತಾಳೆ. ಮಕ್ಕಳ ಭಾಗ್ಯಕ್ಕೆಂದು ಅಡವಿ ಚಂಚರ ದಂಪತಿಗಳಿಬ್ಬರು ತಪಸ್ಸು ಮಾಡುತ್ತಿರುತ್ತಾರೆ. ಆ ಮಾರ್ಗದಲ್ಲಿ ಸಂಚರಿಸುತ್ತಿದ್ದ ನಾರದ ಋಷಿಯು ದಂಪತಿಗಳಿಗೆ ಒಂದು ವರವನ್ನು ಕೊಡುತ್ತಾನೆ. ಆ ಪ್ರಕಾರ ಲಕ್ಷ್ಮಿಯ ರೂಪರಾಶಿಯು ಅಡಗಿಸಿಟ್ಟ

ಗಿಡದಲ್ಲಿ ಹಣ್ಣಾಗಿರುತ್ತದೆ. ಆ ಹಣ್ಣನ್ನು ತಿಂದರೆ ಸಂತಾನ ಪ್ರಾಪ್ತವಾಗುವುದೆಂದು ನಾರದನು ಸೂಚಿಸುತ್ತಾನೆ. ಅದನ್ನು ಅನುಸರಿಸಿದ ದಂಪತಿಗಳಿಗೆ ಹೆಣ್ಣುಮಗಳು ಜನಿಸುತ್ತಾಳೆ. ಚಂಚುಲಕ್ಷ್ಮಿ ಎಂದು ನಾಮಕರಣ ಮಾಡುತ್ತಾರೆ. ಅವಳು ಬೆಳೆದಂತೆಲ್ಲ ಬೇಟೆಗಾರಿಕೆಯನ್ನು ಕಲಿತು ರೂಢಿಸಿಕೊಂಡಿರುತ್ತಾಳೆ. (ಕರ್ನಾಟಕ ರಾಜ್ಯಕೋಶ, ಸಂ.೪, ೨೦೦೦, ಪು.೨)

ಇತ್ತ ವಿಷ್ಣುವು ಹಿರಣ್ಯಕಶ್ಯಪನನ್ನು ಕೊಲ್ಲಲು ನರಸಿಂಹಾವತಾರವನ್ನು ತಾಳುತ್ತಾನೆ. ಕೊಂದ ಆವೇಶದಲ್ಲಿ ಬೆಟ್ಟಗುಡ್ಡಗಳಲ್ಲೆಲ್ಲಾ ಅಲೆಯುತ್ತಿರುತ್ತಾನೆ. ಅವನನ್ನು ಶಾಂತಗೊಳಿಸಲು ದೇವಾದಿ-ದೇವತೆಗಳಿಂದಲೇ ಸಾಧ್ಯವಾಗುವುದಿಲ್ಲ. ಇಂಥ ಸಂದರ್ಭದಲ್ಲಿ ಚಂಚುಲಕ್ಷ್ಮಿ ನರಸಿಂಹನನ್ನು ತನ್ನ ಬಿಲ್ಲು-ಬಾಣದಿಂದ ಬಂಧಿಸುತ್ತಾಳೆ. ಅವರಿಬ್ಬರಿಗೂ ಅನುರಾಗ ಬೆಳೆದು ಮದುವೆಯಾಗುತ್ತಾರೆ. ಈ ನರಸಿಂಹನನ್ನು ಓಬಳೇಶನೆಂದು ಬೇಡರು, ಚಂಚರು, ಉಪ್ಪಾರರು, ಒಡ್ಡರು, ಮಾದಿಗರು ಮುಂತಾದ ಸಮುದಾಯಗಳು ಕುಲದೈವವನ್ನಾಗಿ ಮಾಡಿಕೊಂಡಿದ್ದಾರೆ. ಚಂಚುಲಕ್ಷ್ಮಿ ತಮ್ಮ ಮನೆಯ ಹೆಣ್ಣುಮಗಳು ಎಂದು ನಂಬುವ ಬೇಡರ ಕೆಲವು ಪಂಗಡಗಳು ನರಸಿಂಹಸ್ವಾಮಿಯನ್ನು ಪೂಜಿಸುವ ಮೂಲಕ ಒಕ್ಕಲಾಗಿ ನಡೆದುಕೊಳ್ಳುತ್ತಾರೆ. ಚಂಚರು ಪೂಜಿಸುವ ದೇವತೆ ಚಂಚುದೇವತೆ. ನರಸಿಂಹ ದೇವರು ಸುಂದರಿಯಾದ ಚಂಚಿತಾಳನ್ನು ಹೊತ್ತುಕೊಂಡು ಹೋಗಿ ಮದುವೆಯಾದನೆಂದು ನಂಬಿದ್ದಾರೆ. ನರಸಿಂಹ ದೇವರನ್ನು ಇವರು ಓಬಳೇಶುಡು ಎಂದು ಕರೆಯುತ್ತಾರೆ. ಓಬಳೇಶುಡುವನ್ನು ಅಳಿಯನನ್ನಾಗಿ ಭಾವಿಸಿ ಚಂಚರು ವರ್ಷಕ್ಕೊಮ್ಮೆ ಉಡುಗೊರೆಯನ್ನು ಕೊಟ್ಟು ಪೂಜೆ ಸಲ್ಲಿಸುತ್ತಾರೆ.

ಚಂಚರ ಸಂತತಿಯನ್ನು ಕುರಿತ ಐತಿಹ್ಯ ದ್ವಾಪರಯುಗದ ಕೃಷ್ಣಾವತಾರಕ್ಕೂ ಹಿಂದೆ ಚಂಚವಾರು ಯರಗೊಲ್ಲ ಮತದ ಕುರುಬರಾಗಿ ಕುರಿ ಕಾಯುತ್ತಿದ್ದರು. ಓಬಳಮಾನ ಓಬಳೇಶ್ವರಸ್ವಾಮಿ ವಾಸವಾಗಿರುವ ಪವಿತ್ರ ಬೆಟ್ಟ ನಲ್ಲಾಮಲೈನಲ್ಲಿ ಯರಗೊಲ್ಲ ಕನ್ಯೆಯಾದ ಚಂಚಿತಾಳನ್ನು ಎತ್ತಿಕೊಂಡು ಹೋದನು. ಹೀಗೆ ಯರಗೊಲ್ಲರ ಚಂಚರ ಓಬಳೇಶ್ವರ ಸ್ವಾಮಿಗೆ ಹುಟ್ಟಿದ ಮಕ್ಕಳೇ ಮುಂದೆ ಚಂಚರಾದರು.[೨೦] ಚಂಚರು ಕಾಡುಮೇಡುಗಳಲ್ಲಿ ಅಲೆದಾಡುವ ಜನರಾಗಿದ್ದು ಬೇಟೆಗಾರರೂ ಪಶುಪಾಲಕರೂ ಆಗಿ ಜೀವನ ನಿರ್ವಹಿಸಿದವರೆಂಬುದು ಸ್ಪಷ್ಟ ಸಂಗತಿ. ಇವರ ಹೆಂಗಸರೂ ಗಂಡಸರಂತೆ ಶ್ರಮಜೀವಿಗಳು. ಬಿಸಿಲು ಮಳೆ ಗಾಳಿಯೆನ್ನದೆ ದುಡಿಯುವವರಾದ್ದರಿಂದ ಸಹಜವಾಗಿಯೇ ಮುಖಕಾಂತಿಯನ್ನು ಕಳೆದುಕೊಂಡು ಕಪ್ಪಾಗಿರುತ್ತಾರೆ. ಇದನ್ನು ಸಮರ್ಥಿಸುವ ಐತಿಹ್ಯಗಳು ಹೀಗಿವೆ : ಚಂಚರ ಗಂಡಸರು ಉಡವನ್ನು ಬೇಟೆ ಮಾಡುವುದರಲ್ಲಿ ಘಟಿಂಗರೆಂದು ರಾಜನ ವಿಶ್ವಾಸವನ್ನು ಗಳಿಸಿದ್ದರು. ಒಮ್ಮೆ ಊರಿಗೆ ಸವಾಲಾಗಿ ಬಂದ ಜಟ್ಟಿ ಪೈಲ್ವಾನನನ್ನು ಸೋಲಿಸಿದರು. ಸಂತೋಷಗೊಂಡ ರಾಜನು ಇವರಿಗೆ ಅರ್ಧರಾಜ್ಯವನ್ನು ಕೊಡುವುದಾಗಿ ಹೇಳಿದ. ಆದರೆ ಇವರಲ್ಲಿ ಕೆಲವು ಮಂದಿ ತಮಗೆ ರಾಜ್ಯ ಬೇಡವೆಂದು, ಕುಸ್ತಿಯಾಡುವಾಗ

ಜನರು ಹಾಕಿದ್ದ ಕಾಸುಗಳೇ ಸಾಕೆಂದು ಹೇಳಿದರು. ಆ ಹಣವನ್ನೆಲ್ಲ ಆರಿಸಿ, ಅದರಿಂದ ಹೋತಗಳನ್ನು ಕೊಂಡರು. ದೇವರ ಹೆಸರಿಗೆ ಬಲಿ ನೀಡಿ ಊಟ ಮಾಡಿ ಕಾಡು ಸೇರಿದರು. ಚಂಚರಾಗಿ ಉಳಿದರು. ಅರ್ಧರಾಜ್ಯವನ್ನು ತೆಗೆದುಕೊಂಡ ಗುಜ್ಜರು ಶ್ರೀಮಂತರಾಗಿ ರಾಜ್ಯವಾಳಿದರು. ಹಾಗೆಯೇ 'ಅಹೋಬಲಂ'ನ ನರಸಿಂಹದೇವರು ಓಬಲೇಶುಡು ಚಂಚಿತಾಳ ಸೌಂದರ್ಯಕ್ಕೆ ಮನಸೋತು ಅಪಹರಿಸಿಕೊಂಡು ಮದುವೆ ಯಾದಂತೆ, ಬೇರೆ ಯಾರೂ ತಮ್ಮ ಚಂಚರ ಹೆಣ್ಣುಮಕ್ಕಳಿಗೆ ಮನಸೋಲದಿರಲೆಂದು ತೇಜೋಹೀನರಾಗಿ ಕುರೂಪಿಗಳಾಗಿ ಹುಟ್ಟಲಿ ಎಂದು ಬೇಡಿಕೊಂಡರಂತೆ.[೨೦]

ಮತ್ತೊಂದು ಐತಿಹ್ಯದ ಪ್ರಕಾರ ಚಂಚರ ಪುರುಷನೊಬ್ಬನು ತನಗೆ ಹೆಂಡತಿ ಬೇಕೆಂದು ಶಿವನನ್ನು ಕುರಿತು ತಪಸ್ಸು ಮಾಡಿದ. ಪ್ರತ್ಯಕ್ಷನಾದ ಶಿವನು ಜಗತ್ತಿನಲ್ಲಿ ನೀನು ಯಾವ ಸ್ತ್ರೀಯನ್ನಾದರೂ ಮದುವೆಯಾಗೆಂದು ಎಲ್ಲ ಚಲುವೆಯರನ್ನು ತೋರಿಸುತ್ತಾ ಹೋದ. ಚಂಚರ ಪುರುಷನು ತನಗೆ ಅಷ್ಟು ಚಲುವೆಯರು ಬೇಡವೆಂದ. ಕೊನೆಗೆ ಸಾಧಾರಣವಾದ ಕಪ್ಪು ಬಣ್ಣದ ಯುವತಿಯೊಬ್ಬಳನ್ನು ಒಪ್ಪಿದ. ಅಂದಿನಿಂದ ಚಂಚರಿಗೆ ದೇವರು ಚೆಲುವೆಯರನ್ನು ಕೊಡಲಿಲ್ಲ. ಚಂಚರು ದೈಹಿಕ ಸೌಂದರ್ಯದ ಬಗ್ಗೆ ಕಾಳಜಿ ಮಾಡುವವರಲ್ಲವೆಂಬುದನ್ನು ಇಂಥ ಐತಿಹ್ಯಗಳಿಂದ ಸ್ಪಷ್ಟಪಡಿಸುತ್ತಾರೆ. ಇವರ ಮಾತೃಭಾಷೆ ತೆಲುಗು, ಕೋಲಾರ ತುಮಕೂರು ಜಿಲ್ಲೆಗಳ ಗಡಿಭಾಗದಲ್ಲಿ ಕಂಡುಬರುವ ಚಂಚರು ಕನ್ನಡವನ್ನು ಮಾತನಾಡುತ್ತಾರೆ. ಕೋಲಾರ ಜಿಲ್ಲೆಯ ಬಂಗಾರಪೇಟೆ, ಕೆ.ಜಿ.ಎಫ್. ಮುಳಬಾಗಿಲು ಮಾಲೂರಿನ ಕಡೆಯ ಚಂಚರು ಆಡುವ ಭಾಷೆಯ ಮೇಲೆ ತಮಿಳು ಪ್ರಭಾವವನ್ನು ಕಾಣಬಹುದು. ಕೋಲಾರದ ಸುತ್ತಮುತ್ತಲಿನ ಅಂದರೆ ವೇಮಗಲ್, ಹೊಸಕೋಟೆಯ ಕಾಡುಗಳಲ್ಲಿ ಇಂದಿಗೂ ಇವರು ವಾಸವಾಗಿರುವುದು ಕಂಡುಬರುತ್ತದೆ.

**ಬೋವಿ ಅಥವಾ ವಡ್ಡ** : "ಏಳು ಜನ ಗಂಡಂದಿರನ್ನು ಹೊಂದಿದ ಹೆಂಗಸನ್ನು ಇವರು ತುಂಬ ಗೌರವಿಸುತ್ತಾರೆ. ಮದುವೆಯಲ್ಲಿ ಗಂಡು ಹೆಣ್ಣಿಗೆ ಅವಳ ಆಶೀರ್ವಾದ ಕೊಡಿಸುತ್ತಾರೆ. ವಿಧವೆ ಏಳು ಬಾರಿ ಹಸಿಮಣೆ ಏರಬಹುದು." (ಕನ್ನಡ ಜಾನಪದ ವಿಶ್ವಕೋಶ, ಪು.೨೬೭) ಇಂಥ ವಿಶಿಷ್ಟ ಸಂಸ್ಕೃತಿ ಯುಳ್ಳ ವಡ್ಡರು ಕೋಲಾರ ಜಿಲ್ಲೆಗೆ ಆಂಧ್ರ ಮೂಲದಿಂದ ವಲಸೆ ಬಂದವರಂತೆ ಕಾಣುತ್ತಾರೆ. ಇವರ ಮಾತೃಭಾಷೆ ತೆಲುಗು. ಮಣ್ಣು ಅಗೆಯುವ, ಕೆರೆ ಬಾವಿಗಳನ್ನು ತೋಡುವ ಕಲ್ಲು ಒಡೆಯುವ ಕಠಿಣ ಶ್ರಮಕ್ಕೆ ಹೆಸರಾದ ಇವರು ಬಡತನದಿಂದ ಬಿಡಿಸಿಕೊಳ್ಳಲಾಗದ ಅಸಹಾಯಕರು. ಬೋವಿ ಎನ್ನುವ ಜಾತಿ ಸೂಚಕವು ಬಾವಿ ತೋಡುವ ಜನಸಮುದಾಯವನ್ನು ಹೇಳುತ್ತದೆ. ಇದರಲ್ಲಿ ಕಲ್ಲುಭೋವಿ, ಮಣ್ಣುಭೋವಿ, ಉಪ್ಪಾರಭೋವಿ ಎಂಬ ವರ್ಗಗಳಿದ್ದು ಅವರು ಕೈಗೊಳ್ಳುವ ವೃತ್ತಿಗಳನ್ನು ಸೂಚಿಸುತ್ತದೆ. ಇವರ ಸಾಂಸ್ಕೃತಿಕ ಆಯಾಮಗಳನ್ನು ಕೆಲವು ಐತಿಹ್ಯಗಳಲ್ಲಿ ಕಾಣಬಹುದು.

"ದೇವರು ಮನುಷ್ಯ ರೂಪ ತಾಳಿ ವಡ್ಡರ ಜೊತೆ ಕೆಲಸ ಮಾಡುತ್ತಿದ್ದನು. ಒಂದು ದಿನ ದೇವರಿಗೆ ಏನೋ ಪೂಜೆಯ ಕೆಲಸ ಇದ್ದುದರಿಂದ ವಡ್ಡರಿಗೆಲ್ಲ ಮೂರು ದಿನದ ಮುಂಗಡ ಕೊಟ್ಟು, ನನ್ನ ಹತ್ತಿರ ಬರಬೇಡಿ ಎಂದು ಹೇಳಿ ಕಳುಹಿಸಿದನು. ಆದರೆ ಒಡ್ಡರು ಮಾರನೆಯ ದಿನವೇ ಬಂದು ದೇವರಿಗೆ ತೊಂದರೆ ಕೊಟ್ಟರು. ಇದರಿಂದ ಕುಪಿತನಾದ ದೇವರು ಒಡ್ಡರಿಗೆ ಯಾವಾಗಲೂ ಬಡವರಾಗಿರಿ ಎಂದು ಶಾಪ ಕೊಟ್ಟನು."

"ಶಿವ ಪಾರ್ವತಿಯರು ಬಿಸಿಲಿನಲ್ಲಿ ಭೂಮಿಯ ಮೇಲೆ ನಡೆದು ಹೋಗುತ್ತಿದ್ದಾಗ ತುಂಬಾ ಬಾಯಾರಿಕೆ ಆಯಿತು. ಶಿವನಿಂದ ಉದುರಿದ ಬೆವರ ಹನಿಗಳಿಂದ ಸನಿಕೆ, ಗಡಾರಿ ಹಿಡಿದ ಮನುಷ್ಯ ಹುಟ್ಟಿದನು. ಪಾರ್ವತಿಯ ಬೆವರ ಹನಿಗಳಿಂದ ಮಂಕರಿ ಹಿಡಿದ ಹೆಂಗಸು ಹುಟ್ಟಿದಳು. ಇಬ್ಬರೂ ಬೇಗ ಬೇಗ ಬಾವಿಯನ್ನು ತೋಡಿದರು. ಆ ತಣ್ಣನೆಯ ನೀರಿನಿಂದ ಶಿವಪಾರ್ವತಿಯರು ಆಯಾಸ ಪರಿಹರಿಸಿಕೊಂಡರು. ಬಾವಿ ತೋಡಿಕೊಟ್ಟಿದ್ದಕ್ಕೆ ಪ್ರತಿಫಲವಾಗಿ ಆ ಇಬ್ಬರಿಗೆ ಉಡುಗೊರೆ ಕೊಟ್ಟರು. ಅವರಿಬ್ಬರಿಗೆ ತೃಪ್ತಿ ಆಗದೆ ಗೊಣಗಿದರು. ಇದರಿಂದ ಶಿವ ಕೋಪಗೊಂಡು, ನಿಮ್ಮ ಸಂತತಿಯವರು ಬೆವರು ಸುರಿಸಿ ಜೀವಿಸುವಂತಾಗಲಿ ಎಂದು ಶಾಪ ಕೊಟ್ಟನು." (ಕನ್ನಡ ಜಾನಪದ ವಿಶ್ವಕೋಶ, ಪು.೨೬೭)

ಒಮ್ಮೆ ಶಿವನು ದೇವತೆಗಳು, ಮನುಷ್ಯರು ನೀರು ಕುಡಿಯುವುದಕ್ಕೆ ಕೆರೆಯೊಂದನ್ನು ಕಟ್ಟಿಸತೊಡಗಿದರು. ಕೆಲಸ ಮುಗಿದ ನಂತರ ಒಡ್ಡರು ಹಣ ಕೇಳಿದರು. ಹಣದ ಬದಲಿಗೆ ಶಿವನು ಪ್ರತಿಯೊಬ್ಬರಿಗೂ ಚಿಟಿಕೆ ವಿಭೂತಿಯನ್ನು ಕೊಟ್ಟನು. ಅದನ್ನು ಮನೆಗೆ ಒಯ್ದಾಗ ಹಣವಾಗಿ ಬದಲಾಯಿತು. ಅದಕ್ಕೆ ತೃಪ್ತಿಪಡದ ವಡ್ಡರು ಇನ್ನಷ್ಟು ಹಣಕ್ಕೆ ಒತ್ತಾಯಿಸಿದರು. ಶಿವನಿಗೆ ಕೋಪ ಬಂದು "ನೀವು ಕಾಡಿನಲ್ಲಿ ಅಗೆದು ಸಂಪಾದಿಸಿದ ಹಣ ಎತ್ತರದ ಬಯಲಿಗೆ ಬಂದ ತಕ್ಷಣ ಕಳೆದು ಹೋಗಲಿ" ಎಂದು ಶಾಪ ಕೊಟ್ಟನು. ಆದರೆ ಪಾರ್ವತಿಗೆ ಕರುಣೆ ಬಂದು ಹಣ ಕೊಡುವಂತೆ ಒತ್ತಾಯಿಸಿದಳು. ಆಗ ಶಿವನು ಒಂದು ಅಳತೆ ಕಡ್ಡಿಯೊಳಗೆ ಚಿನ್ನದ ವರಹಗಳನ್ನು ತುಂಬಿ ಮೇಸ್ತ್ರಿಯ ಕೈಗೆ ಕೊಟ್ಟನು. ಮತ್ತು ಕುಂಬಳಕಾಯಿಯೊಳಕ್ಕೆ ಹಣ ತುಂಬಿ ವಡ್ಡರು ಕೆಲಸ ಮಾಡುವ ಜಾಗದಲ್ಲಿ ಹೂಳಿದನು. ಅಳತೆ ಕಡ್ಡಿಯೊಳಗೆ ವರಹ ಇರುವುದನ್ನು ತಿಳಿಯದೆ ಮೇಸ್ತ್ರಿ ಹೆಂಡ ಕುಡಿಯುವುದಕ್ಕೆ ಅದನ್ನು ಅಡವಿಟ್ಟನು. ಕುಂಬಳಕಾಯಿ ಹೂತಿದ್ದ ಜಾಗ ಸ್ವಲ್ಪ ಎತ್ತರವಾದ್ದರಿಂದ ಒಡ್ಡರು ಅಲ್ಲಿ ಅಗೆಯದೆ, ಅದನ್ನು ಅಗೆದ ನೆಲದ ಮಟ್ಟ ತೋರಿಸುವುದಕ್ಕೆಂದು ಬಿಟ್ಟುಬಿಟ್ಟರು. ಹತ್ತಿರ ಮೇಯುತ್ತಿದ್ದ ಒಂದು ಎಮ್ಮೆಯು ಕುಂಬಳಕಾಯಿ ಇರುವುದನ್ನು ತೋರಿಸಿತು. ಅದರೊಳಗೆ ಹಣ ಇರುವುದನ್ನು

ಅರಿಯದ ವಡ್ಡರು ಅದನ್ನು ಕೋಮಟಿಗೆ ಮಾರಿದರು. ಅದೃಷ್ಟವಿಲ್ಲದಲ್ಲಿ ಐಸಿರಿ ಎದುರಿಗಿದ್ದರೂ ದಕ್ಕುವುದಿಲ್ಲವೆಂಬುದಕ್ಕೆ ಈ ಕಥೆ ಹೇಳುತ್ತಾರೆ. (ಕನ್ನಡ ಜಾನಪದ ವಿಶ್ವಕೋಶ, ಪು.೪೭೫)

**ಲಂಬಾಣಿ** : ಈ ಸಮುದಾಯದ ಜನರು ಲವಣದ ವ್ಯಾಪಾರವನ್ನು ಮಾಡುತ್ತಿದ್ದುದರಿಂದ ಲಂಬಾಣಿಗಳೆಂದು ಮುಂದೆ ಅಪಭ್ರಂಶಗೊಂಡು, ಲಮಾಣಿಗ, ಲಂಬಾಣಿಗ, ಲಂಬಾಂಡಿಗರು ಎಂಬ ಹೆಸರುಗಳಿಂದ ಕರೆಯಲ್ಪಟ್ಟರು. ಲಂಬಾಣಿ ಅಥವಾ ಲಂಬಾಡಿ ಎಂಬ ಲಮಾನೆ / ಲಭಾನೆ ಎಂಬ ಪದದ ಇನ್ನೊಂದು ರೂಪವೆಂದು ಹೇಳುತ್ತಾರೆ. ಸಾಮಾನ್ಯವಾಗಿ ಇವರು ರಾಜಸ್ಥಾನದಿಂದ ದಕ್ಷಿಣ ಭಾರತದ ಕಡೆಗೆ ವಲಸೆ ಬಂದವರು ಎಂದು ತಿಳಿದುಬರುತ್ತದೆ. ಇವರ ಸಾಂಪ್ರದಾಯಿಕ ವೃತ್ತಿಗಳೆಂದರೆ ಉಪ್ಪು, ಮದ್ಯ ತಯಾರಿಸುವುದು ಹಾಗೂ ಅಲೆಮಾರಿ ರೀತಿಯಲ್ಲಿ ಮಾರಾಟ ಮಾಡುವುದು. (ಕರ್ನಾಟಕ ರಾಜ್ಯಕೋಶ, ಪು.೧೦೭)

ದಕ್ಷಿಣ ಭಾರತದಾದ್ಯಂತ ಲಂಬಾಣಿಗಳನ್ನು ಸುಕಾಲಿ, ಸುಗಾಲಿ ಎಂಬುದಾಗಿ ಕರೆಯುತ್ತಾರೆ. ದಕ್ಷಿಣ ರಾಜ್ಯಗಳಲ್ಲಿ ಸುಕಾಲಿ ಎಂಬುದನ್ನು ದನಗಾಯುವ ಅಥವಾ ಸಾಕುವವರಿಗಾಗಿ ಬಳಸುವ ಪದವಾಗಿದೆ. ತೆಲುಗು ಭಾಷೆಯಲ್ಲಿ ಸುಗಾಲಿ ಉತ್ತಮ ಆಕಳುಗಳನ್ನು ಸಾಕುವವನು ಎಂದರ್ಥ. ಈ ಜನರು ಮೊದಲಿನಿಂದಲೂ ಹೆಚ್ಚಾಗಿ ಗೋಪಾಲಕರಾಗಿರುವುದು ಕಂಡುಬರುತ್ತದೆ.[೨೨] ಇವರು ತಮ್ಮನ್ನು ಕೃಷ್ಣನ ವಂಶಸ್ಥರೆಂದು ಗುರುತಿಸಿಕೊಳ್ಳುತ್ತಾರೆ. ಇದನ್ನು ಗಮನಿಸಿದರೆ ಪಶುಪಾಲನೆಗೂ ಇವರಿಗೂ ಸಂಬಂಧವಿದ್ದುದು ಸ್ಪಷ್ಟವಾಗುತ್ತದೆ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಇವರನ್ನು ಲವಣ (ಉಪ್ಪು) ವ್ಯಾಪಾರಸ್ಥ ವೃತ್ತಿಯವರೆಂದು ಪಶುಪಾಲನೆಯ ಕಾರಣಕ್ಕಾಗಿ ಕಾಡು-ಮೇಡುಗಳಲ್ಲಿ ಇದ್ದವರೆಂದೂ ಹೇಳಬಹುದು. ವೃತ್ತಿಗಳಿಗನುಗುಣವಾಗಿ ಅಲೆಮಾರಿಗಳಾಗಿದ್ದಾರೆ. ಹಿಂದೆ ಅಲೆಮಾರಿಗಳಾಗಿದ್ದ ಲಂಬಾಣಿಗಳು ಭಾರತದಾದ್ಯಂತ ಎಲ್ಲ ಪ್ರದೇಶಗಳಲ್ಲೂ ಕಂಡುಬರುತ್ತಾರೆ. ಗುಡ್ಡಗಾಡು ಪ್ರದೇಶಗಳಲ್ಲಿ ನೆಲೆಸುತ್ತಿದ್ದ ಇವರು ಈಗ ಊರುಗಳಿಂದ ಸ್ವಲ್ಪ ದೂರದಲ್ಲಿ ತಮ್ಮದೇ ಆದ ತಾಂಡಗಳನ್ನು ಕಟ್ಟಿಕೊಂಡು ಪ್ರತ್ಯೇಕವಾಗಿ ಬದುಕುತ್ತಿದ್ದಾರೆ. ಪ್ರತಿಯೊಂದು ತಾಂಡಾವನ್ನೂ ಹತ್ತಿರದ ಹಳ್ಳಿಯ ಜೊತೆಗೆ ಸೇರಿಸುವುದು ಹೆಸರಿಸುವುದು ವಾಡಿಕೆಯಾಗಿದೆ. ಲಂಬಾಣಿಗಳು ರಾಮಾಯಣದ ವಾಲಿ-ಸುಗ್ರೀವರನ್ನು ತಮ್ಮ ಪೂರ್ವಜರೆಂದು ಹೇಳಿಕೊಳ್ಳುತ್ತಾರೆ. ರಾಮನು ವಾಲಿಯನ್ನು ಕೊಂದ ನಂತರ ವಾಲಿಯ ತಮ್ಮ ಸುಗ್ರೀವನು ವಾಲಿಯ ಹೆಂಡತಿ ತಾರಾಳನ್ನು ಮದುವೆ ಮಾಡಿಕೊಂಡವನೆಂಬ ಪೌರಾಣಿಕ ಸಂದರ್ಭವನ್ನು ಪ್ರತಿಬಿಂಬಿಸುವ ಅತ್ತಿಗೆ-ಮೈದುನ ವಿವಾಹ ಪದ್ಧತಿ ಇವರಲ್ಲಿದೆ.

ಕರ್ನಾಟಕ-ಆಂಧ್ರದ ಕೆಲವು ತಾಂಡಾಗಳ ಲಂಬಾಣಿ ಹೆಂಗಸರು ಕಾಮನಹುಣ್ಣಿಮೆಯ ಸಂದರ್ಭದಲ್ಲಿ ಕೋಲಾಟ ಹಾಕುತ್ತಾ ಊರಿಂದೂರಿಗೆ ಅಲೆಯುತ್ತಾರೆ. ಕಾಮದಹನದ ಹುಣ್ಣಿಮೆಯ ಬೆಳದಿಂಗಳು ಮಾಸುವವರೆಗೂ ಅವರು ತಮ್ಮ ಗಂಡಸರಿಂದ ಸ್ವತಂತ್ರರೆಂದು ಹೇಳುತ್ತಾರೆ. ಮಹಾಭಾರತದ ಕೃಷ್ಣನ ಕಾಲದ ಗೋಪಿಕೆಯರ ಸಂಭ್ರಮ ತಮ್ಮದೆಂದು ಹೇಳುತ್ತಾರೆ. ಕಾಮದಹನದ ಉರಿಯು ಯಾವ ದಿಕ್ಕಿಗೆ ವಾಲುತ್ತದೆಯೋ ಆ ದಿಕ್ಕಿನಲ್ಲಿ ಮಳೆ-ಬೆಳೆ ಚನ್ನಾಗಿ ಬರುತ್ತದೆಂದು ಭಾವಿಸುತ್ತಾರೆ.[೨೨] ಲಂಬಾಣಿ ಹೆಂಗಸರು ಮಳೆ-ಬೆಳೆಯ ಸಮೃದ್ಧಿಗಾಗಿ ಕೃಷ್ಣನ ನೆನಪಿನಲ್ಲಿ ಕೋಲಾಟ ಹಾಕುತ್ತಾರೆ. ಕೋಲಾಟದ ಗೀತ-ನೃತ್ಯಗಳ ಮೂಲಕ ಹೋಳಿಹಬ್ಬದ ಆಚರಣೆಗೆ ವಿಶೇಷ ಮೆರಗು ನೀಡುತ್ತಾರೆ. ಹೈದರಾಬಾದ್-ಕರ್ನಾಟಕ ಮತ್ತು ಉತ್ತರ ಕರ್ನಾಟಕದ ಲಂಬಾಣಿಗಳಲ್ಲಿ ದೊರೆಯುವ ಐತಿಹ್ಯಗಳಾಗಲಿ ಅಥವಾ ಅಂಥ ಐತಿಹ್ಯಗಳಿಗೆ ಪೂರಕವಾದ ಐತಿಹ್ಯಗಳಾಗಲಿ ಕೋಲಾರ ಜಿಲ್ಲೆಯ ಲಂಬಾಣಿಗಳಲ್ಲಿ ದೊರೆಯುವುದಿಲ್ಲ.

**ಹಗಲುವೇಷದವರು ಅಥವಾ ಬುಡಗ ಜಂಗಾಲರು :** ಹಗಲು ವೇಷದವರೆಂದು ಕರೆಯಲ್ಪಡುವ ವೃತ್ತಿಕಲಾವಿದರ ಸಮುದಾಯ ಆಂಧ್ರ-ಕರ್ನಾಟಕದ ತೆಲಂಗಾಣ ರಾಯಲುಸೀಮೆಗಳಿಗೆ ಹೊಂದಿಕೊಂಡಿರುವ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ತುಮಕೂರು ಜಿಲ್ಲೆಯ ಮಧುಗಿರಿ, ಕೊರಟಗೆರೆ, ಪಾವಗಡ, ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ, ಗೌರೀಬಿದನೂರು, ಗುಡಿಬಂಡೆ, ಶಿಡ್ಲಘಟ್ಟ, ಮಾಲೂರು, ಚಿಂತಾಮಣಿ ಮುಂತಾದ ತಾಲೂಕುಗಳಲ್ಲಿ ಇವರನ್ನು ಬೇಡ (ಬುಡ್ಗ) ಜಂಗಾಲು ಜನಾಂಗವೆಂದು ಕರೆಯುತ್ತಾರೆ. ಇವರು ನಾನಾ ವೇಷಗಳನ್ನು ಹಾಕುವವರು ಬಹುರೂಪಿಗಳು. ಮಾತೃಭಾಷೆ ತೆಲುಗು ಅಥವಾ ತೆಲುಗು ಮಿಶ್ರಿತ ಪ್ರಾದೇಶಿಕ ಕನ್ನಡ ಭಾಷೆಯಾಗಿರುತ್ತದೆ.

ಬುಡಗ ಜಂಗಾಲರು ಎಂಬ ಜನಾಂಗ 'ಬುಡಿಗೆ' ಎನ್ನುವ ವಾದ್ಯದೊಂದಿಗೆ (ಇದನ್ನು ಡಿಂಕಿ, ಗುಮ್ಮಟ ಎಂದೂ ಕರೆಯುತ್ತಾರೆ.) ಬುರ್ರಕಥೆಗಳನ್ನು ಹಾಡುತ್ತಾರೆ. ಹಾಗೂ ಹಗಲುವೇಷದ ಕಲಾವಿದರಾಗಿಯೂ ಪ್ರದರ್ಶನಗಳನ್ನು ನೀಡುತ್ತಾರೆ. ಇವರನ್ನು ಆಂಧ್ರದ ಕಡೆಯಿಂದ ಬಂದವರೆಂದು ಗುರ್ತಿಸುತ್ತಾರೆ. ಇವರು ಜಂಗಲ್ (ಕಾಡು-ಮೇಡು)ಗಳಲ್ಲಿ ವಾಸಿಸುತ್ತಿದ್ದವರಾಗಿದ್ದರಿಂದ ಜಂಗಾಲರೆಂದೂ ಬುಡಿಕೆ ವಾದ್ಯವನ್ನು ನುಡಿಸುತ್ತಾ ಕಥೆಗಳನ್ನು ನಿರೂಪಿಸುವುದರಿಂದ ಬುಡಗ ಜಂಗಾಲರೆಂದು ಕರೆಯುತ್ತಾರೆ. ಬುಡಿಗೆ ವಾದ್ಯವು ತಲೆಬುರ್ರೆ (ಬುರುಡೆ)ಯಂತಿದೆಯೆಂದು ಅದನ್ನು ಬುರ್ರ ಎಂದು ಆ ಮೂಲಕ ನಿರೂಪಿತವಾಗುವ ಕಥೆಗಳನ್ನು ಬುರ್ರಕಥೆಗಳೆಂದು ಹೇಳುತ್ತಾರೆ. ಇವರ ವೃತ್ತಿಜೀವನಗಳಲ್ಲಿ ತೆಲುಗಿನ ಪ್ರಭಾವವಿರುವುದನ್ನು ಬುಡಿಗ, ಬುರ್ರ ಎಂಬ ಪದಗಳಿಂದ ತಿಳಿಯಬಹುದು.

ಕರ್ನಾಟಕ ಆಂಧ್ರಗಳಲ್ಲಿ ಬೇಡ-ಬೋಯ ಎಂಬ ಹೆಸರುಗಳಿಂದ ಕರೆಯಲ್ಪಡುವ ಬುಡಕಟ್ಟಿನ ಒಂದು ಪಂಗಡವೆಂದು ಇವರನ್ನು ಗುರ್ತಿಸಲಾಗಿದೆ. ಈ ಜನಾಂಗ ಬೇಟೆ ಮಾಡಿ, ಕಲಾ ಪ್ರದರ್ಶನ ನೀಡಿ ಬದುಕುತ್ತಿದ್ದ ದ್ರಾವಿಡ ಶೈವ ಬೇಡರ ಕಾಲವನ್ನು ಪ್ರತಿನಿಧಿಸುತ್ತದೆ ಎಂದು ತೀರ್ಮಾನಿಸಲಾಗಿದೆ.[೨೪] ಐತಿಹ್ಯದ ಪ್ರಕಾರ ವಾಲ್ಮೀಕಿಯು ರಚಿಸಿದ ರಾಮಾಯಣವನ್ನು ಪಾತ್ರಕಟ್ಟಿ ಜನರ ಮುಂದಕ್ಕೆ ಕೊಂಡೊಯ್ದು ವಾಲ್ಮೀಕಿ ಶಿಷ್ಯಪರಂಪರೆ ತಾವೆಂದು ಹೇಳುತ್ತಾರೆ. ಈಗಲೂ ಇವರ ಹಗಲುವೇಷದಲ್ಲಿ ರಾಮಾಯಣದ ಪಾತ್ರಗಳಿಗೆ ಹೆಚ್ಚು ಆದ್ಯತೆ ಹಾಗೂ ಆಕರ್ಷಣೆ ಇರುವುದು ಗಮನಾರ್ಹ. ಆಂಧ್ರಪ್ರದೇಶದ ಶ್ರೀಶೈಲದ ಪ್ರದೇಶದ ಬೆಟ್ಟ ಗುಡ್ಡಗಳಲ್ಲಿದ್ದವರೆಂದು ಇವರನ್ನು ಗುರುತಿಸುತ್ತಾರೆ. ತೆಲುಗಿನಲ್ಲಿ ಇವರನ್ನು ಪಗಟಿವೇಷಗಾಳ್ಳು (ಹಗಲುವೇಷದವರು) ಎಂದು ಕರೆಯುತ್ತಾರೆ. ಶ್ರೀಶೈಲದ ಶೈವ-ವೀರಶೈವಗಳ ಪ್ರಭಾವಕ್ಕೆ ಇವರು ಒಳಪಟ್ಟಿರುವುದನ್ನು ಒಂದು ಐತಿಹ್ಯ ಸೂಚಿಸುತ್ತದೆ. 'ಒಬ್ಬ ಜಂಗಮನು ಹಗಲು ವೇಷದವರ ಒಂದು ಕನ್ಯೆಯನ್ನು ಪ್ರೀತಿಸತೊಡಗಿದ. ಅವಳನ್ನು ಕೂಡಿಕೆ ಮಾಡಿಕೊಂಡ. ಆಗ ಹಗಲು ವೇಷಗಾರರು ಅವರಿಗೆ ಬಹಿಷ್ಕಾರ ಹಾಕಿದರು. ಬಹಳ ದಿನಗಳವರೆಗೆ ಅವರು ಊರ ಹೊರಗೆ ಇದ್ದುಕೊಂಡು ಭೀಕ್ಷಾಟನೆ ಮಾಡುತ್ತ ಉಪಜೀವನ ಸಾಗಿಸುತ್ತಿದ್ದರು. ಭಿಕ್ಷಾಟನೆ ಮಾಡುತ್ತಿದ್ದ ಕಾಲದಲ್ಲಿ ಆಹಾರದ ಅಭಾವ ಕಂಡಿತು. ಆಗ ಅವರು ಮಾಂಸಾಹಾರಕ್ಕೆ ಕೈ ಹಾಕಿದರು. ಅವರಿಗೆ ಸಂತಾನಭಾಗ್ಯ ಲಭಿಸಿತು. ಆದರೆ ಜಾತಿಯಿಂದ ಬಹಿಷ್ಕಾರ ಹಾಕಿದ್ದುದರಿಂದ ಅವರಿಬ್ಬರು ದುಃಖದಲ್ಲಿ ಮುಳುಗಿದ್ದರು. ಇದೇ ವಿಚಾರವು ಸದಾ ಅವರನ್ನು ಕಾಡುತ್ತಿತ್ತು. ಜಂಗಮಯ್ಯನು ಒಂದು ದಿನ ತನ್ನ ಗುರುವಿನ ಬಳಿ ಹೋಗಿ ಲಿಂಗ ದೀಕ್ಷೆಯನ್ನು ಯಾಚಿಸಿದ. ಆದರೆ ಗುರು ಅವನಿಗೆ ಕೇವಲ ವಿಭೂತಿ ಮತ್ತು ರುದ್ರಾಕ್ಷಿಯ ಹಕ್ಕನ್ನು ಮಾತ್ರ ಕೊಟ್ಟ. ಆದರೆ ಲಿಂಗಧಾರಣೆ ಮಾಡಲಿಲ್ಲ.

ಈ ಜಂಗಮಯ್ಯನಿಗೆ ಹುಟ್ಟಿದ ಮಕ್ಕಳು ಕಾಲಕ್ರಮೇಣ ಬೆಳೆಯುತ್ತಾ ಜಂಗಮಯ್ಯನ ಮಕ್ಕಳು ಬಹುವಚನದ ರೂಪದಲ್ಲಿದ್ದುದರಿಂದ ಜಂಗಾಲು ಎಂದು ಕರೆಸಿಕೊಂಡರು. ಕ್ರಮೇಣ ಈ ಮಕ್ಕಳು ಜಾತಿಯ ಒಳಗೆ ಸೇರಿ ತಮ್ಮ ವೃತ್ತಿಯನ್ನೇ (ಹಗಲುವೇಷ) ಮುಂದುವರೆಸಿಕೊಂಡು ಬಂದರು ಎಂದು ಈ ಜನಾಂಗದವರಲ್ಲಿ ಉಳಿದುಕೊಂಡು ಬಂದಿರುವ ಒಂದು ಕಥನ ನಂಬಿಕೆ.[೨೫]

**ಟಿಪ್ಪಣಿಗಳು**

೧. ಪುರುಷೋತ್ತಮ ಬಿಳಿಮಲೆ, ೧೯೯೭, ಪು.೧೧೬

೨. ಖಂಡೋಬ ಪಿ.ಕೆ., ಲಕ್ಕಪ್ಪಗೌಡ ಎಚ್.ಜೆ., (ಸಂ) ೨೦೦೨-೧೦೮

೩. ರಂಗಾರೆಡ್ಡಿ ಕೆ., ೧೯೯೫, ಪು.೧೪೩

೪. ಸಿದ್ಧಲಿಂಗಯ್ಯ, ೧೯೯೦, ಪು.೯೫

೫. ಉದ್ಧೃತ: ರಂಗಾರೆಡ್ಡಿ ಕೆ., (ಸಂ) ೨೦೦೩, ಪು.೫೨

೬. ಸಿದ್ಧಲಿಂಗಯ್ಯ, ೧೯೯೦, ಪು.೯೫

೭. ಮುನಿವೆಂಕಟಪ್ಪ ಎಸ್.ಎಂ., ಕರಗ ಮಹೋತ್ಸವ ಪು.೪೫, ಉದ್ಧೃತ ಸುಮಿತ್ರ ಬಂ. ೨೦೦೩, ಪು.೩೧

೮. ಸಿದ್ಧಲಿಂಗಯ್ಯ, ಹಕ್ಕಿನೋಟ, ಪು.೪೭,೪೮

೯. ಅದೇ, ಪು.೪೮

೧೦. ಕೋಟಗಾನಹಳ್ಳಿ ರಾಮಯ್ಯ, ೧೯೯೪, ಪು.೧೬೦

೧೧. ಚಿದಾನಂದಮೂರ್ತಿ, ೨೦೦೨, ಪು.೩೨೭

೧೨. ಕೋಟಗಾನಹಳ್ಳಿ ರಾಮಯ್ಯ, ೧೯೯೪, ಪು.೨೨೮

೧೩. ಶೇಷಶಾಸ್ತ್ರಿ, ಪು.೫೦-೫೧

೧೪. ಕೋಟಗಾನಹಳ್ಳಿ ರಾಮಯ್ಯ, ೧೯೯೪, ಪು.೨೭

೧೫. ವಕ್ತೃ: ಮುನಿ ಅಕ್ಕಯ್ಯಮ್ಮ, ಉದ್ಧೃತ: ಟಿ. ಗೋವಿಂದರಾಜು, ಚೆನ್ನಾದೇವಿ ಅಗ್ರಹಾರ ಜಾನಪದೀಯ ಅಧ್ಯಯನ, ೧೯೯೨, ಪು.೬೨-೬೩

೧೬. ಚಂದ್ರಯ್ಯ ಬಿ., ಪು.೭೬-೭೭

೧೭. ಮಂಜುನಾಥ ಬೇವಿನಕಟ್ಟಿ, ಲಕ್ಕಪ್ಪಗೌಡ ಎಚ್.ಜೆ. (ಸಂ) ೨೦೦೦, ಪು.೪೨೮

೧೮. ಪಾಂಡುರಂಗ ಡಿ.ಆರ್., ಲಕ್ಕಪ್ಪಗೌಡ ಎಚ್.ಜೆ., ೨೦೦೦, ಪು.೪

೧೯. ಕೇಶವನ್ ಪ್ರಸಾದ್ ಕೆ., ಲಕ್ಕಪ್ಪಗೌಡ ಎಚ್.ಕೆ., (ಸಂ) ೨೦೦೦, ಪು.೫೦೨

೨೦. ರಂಗಾರೆಡ್ಡಿ ಕೆ., ಲಕ್ಕಪ್ಪಗೌಡ (ಸಂ) ೨೦೦೦, ಪು.೭೦೫

೨೧. ರಂಗಾರೆಡ್ಡಿ ಕೆ., ಲಕ್ಕಪ್ಪಗೌಡ (ಸಂ). ೨೦೦೦, ಪು.೭೦೬

೨೨. ಖಂಡೋಬ ಪಿ.ಕೆ., ಲಕ್ಕಪ್ಪಗೌಡ ಎಚ್.ಜೆ., ೨೦೦೦, ಪು.೧೧೧

೨೩. ಅದೇ, ಪು.೧೪೯

೨೪. ಯಳಿನಾಡು ಅಂಜನಪ್ಪ, ಲಕ್ಕಪ್ಪಗೌಡ ಎಚ್.ಜೆ. (ಸಂ), ೨೦೦೦, ಪು.೪೬೪

೨೫. ಗಂಗಾಧರ ದೈವಜ್ಞ, ಲಕ್ಕಪ್ಪಗೌಡ ಎಚ್.ಜೆ. (ಸಂ), ೨೦೦೦, ಪು.೬೨೭

## ಅಧ್ಯಾಯ ೬

# ಘಟನಾ ಪ್ರಧಾನ ಐತಿಹ್ಯಗಳು

### ಕೌಟುಂಬಿಕ ಐತಿಹ್ಯಗಳು

ಸಾಮಾನ್ಯವಾಗಿ ಐತಿಹ್ಯವು ವ್ಯಕ್ತಿ, ಸ್ಥಳ ಹಾಗೂ ಘಟನೆ ಎಂಬ ಮೂರು ಅಂಶಗಳನ್ನು ಹೊಂದಿರುತ್ತದೆ. ಈ ಮೂರು ಅಂಶಗಳಲ್ಲಿ ಯಾವುದರ ಪ್ರಾಧಾನ್ಯತೆ ಹೆಚ್ಚು ಎನಿಸುತ್ತದೋ ಅದರ ಮೂಲಕ ಐತಿಹ್ಯವನ್ನು ಹೆಸರಿಸುತ್ತೇವೆ. ಸ್ಥಳ ನಿರ್ದಿಷ್ಟತೆಯನ್ನು ಮೀರಿದ ಐತಿಹ್ಯಗಳನ್ನು ಗುರುತಿಸಬಹುದು. ಆದರೆ ಘಟನೆಯನ್ನು ಹೊರತುಪಡಿಸಿದಂತೆ ಐತಿಹ್ಯಗಳು ಇರುವುದಿಲ್ಲ. ಯಾವ ಐತಿಹ್ಯಗಳಲ್ಲಿ ವ್ಯಕ್ತಿ ಮತ್ತು ಸ್ಥಳದ ಮಹತ್ವವು ಎರಡನೆಯ ಸ್ಥಾನದಲ್ಲಿ ಬಂದು ಘಟನೆಯ ಮಹತ್ವ ಪ್ರಾಧಾನ್ಯತೆಯನ್ನು ಪಡೆದಿರುತ್ತದೆಯೋ ಅಂಥವು, ಘಟನಾಪ್ರಧಾನ ಐತಿಹ್ಯಗಳೆನಿಸುತ್ತವೆ. ಇಂಥ ಐತಿಹ್ಯಗಳಲ್ಲಿ ಏಕವ್ಯಕ್ತಿ ಇಲ್ಲವೇ ಜನಸಮೂಹದ ಅಸ್ತಿತ್ವ ಹಾಗೂ ಭಾಗವಹಿಸುವಿಕೆ ಕಂಡುಬಂದರೂ ಇವರನ್ನು ತೊಡಗಿಸಿ ಕೊಳ್ಳುವಂತೆ ಪ್ರಭಾವ ಬೀರಿದ ಘಟನೆ ಮುಖ್ಯವಾಗುತ್ತದೆ. ಇಲ್ಲಿನ ಘಟನೆಗೆ ಮನುಷ್ಯರನ್ನು ಸೇರಿಕೊಂಡಂತೆ ಎಲ್ಲ ಜೀವವಲಯದ ವ್ಯಾಪ್ತಿ ಹಾಗೂ ಪ್ರಕೃತಿ, ದೈವ, ದೆವ್ವಗಳಂಥ ಅತಿಮಾನುಷ ಕಲ್ಪನೆಗಳು, ಕೌಟುಂಬಿಕ ಘಟನೆಗಳು ಸಲ್ಲುತ್ತವೆ. ಅಲ್ಲದೆ ಮನುಷ್ಯನ ಬದುಕಿನೊಂದಿಗೆ ಕಾಡುವ ಸಾವು ಮತ್ತು ಅದಕ್ಕೆ ಸಂಬಂಧಿಸಿದ ಆಚರಣೆಗಳು ಹಾಗೂ ಕಲ್ಪನೆಗಳ ಹಿನ್ನೆಲೆಯಲ್ಲಿ ಘಟನೆಗಳು ಪ್ರಧಾನ ವಾಗಿರುತ್ತವೆ. ಆದ್ದರಿಂದ ಇಂಥ ಅಂಶಗಳನ್ನು ಒಳಗೊಂಡ ಐತಿಹ್ಯಗಳನ್ನು ಘಟನಾಪ್ರಧಾನ ಐತಿಹ್ಯಗಳ ವರ್ಗೀಕರಣಕ್ಕೆ ಸೇರಿಸಿ ವಿವೇಚಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಯಾವುದಾದರೂ ವಿಷಯ, ಹೇಳಿಕೆ, ಆಚರಣೆ, ನಂಬಿಕೆ ಇತ್ಯಾದಿಗಳಿಗೆ ಆಧಾರವಾಗಿ ಅವುಗಳನ್ನು ಸಾಬೀತು ಮಾಡಲು ಸಂದರ್ಭ, ಘಟನೆ ಅಥವಾ ಪ್ರಸಂಗವೊಂದರ ನಿರೂಪಣೆ ಅತ್ಯಗತ್ಯವಾಗಿರುತ್ತದೆ. ಕೆಲವೊಮ್ಮೆ ನಿರೂಪಣೆ ಹಾಗೂ ಸಮರ್ಥನೆಗಳಿಗೆ ಸಂಬಂಧವಿಲ್ಲ ಎನಿಸಬಹುದು. ಇಂಥಲ್ಲಿ ಕಾರಣವಾಗುವ ಸಾಮಾಜಿಕ ಹಿನ್ನೆಲೆಗಳು ಮುಖ್ಯವಾಗುತ್ತವೆ. ಉದಾಹರಣೆಗೆ ಹೆಂಗಸರ ಮನಸ್ಸಿನಲ್ಲಿ ರಹಸ್ಯವುಳಿಯುವುದಿಲ್ಲ ವೆಂಬ ನಂಬಿಕೆ ಇದೆ. ಇದಕ್ಕೆ ಪೂರಕವಾದ ಐತಿಹ್ಯದ ಸಮರ್ಥನೆ ಹೀಗಿದೆ : ದ್ರೌಪದಿಯು ಸಾಮಾನ್ಯ ಮನುಷ್ಯಳಷ್ಟೇ ಅಲ್ಲ ಆದಿಶಕ್ತಿಯ ಅವತಾರ ಹಾಗೂ ರಾಕ್ಷಸಿಯ ಅವತಾರವೂ ಆಗಿದ್ದಳು. ಪ್ರತಿರಾತ್ರಿ

ಎಲ್ಲರೂ ಮಲಗಿ ನಿದ್ರಿಸಿದ ಬಳಿಕ (ಸೀರೆಯನ್ನು ತಾರುಮಾರಾಗಿ ಉಟ್ಟರೆ ರಾಕ್ಷಸಿಯೂ ಸರಿಯಾಗಿ ಉಟ್ಟರೆ ಮನುಷ್ಯಳೂ ಆಗಿರುತ್ತಿದ್ದಳು.) ತನ್ನ ಕೇಶರಾಶಿಯನ್ನು ಕೆದರಿಬಿಡುತ್ತಿದ್ದಳು. ಅವು ನಾಲ್ಕು ದಿಕ್ಕುಗಳ ಶವಗಳನ್ನು ಎಳೆದು ತಂದು ರಾಶಿ ಮಾಡುತ್ತಿದ್ದವು. ಅವುಗಳನ್ನು ತಿಂದು ಮುಗಿಸಿದ ಬಳಿಕ ಮತ್ತೆ ಮನುಷ್ಯಳಾಗುತ್ತಿದ್ದಳು. ಒಂದು ರಾತ್ರಿ ಭೀಮನು ಈ ರಹಸ್ಯವನ್ನು ಕಂಡುಹಿಡಿದು ಇನ್ನೆಂದಿಗೂ ಹೆಂಗಸರಲ್ಲಿ ರಹಸ್ಯ ಉಳಿಯದಿರಲಿ ಎಂದು ಶಾಪ ಹಾಕಿದ. ಅಂದಿನಿಂದ ಹೆಂಗಸರ ಮನಸ್ಸಿನಲ್ಲಿ ಏನೂ ರಹಸ್ಯ ಉಳಿಯುವುದಿಲ್ಲವೆನ್ನುತ್ತಾರೆ.

ಯಾವುದೇ ಕುಟುಂಬವನ್ನು ಗಮನಿಸಿದರೂ ನಡೆದ ಘಟನೆಗಳ ನೆನಪುಗಳನ್ನು ವಿವರಿಸುತ್ತಿರುತ್ತಾರೆ. ತಮ್ಮ ಹಿರಿಯರು ಕುಟುಂಬಕ್ಕಾಗಿ ಪಟ್ಟ ಶ್ರಮ ಇಲ್ಲದೇ ಅವರು ತಂದ, ನಾಶ ನಡೆದ ದುರಂತಗಳು ಪಟ್ಟ ಸಂಭ್ರಮ, ನೋವು-ನಲಿವುಗಳಲ್ಲಿ ಕಳೆದ ದಿನಗಳನ್ನು ನೆನೆಪಿಸಿಕೊಂಡು ಹೇಳುತ್ತಿರುತ್ತಾರೆ. ಇಂಥ ವಿವರಗಳೆಲ್ಲವೂ ಕೌಟುಂಬಿಕ ಚರಿತ್ರೆಗಳು. ಇವು ಮೌಖಿಕ ರೂಪದಲ್ಲಿರುತ್ತವೆ. ಇಂಥವುಗಳಲ್ಲಿ ಕೆಲವು ವ್ಯಕ್ತಿ ವಿಶಿಷ್ಟತೆಯಿಂದಲೋ ಸಂದರ್ಭದ ಮಹತ್ವದಿಂದಲೋ ಮಹತ್ವ ಪಡೆದು ಐತಿಹ್ಯಗಳಾಗುತ್ತವೆ. ಇವು ಆಯಾ ಕುಟುಂಬ ಮತ್ತು ಅದರ ಪರಿಸರಕ್ಕೆ ಪರಿಚಯವಿರುವ ಜನ, ಇದರೊಂದಿಗೆ ಬಾಂಧವ್ಯ ಬೆಳೆಸುವ ಬಂಧು-ಬಳಗ ಆಪ್ತ-ಮಿತ್ರ ಹಾಗೂ ಶತ್ರುವಲಯದಲ್ಲಿ ಪ್ರಚಲಿತವಿರುತ್ತವೆ.

ಉದಾ: ಗೌರೀಬಿದನೂರು ತಾ. ಚಿಕ್ಕಕುರುಗೋಡು ಗ್ರಾಮದ ತಿತ್ತೆಪ್ಪನ ಮನೆತನದವರು ಊರಿನ ಹಿರಿಯ ತಳವಾರರು. ತಿತ್ತೆಪ್ಪನಿಗೆ ಬ್ರಿಟೀಷರ ಕಾಲದಲ್ಲಿ ಹಿರಿಯ ತಳವಾರನೆಂದು ಮಾನ್ಯ-ಪಟ್ಟ-ಬಿಲ್ಲೆಗಳು ದೊರೆತಿವೆ. ಅವರ ಸಮೂಹದಲ್ಲಿ ತಕ್ಕಮಟ್ಟಿಗೆ ಆರ್ಥಿಕವಾಗಿ ಮುಂದುವರೆದ ವ್ಯಕ್ತಿಯಾಗಿದ್ದ. ಈತನ ಬಗ್ಗೆ ಐತಿಹ್ಯಗಳು ಹಲವಾರು ಕೇಳಿಬರುತ್ತವೆ. (ಕೆಲವನ್ನು ವ್ಯಕ್ತಿಐತಿಹ್ಯಗಳಲ್ಲಿ ವಿವರಿಸಿದ್ದೇನೆ.) ತಿತ್ತೆಪ್ಪನು ಒಂದು ಗೂಳಿಯನ್ನು ಸಾಕಿದ್ದನಂತೆ. ಆತನು ಅದನ್ನು ಮೇಯಿಸುವಾಗ ಮಲಗಿ ನಿದ್ರಿಸುತ್ತಾ ಕಾಲಿನ ಹೆಬ್ಬೆರಳಿಗೆ ಹಗ್ಗದ ಒಂದು ತುದಿಯನ್ನು ಕಟ್ಟಿಕೊಂಡು ಇನ್ನೊಂದು ತುದಿಯನ್ನು ಗೂಳಿಯ ಕೊರಳಿಗೆ ಬಿಗಿದಿರುತ್ತಿದ್ದ. ಆಗ ಹೊಸದಾಗಿ ರೈಲು ಆರಂಭಗೊಂಡಿದ್ದ ಕಾಲ. ಒಮ್ಮೆ ಮೇಯುತ್ತಿದ್ದ ಗೂಳಿಯು ಬರುತ್ತಿದ್ದ ರೈಲನ್ನು ನೋಡಿ ಅದನ್ನು ತನ್ನ ಎದುರಾಳಿಯೆಂದು ತಿಳಿದು ಓಡಿ ಹೋಗಿ ಅಡ್ಡಗಟ್ಟಲು ಪ್ರಯತ್ನಿಸಿತು. ರೈಲಿನ ಕೆಳಗೆ ಸಿಕ್ಕಿ ಸತ್ತು ಹೋಯಿತು. ತಿತ್ತೆಪ್ಪನಿಗೆ ಎರಡು ಗಂಡು ಮಕ್ಕಳು ನಾಗಪ್ಪ-ಸಂಜೀವಪ್ಪ. ಐದು ಹೆಣ್ಣು ಮಕ್ಕಳು. ಗಂಡು ಮಕ್ಕಳಿಬ್ಬರೂ ಘಟಿಂಗರು ಹೆಣ್ಣು ಮಕ್ಕಳಿಗೆ ಮದುವೆ ಮಾಡಿ ಜವಾಬ್ದಾರಿ ತೀರಿಸಿಕೊಂಡಿದ್ದ. ಹಿರಿಯ ಮಗ ನಾಗಪ್ಪನಿಗೆ ತರುಣಾವಸ್ಥೆಗೆ ಬಂದ ಮೇಲೆ ಮನೆಗೆ ಸಂತೆಯಿಂದ ಸಾಮಾನುಗಳನ್ನು ತರುವ ಜವಾಬ್ದಾರಿ ಬಿಟ್ಟ. ತಂದೆಗೆ ಮಗ ಲೆಕ್ಕ ಒಪ್ಪಿಸುವಾಗ (ಈರುಳ್ಳಿ-ಬೆಳ್ಳುಳ್ಳಿ: ಉಳ್ಳಾಗಡ್ಡೆ-ಬೆಳ್ಳಿಗಡ್ಡೆ) ತೆಲುಗಿನಲ್ಲಿ ಒಮ್ಮೆ ಎರ್ರಗಡ್ಡ-

ತೆಲ್ಲಗಡ್ಡು ಎಂದೂ ಮತ್ತೊಮ್ಮೆ ಉಳ್ಳಿಪಾಯಲು-ವೆಳ್ಳಿಪಾಯಲು ಎಂದೂ ಈರುಳ್ಳಿ-ಬೆಳ್ಳುಳ್ಳಿಗಳಿಗೆ ಇರುವ ಮತ್ತೊಂದು ಹೆಸರುಗಳನ್ನು ಹೇಳುತ್ತಿದ್ದ. ಹಾಗೆಯೇ ದನಿಯಾ ಎಂದೂ ಕೊತ್ತಂಬರಿ ಬೀಜ ಎಂದೂ ಹೇಳುತ್ತಿದ್ದ. ಹೀಗೆ ಒಂದೇ ಪದಾರ್ಥ ಅಥವಾ ಧಾನ್ಯಕ್ಕೆ ಇರುವ ಎರಡೆರಡು (ಪರ್ಯಾಯ) ಹೆಸರುಗಳನ್ನು ಹೇಳಿ ಲೆಕ್ಕದಲ್ಲಿ ಹಣ ಉಳಿಸಿಕೊಳ್ಳುತ್ತಿದ್ದ.

ನಾಗಪ್ಪ ಚಿಕ್ಕವನಿರುವಾಗಲೇ ಬಹಳ ಚತುರ, ಕಳ್ಳ. ಮೆಣಸಿನಕಾಯಿ ಗಿಡಗಳಲ್ಲಿ ರಾತ್ರಿಯ ವೇಳೆ ಕಾಯಿ ಬಿಡಿಸಲು ಗೆಳೆಯರನ್ನು ಸೇರಿಸಿಕೊಂಡು ಹೋಗಿ ಕದಿಯುತ್ತಿದ್ದ. ಹೊಲದ ಒಡೆಯರು ಗಮನಿಸಿದರೂ ನಯವಾಗಿ 'ನಾಗನ್ನ ಏನು ಮಾಡುತ್ತಿದ್ದೀರಿ' ಎಂದು ಕೇಳುತ್ತಿದ್ದರು. ಆಗ ಈತ 'ಏನಿಲ್ಲ ಮಾವ ನಿಮ್ಮ ಗಿಡಗಳಲ್ಲಿ ಹುಲ್ಲು ಬೆಳೆದಿದೆಯಲ್ಲಾ ಅದನ್ನೆಲ್ಲ ಕಿತ್ತು ತಿನ್ನುತ್ತಿದ್ದೇವೆ' ಎಂದು ಹೇಳುತ್ತಿದ್ದ. ಅದಕ್ಕೆ ಹೊಲದ ಒಡೆಯರು ಹೌದಪ್ಪಾ ಚನ್ನಾಗಿ ತಿಂದಿದ್ದೀರಿ ಸಾಕಿನ್ನು ನಡೀರಿ ಮನೆಗೆ ಎಂದು ನಯವಾಗಿ ನುಡಿದು ಕಳುಹಿಸುತ್ತಿದ್ದರು. ಅದಕ್ಕೆ ಹೊರತಾಗಿ ಅವರ ಅಪ್ಪ ತಿತ್ತೆಪ್ಪನಿಗೆ ಹೇಳಿದರೆ ಮಗನಿಗೆ ಕಠಿಣ ಶಿಕ್ಷೆ ಕೊಡುತ್ತಿದ್ದ. ಆದರೆ ದೂರು ಕೊಟ್ಟವರ ಹೊಲದ ಮೆಣಸಿನಕಾಯಿಯ ಗಿಡಗಳೆಲ್ಲ ಬೆಳಕಾಗುವುದರಲ್ಲಿ ಬುಡುಮೇಲಾಗಿರುತ್ತಿದ್ದವು. ನಾಗಪ್ಪನ ಗೆಳೆಯರ ಗುಂಪು ರಾತ್ರೋ-ರಾತ್ರಿ ನಾಶ ಮಾಡುತ್ತಿದ್ದರು.

೦೧. ನಾಗಪ್ಪನಿಗೆ ಚಿಕ್ಕಂದಿನಿಂದಲೂ ಆಟವಾಡುವುದೆಂದರೆ ಎತ್ತಿದ ಕೈ ಆದರೆ ತನ್ನ ಚಿಕ್ಕ ತಂಗಿಯನ್ನು ಕಾಯಬೇಕು. ಒಮ್ಮೆ ತಾಯಿ ಮನೆಯಲ್ಲಿರಲಿಲ್ಲ. ಚಿಕ್ಕ ತಂಗಿ ಎಳೆ ಮಗು ನಿದ್ದೆ ಮಾಡದೆ ಅಳುತ್ತಿತ್ತು. ಈತನೋ ಗೆಳೆಯರೊಂದಿಗೆ ಆಡಬೇಕು. ಪಕ್ಕದ ಮನೆಯಲ್ಲಿ ಸೂಜಿ ಕೇಳಿದ ಕೊಡುವ ಮೊದಲು ಮನೆಯಾಕೆ 'ಏನು ಹೊಲೆಯಲು ಸೂಜಿ?' ಎಂದು ಕೇಳಿದಳು. ನಾಗಪ್ಪನು 'ನನ್ನ ತಂಗಿಯ ಕಣ್ಣು ಹೊಲೆಯಲು' ಎಂದು ಹೇಳಿದ ಅವಳು ಆಶ್ಚರ್ಯದಿಂದ ಯಾಕೆಂದು ಕೇಳಿದಳು. ಅದಕ್ಕೆ ನಾಗಪ್ಪನು ಕೊಟ್ಟ ಉತ್ತರ : ತಂಗಿಯು ನಿದ್ದೆ ಮಾಡದೆ ಕಣ್ಣು ತೆರೆದುಕೊಂಡೇ ಅಳುತ್ತಿದ್ದಾಳೆ. ಆದ್ದರಿಂದ ಅವಳ ಕಣ್ಣರೆಪ್ಪೆಗಳನ್ನು ಹೊಲಿದು ತಾನು ಆಟವಾಡಲು ಹೋಗಬೇಕು ಎಂದು ಹೇಳಿದ. ಈ ಸುದ್ದಿ ಈತನ ತಾಯಿಗೆ ತಿಳಿದು ಅಂದಿನಿಂದ ಮಕ್ಕಳ ಬಗ್ಗೆ ಎಚ್ಚರ ವಹಿಸುತ್ತಿದ್ದಳು.

೦೨. ನಾಗಪ್ಪನಿಗೆ ಹತ್ತು-ಹನ್ನೆರಡು ವರ್ಷವಿರುವಾಗ ಐದಾರು ವರ್ಷದ ಹುಡುಗಿಯನ್ನು ಮದುವೆ ಮಾಡಿದರು. ಆ ಗಂಡ-ಹೆಂಡತಿ ಆಟವಾಡುತ್ತಿದ್ದರು. ಹಾಗೇ ಒಮ್ಮೆ ನಾಗಪ್ಪನು ನದಿಯ ಮರಳಿನಲ್ಲಿ ಗುಂಡಿ ತೋಡಿ ಹೊಸ ಹೆಂಡತಿಯನ್ನು ಗುಂಡಿಯಲ್ಲಿ ನಿಲ್ಲಿಸಿ ಬಗ್ಗಿಸಿ ಕತ್ತಿನವರೆಗೂ ಮಣ್ಣು ಮುಚ್ಚಿ ತಾನು ಮರ ಹತ್ತಿ ಕುಳಿತ.[೨] ಈತನು ಕುಳಿತಲ್ಲಿಂದ ಕೂಗು ಹಾಗೂ ಕುಮ್ಮಟಿಗಾ (ತೆಲುಗು

ಕೂತ ಎಮ್ಮರಾ ಕುಮ್ಮಟಿಗಾ) ಎನ್ನುತ್ತಾನೆ, ಆಕೆ 'ನನ್ನ ತುಣ್ಣೆ ಹಾಕ್ತಿನಿ ಎಂಗಟಗಾ' (ತೆಲುಗು: ನಾ ಮಡ್ಡೇಸ್ತಾ ಎಂಗಟಿಗಾ) ಎನ್ನಬೇಕು. ಆದರೆ ಅವಳಿಗೆ ಮರಳಿನಿಂದ ಮುಖವೆತ್ತಲು ಆಗುತ್ತಿಲ್ಲ ಕೈಕಾಲುಗಳನ್ನು ಮರಳಿನಿಂದ ಬಿಡಿಸಿಕೊಂಡು ಮೇಲೇಳಲು ಆಗದೆ ಉಸಿರು ಕಟ್ಟಿ ಒದ್ದಾಡುತ್ತಿದ್ದಳು. ಯಾರೋ ದಾರಿಹೋಕರು ನೋಡಿ ಹುಡಿಗಿಯನ್ನು ಪಾರು ಮಾಡಿದರು.

೦೩. ನಾಗಪ್ಪ ಯುವಕ; ಹೆಂಡತಿಯೂ ದೊಡ್ಡವಳಾಗಿದ್ದಾಳೆ, ಮಧುಗಿರಿಯ ಜಾತ್ರೆಯಲ್ಲಿ ಎತ್ತುಗಳನ್ನು ಖರೀದಿಸಲು ಹೋದ. ಊರಿನವರೆಲ್ಲರೂ ಆ ಜಾತ್ರೆಯಲ್ಲಿ ತಮ್ಮ ಹಳೆಯ ಎತ್ತುಗಳನ್ನು ಮಾರಾಟ ಮಾಡಿ ಹೊಸ ಜೋಡಿಯನ್ನು ಕೊಂಡು ತರುವುದು ಪದ್ಧತಿ. ಅದರಂತೆ ಎಲ್ಲರೂ ಹೊಸ ಎತ್ತುಗಳನ್ನು ಗಾಡಿ(ಬಂಡಿ)ಗಳಿಗೆ ಕಟ್ಟಿಕೊಂಡು ಊರ ಕಡೆಗೆ ಪ್ರಯಾಣ ಹೊರಟರು. ವಸ್ತ್ರರಹಳ್ಳಿ ದಾಟುತ್ತಿದ್ದಂತೆ ನಾಗಪ್ಪನ ಬಂಡಿ ಲಗ್ಗೆ ಹಾಕಿತು. (ಗಾಡಿಯಲ್ಲಿ ಏನೂ ಇಲ್ಲದಿದ್ದರೂ ಹಿಂಭಾರ ವಾದಂತಾಯಿತು.) ನಾಗಪ್ಪ ಮೂರ್ಛೆ ಹೋಗಿ-ಪ್ರಜ್ಞೆ ತಪ್ಪಿದ. ಬೇರೆಯವರು ಹಾರೈಕೆ ಮಾಡಿದರು. ನಂತರ ಗಾಡಿ(ಬಂಡಿ)ಯು ತುಂಬಿದಂತೆ ಭಾರವೆನಿಸಿತ್ತು. ಹೇಗೊ ಮಾಡಿ ಊರನ್ನು ಸಮೀಪಿಸಿದರು. ಊರಿನ ಪೊಲಿಮೇರನ್ನು (ಎಲ್ಲೆ) ಪ್ರವೇಶಿಸಬೇಕು. ಮತ್ತೊಮ್ಮೆ ಬಂಡಿ ಲಗ್ಗೆ ಹಾಕಿತು, ಮತ್ತೆ ಸರಿಮಾಡಿದರು. ಆಗ ಯಾರೋ ಗಾಡಿಯಿಂದ ಧುಮುಕಿದಂತಾಗಿ, ಹಗುರವಾಗಿತ್ತು. ಅಂದಿನಿಂದ ನಾಗಪ್ಪ ಮಂಕಾಗುತ್ತಾ ಬಂದ. ಯಾರ ಜೊತೆಯೂ ಮಾತಿಲ್ಲ. ಏನೋ ಯೋಚನೆ ಹಾಗೆ ಹಾಸಿಗೆ ಹಿಡಿದ. ಒಂದು ದಿನ ಬೆಳಗಿನ ಜಾವ ಊರ ಹಳ್ಳದ ಕಡೆಗೆ ಬಹಿರ್ದೆಶೆಗೆಂದು ಹೊರಟವನು ಹಿಂದಿರುಗಲೇ ಇಲ್ಲ. ಮನೆಯ ಮಂದಿ ಈತನನ್ನು ಹುಡುಕುತ್ತಾ ಹೊರಟರು. ಕೊನೆಗೆ ನಾಗಪ್ಪ ಕಾಣಿಸಿದ. ಹಳ್ಳದ ದಡದ ಹೊಂಗೆಯ ಮರದಡಿಯಲ್ಲಿ ಪಾಯಖಾನೆಗೆ ಕುಳಿತಿದ್ದವನು ಪ್ರಜ್ಞೆತಪ್ಪಿ ಅದರಲ್ಲೇ ಹೊರಳಾಡುತ್ತಾ ಬಿದ್ದಿದ್ದ. ಬಾಯಲ್ಲಿ ನೊರೆ ಬರುತ್ತಿತ್ತು. ಎತ್ತಿಕೊಂಡು ಬಂದು ಮನೆಯಲ್ಲಿ ಆರೈಕೆ ಮಾಡಿದರು. ಒಂದು ಅಮವಾಸ್ಯೆ ದಿನ ಅವನ ಮೈಮೇಲೆ ದೆವ್ವ ಬಂತು.

ನಾಗಪ್ಪನ ತಾಯಿಯು ದೆವ್ವವನ್ನು ಯಾರೆಂದು ಪ್ರಶ್ನಿಸಿದಳು. ಅದಕ್ಕೆ ದೆವ್ವವು ತನ್ನ ವಿವರಗಳನ್ನು ಹೇಳತೊಡಗಿತು. ತಾನು ಬೆಂಗಳೂರಿನ ಲಕ್ಕಮ್ಮ. ತನ್ನನ್ನು ಮಧುಗಿರಿ ಕಡೆಯ ಯುವಕರು ಹಾರಿಸಿಕೊಂಡು ಹೋಗಿ ಬೇಕಾದಂತೆ ಬಳಸಿಕೊಂಡ ನಂತರ ವಸ್ತ್ರರಹಳ್ಳಿಯ ಕಾಡಿನಲ್ಲಿ ಕೊಂದಿದ್ದರು. ದೆವ್ವವಾಗಿ ಮರಗಿಡಗಳಲ್ಲಿ ಕಾಯುತ್ತಿದ್ದಳು. ನಾಗಪ್ಪನಿಗೆ ಮನಸೋತು ಆತನ ಬಂಡಿಯೇರಿ ಚಿಕ್ಕಕುರುಗೋಡಿನ ಪೊಲಿಮೇರಿಗೆ (ಊರಿನ ಎಲ್ಲೆಗೆ) ಬಂದಾಗ ಗ್ರಾಮದೈವ ಬಯಲು ಆಂಜನೇಯ ಕಾವಲಿದ್ದು ಊರಿನೊಳಕ್ಕೆ ಯಾವ ಶಕ್ತಿಯು ಪ್ರವೇಶಿಸದಂತೆ ಗೆರೆ ಹಾಕಿರುವುದು ಕಾಣಿಸಿತು. ಅದ್ದರಿಂದ

ಹಳ್ಳದ ದಡ ಸೇರಿ ಅಲ್ಲಿ ಮರಗಳಲ್ಲಿ ಸೇರಿ ಕುಳಿತಳು. ಈ ಕಡೆಯಿಂದ ಊರ ಒಳಕ್ಕೆ ಸುಗ್ಗೋಣವೆಂದರೆ ಗ್ರಾಮದೇವತೆ ಸೆತ್ತಮ್ಮ(ಸತ್ಯಮ್ಮ)ನ ಕಾವಲು. ನಾಗಪ್ಪ ಹೇಲುತ್ತಿದ್ದಾನೆಂದು ಸತ್ಯಮ್ಮ ಒಂದು ಕ್ಷಣ ಕಣ್ಣು ಮುಚ್ಚಿದಳು ದೆವ್ವಕ್ಕೆ ಇದೇ ಅವಕಾಶ-ನಾಗಪ್ಪನ ಮೇಲಕ್ಕೆ ಕುಪ್ಪಳಿಸಿತು. ಅವನು ಪ್ರಜ್ಞೆತಪ್ಪಿ ಹೊರಳಾಡುತ್ತಿದ್ದ. ಇನ್ನೇನು ಕೊಂದು ತನ್ನ ಜೊತೆಗೆ ಒಯ್ಯಬೇಕು. ಅಷ್ಟರಲ್ಲಿ ಮನೆಯ ಮಂದಿ ನೋಡಿಕೊಂಡರೆಂದು ದೆವ್ವ ಗೋಳಾಡಿದಳು. ಅಷ್ಟೇ ಅಲ್ಲದೆ ತನ್ನನ್ನು ಮಾಂತ್ರಿಕರಿಗೆ ಕೊಡದಿದ್ದರೆ ತೊಂದರೆ ಮಾಡುವುದಿಲ್ಲವೆಂದು ಹೇಳಿದಳು. ಇದಕ್ಕೆ ನಾಗಪ್ಪನ ತಾಯಿಯು ಒಪ್ಪಿದಳು. ಅಂದಿನಿಂದ ಅಮಾವಾಸ್ಯೆ-ಹುಣ್ಣಿಮೆಗಳಿಗೆ ದೆವ್ವ ಮೈಮೇಲೆ ಬರಲಾರಂಭಿಸಿತು.

ದೆವ್ವ ಬಂದಾಗಲೆಲ್ಲ ನಾಗಪ್ಪನ ತಾಯಿಯು ಪೂಜೆ ಮಾಡುತ್ತಾಳೆ. ಮೈಮೇಲೆ ಬಂದ ದೆವ್ವವು ಕುಟುಂಬದ ಸದಸ್ಯರನ್ನೆಲ್ಲ ಸಂಬಂಧವಿಟ್ಟು ಮಾತನಾಡಿಸುತ್ತದೆ. ನಾಗಪ್ಪನ ಅಮ್ಮನನ್ನು ಅತ್ತೆ ಎಂದೂ ತಂಗಿಯರನ್ನು ನಾದಿನಿಯರೆಂದೂ ಗುರ್ತಿಸಿ ಮಾತನಾಡಿಸುತ್ತಿದ್ದಳು. ಆದರೆ, ನಾಗಪ್ಪನ ಹೆಂಡತಿಯನ್ನು ಕಂಡರೆ ಆಗುತ್ತಿರಲಿಲ್ಲ; ಸವತಿ ಮತ್ಸರ ಏನೇ ಆದರೂ ನಿಮ್ಮ ಮನೆಗೆ ಒಳ್ಳೆಯದು ಮಾಡುತ್ತೇನೆಂದು ಹೇಳಿದಳು.

ಒಮ್ಮೆ ಕನ್ನಿಕಲ ಬಂಡೆಯ ಕೆಳಗೆ ನಿಧಿ ಇದೆ. ಕಿತ್ತು ತರುತ್ತೇನೆಂದು ಹೇಳಿ ಹುಣ್ಣಿಮೆಯ ರಾತ್ರಿ ಗಡಾರಿ (ಆರೆ) ಹಿಡಿದು ನಾಗಪ್ಪನ ಮೈಮೇಲೆ ಬಂದು ಹೊರಟಳು. ಅದನ್ನು ಯಾರೂ ನೋಡಬಾರದೆಂದು ನಾಗಪ್ಪನ ತಾಯಿಗೆ ಎಚ್ಚರಿಸಿದಳು. ನಾಗಪ್ಪನ ತಂಗಿಯರು ಮೈಮೇಲೆ ಬಂದ ದೆವ್ವವನ್ನು ಅನುಸರಿಸಿ ಬೆನ್ನ ಹಿಂದೆಯೇ ನಡೆದು ಕನ್ನಿಲಕಲ ಬಂಡೆಯ ಸುತ್ತಮುತ್ತಲಿರುವ ನಾಗರಕಲ್ಲುಗಳ ಹಿಂದೆ ಅವಿತು ಕುಳಿತರು. ದೆವ್ವ ಮೈಮೇಲೆ ಬಂದು ರಾತ್ರಿ ಇಡೀ ನಾಗಪ್ಪ ನೆಲ ಅಗೆದು ಒಂದು ಮಣ್ಣಿನ ಹೆಂಟೆಯನ್ನು ತಲೆಯ ಮೇಲೆ ಹೊತ್ತು ತಂದು ಬಾಗಿಲು ಬಡಿದ. ನಾಗಪ್ಪನ ತಾಯಿಯು ಬಾಗಿಲು ತೆಗೆದು ಮಾತಿಲ್ಲದೆ ಗಂಜಲ ಹಾಕಿದಳು. ಹೊಸ್ತಿಲ ಆಚೆಯಿಂದ ತಲೆಯ ಮೇಲಿದ್ದ ಭಾರವನ್ನು ಮನೆಯೊಳಕ್ಕೆ ಧಪ್ಪೆಂದು ಬೀಳಿಸಿದ. ನಡುಮನೆಯೆಲ್ಲ ಮಣ್ಣು ಚಲ್ಲಾಪಿಲ್ಲಿಯಾಗಿ ಹರಡಿ ಚೆಲ್ಲಿತು. ಹಿಂದೆಯೇ ಅನುಸರಿಸಿ ನಡೆದು ಬಂದಿದ್ದ ತಂಗಿಯರು ನಕ್ಕುಬಿಟ್ಟರು. ದೆವ್ವವು ಹೇಳಿತು (ನಾಗಪ್ಪನ ತಾಯಿಗೆ) "ಅತ್ತೆ ನಾನು ನಿಧಿ ತರುವುದನ್ನು ಯಾರೂ ನೋಡಬಾರದೆಂದು ಹೇಳಿದ್ದೆನಲ್ಲಾ; ಈಗ ನೋಡಿ ನಿಮ್ಮ ಹೆಣ್ಣು ಮಕ್ಕಳಿಂದ ನಾನು ಕಿತ್ತು ತಂದಿದ್ದ ಚಿನ್ನವೆಲ್ಲ ಮಣ್ಣಾಗಿ ಹೋಯಿತು" ಎಂಬುದಾಗಿ.

ನಾಗಪ್ಪನ ಹೆಂಡತಿ ಚೊಚ್ಚಲು ಬಸರಿಯಾದಳು. ದೆವ್ವಕ್ಕೆ ಈ ಸುದ್ದಿ ತಿಳಿಯಿತು. ಮೈಮೇಲೆ ಬಂದು ಹೇಳಿದಳು "ಇನ್ನು ನನ್ನ ಕಾಲವು ಮುಗಿಯುತ್ತಾ ಬಂತು. ನಾನು ದೆವ್ವವಾಗುವುದಕ್ಕಿಂತ ನಿಮ್ಮ ಮನೆಯ ಮಗಳಾಗಿ ಹುಟ್ಟುತ್ತೇನೆ. ಮೊದಲನೆಯದು ಹೆಣ್ಣು ಮಗುವಾಗುತ್ತದೆ. ಅದಕ್ಕೆ ನನ್ನ ಹೆಸರನ್ನೇ ಇಡಿರಿ. ಮಗು ಹುಟ್ಟಿದ ಮೇಲೆ ನಾನು ಮೈಮೇಲೆ ಬರುವುದಿಲ್ಲ"- ಎಂದು. ಅದರಂತೆ ನಾಗಪ್ಪನ ಹೆಂಡತಿಗೆ ಹೆಣ್ಣು ಮಗು ಜನಿಸಿತು. ಅದಕ್ಕೆ ಲಕ್ಷ್ಮಮ್ಮ ಎಂದು ಹೆಸರಿಟ್ಟರು. ದೆವ್ವ ಬರುವುದೂ ನಿಂತಿತು. ಈ ಲಕ್ಷ್ಮಮ್ಮ ಈಗಲೂ ಬದುಕಿದ್ದಾಳೆ. ಲಕ್ಷ್ಮಮ್ಮನು ದೆವ್ವದ ನಿರ್ದೇಶನದಂತೆ ಹೆಣ್ಣು ಮಗಳೇ ಆಗಿ ಹುಟ್ಟಿದವಳೆಂದು ಆ ಕುಟುಂಬದ ನಂಬಿಕೆ. ಅವಳಿಗೆ ಮದುವೆಯಾಗಿ ಗಂಡನ ಮನೆಗೆ ಹೋದ ನಂತರ ಅಲ್ಲಿ ಅವಳಿಗೆ ಅತ್ತೆ-ಮಾವ, ಅತ್ತಿಗೆ-ನಾದಿನಿಯರು ಹೀಗೆ ಎಲ್ಲರೂ ಕಾಟ ಕೊಡುತ್ತಿದ್ದರು. ಇಂಥ ಸಂದರ್ಭದಲ್ಲಿ ಅವಳಿಗೆ ದೆವ್ವಗಳು ಸಹಾಯ ಮಾಡುತ್ತಿದ್ದವಂತೆ. ಅವು ಅವಳ ಗಂಡನ ಮನೆಯಲ್ಲಿ ಸೇರಿಕೊಂಡಿದ್ದ ದೆವ್ವಗಳು ಬೆಳಗಿನ ಜಾವ ಕೋಳಿ ಕೂಗುವ ತನಕ ಇವಳಿಗೆ ರಾತ್ರಿಯಿಡೀ ಕೆಲಸ ಮಾಡಿಕೊಡುತ್ತಿದ್ದವು. ಕುಟ್ಟುವುದು ಬೀಸುವುದು ಕಸ ಮುಸುರೆ ಇತ್ಯಾದಿ ಮನೆಗೆಲಸ ಹಾಗೂ ಹೊಲದಲ್ಲಿ ಹುಲ್ಲು ಕುಯ್ಯುವುದು ತೆನೆ ಕುಯ್ಯುವುದು ಮುಂತಾದ ವ್ಯವಸಾಯದ ಕೆಲಸಗಳಲ್ಲೂ ಸಹಾಯ ಮಾಡುತ್ತಿದ್ದವು. ಅವಳು ಹೊಲದ ಬಳಿ ಇರಲಿ ಮನೆಯಲ್ಲಿರಲಿ ರಾತ್ರಿ ಅವಳನ್ನು ಮಲಗುವಂತೆ ಹೇಳುತ್ತಿದ್ದವು. ಮಲಗಿದವಳೊಂದಿಗೆ (ನಿದ್ರೆಯಲ್ಲಿ) ದೆವ್ವಗಳು ಮಾತುಕತೆಯನ್ನು ಮುಂದುವರಿಸುತ್ತಾ ಕೆಲಸ ಮಾಡಿಕೊಡುತ್ತಿದ್ದವು.

ದೆವ್ವಗಳ ಬಗ್ಗೆ ನಂಬಿಕೆಗಳು ಮತ್ತು ಐತಿಹ್ಯಗಳು ಎಲ್ಲ ದೇಶಗಳಲ್ಲಿಯೂ ಸಿಗುತ್ತವೆ. ದೆವ್ವಗಳ ಸಂಚಾರದ ಐತಿಹ್ಯಗಳೂ ಸಹ ನಂಬಿಕೆಗಳ ಆಧಾರದಿಂದ ರೂಪುಗೊಂಡಿರುತ್ತವೆ. ದೆವ್ವಗಳು ವಿವಿಧ ರೂಪ ಧರಿಸಿ ಕಾಣಿಸಿಕೊಂಡು ಕಾಡುವುದರ ಬಗ್ಗೆ ಜನಪದರಲ್ಲಿ ಇಂದಿಗೂ ಪ್ರಬಲವಾದ ನಂಬಿಕೆಯಿದೆ. ಅಲ್ಲದೆ ಪ್ರಾಣಿರೂಪದಲ್ಲಿ ಕಾಣಿಸಿಕೊಂಡು ಹೆದರಿಸಿ ಕೊಂದುಬಿಡುತ್ತವೆಂದು ಹೇಳುತ್ತಾರೆ. ಕೆಲವೊಮ್ಮೆ ದೆವ್ವಗಳು ಕೆಲವು ಜನರಿಗೆ ಸಹಾಯ ಮಾಡುತ್ತವೆ. ಅವು ಒಳ್ಳೆಯ ದೆವ್ವಗಳು. "ದೆವ್ವದ ಅಸ್ತಿತ್ವ ಹಾಗೂ ಅದು ನಿಯತಕಾಲಿಕವಾಗಿ ಕಾಣಿಸಿಕೊಳ್ಳುವಿಕೆ ಐತಿಹ್ಯದ ಜನಪ್ರಿಯ ಅಂಶ."

"ಬಾಣಂತಿತನಕ್ಕೆ ಯಾರು ಬರುತ್ತಾರವ್ವ? ಏನು ಮಾಡುತ್ತೀಯೇ? ಎಂದು ಹೆಂಗಸೊಬ್ಬಳು ಗರ್ಭಿಣಿಯನ್ನು ಕೇಳಿದಾಗ ನನಗ್ಯಾರವ್ವ ದಿಕ್ಕು ನನ್ನಂಥೋರಿಗೆ ಗಾಳಿಯೋ ದೆವ್ವವೋ ಮಾಡಬೇಕಷ್ಟೇ" ಎಂದ ಗರ್ಭಿಣಿಯ ಮಾತನ್ನು ಕೇಳಿದ ದೆವ್ವ ಹೆಂಗಸಿನ ರೂಪ ಧರಿಸಿ ಬಂದು ಬಾಣಂತನ ಮಾಡಿ ಮಗುವಿಗೆ ಒಡವೆ ಮಾಡಿಸಿ ಹೋಗುತ್ತದೆ. ಇಂಥ ಐತಿಹ್ಯಗಳು ಕೆಲವು ಗೊತ್ತಾದ ಕುಟುಂಬಗಳಿಗೆ ಸಂಬಂಧಿಸಿದಂತೆ ದೊರೆಯುತ್ತವೆ.[೨]

ನಾಗಪ್ಪನ ಹೆಂಡತಿಗೆ ಲಕ್ಷ್ಮಮ್ಮನ ನಂತರ ನಾಲ್ಕು ವರ್ಷಕ್ಕೆ ಗಂಡು ಮಗುವಿನ ಜನನವಾಯಿತು. ಮನೆಯ ದೇವರು ಕದ್ರಿ ನರಸಿಂಹನ ವರಪ್ರಸಾದವೆಂದು ನರಸಿಂಹಪ್ಪನೆಂದು ಹೆಸರಿಟ್ಟರು. ಆದರೆ ಐದು ಜನ ಅತ್ತೆಯರು (ನಾಗಪ್ಪನ ತಂಗಿಯರು) 'ಚಿನ್ನ' ಎಂದು ಕರೆಯುತ್ತಿದ್ದರು. ಮತ್ತೆ ಎರಡು ವರ್ಷಗಳಲ್ಲಿ ನಾಗಪ್ಪನ ಹೆಂಡತಿ (ಹೆಸರು ಭೈಯಮ್ಮ) ಮತ್ತೆ ಪ್ರಸವಿಸುವಾಗ ಮಗುವಿನೊಂದಿಗೆ ಸತ್ತಳು. ತಾಯಿಯಿಲ್ಲದ ತಬ್ಬಲಿಗಳನ್ನು ಸೋದರತ್ತೆಯರು ಅಕ್ಕರೆಯಿಂದ ಆರೈಕೆ ಮಾಡಿದರು. ಆ ಹೆಣ್ಣು ಮಕ್ಕಳಿಗೆ ಮದುವೆಗಳಾದಂತೆ ಅವರು ಗಂಡನ ಮನೆ ಸೇರುವ ಬದಲು ಅಳಿಯಂದಿರೇ ಹೆಂಡತಿಯ ಜೊತೆಗೆ ಬಂದು ವಾಸಿಸತೊಡಗಿದರು. ನಾಗಪ್ಪನ ತಮ್ಮನ ಕುಟುಂಬವು ಸೇರಿದಂತೆ ಎಲ್ಲರೂ ಅವಿಭಕ್ತ ಕುಟುಂಬದಲ್ಲಿ ವಾಸಿಸುತ್ತಿದ್ದರು. ಎಷ್ಟು ಬೇಯಿಸಿದರೂ, ಅಡಿಗೆ ಮಾಡಿದರೂ ಮುಗಿಯುತ್ತದೆ. ಇಂಥ ಸಂದರ್ಭದಲ್ಲಿ ಮಕ್ಕಳಾದ ಲಕ್ಷಮ್ಮ ಮತ್ತು ಚಿನ್ನಪ್ಪ ಹೊಳೆಯ ದಡಕ್ಕೆ ಹೋಗಿ ಕಕ್ಕ ಮಾಡಲು ಕುಳಿತಿದ್ದರಂತೆ. ಲಕ್ಷ್ಮಮ್ಮನು ತಮ್ಮನನ್ನು ಕುರಿತು "ಬೇಗ ಜೇಗ ಕಕ್ಕ ಮಾಡು ಚಿನ್ನ ಬತ್ತದ ಅನ್ನ ಮುಗಿದು ನವಣೆ ಅನ್ನ ಇರುತ್ತೆ ನಮಗೆ" ಎಂದು ಹೇಳಿದಳು. ಇದನ್ನು ಕೇಳಿಸಿಕೊಂಡು ಬಂದ ಯಾರೋ ಮನೆಗೆ ಹೇಳಿದರು. ಅಂದಿನಿಂದ ಇವರ ಕುಟುಂಬದಲ್ಲಿ ಇದು ಗಾದೆ ಮಾತಾಗಿ ಉಳಿದಿದೆ.[5]

ಚಿನ್ನಪ್ಪ ಅಮವಾಸ್ಯೆಯ ದಿನ ಹುಟ್ಟಿದ್ದ. ಎಲ್ಲರೂ ಇವನು ಗಜ್ಜಿದೊಂಗ (ದೊಡ್ಡಕಳ್ಳ) ಆಗುತ್ತಾನೆಂದು ಹೇಳುತ್ತಿದ್ದರು. ಅದರಂತೆ ಆತ ಬೆಳೆದಂತೆಲ್ಲ ಮಾಳಿಗೆಗಳ ಮೇಲೆ ಒಣಗಿಸುತ್ತಿದ್ದ ಮೆಣಸಿನಕಾಯಿಗಳನ್ನು ಮೂಟೆ-ಮೂಟೆ ಕದ್ದು ಬೀಡುತ್ತಿದ್ದ. ಎಷ್ಟು ಬುದ್ಧಿ ಹೇಳಿದರು ಏನೂ ಮಾಡಿದರು ಅವನು ಕಳ್ಳತನ ಬಿಡಲಿಲ್ಲ. ಕೊನೆಗೆ ಒಂದು ದಿನ ನಾಗಪ್ಪ ಮಗನನ್ನು ಹಿಡಿದು ತಂದ. ಊರ ಮುಂದಿನ ಪಂಚಾಯಿತಿ ಕಟ್ಟೆಯ ಕಂಬಕ್ಕೆ ಕಟ್ಟಿ ದೊಡ್ಡ ಡಬ್ಬವೊಂದನ್ನು ಡಬ-ಡಬನೆ ಬಡಿಯಲಾರಂಭಿಸಿದ. ಊರಿನ ಜನರೆಲ್ಲ ಬಡಿಯಲಾರಂಭಿಸಿದರು. ಏಕೆ-ಏನು ಎಂದು ಕೇಳಿದರು. ನಾಗಪ್ಪನು ತಾನು ಕಳ್ಳನನ್ನು ಹಿಡಿದು ತಂದು ಕಟ್ಟಿ ಹಾಕಿ ಊರ ಜನರಿಗೆ ಒಪ್ಪಿಸಿದ್ದೇನೆ. ನೀವು ಏನಾದರೂ ಶಿಕ್ಷೆ ಕೊಡಿರಿ ಎಂದ. ಜನರೆಲ್ಲರೂ ಸೇರಿ ಅವನನ್ನು ಬಿಡಿಸಿದರು. ಅಂದಿನಿಂದ ಚಿನ್ನಪ್ಪನಿಗೆ ತನ್ನ ತಪ್ಪು ಅರಿವಾಗಿ ಕಳ್ಳತನವನ್ನು ತ್ಯಜಿಸಿದ. ಚಿನ್ನಪ್ಪನನ್ನು ಹುಡುಗನಿರುವಾಗಲೇ ಅತ್ತೆಯರು ತಮಾಷೆಗೆಂದು "ನೀನು ಮದುವೆಯಾಗುವ ಹುಡುಗಿಯನ್ನು ತೋರಿಸು" ಎಂದು ಗೇಲಿ ಮಾಡುತ್ತಿದ್ದರು. ಅವರು ಹಾಗೆ ಹೇಳಿದರೆ ಸಾಕು ಅವನು ಮನೆಯಲ್ಲಿರುತ್ತಿದ್ದ ಕೋಳಿಯೊಂದನ್ನು ಹಿಡಿದು ತಂದು ತೋರಿಸುತ್ತಿದ್ದ. ಅಂದಿನಿಂದ ಅವನನ್ನು ಕೋಳಿಯ ಗಂಡ-ಕೋಳಿಯವನು (ಕೋಡಿಗಾನು) ಕೋಡಪ್ಪ ಎಂದು ಕರೆಯುತ್ತಿದ್ದುದ್ದು ಈಗಲೂ ಅಡ್ಡಹೆಸರಾಗಿದೆ. (ತೆಲುಗಿನಲ್ಲಿ ಕೋಡಿ ಎಂಬುದರ ಅರ್ಥ ಕೋಳಿ ಎಂದು.) ಆತನಿಗೆ ನರಸಿಂಹಪ್ಪನೆಂಬ ಜನ್ಮನಾಮವಿದ್ದರೂ ಚಿನ್ನಪ್ಪ, ಕೋಡಪ್ಪ ಎಂಬ ಹೆಸರುಗಳಿಂದಲೇ

ಕರೆಯುತ್ತಾರೆ. ತಿತ್ತೆಪ್ಪನವರ ನಾಗಪ್ಪನ ಮಗ ಚಿನ್ನಪ್ಪ ಎಂದರೆ ಊರಿನಲ್ಲಿ ಜನರಿಗೆ ಅರ್ಥವಾಗುತ್ತದೆ. ಈಗ ಚಿನ್ನಪ್ಪನ ವಯಸ್ಸು ಸುಮಾರು ೭೦ ವರ್ಷ ಈತನಿಗೂ ಮೊದಲ ಹೆಂಡತಿ ಮಡಿದು ಎರಡನೆಯ ಮದುವೆಯಾಗಿದೆ. ಅವಳ ವಯಸ್ಸು ೩೦ ವರ್ಷ.

ನಾಗಪ್ಪನು ಮೊದಲ ಹೆಂಡತಿಯು ತೀರಿಕೊಂಡ ಮೇಲೆ ಎರಡನೆಯ ಮದುವೆಯಾಗುತ್ತಾನೆ. ನಗರಗೆರೆಯ ವೆಂಕಟಮ್ಮನೆಂಬುವವಳು ನಂತರದ ಹೆಂಡತಿ. ಈಕೆಗೆ ಒಬ್ಬ ಮಗಳು. ಅವಳಿಗೆ ನಾಗಪ್ಪನ ಹಿರಿಯ ಹೆಂಡತಿ ಭೈಯಮ್ಮನ ಹೆಸರನ್ನು (ನಾಗಪ್ಪನ ತಂಗಿಯರು) ನಾಮಕರಣ ಮಾಡುತ್ತಾರೆ. ವೆಂಕಟಮ್ಮನಿಗೂ ಆ ಹೆಸರಿನ ಬಗ್ಗೆ ಪ್ರೀತಿ. ಏಕೆಂದರೆ, ತನ್ನ ತೌರೂರಾದ ನಗರಗೆರೆಯ ಭೈಯಮ್ಮನ ಐತಿಹ್ಯ ಅವಳ ಮನಸ್ಸಿಗೆ ಬಹಳ ಹತ್ತಿರವಾದ್ದರಿಂದ ಅವಳಿಗೂ ಆ ಹೆಸರು ಇಷ್ಟ.

ಭೈಯಮ್ಮನನ್ನು ಶಾಲೆಗೆ ಸೇರಿಸಿದರು. ಶಾಲೆಯಲ್ಲಿ ವಿದ್ಯಾರ್ಥಿಗಳೆಲ್ಲರೂ ಅವಳನ್ನು ಸದಾ ರೇಗಿಸುತ್ತಿದ್ದರು. 'ಏನಾದರೂ ಭೈಯಮ್ಮ' ಎಂದು ಮೇಷ್ಟ್ರಿಗೆ ಇದೆಂಥ ಹೆಸರು ಎನಿಸಿದ್ದರ ಜೊತೆಗೆ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ನಿನಗೆ ಯಾವುದಾದರೂ ಒಳ್ಳೆಯ ಹೆಸರು ಇಡುತ್ತೇನೆ. ಅದನ್ನೇ ಶಾಲೆಯ ಹಾಜರಾತಿ ಪುಸ್ತಕದಲ್ಲೂ ಬರೆಯುತ್ತೇನೆ ಎಂದು ಸೂಚಿಸಿದರು. ಹುಡುಗಿಯು ತನ್ನ ತಾಯಿಯನ್ನು ಕೇಳಿದಳು. ಅದಕ್ಕೆ ತಾಯಿಯು ಅದು ನಿಮ್ಮ ದೊಡ್ಡಮ್ಮನ ಹೆಸರು: ಅದನ್ನು ಬದಲಿಸಿದರೆ, ದೊಡ್ಡಮ್ಮ ಕನಸಿನಲ್ಲಿ ಬಂದು ನಿನ್ನ ಗೋಣು ಮುರಿದುಕೊಂಡು ಹೋಗುತ್ತಾಳೆಂದು ಹೆದರಿಸಿದಳು. ಅಲ್ಲದೆ ನಿಮ್ಮ ಮೇಷ್ಟ್ರು ಏನಾದರೂ ಕೇಳಿದರೆ "ನಾವು ಲೆಂಕರು ಸರ್... ಗರುಡರು ಸರ್ ನಾವು ಬಡವರು ಸರ್ ನಾವು ಬಗ್ಗರು ಸರ್" ಎಂದು ಹೇಳುವಂತೆ ಸೂಚಿಸಿದಳು. (ತೆಲುಗಿನಲ್ಲಿ ಮೇಮು ಲೆಂಕವಾಂಡು ಸರ್, ಮೇಮು ಬೀದಿವಾಂಡ್ಲು ಸರ್, ಮೇಮು ಪೇದವಾಂಡ್ಲು ಸರ್, ಬೀದಿವಾಂಡ್ಲು ಸರ್" ಅದರಂತೆ ಹುಡುಗಿಯು ಮೇಷ್ಟ್ರಿಗೆ ಹೇಳಿದಳು. ಮೇಸ್ಟ್ರು ಎಂಥ ಮೂಢಜನರೆಂದು ಸುಮ್ಮನಾದರು.

ಈ ಸಂದರ್ಭದಲ್ಲಿ ನಾಗಪ್ಪನಿಗೆ ತತ್ವ ಪದಕಾರ ಭಜನೆಮೇಳಗಳ ಪ್ರಭಾವವಾಯಿತು. ಜಾತಿಯಲ್ಲಿ ಬೇಡರ ಮಂದಲಗೋತ್ರದ ಈತ ಮೊದಲಿಗೆ ಬೇಟೆಯಾಡಿ ಮಾಂಸ ತರದೆ ಊಟ ಮಾಡುತ್ತಿರಲಿಲ್ಲವಂತೆ. (ಮಂದಲತಾತನೆಂಬುವವನು ಇವರ ಗೋತ್ರದ ಮೂಲಪುರುಷ. ಇವನು ಮೊಂಡರಿಗೂ ತಾತ. ಮೊಂಡರು ಈ ಗೋತ್ರದವರಿಗೆ ಅಣ್ಣ-ತಮ್ಮಂದಿರು. ಇವರು ಮಂದಲಗೋತ್ರದವರಲ್ಲಿ ಭಿಕ್ಷೆ ಬೇಡಬಾರದು. ಊಟ ಮಾಡಬಹುದೆಂಬ ನಿಯಮ.) ಇಂಥವನು ಭಜನೆಯವರ ಜೊತೆ ಸೇರಿ ಕುಟುಂಬ ಸಮೇತ ಸಸ್ಯಹಾರಿಯಾದ. ಪ್ರತಿದಿನ ಸ್ನಾನ ಪೂಜೆ, ನೇಮ ಮನೆಯಲ್ಲಿ ವ್ಯಾಪಿಸಿತು. ಅಂದಿನಿಂದ ಹರಿ-ಹರರನ್ನು

ಕುರಿತ ಆರಾಧನೆಗಳು ಭಜನೆಗಳನ್ನು ಮಾಡುತ್ತಾ ಸನ್ಯಾಸತ್ವವನ್ನು ಸ್ವೀಕರಿಸಿದ. ತಾನು ಬ್ರಹ್ಮಪೀಠಕ್ಕೆ ಸೇರಿದವನೆಂದು ಘೋಷಿಸಿಕೊಂಡ. ಊರಿನಲ್ಲಿ ಬ್ರಾಹ್ಮಣರು ಯಾರಾದರೂ ಮಡಿದರೆ ಸಂಸ್ಕಾರವಾಗುವವರೆಗೂ ಊಟ ಮಾಡುತ್ತಿರಲಿಲ್ಲ. ಬ್ರಾಹ್ಮಣರ ಸಂಸ್ಕಾರದ ನಂತರ ಸ್ನಾನ ಮಾಡಿ ಮೈಲಿಗೆಯನ್ನು ಕಳೆದುಕೊಂಡೆನೆಂದು ಹೇಳುತ್ತಿದ್ದ. ಬ್ರಹ್ಮಪೀಠದ ಕಾರಣದಿಂದ ತನ್ನ ಜಾತಿಯ ಬಂಧು-ಬಳಗದ ಸಾವು-ನೋವುಗಳಿಗೂ ತನಗೂ ಸಂಬಂಧವಿಲ್ಲವೆಂದೂ ಹೇಳುತ್ತಿದ್ದ. ಆದರೆ ಭಜನೆಯ ವಲಯದಲ್ಲಿನ ಇಬ್ಬರು ಭಕ್ತೆಯರು ಈತನನ್ನು ಅತಿಯಾಗಿ ಪ್ರೀತಿಸುತ್ತಿದ್ದರು. ನಾಗಪ್ಪನ ವಿಷಯದಲ್ಲಿ ಅವರಿಬ್ಬರಿಗೂ ಪೈಪೋಟಿ. ಪರಸ್ತ್ರೀಯರಿಬ್ಬರನ್ನು ನಾಗಪ್ಪ ಪ್ರೇಮದಿಂದ ನೋಡಿಕೊಂಡಿದ್ದ. "ಇದು ದೇವರು ಕೊಟ್ಟ ಪರೀಕ್ಷೆ-ಗೆಲ್ಲೋಕೆ ನಾಪ್ಯಾರು" ಎಂದು ಬಿಡುತ್ತಿದ್ದ. ಕೊನೆಗಾಲದವರೆಗೂ ಸಸ್ಯಹಾರವನ್ನೇ ಪಾಲಿಸಿದ ನಾಗಪ್ಪನಿಗೆ ಸಾವಿನ ಸಂದರ್ಭದಲ್ಲಿ ಬುದ್ಧಿಭ್ರಮಣೆಯಾಯಿತು. ಹಾಸಿಗೆ ಹಿಡಿದಿದ್ದ ತಾತನನ್ನು ಮಾತನಾಡಿಸೋಣವೆಂದು ಯಾರು ಬಂದರೂ ಸರಿ "ನನಗೆ ಹಂದಿ ಮಾಂಸ ಬೇಕು ತಂದು ಕೊಡಿ" ಎಂದು ಕನವರಿಸತೊಡಗಿದ. ಆಗಾಗಲೇ ಆತನ ಕುಟುಂಬವೆಲ್ಲ ಸಸ್ಯಾಹಾರಕ್ಕೆ ಪರಿವರ್ತನೆಯಾಗಿದ್ದರಿಂದ ಮಾಂಸಹಾರಕ್ಕೆ ಪ್ರವೇಶವಿರಲಿಲ್ಲ. ಸತ್ತ ನಂತರ ನಾಗಪ್ಪನನ್ನು ತತ್ವಪದ ಭಜನೆ ಮೇಳಗಳ ಸನ್ಯಾಸಿಗಳು ಸಂಸ್ಕಾರ ಮಾಡಿದರು. ತಿಥಿಯ ದಿನದವರೆಗೂ ಭಜನೆಗಳನ್ನು ಮಾಡಿ ಕೈಲಾಸಕ್ಕೆ ಸೇರಿಸಿದರು. ಆದರೆ ಕುಟುಂಬದವರು ದುಃಖ ತಪ್ತರಾಗಿದ್ದರು.

**ಭೈಯಮ್ಮನ ವಿವಾಹ :** ಭೈಯಮ್ಮ ಆರನೆಯ ತರಗತಿ ಓದುತ್ತಿದ್ದಾಗ ದೊಡ್ಡವಳಾದಳು. ಪಕ್ಕದ ಹಳ್ಳಿಗೆ ನಡೆದುಕೊಂಡು ಹೋಗಿ ಅಲ್ಲಿನ ಮಿಡ್ಲುಸ್ಕೂಲ್‌ನಲ್ಲಿ ಓದಬೇಕಾಗಿತ್ತು. ವಯಸ್ಸಿಗೆ ಬಂದ ಹುಡುಗಿಯನ್ನು ಕಳುಹಿಸುವುದು ತಾಯಿಗೆ ಇಷ್ಟವಿರಲಿಲ್ಲ ಅದೇ ಸಂದರ್ಭಕ್ಕೆ ಭೈಯಮ್ಮನ ಸೋದರಮಾವನ ಎರಡನೆಯ ಹೆಂಡತಿಯೂ ತೀರಿಕೊಂಡಿದ್ದಳು. ಭೈಯಮ್ಮನನ್ನು ತನ್ನ ತಮ್ಮನಿಗೆ ಕೊಟ್ಟು ಮದುವೆ ಮಾಡಬೇಕೆಂದು ತಾಯಿಯ ಹಠ ನಾಗಪ್ಪನಿಗೋ ಓದಿದ ಹುಡುಗಿ, ಅತಿ ಚಿಕ್ಕ ವಯಸ್ಸಿನವಳನ್ನು ಮೂರನೆಯ ಮದುವೆಗೆ ಹೇಗೆ ಕೊಡುವುದೆಂದು ಯೋಚನೆ. ಅದಕ್ಕೆ ಹೆಂಡತಿಯ ಉತ್ತರವಿಷ್ಟೆ! ನನ್ನನ್ನು ಎರಡನೆಯ ಮದುವೆಗೆ ನೀನು ಒಪ್ಪಿರಲಿಲ್ಲವೇ? ಈಗ ತನ್ನ ತೌರುಮನೆಯಲ್ಲಿ ತಮ್ಮನ ಮನೆಯ ದೀಪ ಆರಿದೆ ನಮ್ಮ 'ಮಗಳೇ ದೀಪ ಬೆಳಗಬೇಕು' ಎಂದು.

ಕೊನೆಗೆ ನಾಗಪ್ಪನೇ ತನ್ನ ಹೆಂಡತಿಗೆ ತಿಳಿಯದಂತೆ ಹೊಸ ಸಂಬಂಧವನ್ನು ಹುಡುಕಿದ. ಐದಾರು ಕಿ.ಮೀ ದೂರದ 'ಕುಡುಮಲ ಕುಂಟೆ' ಗ್ರಾಮದ ದೊಡ್ಡ ನರಸಪ್ಪನ ಮಗ ಲಕ್ಷ್ಮೀನರಸಪ್ಪನೆಂಬುವವನು ಈತನ ಮಗಳನ್ನು ಮದುವೆ ಮಾಡಿಕೊಂಡ. ನಾಗಪ್ಪನು ರೂಪಿಸಿಕೊಂಡಿದ್ದ ಸಂಸ್ಕೃತಿಗಿಂತ ಹೆಚ್ಚಾಗಿಯೇ ವೈದಿಕ-ಸಮಾಜ ಸಂಪ್ರದಾಯಗಳ ಅನುಕರಣೆಗೆ ಮಾರುಹೋಗಿದ್ದ ಕುಟುಂಬ ದೊಡ್ಡನರಸಪ್ಪನದು.

ಮಗಳನ್ನು ಗಂಡನ ಮನೆಗೆ ಕಳುಹಿಸಿದ ಮೇಲೆ ನಾಗಪ್ಪನಿಗೆ ಸಮಾಧಾನವಿಲ್ಲ. ಕುಂತರೆ-ನಿಂತರೆ ಮಗಳದೇ ಚಿಂತೆ. ಊಟ ಮಾಡಲು ಕುಳಿತರೆ ಅವಳದೇ ನೆನಪು ಊಟ ಸೇರುವುದಿಲ್ಲ; ಕಣ್ಣಿಗೆ ನಿದ್ದೆ ಸುಳಿಯುವುದಿಲ್ಲ. ದಿನಕ್ಕೊಮ್ಮೆ ಊಟದ ಸಮಯದಲ್ಲಿ ಆ ಮಗಳನ್ನು ನೆನಪಿಸಿಕೊಂಡು ಅವಳನ್ನು ಕೊಟ್ಟ ಊರಿಗೆ ಹೋಗುತ್ತಾನೆ. (ಬಸ್ ಸೌಲಭ್ಯವಿರುವುದರಿಂದ ಹತ್ತು-ಹದಿನೈದು ನಿಮಿಷಗಳಲ್ಲಿ ಹೋಗಿ-ಬರಬಹುದು) ಮಗಳನ್ನು ಕರೆತಂದು ಮುಂದೆ ಕೂಡಿಸಿಕೊಂಡರೆ, ಒಂದೇ ತಟ್ಟೆಯಲ್ಲಿ ತಂದೆ ಮಗಳಿಬ್ಬರದೂ ಊಟ. ಹೀಗೆ ಮುಂದುವರಿದ ನಾಗಪ್ಪನ ಅವತಾರಕ್ಕೆ ರೋಸಿ ಹೋದ ಬೀಗರು ಭೈಯಮ್ಮನನ್ನು ಮನೆಯಿಂದ ಹೊರಹಾಕುತ್ತಾರೆ. ಮಗಳು-ಅಳಿಯನನ್ನು ತನ್ನ ಊರಿಗೇ ಕರೆತಂದು ಆಸ್ತಿಯಲ್ಲಿ ಪಾಲುಕೊಟ್ಟು ನಾಗಪ್ಪ ತನ್ನ ಕುಟುಂಬದಲ್ಲೇ ಉಳಿಸಿಕೊಳ್ಳುತ್ತಾನೆ. ತನ್ನ ಮಗನಾದ ಚಿನ್ನಪ್ಪನಿಗೆ ಅಳಿಯ ಲಕ್ಷ್ಮೀನರಸಪ್ಪನ ಚಿಕ್ಕಪ್ಪನ ಮಗಳನ್ನೇ ಮದುವೆ ಮಾಡುತ್ತಾನೆ. ಮದುವೆಯಾದ ಕೆಲವು ದಿನಗಳವರೆಗೆ ನಾಗಪ್ಪನ ಮಗ ಮತ್ತು ಮಗಳ ಸಂಸಾರಗಳು ಸಂತೋಷದಾಯಕವಾಗಿದ್ದರೂ ಚಿನ್ನಪ್ಪನಿಗೆ ಹೆಣ್ಣು ತಂದ ವಿಷಯದಲ್ಲಿ ಆತನ ಸೋದರ ಅತ್ತೆಯರು ಅಸಮಾಧಾನಗೊಳ್ಳುತ್ತಾರೆ. ತಮ್ಮ ಮಕ್ಕಳಲ್ಲೇ ಯಾರಾದರೂ ಒಬ್ಬರನ್ನು ಮದುವೆ ಮಾಡಿಕೊಳ್ಳಬಹುದಿತ್ತು ಎಂದು ಅವರೆಲ್ಲ ತೌರಿನಿಂದ ದೂರವಾಗುತ್ತಾರೆ.

ನಾಗಪ್ಪನ ಅಳಿಯ ತನ್ನ ಮಾವನ ಮನೆಯ ಕೊರತೆಗಳನ್ನು ಪರಿಸ್ಥಿತಿಗಳನ್ನು ಅರಿತುಕೊಳ್ಳುತ್ತಾನೆ. ತನ್ನ ಮಾವನ ತಂದೆಯ ಕಾಲದಿಂದಲೂ ಹೆದರಿಕೆಗೆ ಕಾರಣವಾಗಿದ್ದ ರೆಡ್ಡಿಯ ಕುಟುಂಬವನ್ನು *ಮಟ್ಟ ಹಾಕಲು ನಿರ್ಧರಿಸುತ್ತಾನೆ. ಆ ರೆಡ್ಡಿ ಕುಟುಂಬದೊಂದಿಗೆ ಸ್ನೇಹ ಬೆಳೆಸುತ್ತಾನೆ. ಧೈರ್ಯಸ್ಥನೂ ನೋಡಲು ಸುಂದರನೂ ಆಗಿರುವ ಈ ವ್ಯಕ್ತಿಗೆ ರೆಡ್ಡಿ ಕುಟುಂಬದ ಹೆಂಗಸರ ಮೆಚ್ಚುಗೆ ಹೆಚ್ಚಾದಂತೆಲ್ಲ ಗಂಡಸರಲ್ಲಿ ಈರ್ಷೆ ಬೆಳೆಯಲಾರಂಭಿಸುತ್ತದೆ. ಅಲ್ಲದೆ ತಮ್ಮ ಚಾಕರಿಯಲ್ಲೇ ಹೆದರಿ ಜೀವನ ನಡೆಸುತ್ತಿದ್ದ ಜನರಿಗೆ ಇವನು ಪುಡಾರಿ ಕಾನೂನು-ಪೊಲೀಸ್-ಕೋರ್ಟ್ ಇತ್ಯಾದಿ ದಾರಿಗಳನ್ನು ತೋರುತ್ತಾನೆಂದು ಗಮನಿಸಿದರು. ಸಮಯ ಸಿಕ್ಕಾಗ ತುಳಿಯಬೇಕೆಂದು ಸುಮ್ಮನಾದರು. ಇವನ ಊರಿನ ಕಡೆಯಲ್ಲಿ ಇವರಿಗಾಗದವರನ್ನು ಭೇಟಿಮಾಡಿ ಅಲ್ಲಿ ಅವರ ಮಗಳನ್ನು ಮಾನಭಂಗ ಮಾಡಿದನೆಂದು ಕೇಸ್ ದಾಖಲಿಸಿದರು. ಬೇಲ್ ದೊರೆಯಲೆಂದು ತಲೆಮರೆಸಿಕೊಂಡಿದ್ದ. ಈತನನ್ನು ಹದಿನಾರು ಮಂದಿ ಪೊಲೀಸರು ಹಿಡಿಯಲು ಸುತ್ತುವರಿದರು. ಅವರಲ್ಲಿ ಕೆಲವು ಮಂದಿಗೆ ಕೈಕಾಲುಗಳನ್ನು ಹಿಂದಕ್ಕೆ ತಿರುಗಿಸಿ ಪರಾರಿಯಾದ. ರೆಡ್ಡಿಗಳು ಕೆಳಗಿನ ಕೋರ್ಟ್‌ನಲ್ಲಿ ಶಿಕ್ಷೆಯಾಗುವಂತೆ ಮಾಡಿಸಿ ಲಾಯರ್‌ಗೆ ಲಂಚ ನೀಡಿದ್ದರು. ಮೇಲಿನ ಕೋರ್ಟ್‌ನಲ್ಲಿ ಕೇಸ ಗೆದ್ದ. ಇಂಥ ಒತ್ತಡಗಳು ಮತ್ತು ಖರ್ಚುಗಳಿಂದ ನಾಗಪ್ಪನ ಸೊಸೆ ರೋಸಿ ಹೋಗಿ ಜಗಳಕ್ಕೆ ನಿಂತಳು. ಅವಿಭಕ್ತ ಕುಟುಂಬ ಮೂರು ವಿಭಕ್ತ ಕುಟುಂಬಗಳಾಯಿತು.

ಚಿನ್ನಪ್ಪನ ಹೆಂಡತಿಗೆ ಮಕ್ಕಳಿರಲಿಲ್ಲ. ಅವಳು ತನ್ನ ಗಂಡನಿಗೆ ಮರುಮದುವೆ ಮಾಡಲು ನಿರ್ಧರಿಸಿದಳು. ನಾಗಪ್ಪನ ತಂಗಿಯರ ಮಕ್ಕಳಲ್ಲಿ ಹೆಣ್ಣು ಹುಡುಕಲು ಯತ್ನಿಸಿದಳು. ಲಕ್ಷ್ಮೀನರಸಪ್ಪ ಅವಳಿಗೆ ಬುದ್ಧಿ ಹೇಳಿದ. `ಇನ್ನೊಂದು ಮದುವೆ ಮಾಡಿದರೆ ನೀನು ಬೀದಿಗೆ ಬೀಳ್ತೀಯ` ಎಂದು ಇದರಿಂದ ನಾಗಪ್ಪ-ಚಿನ್ನಪ್ಪ ಕೋಪಗೊಂಡರು. ಅಸಮಾಧಾನಗಳಾಗಿ ಲಕ್ಷ್ಮೀನರಸಪ್ಪ ತನ್ನ ಹೆಂಡತಿ ಮಕ್ಕಳ ಸಮೇತ ಮಾವನ ಮನೆ ತೊರೆದ. ಆಗ ಒಬ್ಬ ರೆಡ್ಡಿ ತನ್ನ ಜಾಗದಲ್ಲಿ ಮನೆ ಕಟ್ಟಿಕೊಂಡು ಇರುವಂತೆ ಪುಸಲಾಯಿಸಿದ. ಅದರಂತೆ ಗುಡಿಸಲನ್ನು ಕಟ್ಟಿ ವಾಸಿಸತೊಡಗಿದ ಆಶ್ರಯದಾತ ರೆಡ್ಡಿ ರಾಜಕಾರಣಿ. ಆತನ ಹೊಲ-ಗದ್ದೆಗಳನ್ನು ಪಾಲಿಗೆ (ಕೋರಿಗೆ) ಬೇಸಾಯ ಮಾಡುವುದು. ಎಮ್ಮೆಗಳನ್ನು ಕಟ್ಟಿಕೊಂಡು ಮೇಯಿಸುವುದು ಇತ್ಯಾದಿ ವೃತ್ತಿಗಳನ್ನು ಅನುಸರಿಸಿದ. (ಚಿನ್ನಪ್ಪನ ಮೊದಲ ಮಡದಿಯು ಮಡಿದಿದ್ದಳಾದ್ದರಿಂದ ಆತನ ಸೋದರತ್ತೆಯ ಮಗಳನ್ನು ಮರುಮದುವೆ ಮಾಡಿದ ಮೊದಲ ಮಡದಿಯೂ ಮಡಿದರು.)

ಲಕ್ಷ್ಮೀನರಸಪ್ಪನ ಮಕ್ಕಳು ವಿದ್ಯಾಭ್ಯಾಸದಲ್ಲಿ ಮುಂದುವರಿದರು. ಅದೇ ಶಾಲೆಗಳಲ್ಲಿಯೇ ಇವರ ಶತೃಗಳಾದ ರೆಡ್ಡಿಯರ ಮಕ್ಕಳು ಓದುತ್ತಿದ್ದವು. ಮಕ್ಕಳಲ್ಲಿ ಸದಾ ಜಗಳ. ಅದೇ ನೆಪವೊಡ್ಡಿ ರೆಡ್ಡಿಗಳ ಕುಟುಂಬಗಳು ಸೇರಿ ಲಕ್ಷ್ಮೀನರಸಪ್ಪನ ಗುಡಿಸಲಿಗೆ ಬೆಂಕಿ ಇಟ್ಟರು ಕೋರ್ಟಗಳಲ್ಲಿ ಕೇಸ್‌ಗಳಾದವು. ಊರ ಜನ ಸಾಕ್ಷಿ ಹಾಕಿದರು. ವಿಚಾರಣೆಯ ಸಮಯದಲ್ಲಿ ತಮಗೇನೂ ಗೊತ್ತಿಲ್ಲವೆಂದು ಹೇಳಿಬಿಟ್ಟರು. ಕೇಸ್‌ಹೋಯಿತು. ಮತ್ತೆ ಲಕ್ಷ್ಮೀನರಸಪ್ಪ-ನಾಗಪ್ಪ-ಚಿನ್ನಪ್ಪನ ಕುಟುಂಬಗಳು ಒಗ್ಗಟ್ಟಾದವು. ತಮ್ಮನ್ನು ಸದೆ ಬಡಿಯುತ್ತಾರೆಂಬ ಹೆದರಿಕೆಯಿಂದ ರೆಡ್ಡಿ ಕುಟುಂಬದವರು ರಾಜಿ ಮಾಡಿಕೊಳ್ಳಲು ಮನೆಗೆ ಬಂದರು. ನಮ್ಮಲ್ಲಿ ಮನಸ್ತಾಪಗಳು ಬೇಡ ನಡೆದದ್ದನ್ನು ಮರೆಯೋಣವೆಂದು ಮಾತನಾಡಿ ಒಪ್ಪಿಕೊಂಡರು. ಹಾಲು ಕುಡಿದು ಹೋದರು. ಲಕ್ಷ್ಮೀನರಸಪ್ಪನ ಗಂಡು ಮಕ್ಕಳು ಮೆಜಾರಿಟಿಗೆ ಬಂದರು. ಮಕ್ಕಳು ಮೂರು ಗಂಡುಹುಲಿಗಳು, ಅಪ್ಪ ಹಳೆಯಹುಲಿ. ಇವರು ಒಬ್ಬರ ತಂಟೆಗೆ ಹೋಗುವುದಿಲ್ಲ. ಸುಮ್ಮನೆ ಕೆಣಕಿದವರನ್ನು ಬಿಡುವುದಿಲ್ಲ ಎನಿಸಿಕೊಂಡರು. ಮತ್ತೆ ರೆಡ್ಡಿಗಳಿಗೆ ಕಣ್ಣುಕೆಂಪಾದವು. ತಾವು ನೇರವಾಗಿ ನಿಲ್ಲಬಾರದೆಂದು ಸ್ವಜಾತಿಯಲ್ಲೇ ಕೆಲವರನ್ನು ಇವರ ವಿರುದ್ಧ ಎತ್ತಿಕಟ್ಟಿದರು. ಮತ್ತೆ ಇವರ ವಿರುದ್ಧ ಮಾನಭಂಗದ ಕೇಸುಗಳನ್ನು ದಾಖಲಿಸಿದರು. ಕೆಲವು ಅಸ್ಪರ್ಶರನ್ನು ಛೂ ಬಿಟ್ಟರು. ಎಲ್ಲ ಹೊಡೆದಾಟ-ಬಡಿದಾಟ ಕೋರ್ಟು-ಕಟ್ಟಲೆಗಳನ್ನು ತಂದೆ-ಮಕ್ಕಳು ಗೆದ್ದರು. ಈ ಸಂದರ್ಭಕ್ಕಾಗಲೆ ನಾಗಪ್ಪ ಕಣ್ಣು ಮುಚ್ಚಿದ್ದ. ಚಿನ್ನಪ್ಪನ ಬೆಂಬಲ ತಂಗಿಯ ಮಕ್ಕಳಿಗೆ ಇದ್ದೇ ಇದೆ. ಶತ್ರುಗಳ ಪಾಲಿಗೆ ಇವರು ಸಿಂಹಸ್ವಪ್ನವಾದರು.

ಮೇಲೆ ವಿವರಿಸಿದ ಎಲ್ಲ ಐತಿಹ್ಯಗಳೂ ಮೂರು ತಲೆಮಾರುಗಳಿಂದ ನಿರಂತರವಾಗಿ ಬೆಳವಣಿಗೆಯನ್ನು ಪಡೆಯುತ್ತಿದ್ದು ಕೌಟುಂಬಿಕ ಇತಿಹಾಸವನ್ನು ರೂಪಿಸಿವೆ. ಈ ಇತಿಹಾಸಕ್ಕೆ ಸಂಬಂಧಿಸಿದಂತೆ ಕೋರ್ಟು ಕಟ್ಟಳೆಗಳ ಲಿಖಿತ ದಾಖಲೆಗಳು ಸಿಗುತ್ತವೆ. ಉಳಿದಂತೆ ಮೌಖಿಕ ಪರಂಪರೆಯಲ್ಲಿ ನೆನಪುಗಳು ಮುಂದುವರಿಯುತ್ತಿವೆ. ಒಂದು ಕುಟುಂಬದ ಪರವಾಗಿ ಸದಸ್ಯರು ಹೇಳಿಕೊಳ್ಳುವಾಗ ಕೆಲವು ದೋಷಗಳನ್ನು ಮುಚ್ಚಿ ಹಾಕಿರಬಹುದು. ಆದರೆ ಈ ಐತಿಹ್ಯಗಳ ಬಹಳಷ್ಟು ವಿವರಗಳು ಸುತ್ತಮುತ್ತಲಿನ ಜನಗಳಿಂದಲೂ ಲಭಿಸುತ್ತವೆ. ಈ ಮೂರು-ನಾಲ್ಕು ತಲೆಮಾರುಗಳಲ್ಲಿ (ಆಸ್ತಿಯ ಕಾರಣಕ್ಕಾಗಿ) ಎರಡು ಕುಟುಂಬಗಳಲ್ಲಿ ಮುಂದುವರಿಯುತ್ತಿರುವ ಘರ್ಷಣೆ ಗಟ್ಟಿಗೊಳ್ಳುತ್ತಿದೆ ಎಂಬುದು ಇಲ್ಲಿ ಸ್ಪಷ್ಟ. ಹಳೆಯ ತಲೆಮಾರುಗಳು ಕಣ್ಮರೆಯಾದರೂ ಹೊಸ ಪೀಳಿಗೆಯಲ್ಲಿ ಉಳಿದಿರುವ ಈರ್ಷೆಗೆ ಹಿಂದೆ ನಡೆದಿರುವ ಘಟನೆಗಳು ಕಾರಣವಾಗಿವೆ. ತಿತ್ತೆಪ್ಪನ, ನಾಗಪ್ಪನ ಕಾಲದಲ್ಲಿ ನಡೆದಿರುವ ಘಟನೆಗಳ ನೆನಪುಗಳು ಈಗಾಗಲೇ ಐತಿಹ್ಯಗಳಾಗಿವೆ. ಇವು ಅಂದಿನ ಸಂದರ್ಭದ ಆಯಾ ಕಾಲಘಟ್ಟದಲ್ಲಿ ಕುಟುಂಬಗಳಲ್ಲಿ ಏರ್ಪಟ್ಟಿದ್ದ ಸ್ಥಿತಿ-ಗತಿಗಳತ್ತ ಗಮನಹರಿಸುವಂತೆ ಮಾಡುತ್ತವೆ.

ಆಸ್ತಿಯ ಲೋಲುಪತೆಯಲ್ಲಿ ಗಂಡಸರು ಮೆರೆಯುವಾಗ ಆ ಕುಟುಂಬದ ಹೆಣ್ಣು ಮಕ್ಕಳು ಬೇಸತ್ತ ಪರಿಯನ್ನು ಒಂದು ಐತಿಹ್ಯವು ವಿವರಿಸುತ್ತದೆ. "ಒಮ್ಮೆ ರಾಗಿಯ ಬೆಳೆ (ಫಸಲು) ಹೇರಳವಾಗಿ ಬಂದಿತ್ತು. ತಿತ್ತೆಪ್ಪನ ಕುಟುಂಬದ ಹೆಣ್ಣು ಮಗಳೊಬ್ಬಳು ಹೊಲ ಕುಯ್ಯಲು ಹೋಗಿ ನೋಡಿದಳು. ತಾನೊಬ್ಬಳೇ ಬೆಳೆದು ನಿಂತ ಅಷ್ಟೂ ತೆನೆಗಳನ್ನು ಕೂಯ್ಯವುದು ಯಾವಾಗ? ಹೇಗೆ! ಎನಿಸಿತು. ಆತಂಕಗೊಂಡ ಅವಳು ಎದುರಿಗೆ ಕಾಣುತ್ತಿದ್ದ ಆನಗಮರಾಯನ ಬೆಟ್ಟಕ್ಕೆ ಹರಕೆ ಹೊತ್ತಳು. ಸ್ವಾಮಿ ಆನಗಮರಾಯ ಅಲ್ಲೊಂದು ಇಲ್ಲೊಂದು ತೆನೆ ಆದರೆ ಆಡಿಕೊಂಡು ಪಾಡಿಕೊಂಡು ಕೊಯ್ದೇನು ಎಂದಳಂತೆ. ತಕ್ಷಣ ಆ ಜಮೀನಿನಲ್ಲಿ ಅಲ್ಲೊಂದು-ಇಲ್ಲೊಂದು ತೆನೆಗಳ ಪೈರುಗಳು ಉಳಿದವು. ಅವಳೇನೋ ಸಂತೋಷದಿಂದ ಆಡಿಕೊಂಡು ಪಾಡಿಕೊಂಡು ಹೊಲಕೊಯ್ದಳು. ಆದರೆ ಅಂದಿನಿಂದ ಎಷ್ಟೇ ಪ್ರಯತ್ನಪಟ್ಟರೂ ಬೆಳೆ ಚನ್ನಾಗಿ ಬರುವುದಿಲ್ಲವೆಂದು ಹೇಳುತ್ತಾರೆ.

ಈ ಐತಿಹ್ಯವು ತಿತ್ತೆಪ್ಪನ ಕಾಲಕ್ಕಿಂತ ಹಿಂದೆ ನಡೆದದ್ದು ಎನ್ನುತ್ತಾರೆ. ಅಂದರೆ ತಿತ್ತೆಪ್ಪನ ಕಾಲಕ್ಕಾಗಲೇ ಕುಟುಂಬದಲ್ಲಿ ಗಂಡಸರು ಸೋಮಾರಿಗಳಾಗಿ ಹೆಂಗಸರು ದುಡಿಯುತ್ತಿದ್ದ ಪರಿಸ್ಥಿತಿ ಇದರಿಂದ ಕಡಿಮೆ ಬೆಳೆ ಬರುತ್ತಿದ್ದ ಸ್ಥಿತಿ ಇತ್ಯಾದಿ ಆರ್ಥಿಕ ಮುಗ್ಗಟ್ಟುಗಳನ್ನು ಗಮನಿಸಬಹುದು. ಈ ಕಾರಣದಿಂದಲೇ ಇವರಿಗೆ ಇರುವ ಆಸ್ತಿಯನ್ನು (ಜಮೀನನ್ನು) ಬಲವಂತರು ಬಲವಂತವಾಗಿ ಕಸಿದುಕೊಳ್ಳುವ ಪ್ರಯತ್ನ ಮಾಡಿರಬಹುದು. ಈ ಕುಟುಂಬ ಯಾವುದೋ ಕಾಲದಲ್ಲಿ ಮಾನ್ಯವಾಗಿ

ಪಡೆದಿರುವ ಜಮೀನನ್ನು ಹೊಂದಿದ್ದಾರೆಂಬುದನ್ನು ಹೊರತುಪಡಿಸಿದರೆ ಇತ್ತೀಚಿನವರೆಗೂ ಆರ್ಥಿಕವಾಗಿ ಸ್ಥಿತಿವಂತರಾಗಿಲ್ಲ. ಈಗಲೂ ಬಹುಪಾಲು ಗುಡಿಸಲಿನಲ್ಲಿ ವಾಸಿಸುವುದರೊಂದಿಗೆ, ಕೆಲವು ನಂಬಿಕೆಗಳಿಗೆ ಕಟ್ಟುಬಿದ್ದು ನಿಷೇಧಗಳನ್ನು ಅನುಸರಿಸುತ್ತಾರೆ.

೧. ತಮ್ಮ ವಾಸದ ನೆಲೆಗೆ ಇತ್ತೀಚೆಗೆ ಅಂದರೆ ೧೯೫೦ರ ನಂತರ ಗುಡಿಸಲಿನಿಂದ ಮಾಳಿಗೆಯ ಮನೆ (ಕಡಪಕಲ್ಲು, ಆರ್.ಸಿ.ಸಿ.ಇತ್ಯಾದಿ)ಗಳಲ್ಲಿ ವಾಸಿಸುತ್ತಿದ್ದರೂ ಇವರ ವಂಶದವರ್‍ಯಾರು ಗೋಡೆಗಳಿಗೆ ಸುಣ್ಣ ಬಳಿಯಬಾರದೆಂಬ ನಿಷೇಧವನ್ನು ಪಾಲಿಸುತ್ತಾರೆ. ಮೊದಲು ಗುಡಿಸಲುಗಳಿಗೆ ಸಗಣಿಯನ್ನು ಬಳಿಯುತ್ತಿದ್ದರು. ಈಗ ಮನೆಗಳಿಗೆ ಸುಣ್ಣದ ಹೊರತಾಗಿ (ಬಿಳಿಯ ಬಣ್ಣದ ಹೊರತಾಗಿ) ಬೇರೆ ಯಾವುದಾದರೂ ಬಣ್ಣ ಹಚ್ಚುತ್ತಾರೆ. ಕಾರಣ ಬಹುಶಃ ಹಿಂದೆ ಇವರು ಅಲೆಮಾರಿಗಳಾಗಿದ್ದು, ಅರೆ ಅಲೆಮಾರಿ ಹಂತದಲ್ಲಿ ತಾತ್ಕಾಲಿಕ ವಾಸ್ತವ್ಯಗಳನ್ನು ರೂಪಿಸಿಕೊಂಡವರಿರಬಹುದು. ಸಗಣಿ ಮತ್ತಿತರ ಮಣ್ಣುಗಳ ಮಿಶ್ರಣವನ್ನು ಗೋಡೆಗಳಿಗೆ ಬಳಿಯುವುದು ಇವರ ಪದ್ಧತಿ. ಏಕೆಂದರೆ ಅವು ಪ್ರಕೃತಿಯಲ್ಲಿ ಹೇರಳವಾಗಿ ಸುಲಭವಾಗಿ ದೊರೆಯುವಂತವು.

೨. ಈ ವಂಶಸ್ಥರು ಯಾವುದಾದರೂ ರಾಜನಿಗೋ ಪಾಳೆಯಗಾರನಿಗೋ ಲೆಂಕರೋ-ಗರುಡರೋ ಆಗಿ ಸೇವೆ ಸಲ್ಲಿಸಿದವರಿರಲೂಬಹುದು. ಏಕೆಂದರೆ ಇವರ ಕುಟುಂಬ ವರ್ಗವು ಇತ್ತೀಚಿನವರೆಗೂ ಊರಿನ ಮುಖ್ಯಸ್ಥರು ಮುಂತಾದವರನ್ನು ಭೇಟಿ ಮಾಡಿದಾಗ ನಾವು ಲೆಂಕರು ಸ್ವಾಮಿ, ಬಡವರು ಎಂದು ಹೇಳಿಕೊಳ್ಳುವ ವಾಡಿಕೆ ಇನ್ನು ಹೀಗೆಯೇ ಬಂದ ಇನಾಮ್ತಿ ಹೊಲವನ್ನು ಬ್ರಿಟೀಷರು ಮಾನ್ಯ ಮಾಡಿದ್ದಿರಬಹುದು. ಇಂಥ ಕಾರಣಗಳಿಂದಾಗಿ ಜನಪದ ವಲಯದಲ್ಲಿ ಇವರ ಪರಂಪರೆಯನ್ನು ಸ್ಥಳೀಯರು ನೆನಪಿನಲ್ಲಿಡುವ ಸಾಧ್ಯತೆಗಳು ಹೆಚ್ಚು.

೩. ತಿತ್ತೆಪ್ಪನ ವಂಶಸ್ಥರ ವಲಯದಲ್ಲಿಯೂ ಗಮನಿಸಿದಾಗ ಆತನ ಚಿಕ್ಕಪ್ಪ-ದೊಡ್ಡಪ್ಪ ಹೀಗೆ ದಾಯಾದಿ ಕುಟುಂಬಗಳು ಮತ್ತು ಆ ಸಂತತಿಯಲ್ಲಿ ಇದ್ದಾರೆ. ಇವರೆಲ್ಲರಲ್ಲಿಯೂ ಈತನಿಗೆ ಮಾತ್ರ ಏಕೆ ನೆನಪುಗಳು ತೆರೆದುಕೊಂಡಿವೆಯೆಂದರೆ ಈತ ತಮ್ಮ ಜಮೀನನ್ನು ರಕ್ಷಿಸಿಕೊಳ್ಳಲೋಸುಗ ದಯನೀಯವಾಗಿ ಆತ್ಮಹತ್ಯೆ ಮಾಡಿಕೊಂಡವನು. ಇವನ ಕಾಲದ ನಂತರ ಒಟ್ಟುಆಸ್ತಿ ಭಾಗಗಳಾಗಿ ದಾಯಾದಿಗಳಲ್ಲಿ ಹಂಚಿಕೆಯಾದಂತಿದೆ. ಅಲ್ಲಿಯವರೆಗೂ ಇವರದೊಂದು ಅವಿಭಕ್ತ ಕುಟುಂಬವಿರಬಹುದು. ಇಂಥ ಕೆಲವು ಕಾರಣಗಳಿಂದಾಗಿ ಆ ಸಮುದಾಯ ಅಥವಾ ಅವರ ಪಂಗಡದಲ್ಲಿ ತಿತ್ತೆಪ್ಪ ಒಬ್ಬ ಸಾಂಸ್ಕೃತಿಕ ನಾಯಕನೋ-ವೀರನೋ ಆಗಿ ಮಾರ್ಪಟ್ಟಿದ್ದಾನೆ.

ಬುಡಕಟ್ಟುಗಳಲ್ಲಿ ತನ್ನ ಹಾಗೂ ತನ್ನ ಗುಂಪಿನ ಅಸ್ತಿತ್ವಕ್ಕಾಗಿ ಎಂಥ ಹೋರಾಟದಲ್ಲಿ ಮಾಡಿದರೂ ಆದರ್ಶಪ್ರಾಯರಾಗುತ್ತಾರೆ. ಅದು ಅಸಹಾಯಕತೆಯಿಂದ ಬಲಿಯಾದರೂ ಸಂಬಂಧಿಸಿದ ಸಂದರ್ಭಕ್ಕೆ ಒತ್ತುಕೊಟ್ಟು ನೆನಪಿನ ಗಣಿಯಲ್ಲಿ ಉಳಿಸಿಕೊಂಡು ಪರಂಪರೆಗೆ ಪ್ರಚಾರಮಾಡುತ್ತಾರೆ. ಯುದ್ಧ ಭೂಮಿಯಲ್ಲಿ ಮಡಿದವನಿಗೆ ವೀರಸ್ವರ್ಗ ಸಿಗುತ್ತದೆಂಬ ಆಶಯವಾದರೂ ಮಡಿದವನು ಸ್ವರ್ಗದಲ್ಲಿ ಸುಖವಾಗಿದ್ದಾನೆಂದು ಮುಕ್ತಾಯ ಹೇಳುತ್ತದೆ. ಆದರೆ ಬುಡಕಟ್ಟುಗಳಲ್ಲಿ ತಮ್ಮ ಸಮುದಾಯವನ್ನು ಉಳಿಸಲು ಅಥವಾ ಉಪಕಾರ ಮಾಡಲು ಪ್ರಾಣತ್ಯಾಗ ಮಾಡಿದವರು ದೇವರೇ ಆಗಿ ಮಾರ್ಪಡುತ್ತಾರೆ. ಉದಾ: ಗೌರಿಬಿದನೂರು ತಾಲ್ಲೂಕು ಹಾಗೂ ತುಮಕೂರು ಜಿಲ್ಲೆಯ ಮಧುಗಿರಿ ತಾಲೂಕಿನ ಕೆಲವು ದಲಿತರಲ್ಲಿ ಕೇಳಿ ಬರುವ ಐತಿಹ್ಯ ಜಮೀನ್ದಾರರ ರಾಗಿಯ ಹೊಲಕ್ಕೆ ಹೊಲೆಯರ ಹುಡುಗಿಯನ್ನು ಕಾವಲು ಇಟ್ಟಿದ್ದರು. ಅವಳಿಗೆ ಒಂದು ದಿನ ತಡೆಯಲಾರದಷ್ಟು ಹಸಿವಾಯಿತು. ನಾಲ್ಕಾರು ರಾಗಿಯ ತೆನೆಗಳನ್ನು ಉಜ್ಜಿ ತಿನ್ನುತಿದ್ದಳು. ಇದನ್ನು ನೋಡಿದ ಹೊಲದ ಒಡೆಯ ಬಾರುಗೋಲಿನಿಂದ ತೀಡಿದ. ಅವಳು ಹಾಗೆಯೇ ಸತ್ತಳು. ಇವಳ ಸ್ಮರಣಾರ್ಥ ಕುಟುಂಬದ ಜನ ಅವಳನ್ನು ದೈವವನ್ನಾಗಿಸಿಕೊಂಡಿದ್ದಾರೆ. ಇವರಲ್ಲಿ ತಮ್ಮ ಮಕ್ಕಳಿಗೆ ಕಾವಲಮ್ಮನೆಂದು ಹೆಸರಿಡುವ ಪದ್ಧತಿ ಇದೆ. ಗೌರೀಬಿದನೂರಿನ ಹಳ್ಳಿಗಳಲ್ಲಿ ಕಾವಲಮ್ಮನಿಗೆ ರಾಗಿಯ ಹಿಟ್ಟಿನಲ್ಲಿ ತಂಬಿಟ್ಟನ್ನು ಮಾಡಿ ದೀಪದಾರತಿ ಬೆಳಗುತ್ತಾರೆ.

ಕೌಟುಂಬಿಕ ಐತಿಹ್ಯಗಳು ಆಯಾ ವಂಶದ ವಿವಿಧ ಕಾಲಘಟ್ಟಗಳಲ್ಲಿ ನಡೆಯುವ ಪ್ರಮುಖ ಹಾಗೂ ಮಹತ್ವದ ಘಟನೆಗಳ ನೆನಪುಗಳಾಗಿ ಒಟ್ಟಾರೆ ವಂಶಾವಳಿಯು ಸಾಂಸ್ಕೃತಿಕ ಚರಿತ್ರೆಗೆ ಪೂರಕವಾಗಿರುತ್ತವೆ. ಇಂಥ ಐತಿಹ್ಯಗಳು ಬಹುಪಾಲು ಸಾಂಸ್ಕೃತಿಕ ಜೀವನದಲ್ಲಾದ ಪಲ್ಲಟಗಳನ್ನು ನೆನಪಿಸುವಂತಿರುತ್ತವೆ. ಸಾಮಾಜಿಕ ಮತ್ತು ಆರ್ಥಿಕ ಸ್ಥಿತ್ಯಂತರಗಳು ಆಯಾ ಸಂಸ್ಕೃತಿಗಳ ಮೇಲೆ ಪರಿಣಾಮ ಬೀರುತ್ತವೆ. ಈ ಕಾರಣಗಳಿಂದ ಸಂಸ್ಕೃತಿಯ ಚಲನಶೀಲತೆಯಲ್ಲಿ ವೈವಿಧ್ಯಗಳು ಉಂಟಾಗುತ್ತವೆ. ಸಾಂಸ್ಕೃತಿಕ ಆಚರಣೆಗಳು ಹೊಸತಾಗಿ ಕೆಲವು ಸೇರ್ಪಡೆಯಾಗಬಹುದು. ತಮ್ಮವೇ ಎನಿಸಿಕೊಂಡ ಕೆಲವು ಮೂಲ ಆಚರಣೆಗಳು ಮರೆಯಾಗಬಹುದು. ಅಂದರೆ ಅವುಗಳನ್ನು ಕೈಬಿಡಬಹುದು ಇಲ್ಲವೇ ಹಳೆಯದರ ಜಾಗದಲ್ಲಿ ಹೊಸತಾಗಿ ಕೆಲವು ಸೇರಿಕೊಳ್ಳಬಹುದು. ಆದರೆ ಇಂತಹ ವ್ಯತ್ಯಯ ಮಾರ್ಪಾಟುಗಳಿಗೆ ಕಾರಣವಾಗಿ ಐತಿಹ್ಯಗಳು ಸೃಷ್ಟಿಯಾಗುತ್ತವೆ. ಇದಕ್ಕೆ ಉದಾಹರಣೆಯೆಂದರೆ ಮೇಲ್ಕಂಡ ಐತಿಹ್ಯ. ಇದೇ ಅಧ್ಯಾಯದಲ್ಲಿ ಈಗಾಗಲೇ ಚರ್ಚೆಗೆ ಒಳಪಟ್ಟಿರುವ ನಾಗಪ್ಪನ ಅಳಿಯ ಲಕ್ಷ್ಮೀನರಸಪ್ಪನ ವಂಶಕ್ಕೆ ಸಂಬಂಧಿಸಿದ ಐತಿಹ್ಯಗಳು.

ಲಕ್ಷ್ಮೀನರಸಪ್ಪನ ವಂಶಸ್ಥರು ಪಾಳೆಯಗಾರರೆಂದು ಹೇಳಿಕೊಳ್ಳುತ್ತಾರೆ. ಇವರು ಮೂಲತಃ ಆಂಧ್ರದವರಾಗಿದ್ದು ಗುಮ್ಮನಾಯಕನಹಳ್ಳಿಯ ಪಾಳೆಗಾರರ ಪರಂಪರೆಯ ವಂಶಸ್ಥರು. ಇವರು ಗೌರಿಬಿದನೂರಿನ ಸುತ್ತ-ಮುತ್ತ ಪಾಳೆಯಗಳನ್ನು ಸ್ಥಾಪಿಸಿಕೊಂಡರು. ಗುಂಡಾಪುರದ ಗುಂಡನಾಯಕ (ಪಾಳೆಯಗಾರ)ನ ವಂಶಸ್ಥರು. ಇವರು ಅಣ್ಣ-ತಮ್ಮಂದಿರು ಧಾರಿಗಾನಪಾಳ್ಯದ ಧಾರಿನಾಯಕ ಹಾಗೂ ಮಾದನಹಳ್ಳಿಯ ಮಾದನಾಯಕ ಮತ್ತು ಈ ಮೂರು ಪಾಳೆಯಗಳ ಪಾಳೆಗಾರರ ವಂಶಸ್ಥರು ಇಂದಿಗೂ ದಾಯಾದಿಗಳು ಅಣ್ಣ-ತಮ್ಮಂದಿರೆಂದು ಹೇಳಿಕೊಳ್ಳುತ್ತಾರೆ. ಗುಂಡಾಪುರದ ಗುಂಡಾಲಮ್ಮ ಇವರ ವಂಶದ ಹೆಣ್ಣುಮಗಳು (ಬಹುಶಃ ಇನಳೇ ಕುಡುಮಲಕುಂಟೆ ಎಂಬಲ್ಲಿ ಮಹಾಸತಿಯಾಗದೆ ತಪ್ಪಿಸಿಕೊಂಡವಳಿರಬೇಕು.) ಕನ್ನಿಕಲಮ್ಮ, ನಾಗಲಮ್ಮ ಇವರ ಕುಲದೇವತೆಗಳು, ಕದರಿ ನರಸಿಂಹ ಇವರ ಆರಾಧ್ಯ ದೈವ. ನರಸಿಂಹಸ್ವಾಮಿಯನ್ನು ವಿವಾಹವಾದ ಚಂಚುಲಕ್ಷ್ಮಿ ತಮ್ಮ ವಂಶದ ಹೆಣ್ಣು ಮಗಳು ಎನ್ನುತ್ತಾರೆ. ಚಿಲಮತ್ತೂರು ಕಾಡಿನ ಪ್ರದೇಶದಿಂದ ಕದರಿ ಬೆಟ್ಟದವರೆಗೆ ತಮ್ಮ ಹಾಗೂ ತಮ್ಮ ದೈವದ ಆಂಧ್ರಪ್ರದೇಶದ ಅನಂತಪುರ ಜಿಲ್ಲೆ (ನರಸಿಂಹ) ಸಾಂಸ್ಕೃತಿಕ ಪರಿಸರವನ್ನು ವಿವರಿಸುತ್ತಾರೆ. ಈಗಲೂ ಗುಂಡಾಪುರದಲ್ಲಿ ಈ ವಂಶಸ್ಥರಿದ್ದು ಪಾಳೆಯಗಾರರ ಕುಟುಂಬದ ಅವಿಭಾಜ್ಯ ಆಸ್ತಿ (ಜಮೀನು) ಇರುವುದಲ್ಲದೆ, ಕೋಟೆಯ ಅವಶೇಷಗಳು ನಾಗಲಮ್ಮ ಕನ್ನಿಕಲಮ್ಮ ಗುಂಡಾಲಮ್ಮನ ಗುಡಿಗಳ ಪಳೆಯುಳಿಕೆಗಳು ಇವೆ. ಪಾಳೆಯಗಾರರಾಗಿದ್ದರ ಪ್ರಭಾವವೋ ಏನೋ ಇಂದಿಗೂ ಈ ವಂಶಸ್ಥರು ಸಂಪೂರ್ಣ ವೈದಿಕೀಕರಣಕ್ಕೆ ಒಳಗಾಗಿದ್ದಾರೆ. ಕಾರಣಾಂತರಗಳಿಂದ ಕದಿರಪ್ಪನೆಂಬುವವನು ತನ್ನ ಸಹೋದರರ ಸಮೇತ ಗುಂಡಾಪುರದಿಂದ ಕುಡುಮಲಕುಂಟೆಗೆ ಸೇರಿಕೊಂಡಿದ್ದಾನೆ. ಬಹುಶಃ ಈ ಪಾಳೆಯಗಾರರು ತಮ್ಮ ವಂಶದ ಹೆಣ್ಣುಮಗಳನ್ನು ಮದುವೆ ಮಾಡಿಕೊಟ್ಟು ಊರಿರಬಹುದು. ಕುಡುಮಲೆಕುಂಟೆ ಇಲ್ಲಿಯೂ ಕೋಟೆ ಮಾಸ್ತಿಕಲ್ಲುಗಳು ಇತ್ಯಾದಿ ಪಳೆಯುಳಿಕೆಗಳು ಇವೆ. ಕದಿರಪ್ಪನ ಕಾಲಕ್ಕೆ ಅಥವಾ ಅದಕ್ಕಿಂತ ಮುಂಚಿತವಾಗಿ ನಡೆದಿದೆಯೆಂದು ನಂಬಿಕೆ ಐತಿಹ್ಯವು ಕೆಲವು ಅಂಶಗಳತ್ತ ಬೆಳಕು ಚೆಲ್ಲುತ್ತದೆ.

೧. "ಕುಡುಮಲಕುಂಟೆಯ ಪಾಳೆಯಗಾರರು ಏಳು ಮಂದಿ ಯುದ್ಧಕ್ಕೆ ಹೋಗಿ ಮಡಿದರೆಂಬ ಸುದ್ದಿ ಕೇಳಿಬಂತು. ಆ ಏಳು ಜನ ಅಣ್ಣ-ತಮ್ಮಂದಿರೂ ಏಳು ಜನ ಅಕ್ಕ-ತಂಗಿಯರನ್ನು ಮದುವೆಯಾಗಿದ್ದರು. ಇವರು ತಮ್ಮ ಗಂಡಂದಿರು ಮಡಿದ ಕಾರಣ ಸಹಗಮನ ಮಾಡುವುದಾಗಿ ತೀರ್ಮಾನಿಸಿದರು. ಸುದ್ದಿಯನ್ನು ತೌರಿಗೆ ಹೇಳಿ ಕಳುಹಿಸಿದರು. ತೌರೂರಾದ ಗುಂಡಾಪುರದಿಂದ ಇವರ ಏಳು ಜನ ಅಣ್ಣ-ತಮ್ಮಂದಿರು ಅರಿಶಿನ ಕುಂಕುಮ ಸೀರೆ ಇತ್ಯಾದಿಗಳನ್ನು ತಂದರು. ಅಕ್ಕ-ತಂಗಿಯರು ಏಳೂ ಮಂದಿ ಜಳಕ ಮಾಡಿ ತೌರಿನ ಅರಿಶಿನ-ಕುಂಕುಮ ಸ್ವೀಕರಿಸಿ, ಹೊಸ ಸೀರೆಯುಟ್ಟು ಚಿತೆಗೆ ಬೀಳಲು ಸಿದ್ಧರಾದರು.

ಮೊದಲ ಆರು ಮಂದಿ ಅಕ್ಕ-ತಂಗಿಯರೂ ತೋಡಿದ್ದ ಬೆಂಕಿಯ ಕುಂಡಕ್ಕೆ ಹಾರಿದರು. ಕೊನೆಯವಳಿಗೆ ಹೊಳೆ ಹೊಳೆಯುತ್ತಾ ಉರಿವ ಕೆಂಡದ ರಾಶಿಯನ್ನು ಕಂಡು ದಿಗಿಲಾಯಿತು. ಅವಳು ಕೊಂಡಕ್ಕೆ ಧುಮುಕುವ ಬದಲು ತಪ್ಪಿಸಿಕೊಂಡು ಓಡಲಾರಂಭಿಸಿದಳು. ಆಗ ಅವಳ ಅಣ್ಣಂದಿರು ಅವಳನ್ನು ಹಿಡಿದು ತಂದು ಕೊಂಡಕ್ಕೆ ತಳ್ಳಿದರು.

ತನ್ನನ್ನು ಬಲವಂತವಾಗಿ ಬೆಂಕಿಗೆ ತಳ್ಳುವ ಸಮಯದಲ್ಲಿ ತನ್ನ ಅಣ್ಣಂದಿರನ್ನು ಬೈದು ಶಾಪ ಹಾಕಿದಳು. "ಊರ ಸೊಸೆಯರು ಸುಖವಾಗಿರಲಿ, ತನ್ನನ್ನು ಆಹುತಿ ಕೊಟ್ಟ ಅಣ್ಣಂದಿರ ವಂಶದ ಹೆಣ್ಣುಮಕ್ಕಳಿಗೆ ತನ್ನ ಪಾಡೇ ಬರಲಿ" ಎಂದು ಅಂದಿನಿಂದ ಅವಳ ಶಾಪದ ಫಲವಾಗಿ ಗುಂಡಾಪುರದ ಪಾಳೆಯಗಾರರ ಸಂತತಿಯ ಹೆಣ್ಣು ಮಕ್ಕಳಿಗೆ ತಾಪತ್ರಯಗಳೇ ಆದುವು. ಊರ ಸೊಸೆಯರಿಗೆ ನೆಮ್ಮದಿ ಸಿಕ್ಕಿತು ಎಂದು ಹೇಳುತ್ತಾರೆ. ಈ ಐತಿಹ್ಯದಲ್ಲಿ ಬರುವ ಗುಂಡಾಲಮ್ಮನು ಸೀಮಿಡಿ ನಾಗನ್ನ ಎಂಬ ಕುಟುಂಬದ ಸೊಸೆ. ಈ ಕುಟುಂಬವು ಈಗಲೂ ಕೊಂಡಕ್ಕೆ ಬಲಿಯಾದ ಗುಂಡಾಲಮ್ಮನ ಪೂಜೆ ಮಾಡುತ್ತಾರೆ. ಬೆಂಕಿಯ ಗುಂಡಿಗೆ ಬಿದ್ದು ಪ್ರಾಣ ಅರ್ಪಿಸಿದ ಮುತ್ತೈದೆಯರನ್ನು ಸಾಮಾನ್ಯವಾಗಿ ಗುಂಡಾಲಮ್ಮನೆಂದು ಕರೆಯುವ ವಾಡಿಕೆ ಇದ್ದಂತೆ ತೋರುತ್ತದೆ. ಅವಳನ್ನು ದೇವತೆಯೆಂದು ಪೂಜಿಸುವ ಆಚರಣೆಯಲ್ಲಿ ಎಷ್ಟು ಜನ ಹೆಂಗಸರು ಬಲಿಯಾದರು ಎಂಬ ಸಂಖ್ಯೆ ಮುಖ್ಯವಲ್ಲವೆನಿಸುತ್ತದೆ. ಎಲ್ಲರೂ ಗುಂಡಾಲಮ್ಮನ ಹೆಸರಿನಲ್ಲಿ ಸೇರಿ ಹೋಗುತ್ತಾರೆ. ಇಲ್ಲಿ ವ್ಯಕ್ತಿ-ನಾಮಗಳೂ ಮುಖ್ಯವಾಗುವುದಿಲ್ಲ.

೨. ಗುಂಡಾಪುರದಿಂದ ಕದಿರಪ್ಪನ ಪರಿವಾರವು ಕುಡುಮಲಕುಂಟೆಗೆ ಬಂದು ನೆಲೆಸಿದ ನಂತರ ಊರ ತಳವಾರಿಕೆಯನ್ನು ಪಡೆದುಕೊಂಡಿತ್ತು. ಬ್ರಿಟೀಷರ ಕಾಲ ಹಾಗೂ ನಂತರದ ಕಾಲದಲ್ಲಿ ಊರಿನ ಪಟೇಲ, ಶಾನುಭೋಗ, ಗೌಡ ಮುಂತಾದವರ ಕೈಕೆಳಗೆ ತಳವಾರರು ವೃತ್ತಿಯನ್ನು ಅನುಸರಿಸುತ್ತಿದ್ದರು. ಊರಿನ ರಕ್ಷಣೆ ಅವ್ಯವಹಾರಗಳ ಬಗ್ಗೆ ಪಟೇಲರಿಗೆ ದೂರು ಸಲ್ಲಿಸುವುದು ಕಂದಾಯ ವಸೂಲಿ ಮಾಡುವುದು. ಪಟೇಲ/ಗೌಡ ಇಲ್ಲವೇ ಶಾನುಭೋಗನ ಆಜ್ಞೆಯ ಮೇರೆಗೆ ತಪ್ಪಿಸ್ಥರನ್ನು ಎಳೆದು ತರುವುದು ಇತ್ಯಾದಿ ಇವರ ಕರ್ತವ್ಯಗಳಾಗಿದ್ದವು.

೩. ಬ್ರಿಟೀಷರ ನಿರ್ಗಮನದ ನಂತರ ಕದಿರಪ್ಪನ ವಂಶಸ್ಥನಾದ ದೊಡ್ಡನರಸಪ್ಪನು ತಾನು ಹಾಗೂ ತನ್ನ ಅಣ್ಣ-ತಮ್ಮಂದಿರಿಗೆ ತಳವಾರ ಚಾಕರಿ ಮಾಡಲು ಇಷ್ಟವಿಲ್ಲವೆಂದೂ ಕಾರಣ ಊರ ಗೌಡ ಪಟೇಲ-ಶಾನುಭೋಗರು ಚಾಕರಿ ಮಾಡುವವರೊಂದಿಗೆ ಗೌರವ ನೀಡದೆ ವರ್ತಿಸುತ್ತಾರೆಂದು ಕೋರ್ಟಿಗೆ ಮನವಿ ಸಲ್ಲಿಸಿದ. ಕೋರ್ಟಿನಲ್ಲಿ ವಿಚಾರಿಸಿದಾಗ ಅವರು "ಏನೋ ದೊಡ್ಡನರಸ" ಎಂದು ಸಂಬೋಧಿಸಿದ್ದಾಗಿಯೂ ಅದಕ್ಕೆ ದೊಡ್ಡನರಸಪ್ಪನು "ಏನೋ ವೆಂಕಟಸುಬ್ಬ" ಎಂದು. ತನ್ನ ಚಾಕರಿಯ ದೊಣ್ಣೆಯನ್ನು ಎಸೆದು

ಬಂದನಂತೆ. ಒಟ್ಟು ಕೋರ್ಟಿನ ತೀರ್ಮಾನದಲ್ಲಿ ದೊಡ್ಡನರಸಪ್ಪನೂ ಸೇರಿದಂತೆ ಅಣ್ಣ-ತಮ್ಮಂದಿರಿಗೆ ತಳವಾರಿಕೆಯಿಂದ ಬಿಡುಗಡೆ ಸಿಕ್ಕಿತು. ಒಮ್ಮೆ ಊರಿಗೆ ಕಳ್ಳರ ಹಾವಳಿ ಹೆಚ್ಚಾದ ಕಾರಣಕ್ಕಾಗಿ ಪ್ರತಿ ಮನೆಗೂ ದೊಣ್ಣೆಯ ಸರದಿಯನ್ನು ಹಾಕಿದರು. ಅದಕ್ಕೆ ಅನುಗುಣವಾಗಿ ಯಾವ ಮನೆಯ ಮುಂದೆ ದೊಣ್ಣೆಯನ್ನು ಇಟ್ಟು ಹೋಗುತ್ತಾರೋ ಅವರು ರಾತ್ರಿ ಊರನ್ನು ಕಾಯಬೇಕೆಂಬ ಸೂಚನೆ ಅದು. ದೊಡ್ಡನರಸಪ್ಪನ ಪಕ್ಕದ ಮನೆಗೆ ದೊಣ್ಣೆ ಸರದಿ ಬಂದಿತ್ತು. ಆಟವಾಡುವ ಮಕ್ಕಳು ಆಕಸ್ಮಾತಾಗಿ ದೊಡ್ಡನರಸಪ್ಪನ ಬಾಗಿಲಿಗೆ ದೊಣ್ಣೆಯನ್ನು ಎಸೆದಿದ್ದವು. ಇದರ ಪರಿಣಾಮವಾಗಿ ಪಟೇಲನನ್ನು ದೊಡ್ಡನರಸಪ್ಪ ಬೈದು ಬಂದಿದ್ದ.

೪. ದೊಡ್ಡನರಸಪ್ಪನು ಚಿಕ್ಕಂದಿನಿಂದಲೂ ಅಕ್ಕಸಾಲಿಗರ ಅಂಗಡಿಗಳ ಬಳಿ ನಿಂತು ಚಿನ್ನ ಕರಗಿಸುವ ಒಡವೆ ಮಾಡುವ ಕೆಲಸಗಳನ್ನು ಆಸಕ್ತಿಯಿಂದ ಗಮನಿಸುತ್ತಿದ್ದ. ಇವನ ಆಸಕ್ತಿಯನ್ನು ಗಮನಿಸಿದ ಅಕ್ಕಸಾಲಿಯು ಚಿನ್ನದ ಕೆಲಸವನ್ನು ಕಲಿಸಿದ. ದೊಡ್ಡನರಸಪ್ಪನ ತಂದೆಯು ಬಡಗಿ ಕೆಲಸವನ್ನು ಮಾಡುತ್ತಿದ್ದ. ಮಗನು ಅದನ್ನು ಕಲಿತ. ಅಕ್ಕಸಾಲಿಗರ ಪ್ರಭಾವದಿಂದ ದೇವರ ವಿಗ್ರಹಗಳನ್ನು (ಲೋಹದಿಂದ, ಮಣ್ಣಿನಿಂದ ಇತ್ಯಾದಿ) ಮಾಡುವುದು ಗುಡಿ-ಶಿಖರಗಳನ್ನು ಕಟ್ಟುವುದು ಗ್ರಾಮದೇವತೆಗಳಾದ ಸಪ್ಪಲಮ್ಮ, ಧರ್ಮಮ್ಮ, ಸತ್ಯಮ್ಮ, ಮುತ್ಯಾಲಮ್ಮ, ಮಾರೆಮ್ಮ ಮುಂತಾದವರ ವಿಗ್ರಹಗಳನ್ನು ಉತ್ಸವ ಜಾತ್ರೆಗಳನ್ನು ಮಾಡುತ್ತಾ ಬಂದ. ಗಣೇಶನ ವಿಗ್ರಹವನ್ನು ಮಾಡಿಕೊಡುತ್ತಿದ್ದ. ಕಾಮನಹಬ್ಬಕ್ಕೆ ಕಾಮಣ್ಣನ ಚಿತ್ರವನ್ನು ಬಿಡಿಸಿಕೊಡುತ್ತಿದ್ದ (ಬರೆದುಕೊಡುತ್ತಿದ್ದ). ಮದುವೆಯಾಗಿ ಮಕ್ಕಳಾಗುವ ಕಾಲಕ್ಕೆ ದೊಡ್ಡನರಸಪ್ಪನು ಒಂದು ವಾಲ್ಮೀಕಿ ಸಂಘವನ್ನು ಸೇರಿದ. ಅದರ ಪ್ರಕಾರ

ವಾಲ್ಮೀಕಿಯು ಸ್ವರ್ಗದಿಂದ ಜನಿವಾರವನ್ನು ತಂದ. ಅವನ ಮಕ್ಕಳಿಗೆ ತಂದೆಯ ನಂತರ ಜನಿವಾರದ ಶಿಷ್ಟಚಾರಗಳನ್ನು ಪಾಲಿಸಲಾಗಲಿಲ್ಲ. ಆದ್ದರಿಂದ ಬ್ರಾಹ್ಮಣರಿಗೆ ಕೊಟ್ಟರು. ವಾಲ್ಮೀಕಿ ವಂಶಸ್ಥರಾದವರೆಲ್ಲರೂ ಜನಿವಾರದ ಮಡಿ-ಮೈಲಿಗೆಯ ನಿಯಮಗಳನ್ನು ಪಾಲಿಸಬಹುದು (ಬ್ರಾಹ್ಮಣರಂತೆ). ಸಸ್ಯಹಾರವನ್ನು ಪಾಲಿಸಬೇಕು. ಇಂಥ ನಿಯಮಗಳನ್ನು ಒಪ್ಪಿಕೊಂಡು ಕೆಲವು ಬೇಡನಾಯಕ, ತಳವಾರ, ವಾಲ್ಮೀಕಿ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ಜನರು ಕುಟುಂಬ ಸಮೇತ ಸಂಘಕ್ಕೆ ಸೇರಿದರು. ಅದರಲ್ಲಿ ದೊಡ್ಡನರಸಪ್ಪ ಹಾಗೂ ಆತನ ತಮ್ಮ ಚಿಕ್ಕನರಸಪ್ಪ ತಂಗಿ (ಬಾಲವಿಧವೆ) ಸೇರಿದರು. ಕೆಲವೇ ದಿನಗಳಲ್ಲಿ ದೊಡ್ಡನರಸಪ್ಪನ ತಮ್ಮ ಹಾಗೂ ತಂಗಿ ಸಂಘದಿಂದ ಹಿಂದೆ ಸೇರಿದರು. ಆದರೆ ದೊಡ್ಡನರಸಪ್ಪನು ತನ್ನ ಕುಟುಂಬದಲ್ಲಿ ಸಂಘದ ನಿಯಮಗಳನ್ನು ಸಾಧಿಸುತ್ತ ಬಂದ. ೧. ಮಾಂಸಹಾರವನ್ನು ನಿಷೇಧಿಸಿದ. ೨. ಮಡಿ, ಮೈಲಿಗೆ-ಪೂಜೆಗಳನ್ನು ಪ್ರತಿನಿತ್ಯ ಅನುಸರಿಸಿದ. ೩. ತನಗೂ ತನ್ನ ನಾಲ್ಕು

ಗಂಡು ಮಕ್ಕಳಿಗೂ ಜನಿವಾರ ಧಾರಣೆ ಮಾಡಿಸಿದ. ೪. ಕೀರ್ತನೆ-ಭಜನೆಗಳನ್ನು ಹಾಡುತ್ತಾ ಭಿಕ್ಷಾಟನೆಯಲ್ಲಿ ಶೂದ್ರರಿಂದ ಸ್ವಯಂಪಾಕವನ್ನು ಪಡೆಯತೊಡಗಿದ. ೫. ಹರಿಕಥೆ-ಭಾಗವತಗಳನ್ನು ಕಲಿತು ನಡೆಸತೊಡಗಿದ. ತನ್ನ ಹೆಸರನ್ನು ಭಾಗವತ ಪಂಡಿತ ಲಕ್ಷ್ಮೀನರಸಿಂಹಚಾರ್ ಎಂದು ಮಾಡಿಕೊಂಡ.

ತನ್ನ ಮಕ್ಕಳನ್ನು ಶಿಷ್ಟ ಸಂಪ್ರದಾಯದಲ್ಲಿ ಬೆಳೆಸತೊಡಗಿದ. ಮಕ್ಕಳು ಸೊಪ್ಪು ತಿಂದರೆ ರಾಗಿ ಮುದ್ದೆ ತಿಂದರೆ ಕಕ್ಕ ಮಾಡಿದ್ದು ಚನ್ನಾಗಿ ಕಾಣುವುದಿಲ್ಲವೆಂದು ತರಕಾರಿ-ಬೇಳೆ ಅನ್ನ ಗೋಧಿಯಂಥ ಪದಾರ್ಥಗಳ ಊಟವನ್ನು ಕೊಡುತ್ತಿದ್ದ. ಅವರವರಿಗೆ ನಿಗಧಿಪಡಿಸಿದ ತಟ್ಟೆಗಳಲ್ಲೇ ಊಟ ಮಾಡಬೇಕು. ಗಂಡುಮಕ್ಕಳಿಗೆ ಜನಿವಾರ ಕಡ್ಡಾಯ. ಇಂಥ ನಿಯಮಗಳಿಂದ ಮಕ್ಕಳು ಬೇಸತ್ತರು. ಸಂಜೆಯಾಗುತ್ತಿದ್ದಂತೆ ತಂದೆಯ ಸಂಗೀತದ ಕಛೇರಿಗೆ ಮಕ್ಕಳು ವಾದ್ಯಗಳನ್ನು ನುಡಿಸಬೇಕು. ತಪ್ಪಿದರೆ ಹೊಡೆತಗಳು ಬೀಳುತ್ತಿದ್ದವು. ರೋಸಿ ಹೋದ ಮಕ್ಕಳು ತಾಯಿಯ ತೌರುಮನೆಯಲ್ಲಿ ಚಿಕ್ಕಪ್ಪಂದಿರ ಮನೆಗಳಲ್ಲಿ (ತಂದೆಗೆ ತಿಳಿಯದಂತೆ) ಮಾಂಸ ತಿನ್ನತೊಡಗಿದರು.

ಸಂಜೀವಮ್ಮ: ದೊಡ್ಡನರಸಪ್ಪನ ಹೆಂಡತಿ ಸಂಜೀವಮ್ಮ. ಆತನ ಸೋದರಮಾವನ ಮಗಳು. ಸಾಧಾರಣವಾಗಿ ಕುಳ್ಳಗೆ, ಕಪ್ಪಗೆ ಗುಂಗುರು ಕೂದಲಿನ ಸುಂದರಿ. ಗಂಡನೋ ಅಜಾನುಬಾಹು, ಎತ್ತರವಾದ ಕೆಂಪು ಮಿಶ್ರಿತ ಬಿಳುಪು ಬಣ್ಣದ ಅಗಲ ಕಿವಿಯ ಮನುಷ್ಯ ಹಲವಾರು ವೃತ್ತಿಗಳನ್ನು ಕರಗತ ಮಾಡಿಕೊಂಡಿದ್ದರಿಂದ ಸಹಜವಾಗಿಯೇ ಜನಪ್ರಿಯವಾಗಿದ್ದ. ಬಂಗಾರದ ಕೆಲಸ (ಅಕ್ಕಸಾಲಿಗರ ಕೆಲಸ)ದಿಂದ ಪ್ರಸಿದ್ಧನಾದ್ದರಿಂದ ಊರ ಸುತ್ತಮುತ್ತಲ ಕುಟುಂಬಗಳಿಗೆ ಒಡವೆಗಳನ್ನು ಮಾಡಿಕೊಡುತ್ತಿದ್ದ. ಒಮ್ಮೆ ಇದ್ದಕ್ಕಿದ್ದಂತೆ ಸಂಜೀವಮ್ಮನಿಗೆ ಪಾರ್ಶ್ವವಾಯು ಬಡಿಯಿತು. ಏಕೆಂದರೆ, ಗಂಡನೊಂದಿಗೆ ಜಗಳವಾಡಿ ಹೊಲದ ಕಡೆ ಹೊರಟಿದ್ದ ಸಂಜೀವಮ್ಮ ಬಹಿಷ್ಟೆಯಾಗಿದ್ದರಿಂದ ಅಲ್ಲಿ ತಣ್ಣೀರಿನಲ್ಲಿ ಜಳಕ ಮಾಡಿದ್ದಳು, ಮಳೆಯಲ್ಲಿ ನೆನೆದಿದ್ದಳು. ಸಂಜೆ ಮನೆಗೆ ಬಂದವಳೆ ತಲೆಭಾರವಾಗುತ್ತಿದೆಯೆಂದು ಕೋಣೆಗೆ ಹೋಗಿ ಕದವಿಟ್ಟು ಮಲಗಿದಳು. ಮನೆಮಂದಿಯೆಲ್ಲಾ ಹೇಳಿದರೂ ಬಾಗಿಲು ತೆರೆಯದೆ ಅಳುತ್ತಾ ಗೋಡೆಗೆ ತಲೆಯನ್ನು ಚಚ್ಚಿಕೊಳುತ್ತಿದ್ದಳು. ನಾಲಿಗೆ ಕಿತ್ತುಕೊಂಡು ಸಾಯುವುದಾಗಿ ಹೆದರಿಸುತ್ತಿದ್ದಳು. ಹೀಗೆಯೇ ಒಂದು ರಾತ್ರಿ ಕಾಡಿಸಿದಳು. ಬೆಳಿಗ್ಗೆ ಬಾಗಿಲು ಬಡಿದರೂ ಎಚ್ಚರವಿರಲಿಲ್ಲ. ಕೊನೆಗೆ ಬಾಗಿಲು ಮುರಿದು ನೋಡಿದರು. ಅವಳು ಪಾರ್ಶ್ವವಾಯು ಪೀಡಿತಳಾಗಿದ್ದಳು.

ದೊಡ್ಡನರಸಪ್ಪನು ಎಲ್ಲರ ಒಡವೆಗಳನ್ನು ಮಾರಿದ. ಕಳ್ಳನುಗ್ಗಿ ಒಡವೆ ಕದ್ದನೆಂದು ಸುದ್ದಿ ಹಬ್ಬಿಸಿದ ಜನ ನಂಬಿದರು. ಹೆಂಡತಿಯನ್ನು ಆಸ್ಪತ್ರೆಗೆ ಸೇರಿಸಿದ. ಮೂರು ವರ್ಷ ಸತತವಾಗಿ ಆಸ್ಪತ್ರೆಯಲ್ಲಿ ಉಳಿದಳು ಸಂಜೀವಮ್ಮ. ಗುಣಮುಖವಾಗಿ ಮನೆಗೆ ಬಂದಾಗ ಮಕ್ಕಳಿಗೆ ಗುರುತು

ಸಿಗಲಿಲ್ಲ. ಅಪ್ಪನ ಜೊತೆಯಲ್ಲಿ ಹುಟ್ಟಿ ಬಂದಿದ್ದಾಳೆಂದು ಹೆದರಿ ಓಡುತ್ತಿದ್ದರು. ಅವಳ ಬಾಯಿಗೆ ಲಕ್ವಾ (ಪಾರ್ಶ್ವವಾಯು) ಬಡಿದಿದ್ದರಿಂದ ಮಾತು ಅಸ್ಪಷ್ಟವಾಗಿತ್ತು. ಅವಳನ್ನು ನೋಡಲು ಬಂದ ಊರಿನ ಹೆಂಗಸರಿಗೆಲ್ಲ ಕರುಳು ಮಿಡಿಯುತ್ತಿತ್ತು. ಹೊಲೆಯರ ಮುದುಕಿಯೊಬ್ಬಳು "ಅಮ್ಮಾ ನಾನು ಯಾರು ನೆನಪಿದೆಯೇ" ಎಂದಳು. ಅದಕ್ಕೆ ಸಂಜೀವಮ್ಮ ಹೌದೆಂದು ತಲೆಯಾಡಿಸಿದಳು. ಅವಳು ನನ್ನ ಹೆಸರೇನೆಂದು ಹೇಳು ನೋಡೋಣ ಅಂದಳು. ಸಂಜೀವಮ್ಮನು 'ಗುಡಿಸಿ ತಿಮ್ಮಕ್ಕ' ಎನ್ನಲು ಪ್ರಯತ್ನಿಸಿದಳು. ಆದರೆ ಅದು ಅವಳಲ್ಲಿ 'ಗುಡಿಚಿ ನಿಮ್ಮಕಾಯಿ' ಎಂದು ಉಚ್ಚಾರವಾಯಿತು. ಎಲ್ಲರೂ ಅಯ್ಯೋ ಎಷ್ಟು ಸ್ಪಷ್ಟವಾಗಿ ಬಿರುಸಾಗಿ ಮಾತನಾಡುತ್ತಿದ್ದವಳಿಗೆ ಎಂಥ ಪಾಡು ಬಂತು ಎಂಬುದಾಗಿ ಮಾತನಾಡಿಕೊಳ್ಳತೊಡಗಿದರು.

**ಸಂಜೀವಮ್ಮನ ಮಾತಿನ ಬಗ್ಗೆ ಐತಿಹ್ಯಗಳು :** ೧. ಒಮ್ಮೆ ಸಂಜೀವಮ್ಮನು ಹಬ್ಬ ಮುಗಿಸಿ ಮಾತನಾಡುತ್ತಿದ್ದಳು. ಬ್ರಾಹ್ಮಣರ ಹೆಂಗಸರು 'ಸಂಜೀವಮ್ಮ ಏನೇನು ಮಾಡಿದ್ದೆ' ಎಂದು ಕೇಳಿದರು. ಅದಕ್ಕೆ ಇವಳು ಅಲ್ಲ ಅಡಿಗೆಗಳ ಹೆಸರುಗಳನ್ನು ಸ್ಪಷ್ಟವಾಗಿ ಹೇಳಿದಳು. ಅವರು ಬ್ರಾಹ್ಮಣ ಹೆಂಗಸರಾದ್ದರಿಂದ ಅವರೊಂದಿಗೆ ಮಾತನಾಡುತ್ತಿದ್ದೇನೆಂಬ ಎಚ್ಚರದಿಂದ ಕೊಬ್ಬರಿ ಚಟ್ನಿಯ ಹೆಸರನ್ನು ಹೇಳುವಾಗ ಕೊಬ್ಬರಿ ಸ್ರೇಷ್ನಿ ಮಾಡಿದ್ದೆ ಎಂದು ನುಡಿದಳು. ಅವಳ ಪ್ರಕಾರ ಆ ಸ್ರೇಷ್ನಿ ಪದವು ಬ್ರಾಹ್ಮಣರ ಉಚ್ಚಾರಕ್ಕಿಂತ ಸ್ಪಷ್ಟವಾದದ್ದು. ಆದರೆ ಅವಳ ಮಕ್ಕಳು ಗೊಳ್ ಎಂದು ನಕ್ಕಿದ್ದರು.

೨. ನಾಲ್ಕು ಗಂಡು, ಎರಡು ಹೆಣ್ಣು-ಒಟ್ಟು ಆರು ಮಂದಿ ಮಕ್ಕಳನ್ನು ಓದಿಸುತ್ತಿದ್ದರು. ತಾಯಿಗೆ ತನ್ನ ಮಕ್ಕಳ ಜಾಣ್ಮೆಯನ್ನು ಪರೀಕ್ಷಿಸಬೇಕು ಅನಿಸಿತು. "ಮಕ್ಕಳೇ ತಮಿಳಿನಲ್ಲಿ 'ಕೊಳಂಬು' ಎಂದರೇ ಏನು" ಎಂದು ಕೇಳುತ್ತಿದ್ದಳು. ಪೆಚ್ಚಾದ ಮಕ್ಕಳಿಗೆ ತಾನೇ "ನಿಮಗೆ ಅಷ್ಟು ಗೊತ್ತಿಲ್ವಾ! ಸಾರು-ಸಾರು ಎನ್ನುತ್ತಿದ್ದಳು. ಹಿಂದಿಯಲ್ಲಿ ಬೇಳೆಯನ್ನು ಏನೆನ್ನುತ್ತಾರೆ ಎಂದು ಪ್ರಶ್ನಿಸುತ್ತಿದ್ದಳು. ಮತ್ತೆ, ತಾನೇ ಅಯ್ಯೋ ನಿಮಗೆ ಅದು ತಿಳಿದಿಲ್ಲವಾ 'ದಾಲ್' ಅನ್ನುತ್ತಾರೆ ಎಂದು ಬಿಡುತ್ತಿದ್ದಳು. ಮಕ್ಕಳು ತಮಗೆ ಶಾಲೆಯಲ್ಲಿ ತಮಿಳು, ಹಿಂದಿ ಕಲಿಸುವುದಿಲ್ಲ. ಅದು ಕನ್ನಡ ಶಾಲೆ (ಪ್ರೈಮರಿ ಶಾಲೆ) ಎನ್ನುತ್ತಿದ್ದವು.

೩. ಲಕ್ವಾದಿಂದ ಚೇತರಿಸಿಕೊಳ್ಳುತ್ತಿದ್ದಾಗಲೂ ಸಂಜೀವಮ್ಮ ತಾನು ಮಾತುಗಾರಿಕೆಯನ್ನು ಮೊದಲಿನಂತೆ ರೂಪಿಸಿಕೊಳ್ಳಬೇಕೆಂದು ಹಂಬಲಿಸುತ್ತಿದ್ದಳು. ಹಿರಿಯ ಮಗ ಅಶ್ವತ್ಥನಾರಾಯಣ ಹಾಗೂ ಎರಡನೆಯ ಮಗ ರಾಮಕೃಷ್ಣ ಹೈಸ್ಕೂಲಿನಲ್ಲಿ ಓದುತ್ತಿದ್ದುದರಿಂದ ಅವರ ಇಂಗ್ಲೀಷ್ ಜ್ಞಾನವನ್ನು ಪ್ರಶ್ನಿಸಿದಳು. ಇಂಗ್ಲೀಷಿನಲ್ಲಿ ರೈಸ್ ಅಂದರೆ ಏನೆಂದು ಕೇಳಲು ಪ್ರಯತ್ನಿಸಿದಳು. ಆದರೆ ಬಾಯಿಗೆ ಲಕ್ವಾಬಡಿದು ನಾಲಗೆ ದಪ್ಪವಾಗಿದ್ದರಿಂದ "ಇಂಗ್ಲಿಷ್‌ನಲ್ಲಿ ರೈಚ್ ಎಂದರೆ ಏನು" ಎಂದು ಉಚ್ಚರಿಸಿ

ಕೇಳಿದಳು. (ತೆಲುಗು: "ಇಂಗ್ಲಿಚ್‌ಲೋ ರೈಟ್ ಅಂಟೆ ಏಮಿರಾ") ಮಕ್ಕಳಿಗೆ ರೈಟ್ ಎಂದರೆ ಏನೆಂದು ತಿಳಿಯಲಿಲ್ಲ. ಕೊನೆಗೆ ತಾನೇ ಹೇಳಿದಳು - ನಿಮಗೆ ಅಷ್ಟೂ ತಿಳಿದಿಲ್ಲವಾ ರೈಟ್ ಅಂದರೆ ಅಕ್ಕಿ ಎಂದು ಹೇಳಿದಳು. ಮಕ್ಕಳು ಓಹೋ ರೈಸಾ ಎಂದು ನಕ್ಕು ಸುಮ್ಮನಾದರು. ಆಗ ಅವಳು ಅದಕ್ಕೆ ಹೇಳುವುದು ಓದಿದವರಿಗಿಂತ ಅಗಸರು ಮೇಲು ಎಂದು ಅಂದಳು. (ತೆಲುಗಿನ ಗಾದೆ: ಚದಿವಿನೋನಿಕನ್ನಾ ಚಾಕುಲೋಡು ಮೇಲು) ಏಕೆಂದರೆ ಅಗಸರು ಅವಿದ್ಯಾವಂತರಾದರೂ ಎಲ್ಲರ ಮನೆಗಳ ಬಟ್ಟೆಗಳನ್ನು ಅದಲು ಬದಲು ಮಾಡದೆ ಆಯಾ ಮನೆಗಳಿಗೆ ಕೊಡುತ್ತಾರೆ, ಹಾಗೆಯೇ ತಾನು ಅನಕ್ಷರಸ್ಥೆಯೇ.

ಮಕ್ಕಳ ವಿಷಯದಲ್ಲಿ ಈ ಗಂಡ-ಹೆಂಡತಿ ಜಗಳವಾಡುವ ಪರಿಯೇ ಬೇರೆಯಾಗಿತ್ತು. ಅವು ತನ್ನಂತೆ ಆಗಲಿಲ್ಲವೆಂದು ತಂದೆಯು ದೂರಿದರೆ, ಅವಕ್ಕೆಲ್ಲ ತಂದೆಯ ಗುಣಗಳೇ ಎಂಬುದು ತಾಯಿಯ ಅಸಮಾಧಾನ. ಬೀಜ ಯಾವುದಾದರೇನು ಗಿಡಕ್ಕೆ ಭೂಗುಣ ಮುಖ್ಯವಾಗುತ್ತದೆ ಎಂದು ಆತ ನುಡಿದರೆ, ಬೇವಿನ ಬೀಜಗಳನ್ನು ಬೆಲ್ಲದ ಕಟ್ಟೆಯಲ್ಲಿ ಬೆಳೆಸಿದರೆ ಸಿಹಿಯಾದಾವೇ ಎಂಬುದು ಅವಳ ವಾದ. ಹೀಗೆ ಕಾಲ ಮುಂದುವರೆದು ಮುದಿ ಅವಸ್ಥೆ ತಲುಪಿದರೂ ಗಂಡ-ಹೆಂಡತಿಯಲ್ಲಿ ಇಂಥ ಪೈಪೋಟಿ ನಡೆಯುತ್ತಿತ್ತು. "ನೀನು ಸುಳ್ಳು ಹೇಳುವುದರಿಂದಲೇ ನಿನಗೆ ಲಕ್ವಾ ಹೊಡೆದದ್ದು" ಎಂದರೆ ಆತ, ಈಕೆ "ಅದಕ್ಕೆ ನಿನಗೆ ಗಂಟಲು ಕೂಯ್ದದ್ದು" ಎಂದು ಬಿಡುತ್ತಿದ್ದಳು. (ಗಂಟಲಿನ ಶೀತದಗಷ್ಟೆ ಆಪರೇಷನ್ ಮಾಡಿಸಿಕೊಂಡಿದ್ದ) "ನಿನಗೆ ಅದಕ್ಕೆ ಮಾತುಬಾರದು" ಎಂಬ ಆತನ ಮಾತಿಗೆ ಪ್ರತಿಯಾಗಿ "ನಿನಗೆ ಅದಕ್ಕೆ ಸಣ್ಣಗೆ ತಿಕಾನ ತುರಿದಿದ್ದು" ಎಂದು ಬಿಡುತ್ತಿದ್ದಳು. (ಆತನ ಪೈಲ್ಸ್ ಆಪರೇಷನ್‌ನ ಬಗ್ಗೆ ಪ್ರತಿಕ್ರಿಯೆ)

**ದೊಡ್ಡನರಸಪ್ಪನ ಜೀವನಕ್ಕೆ ಅಂತ್ಯ:** ದೊಡ್ಡನರಸಪ್ಪನಿಗೆ ತನ್ನ ಅನುಕರಣೆಯ ಧರ್ಮ ಆಚಾರ-ವಿಚಾರಗಳನ್ನು ಮಕ್ಕಳು ಕೈಬಿಡುತ್ತಿದ್ದಾರೆ. ಮಾಂಸಾಹಾರವನ್ನು ಅಭ್ಯಾಸ ಮಾಡಿಕೊಂಡಿದ್ದಾರೆ. ಇಂಥ ಗಂಡು ಮಕ್ಕಳ ಜೊತೆ ಇರಲು ತನಗೆ ಸಾಧ್ಯವಾಗುವುದಿಲ್ಲವೆಂದೆನಿಸಿತು. ಸಸ್ಯಾಹಾರದಲ್ಲೇ ಬೆಳೆದು ಗಂಡನ ಮನೆಯಲ್ಲೂ ಅದನ್ನೇ ಉಳಿಸಿಕೊಂಡಿರುವ ತನ್ನ ಇಬ್ಬರು ಹೆಣ್ಣು ಮಕ್ಕಳ ಬಗ್ಗೆ ಹೆಮ್ಮೆಯೆನಿಸಿತು. ಹೆಣ್ಣುಮಕ್ಕಳೊಂದಿಗೆ ತಾನು ಉಳಿಯುವುದಾಗಿ ನಿರ್ಧರಿಸಿ ಹೊರಟ. ಅವರಿಗೂ ಇವರ ನಿಯಮಗಳನ್ನು ಪಾಲಿಸಲು ಕಷ್ಟವೆನಿಸಿತು. ಹೇಗೋ ಸಹಿಸಿಕೊಂಡಿದ್ದರು. ಆದರೂ ಮುದಕನಿಗೆ ತನ್ನನ್ನು ಅಲಕ್ಷ್ಯ ಮಾಡುತ್ತಿದ್ದಾರೆ ಎಂದೆನಿಸಿತೋ ಏನೋ ಗಾಘುವೇಂದ್ರ ಮಠದ ಹಿಂದೆ ಮಲಗಿದ್ದಲ್ಲೇ ಸತ್ತಿದ್ದರು. ಪೋಸ್ಟ್‌ಮಾರ್ಟಮ್ ರಿಪೋರ್ಟ್‌ನಲ್ಲಿ "ವಿಷ ಸೇವಿಸಿದ್ದಾರೆಂದು" ನಮೂದಿಸಿದ್ದರು. (ಈತನ ತಿಥಿಯ ಸಂದರ್ಭದಲ್ಲಿ ಯಾವ ಸಂಪ್ರದಾಯವನ್ನು ಆಚರಿಸಬೇಕೆಂದು ಗೊಂದಲವುಂಟಾಗಿತ್ತು.)

ಸಂಜೀವಮ್ಮನು ತನ್ನ ಗಂಡನ ಶವ ಪರೀಕ್ಷೆಯನ್ನು ಕಣ್ಣಾರೆ ನೋಡಿದಳಂತೆ. ತಲೆಯನ್ನು ಠಂಗನೆ ಹೊಡೆದರೆಂದು ತನ್ನನ್ನು ಜೀವನವಿಡೀ ಕಾಡಿಸಿದ್ದಕ್ಕೆ ತನ್ನ ಕಣ್ಣೆದುರೇ ಆತನ ತಲೆಯೊಳಗಿನ ಮೆದುಳನ್ನು ಪೊಲೀಸರು ಬಾಟಲ್‌ಗೆ ತುಂಬಿದರೆಂದೂ ಹೇಳಿಕೊಳ್ಳುತ್ತಿದ್ದಳು. ಇವರ ಮಕ್ಕಳು ಮದುವೆಗಳಾಗಿ ಬೇರೆ ಊರುಗಳಲ್ಲಿ ನೆಲೆಸಿದ್ದರು. ಮೊಮ್ಮಕ್ಕಳೊಂದಿಗೆ ತನ್ನ ಹೆಣ್ಣು ಮಕ್ಕಳೊಂದಿಗೆ ಕೆಲವು ದಿನಗಳು ಕಾಲ ಕಳೆಯುತ್ತಿದ್ದ ಸಂಜೀವಮ್ಮ ಕೊನೆಗೆ ತನ್ನ ಗಂಡನು ಬಾಳಿದ್ದ ಊರಿನಲ್ಲಿ, ಕಟ್ಟಿದ್ದ ಮನೆಯಲ್ಲಿ ಸಾಯಬೇಕೆಂದು ಮರಳಿ ಗಂಡನ ಊರಿಗೆ ಹೋದಳು. ಅಲ್ಲಿಯೇ ಮರಣಿಸಿದಳು. ಅವಳ ಅಪೇಕ್ಷೆಯಂತೆ ಅತ್ತೆ-ಮಾವಂದಿರ ಗುಣಿಗಳ ಜೊತೆಯಲ್ಲಿ ಹೂಳಿದರು. (ಇವರ ಸಂತತಿಗೆ ಪ್ರತ್ಯೇಕ ಸ್ಮಶಾನವನ್ನು ಮಾಡಿಕೊಂಡಿದ್ದಾರೆ.)

ಕೌಟುಂಬಿಕ ಐತಿಹ್ಯಗಳು ಮೂರು ನಾಲ್ಕು ತಲೆಮಾರುಗಳವರೆಗೆ ಜನಜನಿತವಾಗಿರುತ್ತವೆ. ಕಾಲ ಕಳೆದಂತೆ ಕೆಲವು ಮರೆಯಾಗುತ್ತವೆ. ಹೊಸವು ಸೇರ್ಪಡೆಯಾಗುತ್ತಿರುತ್ತವೆ. ನಮ್ಮ ತಾತನ: ತಾತನ ಪೂರ್ವಿಕರ ಕಾಲದಲ್ಲಿ ನಡೆದದ್ದೆಂದು ಹೇಳುತ್ತಿರುತ್ತಾರೆ. ಆದರೆ ಕೆಲವು ಶಾಶ್ವತವಾಗಿ ಉಳಿಯುತ್ತವೆ. ಉದಾ : ತಿತ್ತೆಪ್ಪನನ್ನು ಕುರಿತ ಐತಿಹ್ಯಗಳು. ಇಂಥವು ಸಂಸ್ಕೃತಿಯ ನಿರಂತರ ಬೆಳವಣಿಗೆಯಲ್ಲಿ ಹೆಗ್ಗುರುತುಗಳಾಗಿ ಉಳಿಯುತ್ತವೆ. ಒಟ್ಟಾರೆ ಇಲ್ಲಿನ ಐತಿಹ್ಯಗಳನ್ನು ಗಮನಿಸಿದಾಗ ಇವು ಸಂಬಂಧಿಸಿದ ಕುಟುಂಬದಲ್ಲಿ ನಡೆದ ಘಟನೆಗಳು. ಇವಕ್ಕೆ ಕೆಲವು ಕಾರಣಗಳಿಂದ ಮಹತ್ವವಿದೆ. ಕಾಲಕ್ರಮೇಣ ಇವು ಐತಿಹ್ಯಗಳಾಗಿವೆ-ಆಗಿರುತ್ತವೆ. ಇಂಥ ಪರಂಪರೆ ಮುಂದುವರಿಯುತ್ತಲೇ ಇರುತ್ತದೆ. ಆದ್ದರಿಂದ ಒಂದು ಕುಟುಂಬದ 'ಚರಿತ್ರೆ'ಯಾಗುತ್ತವೆ. ಇವುಗಳ ಮೂಲಕ ಸಮುದಾಯ ಒಂದರ ಸಾಂಸ್ಕೃತಿಕ ಬದುಕಿನಲ್ಲಿ ಉಂಟಾಗುವ ಪರಿವರ್ತನೆಗಳು, ಪಲ್ಲಟಗಳು ಅವುಗಳ ಹಿಂದೆ ಅಡಗಿರುವ ಸಾಮಾಜಿಕ, ಆರ್ಥಿಕ, ಧಾರ್ಮಿಕ ಆಯಾಮಗಳು ಬೆಳಕಿಗೆ ಬರುತ್ತವೆ. ಈ ಮೂಲಕ ಕುಟುಂಬ ರಚನೆ ಹಾಗೂ ಸಂತತಿಯ ಮೇಲೆ ಆಗುವ ಪರಿಣಾಮಗಳು ಮುಖ್ಯವಾಗುತ್ತವೆ.

ಈ ಅಧ್ಯಾಯದಲ್ಲಿ ಪ್ರಸ್ತಾಪಿತವಾಗಿರುವ ಐತಿಹ್ಯಗಳು ಬುಡಕಟ್ಟು ಜನಾಂಗವೊಂದರ ಮೇಲೆ ಆಗಿರುವ ವಿವಿಧ ಆಯಾಮಗಳ ಪರಿಣಾಮಗಳನ್ನು ಹೇಳುತ್ತವೆ. ಬೇಡ-ನಾಯಕ ಸಮುದಾಯದ ಎರಡು ಕುಟುಂಬಗಳ ಸ್ಥಿತ್ಯಂತರಗಳನ್ನು ನಾವು ಗಮನಿಸಬಹುದು. ಇಲ್ಲಿ ಬಹಳ ಮುಖ್ಯವಾದ ಅಂಶವೆಂದರೆ ದೊಡ್ಡನರಸಪ್ಪನ ಕುಟುಂಬವು ಉಳಿಸಿಕೊಂಡು ಬಂದ ತನ್ನ ಸಂಸ್ಕೃತಿ, ಪ್ರಭಾವಕ್ಕೆ ಒಳಗಾದ ಅನ್ಯಸಂಸ್ಕೃತಿ. ಇವರೂ ಮೂಲತಃ ಬುಡಕಟ್ಟು ಜನಾಂಗ - ಅಲೆಮಾರಿಗಳು ಇಂದಿಗೂ ವೃತ್ತಿ ಭಿನ್ನತೆಗಾಗಿ ಯಾವ ಊರಾದರೂ ಸರಿ ಸೇರಿಕೊಳ್ಳುತ್ತಾರೆ. ಆದರೆ ತಾವು ಬಿಟ್ಟು ಬಂದ ಊರಿನ ಆಸ್ತಿ (ಜಮೀನಿನ)

ವಿಷಯದಲ್ಲಿ ನಿರ್ಲಿಪ್ತರಾಗಿರುತ್ತಾರೆ. ತಾವು ಶ್ರಮವಹಿಸಿದ ಭೂಮಿಯ ಒಡೆತನ-ಫಸಲು ಇತ್ಯಾದಿಯ ಬಗ್ಗೆ ಯೋಚಿಸುವುದಿಲ್ಲ. ತಮ್ಮ ಅಣ್ಣ-ತಮ್ಮಂದಿರು ಅಥವಾ ದಾಯಾದಿಗಳು ಬೆಳೆದು ತಿನ್ನುತ್ತಿದ್ದರೆ ಪಾಲು ಕೇಳುವುದಿಲ್ಲ. ಕೆಲವೊಮ್ಮೆ ಮಾರಾಟದ ಸಂದರ್ಭಗಳಲ್ಲೂ ಅಡ್ಡಿಪಡಿಸುವುದಿಲ್ಲ. ಉದಾ : ಗುಂಡಾಪುರದ ಆಸ್ತಿ ಇದುವರೆಗೂ ಪಾಲುಗೊಂಡಿಲ್ಲ. ಅದು ವಂಶದ ಪೂರ್ವಿಕರದೆಂದು ಗೌರವಿಸುತ್ತಾರೆ. ಅಲ್ಲಿರುವ ಸಂತತಿಯ ದಾಯಾದಿಗಳು ಬೆಳೆದು ತಿನ್ನುತ್ತಾರೆ. ಕೆಲವು ಸಲ ಅವರ ಹೆಣ್ಣು ಮಕ್ಕಳ ಮದುವೆಯ ಖರ್ಚಿಗೆಂದು ಕೆಲವು ಜಮೀನುಗಳನ್ನು ಮಾರುವಾಗ ಉಳಿದ ಊರುಗಳ ದಾಯಾದಿಗಳು ಸಹಿ ಹಾಕುತ್ತಾರೆ. ಇವು ಬುಡಕಟ್ಟಿನ ಲಕ್ಷಣಗಳ ಪಳೆಯುಳಿಕೆಗಳೆನಿಸುತ್ತವೆ.

ಕೌಟುಂಬಿಕ ಐತಿಹ್ಯಗಳು ವ್ಯಕ್ತಿಐತಿಹ್ಯಗಳಾಗಿದ್ದರೆ ಅವು ನಡೆದ ವರ್ತಮಾನ ಕಾಲದ ಘಟನೆಗಳಾಗಿರುತ್ತವೆ. ನಂತರ ಸುದ್ದಿಗಳಾಗುತ್ತವೆ. ಅದೇ ವ್ಯಕ್ತಿಯ ಜೀವಿತ ಅವಧಿಯಲ್ಲಿ ಅವು ನೆನಪುಗಳೋ ಸುದ್ದಿಗಳೋ ಆಗಿ ಹರಡುತ್ತಿರುತ್ತವೆ. ಅವರ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಆತ್ಮೀಯವಲಯ, ಬಂಧು-ಬಳಗ ಹಾಗೂ ನೆರೆಹೊರೆಯವರಲ್ಲಿ ಹಬ್ಬುತ್ತಾ ಹೋದಂತೆ ನಂತರದ ಕಾಲಘಟ್ಟಗಳಲ್ಲಿ ಐತಿಹ್ಯಗಳಾಗುತ್ತವೆ. ಇಂಥವುಗಳಲ್ಲಿ ಕೆಲವು ಪ್ರಚಲಿತವಿರುವ ಕೌಟುಂಬಿಕ ಚೌಕಟ್ಟಿನಾಚೆಗೂ ಸಂಬಂಧಗಳನ್ನು ರೂಪಿಸಿಕೊಂಡಿರುತ್ತವೆ. ಒಬ್ಬ ವ್ಯಕ್ತಿ ಹಾಗೂ ಆತನ ಕುಟುಂಬದ ಮೇಲೆ ಆಗುವ ಸಮಾಜದ ವಿವಿಧ ಪರಿಣಾಮಗಳಿಗೆ ಇಂಥ ಐತಿಹ್ಯಗಳಲ್ಲಿ ಉತ್ತರವೂ ಕಂಡುಬರುತ್ತದೆ. ಉದಾ: ತಿತ್ತೆಪ್ಪನ ಹಿರಿಯಮಗ ನಾಗಪ್ಪನ ಕುಟುಂಬ ಹಾಗೂ ಆತನ ತಮ್ಮ ಸಂಜೀವಪ್ಪನ ಕುಟುಂಬಕ್ಕೆ ಸಂಬಂಧಿಸಿದಂತೆ ಕೆಲವು ಭಿನ್ನತೆಗಳು ಕಂಡುಬರುತ್ತವೆ. ಕೌಟುಂಬಿಕ ಅಂತರವೇಕೆ ಎಂಬ ಕುತೂಹಲವನ್ನು ಸಂಜೀವಪ್ಪನಿಗೆ ಸಂಬಂಧಿಸಿದ ಐತಿಹ್ಯಗಳು ತಣಿಸಬಹುದೆನಿಸುತ್ತದೆ.

೧. ತಿತ್ತೆಪ್ಪನ ಕಿರಿಯ ಮಗ ಸಂಜೀವಪ್ಪನು ಚಿಕ್ಕಂದಿನಿಂದಲೇ ಊರ ಪಟೇಲರ ಮನೆಯ ಸಲುಗೆಯಲ್ಲಿ ಬೆಳೆದವನು. ಪಟೇಲರ ಹೆಂಡತಿಯು ಕೊಡುವ ವಸ್ತು-ಧಾನ್ಯಗಳನ್ನು ಅಂಗಡಿಗೆ ಹಾಕಿ ಮಾರಾಟ ಮಾಡುತ್ತಿದ್ದ. ಬಂದ ಹಣದಲ್ಲಿ ತಾನು ಸ್ವಲ್ಪ ತೆಗೆದುಕೊಂಡು ಉಳಿದದ್ದನ್ನು ಪಟೇಲರ ಹೆಂಡತಿಗೆ ಕೊಡುತ್ತಿದ್ದ. ಇದು ಪಟೇಲರ ಮನೆಯಲ್ಲಿ ಗಂಡಸರಿಗೆ ಗೊತ್ತಾಗದೆ ಗುಟ್ಟಾಗಿ ಹೆಂಗಸರು ಮಾಡುತ್ತಿದ್ದ ಕಳ್ಳ ವ್ಯಾಪಾರ. ಆಗ ಬ್ರಿಟೀಷರ ಕಾಲ. ಊರಿನ ಪ್ರಮುಖರೂ ಸೇರಿದಂತೆ, ಕಳ್ಳತನದಲ್ಲಿ ಭಂಗಿಸೊಪ್ಪನ್ನು ಬೆಳೆದು ಮಾರಿಕೊಳ್ಳುತ್ತಿದ್ದರು. ಪಟೇಲರು ಮನೆಯಲ್ಲಿ ಸಂಗ್ರಹಿಸಿಟ್ಟಿದ್ದ ಭಂಗಿ ಸೊಪ್ಪನ್ನು ಸಂಜೀವಪ್ಪನ ಮೂಲಕ ಆ ಮನೆಯ ಹೆಂಗಸರು ಸ್ವಲ್ಪ ಸ್ವಲ್ಪ ಅಂಗಡಿಗೆ ಕಳುಹಿಸುತ್ತಿದ್ದರು.

ಒಮ್ಮೆ ನಿದ್ರಿಸುತ್ತಿದ್ದ ಪಟೇಲರಿಗೆ ಎಚ್ಚರವಾಯ್ತು. ಯಾರೋ ಮನೆಯ ಮುಂದೆ ನಿಂತಿದ್ದಾರೆನಿಸಿತು. ನಿದ್ದೆ ಕಣ್ಣಲ್ಲಿ ಯಾರದು ಎಂದರು. ಅದು ತನ್ನ ಹೆಂಡತಿಯೆಂದು ತಿಳಿಯಿತು. ಮತ್ತೆ ಯಾರದು ಎಂದ ಅವನು ಸಂಜೀವಪ್ಪನೆಂದು ಆಯ್ತು. ನಿಮ್ಮ ಮುಂದೆ ಏನದು! ಏನು ಮಾಡುತ್ತೀದ್ದಿರಿ? ಎಂದು ಕೇಳಿದ. ಅದಕ್ಕೆ ಸಂಜೀವಪ್ಪನು "ಸ್ವಾಮೀ, ಅಗಸರ ಕುರುಡಪ್ಪನ ಕುಂಟು ಕತ್ತೆಗೆ ಬೆನ್ನು ಮುರಿದಿದೆ. ಅದಕ್ಕೆ ಬೀದಿಯಲ್ಲಿ ಮಲಗಿದೆ. ನಾನು ಅಮ್ಮಯ್ಯ ಸೇರಿ ಅದನ್ನು ಮೇಲೆತ್ತುತ್ತಿದ್ದೇವೆ" ಎಂದ. ಆದರೆ ಪಟೇಲರಿಗೆ ಇವರ ಮುಂದೆ ಇರುವುದು ಕತ್ತೆಯಲ್ಲ. ಭಂಗಿ ಸೊಪ್ಪಿನ ಮೂಟೆಯೆಂದು ಗೊತ್ತು. ಮನೆಯಲ್ಲಿ ಹೆಂಗಸರು ತಮ್ಮ ಕೈ ಕರ್ಚಿಗೆಂದು ಕಾಳು-ದವಸ-ಧಾನ್ಯಗಳನ್ನು ಮಾರಿಕೊಳ್ಳುವುದು ಆತನಿಗೆ ಗೊತ್ತು. ಗೊತ್ತಿಲ್ಲದವನಂತೆ ವರ್ತಿಸುತ್ತಿದ್ದನಷ್ಟೇ. ಆದ್ದರಿಂದ ಆತ "ಅಲ್ರೋ ಸಂಜೀವ ಆ ಕುಂಟು ಕತ್ತೆ ನಿಧಾನಕ್ಕೆ ಎದ್ದು ಹೋಗಲಿ, ನಮ್ಮ ಮನೆಯ ದೊಡ್ಡ ಕತ್ತೆಯನ್ನು ಬಂದು ಮಲಗುವಂತೆ ಹೇಳು" ಅಂದ.

೨. ಸಂಜೀವಪ್ಪ ಹಾಗೂ ಆತನ ಸೋದರಮಾವ ಪಟೇಲರ ಭಂಗಿಸೊಪ್ಪನ್ನು ಮಾರಾಟ ಮಾಡುತ್ತಿರುವಾಗ ಪೋಲಿಸರಿಗೆ ಸಿಕ್ಕು ಬಿದ್ದು ಜೈಲಿಗೆ ಸೇರಿದರು. ಇತ್ತ ಸಂಜೀವಪ್ಪನ ಹೆಂಡತಿ (ಬಾಲ್ಯ ವಿವಾಹ) ಋತುಮತಿಯಾಗಿದ್ದಳು. ಪ್ರಸ್ತದ ಶಾಸ್ತ್ರಕ್ಕೆಂದು ಅಧಿಕಾರಿಗಳಲ್ಲಿ ಬೇಡಿಕೊಂಡು ಈತನನ್ನು ಬಿಡುಗಡೆಗೊಳಿಸಿ ಕರೆ ತರಲು ತಯಾರಿ ನಡೆಸಿದರು. ಅದರಂತೆ ಜೈಲಿನ ಅಧಿಕಾರಿಯು ಸಂಜೀವಪ್ಪನಿಗೆ ಬುದ್ಧಿ ಹೇಳಿದ. ಮುಂದೆಂದೂ ನೀನು ಕಳ್ಳತನ/ವ್ಯಾಪಾರ ಮಾಡಬಾರದು ತಿಳಿಯಿತಾ! ಎಂದ. ತಕ್ಷಣ ಸಂಜೀವಪ್ಪ ಎಸ್ ಆಲ್‌ರೈಟ್ ಎಂದು ಬಿಟ್ಟ. ಅಧಿಕಾರಿಗೆ ಸಿಟ್ಟು ಬಂದು ಬಿಡುಗಡೆಯನ್ನು ವಜಾಗೊಳಿಸಿದ ಮತ್ತೆ ಸಂಜೀವಪ್ಪ ಒಳಕ್ಕೆ ಹೋದ. ಕೆಲವು ವರ್ಷಗಳವರೆಗೆ ಜೈಲು ಅನುಭವಿಸಿ ಹೊರ ಬಂದ.

೩. ಸಂಜೀವಪ್ಪ ಆತನ ಮಾವ ಮತ್ತಿತರು ಪಟೇಲರ ಪರವಾಗಿ ಕಳ್ಳಭಂಗಿ ಮಾರಾಟ ಮಾಡುತ್ತಿದ್ದಾಗ ಬ್ರಿಟೀಷರ ಪರವಾಗಿ ಇವರನ್ನು ಹಿಡಿಯಲು ಬರುತ್ತಿದ್ದ ಕೆಲವರನ್ನು ದಾರಿಯಲ್ಲೇ ಕೊಂದು ಬಿಡುತ್ತಿದ್ದರಂತೆ. ಆತ್ಮರಕ್ಷಣೆಗೆಂದೇ ಇವರು ಹರಿತವಾದ ಆಯುಧಗಳನ್ನು ಇಟ್ಟಿರುತ್ತಿದ್ದರು. ಇವರನ್ನು ಹಿಡಿಯಲು ಬರುವವರು ಸರ್ಕಾರದ ಪರವಾಗಿ ಕೆಲಸ ಮಾಡುವ ಸ್ಥಳೀಯರೇ ಆಗಿರುತ್ತಿದ್ದರು. ಈ ಎರಡು ಗುಂಪುಗಳಲ್ಲಿ ಯಾರಿಗೆ ಸಾವು-ನೋವುಗಳಾದರೂ ಸರ್ಕಾರ ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಕೋಲಾರ ಜಿಲ್ಲೆಯ ಪ್ರದೇಶವು, ಮೈಸೂರ ಅರಸರು ಬ್ರಿಟೀಷರ ಅಧೀನದಲ್ಲಿ ರಾಜ್ಯಭಾರ ನಡೆಸುತ್ತಿದ್ದ ಆಳ್ವಿಕೆಗೆ ಒಳಪಟ್ಟಿತ್ತು. ಇಲ್ಲಿ ಯಾರ ನೇರ ಆಡಳಿತವೂ ಇಲ್ಲದೆ ಹುಚ್ಚರ ಸಂತೆಯಂತೆ ಆಗಿತ್ತು.

ಯಾವುದೇ ಕಾರಣಕ್ಕಾಗಿ ಅಧಿಕಾರಿಗಳಿಗೆ ಸಿಕ್ಕಿಬಿದ್ದರೂ ಸಂಜೀವಪ್ಪನ ಗುಂಪಿನವರು ನಿಜವಾದ ಹೆಸರುಗಳನ್ನು ಹೇಳುತ್ತಿರಲಿಲ್ಲವಂತೆ. ದೇವರನಾಮಗಳನ್ನು (ಹೆಸರುಗಳನ್ನು) ಜೋರಾಗಿ ಹೇಳುತ್ತಿದ್ದರು. ಅವು ಇತರರ ಸಂಕೇತನಾಮಗಳು. ಅವರು ತಕ್ಷಣ ತಪ್ಪಿಸಿಕೊಂಡು ಪರಾರಿಯಾಗುತ್ತಿದ್ದರು. ಹಾಗೂ ಈ ವ್ಯಕ್ತಿಗೆ ಬಂದ ಆಪತ್ತನ್ನು ಅವರು ಗ್ರಹಿಸುತ್ತಿದ್ದರು. ಉದಾ: ರಾಮಾ ಕೃಷ್ಣ ನಾನು ಸಿಕ್ಕಿ ಬಿದ್ದೆನಲ್ಲಪ್ಪೋ ಎಂದು ಒದರುವಾಗ ಉಳಿದವರಿಗೆ ಸಂಕೇತ ಭಾಷೆಯಾಗುತ್ತಿತ್ತು.

ಹೀಗೆ ಸದಾ ಪಟೇಲರ ಹಾಗೂ ಜಮೀನ್ದಾರರ ಪರವಾಗಿ ಕಳ್ಳ ವ್ಯಾಪಾರ ನಡೆಸುತ್ತಿದ್ದ ಈ ಗುಂಪು ಸಿಕ್ಕಿ ಬಿದ್ದರೆ ವರ್ಷಗಳ ತನಕ ಜೈಲು ಅನುಭವಿಸುವುದೇ ಆಯಿತು. ಸಂಜೀವಪ್ಪ ಬಿಡುಗಡೆಯಾಗುವ ವೇಳೆಗೆ ಅಣ್ಣ ನಾಗಪ್ಪ ಶಿಷ್ಟಸಂಸ್ಕೃತಿಯ ಅನುಕರಣೆಯಲ್ಲಿದ್ದ. ಸಂಜೀವಪ್ಪನೋ ಅಣ್ಣನಿಗೆ ವಿರುದ್ಧವಾಗಿ ನಡೆದುಕೊಳ್ಳುವುದು. ಅಂದರೆ ಅಣ್ಣನು ನಿಯಮ-ನಿಷ್ಠೆ ಅಂದರೆ ಈತನು ಮುಖ ತೊಳೆಯದೆ-ತಿಕ ತೊಳೆಯದೆ ತಿನ್ನುವುದು. ಸ್ನಾನ ಮಾಡದಿರುವುದು, ಗ್ರಹಣದ ದಿನ ಆಚೀಚೆ ಓಡಾಡುವುದು, ಗ್ರಹಣ ಬಡಿದ ಸೂರ್ಯನಿಗೆ ಊಟವನ್ನು ತೋರಿಸಿ ತೋರಿಸಿ ತಿನ್ನುವುದು ಹೀಗೆ ಮಾಡುತ್ತಿದ್ದ. ಅಣ್ಣ-ತಮ್ಮ ಬೇರೆಯಾದರು. ಸಮಪಾಲು ಪಡೆದರೂ ಅತಿ ಬಡತನದ ಬವಣೆಯ ಬಡತನಕ್ಕೆ ಸಿಕ್ಕಿದ್ದು ಸಂಜೀವಪ್ಪನ ಕುಟುಂಬ. ಹೆಂಡತಿ-ಮಕ್ಕಳು ಕೂಲಿ ನಾಲಿ ಮಾಡುತ್ತಿದ್ದರು. ಈತ ಮನೆಯಲ್ಲಿರುವ ಪದಾರ್ಥ ದವಸ ಧಾನ್ಯಗಳನ್ನು ಮಾರಿಕೊಳ್ಳುತ್ತಿದ್ದ. ರೇಗಿದ ಹೆಂಡತಿಯನ್ನು ಹೊಡೆಯುವಂತೆ ಅಣ್ಣ ನಾಗಪ್ಪನಿಗೆ ಕೂಗಿ ಹೇಳುತ್ತಿದ್ದ. ಆತ ಬಂದು ಹೊಡದರೆ "ಇನ್ನೊಂದು-ಮತ್ತೊಂದು ಹೊಡಿ" ಎನ್ನುತ್ತಿದ್ದ.

ಈತನ ತಂಗಿಯರಿಗೆ ಹಿರಿಯ ಅಣ್ಣ ನಾಗಪ್ಪನಿಗಿಂತ ಈತನೆಂದರೆ ಹೆಚ್ಚು ಪ್ರೀತಿ. ಕೈಲಾಗದವನು-ಜೈಲಿನಲ್ಲಿದ್ದವನು ಎಂಬ ಕರುಣೆಗೆ ಸದಾ ಪಾತ್ರನಾಗಿರುತ್ತಿದ್ದ. ವಯಸ್ಸಿಗೆ ಬಂದ ಮಗ ಮತ್ತು ಮಗಳು-ಇಬ್ಬರಿಗೂ ತಮ್ಮ ಮಕ್ಕಳಲ್ಲಿಯೇ ಮದುವೆ ಮಾಡಿಕೊಂಡರು. ಚಿಕ್ಕಮಗಳು ರೆಡ್ಡಿಗಳ ಕಬ್ಬಿನ ತೋಟದಲ್ಲಿ ಕಬ್ಬು ಹೊರುವ ಕೆಲಸ ಮಾಡುತ್ತಿದ್ದಾಗ ಯಾರೋ ಮಾನಭಂಗದ ಯತ್ನ ಮಾಡಿದರು. ಪ್ರತಿಭಟಿಸಿದ ಈಕೆಯನ್ನು ಕಬ್ಬಿನ ಗದ್ದೆಯಲ್ಲೇ ಕೊಂದಿದ್ದರು. ಪೋಲಿಸರು ಒಬ್ಬನನ್ನು ಅರೆಸ್ಟ್ ಮಾಡಿ ಬಂಧಿಸಿದ್ದರು. ಕೆಲವು ವರ್ಷಗಳಲ್ಲೇ ಆತ ಬಿಡುಗಡೆಗೊಂಡ. ಆದರೂ ಈ ಕುಟುಂಬಸ್ಥರು ಭಯಸ್ಥರಾದ್ದರಿಂದ ಸುಮ್ಮನಾದರು. ಲಕ್ಷ್ಮೀನರಸಪ್ಪನು ಕೋರ್ಟ್‌ಗೆ ಹೋದರೆ ತಮ್ಮ ಜಮೀನು ಮಾರಬೇಕಾಗುತ್ತದೆಯೆಂದು ಸುಮ್ಮನಾದರು. ಮಡಿದ ಮಗಳ ಚಿಂತೆಯಲ್ಲೇ ಸಂಜಿವಪ್ಪ ಕೊನೆಯುಸಿರೆಳೆದ. ಇದರಿಂದ ಕಾಲೇಜ್ ಓದುತ್ತಿದ್ದ ಹಿರಿಯ ಮಗನ ವಿದ್ಯಾಭ್ಯಾಸಕ್ಕೆ ತೊಂದರೆಯಾಯಿತು. ಟೈಪಿಂಗ್ ಮತ್ತು ಷಾರ್ಟ್‌ಹ್ಯಾಂಡ್‌ಗಳಾಗಿದ್ದರಿಂದ ಕ್ಲರ್ಕ್ ಕೆಲಸಕ್ಕೆ ಸೇರಿದ ಅವನು ವ್ಯವಸಾಯವನ್ನು ವೃದ್ಧಿಸಿದ. ಹಳ್ಳಿಯಲ್ಲಿ ತಮ್ಮ ಗುಡಿಸಲು ಮನೆಯನ್ನು ಕೆಡವಿ ಆರ್.ಸಿ.ಸಿ ಮನೆ ಕಟ್ಟಿಸಿದ.

ಇಲ್ಲಿ ಸಂಜೀವಪ್ಪನ ಬದುಕಿನ ಕಾಲಘಟ್ಟಗಳಲ್ಲಿ ಸಂಭವಿಸಿದ ಘಟನೆಗಳು ನಾಗಪ್ಪ-ಸಂಜೀವಪ್ಪನಿಗೆ ಸಂಬಂಧಿಸಿದ ಕೌಟುಂಬಿಕ ವಲಯದಲ್ಲಿ ಐತಿಹ್ಯಗಳಾಗಿ ಮಾರ್ಪಟ್ಟಿವೆ. ಆದರೆ ನಾಗಪ್ಪನ ಮಕ್ಕಳು ತಮ್ಮ ಜೀವನದಲ್ಲಿ ನಡೆದಿವೆಯೆಂದು ಹೇಳುವ ಘಟನೆಗಳಂತೆ ಸಂಜೀವಪ್ಪನು ಬ್ರಿಟೀಷರು ಇನ್ನೇನು ನಿರ್ಗಮಿಸಬೇಕೆನ್ನುವ ಕಾಲದಲ್ಲಿ ಊರಿನ ಜಮೀನ್ದಾರರು ಮತ್ತು ಪಟೇಲರ ಕಳ್ಳಭಂಗಿಯನ್ನು ಮಾರಾಟ ಮಾಡಲು ಹೋಗಿ ಜೈಲು ಅನುಭವಿಸಿದ್ದು, ಅವರನ್ನು ಉಳಿಸಿಕೊಳ್ಳಲು ಕೊಲೆ-ಪರಾರಿ ಇಂಥ ಕೆಲಸಗಳಿಗೆ ಸಹಕರಿಸುತ್ತಿದ್ದುದು ಇತ್ಯಾದಿ ವಿಷಯಗಳು ಗಮನಕ್ಕೆ ಬರುತ್ತವೆ.

ಸ್ಥಿತಿವಂತರು ಸ್ವತಂತ್ರ ಪೂರ್ವ ಹಾಗೂ ಸ್ವತಂತ್ರ್ಯ ನಂತರದ ಕಾಲಘಟ್ಟಗಳಲ್ಲಿಯೂ ತಮ್ಮ ಸ್ವಾರ್ಥಕ್ಕಾಗಿ ಮುಗ್ಧರು-ಅಮಾಯಕರು ಎನಿಸಿಕೊಂಡವರನ್ನು ಬಳಸಿಕೊಂಡು ಲೋಲುಪ ಜೀವನ ನಡೆಸುತ್ತಾರೆ. ಅವರ ತೆವಲುಗಳಿಗೆ ಸಂಜೀವಪ್ಪನಂಥವರು ಬಲಿಯಾಗುವುದಲ್ಲದೆ, ಆ ಪ್ರಭಾವದ ಛಾಯೆ ಇದೇ ಕುಟುಂಬದ ಮೇಲೆ ಆಕ್ರಮಿಸಿಕೊಳ್ಳುತ್ತದೆ ಎಂಬುದನ್ನು ಗಮನಿಸಬಹುದು. ಇವರಲ್ಲಿಯೂ ಕೂಲಿ ಮಾಡಲು ಹೋಗಿ ಕೊಲೆಯಾದ (ಸುಮಾರು ೧೯೮೩) ಸಂಜೀವಪ್ಪನ ಮಗಳು ನರಸಿ (ನಾಗಪ್ಪನು ಇವಳಿಗೆ ಸರಸ್ವತಿ ಎಂದು ನಾಮಕರಣ ಮಾಡಿದ್ದ. ಸಣ್ಣ ಗುಬ್ಬಿಯಂತೆ ಇದ್ದಾಳೆಂದು 'ಚಿನುಕುಗುವ್ವ' ಎಂದು ಕರೆಯುತ್ತಿದ್ದರು.) ಇವರ ಪಾಲಿಗೆ ದೇವತೆಯಾಗಿದ್ದಾಳೆ. (ತೆಲುಗಿನಲ್ಲಿ ಚಿನುಕು ಎಂದರೆ ಮಳೆಹನಿ ಆದ್ದರಿಂದ ಚಿನುಗುವ್ವ ಎಂದರೆ ಮಳೆಹನಿಯ ಗುಬ್ಬಿ ಅಂದರೆ ಮಳೆಹನಿಯಷ್ಟು ಸಣ್ಣಪಕ್ಷಿ) ಹಬ್ಬ-ಹುಣ್ಣಿಮೆಗಳಲ್ಲಿ ತಾಯಿಯು ಅವಳ ಪಾಲಿನ ಎಡೆಯನ್ನು ಮಾಳಿಗೆಯ ಮೇಲೆ ಹಾಕಿಬರುತ್ತಾಳೆ. ಯುಗಾದಿಯ ದಿನ ಇವಳನ್ನು ಹೂಳಿರುವ ಗುಣಿಗೆ ಪೂಜೆ ಮಾಡುತ್ತಾರೆ. ಸಂಜೀವಪ್ಪನ ಕೋರಿಕೆಯ ಮೇರೆಗೆ ಸತ್ತ ನಂತರ (ಕೋಲಾರ ಜಿಲ್ಲೆಯಲ್ಲಿ ಯುಗಾದಿಯ ದಿನ ಸತ್ತವರ ಗುಣಿಗಳಿಗೆ ಪೂಜೆಮಾಡಿ ಸ್ಮಶಾನದಲ್ಲಿ ಗುಣಿಯ ಮೇಲೆ ಎಡೆ ಹಾಕುತ್ತಾರೆ.) ಆತನನ್ನು ಮಗಳ ಗುಣಿಯ ಪಕ್ಕದಲ್ಲಿ ಹೂಳಿದ್ದಾರೆ. ತಂದೆ-ಮಗಳು ಸ್ಮಶಾನದಲ್ಲಿ ಒಟ್ಟಾಗಿದ್ದಾರೆಂದು ಅವರ ನಂಬಿಕೆ. ಹೀಗೆ ಕೌಟುಂಬಿಕ ಐತಿಹ್ಯಗಳಲ್ಲಿ ವ್ಯಕ್ತಿ ಸಂಬಂಧಿ ಐತಿಹ್ಯಗಳು ಮೂರು-ನಾಲ್ಕು ತಲೆಮಾರುಗಳವರೆಗೆ ಉಳಿಯುತ್ತವೆ. ಅವುಗಳಲ್ಲಿ ಗಟ್ಟಿಗೊಂಡಂಥವು ಪರಂಪರೆಯಲ್ಲಿ ಮುಂದುವರಿಯುತ್ತಿರುತ್ತವೆ. ಇವು ಕುಟುಂಬದ ಚರಿತ್ರೆಯಷ್ಟೇ ಅಲ್ಲದೆ ಸಾಂಸ್ಕೃತಿಕ ಆಯಾಮಗಳನ್ನು ಹೇಳುತ್ತವೆ.

## ಗ್ರಾಮದೇವತೆಗಳ ಐತಿಹ್ಯಗಳು

ದೈನಂದಿನ ಬದುಕಿನ ನಿತ್ಯಜೀವನದಲ್ಲಿ ಮನಃಶಾಂತಿ ಪಡೆಯಲು ಮಾನವಾತೀತ ಶಕ್ತಿಗೆ ಶರಣಾಗುವುದು ಮನುಷ್ಯನ ಲಕ್ಷಣ. ನಿರಾಕಾರವಾದ ಪ್ರಾಕೃತಿಕ ಶಕ್ತಿಗೆ ಸಾಕಾರ ರೂಪವನ್ನಿಟ್ಟು ದೇವರು

ಎಂದು ಪೂಜಿಸುವುದು ಮನುಷ್ಯನ ಆಚರಣೆಗಳ ಅವಿಭಾಜ್ಯ ಅಂಗ. ಈ ಭಾವನೆಗಳ ಸಂಘಟನೆಯ ದ್ಯೋತಕವೇ ದೇವಾಲಯಗಳು. ಮನುಷ್ಯನ ದೈನಂದಿನ ಬದುಕಿಗೆ ಅವಶ್ಯಕ ಅಥವಾ ಪೂರಕವೆನಿಸಿದ ವಸ್ತು ಸಂಗತಿಗಳ ಬಗ್ಗೆ ಕೃತಜ್ಞತೆಯಿರುವುದು ದೈವದ ಕಲ್ಪನೆಗೆ ಕಾರಣವಾಗುತ್ತದೆ. ಅನುಭವಕ್ಕೆ ಗ್ರಾಹ್ಯವಾದ ಅನೇಕ ವಸ್ತು ಸಂಗತಿಗಳು ನಂಬಿಕೆಗೆ ಮೂಲದ್ರವ್ಯವಾಗಿ ಮನುಷ್ಯನಲ್ಲಿ ಅಚಲನಿಷ್ಠೆ ಮೂಡಲು ಕಾರಣವಾಗುತ್ತವೆ. ಹೀಗೆ ಪರಿವರ್ತನೆಯಾದ ವಸ್ತು ಅಥವಾ ವಿಶೇಷವು ದೈವೀಕರಣಗೊಂಡು ಆರಾಧನೆಯ ಪರಂಪರೆಗೆ ಸೇರಿಕೊಳ್ಳುತ್ತದೆ.

ದೈವಗಳು ಹುಟ್ಟಿಕೊಂಡಂತೆ ಬೆಳವಣಿಗೆಯನ್ನು ಪಡೆದಂತೆ ನಶಿಸಿಯೂ ಹೋಗುತ್ತವೆ. ಇದಕ್ಕೆ ಸಂದರ್ಭ-ಸನ್ನಿವೇಶಗಳ ಮಾರ್ಪಾಡುಗಳೇ ಕಾರಣ. ಪ್ಲೇಗು, ಸಿಡುಬು, ಕಾಲರಾ ಇತ್ಯಾದಿ ರೋಗಗಳಿದ್ದ ಸಂದರ್ಭದ ಕಾಲಘಟ್ಟಗಳಲ್ಲಿ ಸಂಬಂಧಿಸಿದ ರೋಗದ ಹೆಸರನ್ನೇ ಹೊಂದಿ ಅದನ್ನು ನಾಶಮಾಡುವ ದೇವತೆಗಳನ್ನು ಜನ ಸೃಷ್ಟಿ ಮಾಡಿಕೊಂಡಿದ್ದರು. ಈಗ ಆ ರೋಗಗಳೇ ಇಲ್ಲದಿರುವಾಗ ಸಂಬಂಧಪಟ್ಟ ದೈವಗಳು ಮರೆಯಾಗುತ್ತಾರೆ. ಆದ್ದರಿಂದ ಪ್ರಾಚೀನ ಗ್ರಂಥಗಳಲ್ಲಿ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಹೆಸರಿನ ದೈವಗಳು ಹಲವು ಈಗ ನಮಗೆ ಲಭಿಸುವುದಿಲ್ಲ. ಕೆಲವು ದೈವಗಳ ನಾಮಗಳಲ್ಲಿ (ಹೆಸರುಗಳಲ್ಲಿ) ಪಲ್ಲಟವೇರ್ಪಟ್ಟಿರುವುದು ಕಂಡುಬರುತ್ತದೆ. ಕಲಿದೇವ-ಕಲ್ಲೇಶ್ವರವಾಗಿ ಬದಲಾಗಿರುತ್ತದೆ. ಸತ್ತಮ್ಮ>ಸತ್ಯಮ್ಮನಾಗಿರುತ್ತಾಳೆ. ಜನಪದ ದೈವಗಳಲ್ಲಿ ಸತಿಹೋದವರು, ತ್ಯಾಗ-ಬಲಿದಾನ ಮಾಡಿದವರು ಹೀಗೆ ವ್ಯಕ್ತಿ ದೈವಗಳು ಸೇರಿಕೊಂಡಿವೆ. ಮಾಸ್ತ್ಯಮ್ಮನ ಗುಡಿಗಳು ಇದಕ್ಕೊಂದು ಉದಾಹಣೆ

**ರೋಗರುಜಿನಗಳ ಸಂರಕ್ಷಕ ದೇವತೆಗಳು :** ಸಸ್ಯ-ಪ್ರಾಣಿ ಪಕ್ಷಿಸಂಕುಲಗಳನ್ನು ರಕ್ಷಿಸುವ ದೇವತೆಗಳ ಹೆಸರಿನಲ್ಲಿ ತಕ್ಕ ಜನಪದ ವೈದ್ಯ ಸಲ್ಲುತ್ತಿತ್ತು. ಗಂಡು ದೈವಗಳು ಹೆಣ್ಣು ದೈವಗಳಷ್ಟು ಜನಪ್ರಿಯತೆಯನ್ನು ಪಡೆದಿರುವುದಿಲ್ಲ. ಸಮೀಪದ ಯಾವುದಾದರೂ ಹೆಣ್ಣು ದೈವದ ಅಣ್ಣನಾಗಿರುತ್ತದೆ. ಭಕ್ತರು ತಮ್ಮನ್ನು ತಾವು ಹಿಂಸಿಸಿಕೊಂಡು ಮಾಡುವ ಕಠಿಣ ಆಚರಣೆಗಳು ಬಹುಪಾಲು ಗಂಡು ದೈವಗಳಿಗೆ ಸಂಬಂಧಿಸಿದ್ದಾಗಿರುತ್ತವೆ. ಗಂಡನಿಲ್ಲದ ಜನಪದ ದೇವತೆಗಳಿರಬಹುದೇ ಹೊರತು ಸೋದರನಿಲ್ಲದ ಜನಪದ ದೇವತೆ ಇಲ್ಲ. ಏಕೆಂದರೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಸೋದರ ಸಂಬಂಧಗಳು ಹೆಚ್ಚಾಗಿರುತ್ತವೆ. ಎಲ್ಲಮ್ಮನ ಕಥೆಯಲ್ಲಿ ಯಲ್ಲಮ್ಮ ಮೇಲ್ಜಾತಿಯ ಗಂಡನ ಆಜ್ಞೆಗೆ ಅನುಸಾರವಾಗಿ ಮಗನಿಂದ ಹತಳಾಗಿ ರುಂಡರೂಪದಲ್ಲಿಯೇ ಜೀವಸೆಲೆಯಾಗಿ ಉಳಿದುಕೊಳ್ಳುತ್ತಾಳೆ. ಮಾರೆಮ್ಮನ ಕಥೆಯಲ್ಲಿ ಮೇಲ್ಜಾತಿಯ ಮಾರೆಮ್ಮನಿಂದ ಹತನಾದ ಅವಳ ಗಂಡ ಕೋಣನ ತಲೆಯಾಗಿ ಕತ್ತರಿಸಲ್ಪಟ್ಟು ಶಿಕ್ಷೆ ಅನುಭವಿಸುತ್ತಾನೆ. ದಲಿತ ಆಸಾದಿಯಾಗಿ ಅವನ ಸಂತತಿಯ ವಾರಸುದಾರ ಪ್ರತಿಭಟಿಸುತ್ತಾನೆ. ಇತ್ಯಾದಿ ಅಂಶಗಳು ಈ ಐತಿಹ್ಯಗಳಿಂದ ಸ್ಪಷ್ಟವಾಗುತ್ತವೆ.

ಜನಪದ ದೈವದೇವತೆಗಳು ಜಾತ್ಯಾತೀತ ಹಾಗೂ ಭಾಷಾತೀತವಾಗಿರುತ್ತವೆ. ಅಲ್ಲಲ್ಲಿನ ಪ್ರಾದೇಶಿಕ ಭಾಷೆಯೇ ದೈವದ ಭಾಷೆ ಅದು ಭಕ್ತರಾಡುವ ಭಾಷೆಯಾಗುತ್ತದೆ. ಜನಪದ ಬದುಕಿನಂತೆಯೇ ಅವೂ ಸಹ ಪ್ರದೇಶ, ಸಮೂಹ, ಆಚಾರ-ವಿಚಾರ ಭಾಷೆ ಇತ್ಯಾದಿಗಳಲ್ಲಿ ಸಾಮಾನ್ಯ ಅಂಶಗಳನ್ನೇ ಹೊಂದಿರುತ್ತವೆ. ಈ ದೈವಗಳು ಮನುಷ್ಯರಿಂದ ಸಹಾಯ ಪಡೆದು ಮತ್ತೆ ಅದೇ ಸಮುದಾಯದ ಅಥವಾ ಪ್ರದೇಶದ ಜನರನ್ನು ರಕ್ಷಿಸಲು ಸಮರ್ಥರಾಗಿರುವ ಸಂಗತಿಗಳು ಅನೇಕ ಐತಿಹ್ಯಗಳಲ್ಲಿ ಸ್ಪಷ್ಟವಾಗುತ್ತವೆ. ಅಲೆಮಾರಿ ವರ್ಗಗಳು ಅಥವಾ ವಲಸೆಗಾರ ಕುಟುಂಬಗಳು ಹೊತ್ತು ತಂದ ನೆನಪುಗಳಾಗಿ ಅವರು ಬಂದು ನೆಲೆಸಿದ ಸ್ಥಳಗಳಲ್ಲಿ ಗ್ರಾಮದ ದೈವ-ದೇವತೆಗಳು ನೆಲೆಸಿ ಮತ್ತೆ ಅವರನ್ನು ರಕ್ಷಿಸುವ ಹೊಣೆ ಹೊತ್ತಿರುತ್ತಾರೆ. ಈ ಕಾರಣಗಳಿಂದ ಕುಲದೈವ ಅಥವಾ ಕುಲದೇವತೆಗಳಾಗಿರುತ್ತಾರೆ. ಅಲೆಮಾರಿಗಳೊಂದಿಗೆ ಪ್ರಯಾಣ ಬೆಳೆಸುವಾಗ ಪ್ರಾಕೃತಿಕ ರೂಪಗಳಾದ ಕಲ್ಲು-ಗುಂಡುಗಳ ರೂಪದಲ್ಲಿ ಗುಂಪಿನ ಕಂಪಳದಲ್ಲಿ ಸೇರಿಕೊಂಡ ನಿದರ್ಶನಗಳು ಇವೆ.

ದುಷ್ಟಶಕ್ತಿಗಳ ದಂಡಿನೊಂದಿಗೆ ಯುದ್ಧದಲ್ಲಿ ಜಯಸಿ ಊರಿಗೆ ಹಿಂದಿರುಗುತ್ತಿದ್ದಾಗ ಗ್ರಾಮದೇತೆಯನ್ನು ಅವಳ ಅಣ್ಣನಾದ ಹನುಮಂತ ಇಲ್ಲವೇ ಶಿವ ಇತ್ಯಾದಿ ದೈವಗಳು ಪರಪಾಟಾಗಿ ದುಷ್ಟಶಕ್ತಿಯೆಂದು ಪರಿಗಣಿಸಿ ದೂರದಿಂದ ಕತ್ತಿ ಅಥವಾ ಕೊಡಲಿಯಂತ ಆಯುಧವನ್ನು ಬೀಸಿರುತ್ತಾರೆ. ಇದರಿಂದ ಕಾಲು ಮುರಿದು ಪರಿತಪಿಸುತ್ತಾ ಹಲುಬುತ್ತಿರುವ ದೇವತೆಗೆ ಮನುಷ್ಯರು ಆಶ್ರಯ ನೀಡಿದರೆಂಬ ವಿವರಗಳು ಐತಿಹ್ಯಗಳಲ್ಲಿ ಲಭ್ಯವಾಗುತ್ತವೆ. ಇದರ ಸತ್ಯಅಸತ್ಯಗಳು ಒಂದೆಡೆಯಾದರೆ ಮತ್ತೊಂದೆಡೆ ದೈವತ್ವ ಮತ್ತು ಮಾನವತ್ವಗಳ ಸರಿದೂಗುವಿಕೆ ಮುಖ್ಯವಾಗುತ್ತದೆ.

**ಗ್ರಾಮದೇವತೆಗಳ ಆರಾಧನಾ ಕುಣಿತಗಳು ಮತ್ತು ಐತಿಹ್ಯಗಳು :** ಗ್ರಾಮೀಣ ಪ್ರದೇಶಗಳಲ್ಲಿ ಸ್ತ್ರೀ ದೇವತೆಗಳನ್ನು ಆರಾಧಿಸುವ ಮೂಲಕ ವಿಶಿಷ್ಟ ಜನಪದ ಕಲೆಗಳು ಹುಟ್ಟಿಬಂದವು. ಈ ಹಿನ್ನೆಲೆಯಲ್ಲಿ ಸೌಮ್ಯ ಮತ್ತು ಕ್ರೂರ ದೇವತೆಗಳನ್ನು ಸಮಾಧಾನಿಸುವ, ತೃಪ್ತಿಪಡಿಸುವ ಆರಾಧಿಸುವ ಜನಪದ ಕಲಾಪ್ರಕಾರಗಳಲ್ಲಿ ಕುಣಿಯುತ್ತಾ ಮಾರಿಯಲ್ಲಿ ಐಕ್ಯವಾಗಿ ಪೂಜಿಸುವ ಆಚರಣೆಗಳಾಗುತ್ತವೆ. ಜಿಲ್ಲೆಯ ಕೆಲವು ದೇವತೆಗಳ ನೆಲೆಗಳು ಆಂಧ್ರದಲ್ಲಿದ್ದು ಇಲ್ಲಿನವರು ಅದಕ್ಕೆ ಒಕ್ಕಲು ಆಗುವ (ಭಕ್ತರಾಗುವ) ಬೆಳವಣಿಗೆ ದೈವಕ್ಕೆ ಸಿಕ್ಕುವ ಪ್ರಚಾರ ಆಗುತ್ತದೆ. ಆಂಧ್ರದ ಮದನಪಲ್ಲಿಗೆ ಸಮೀಪದ ವ್ಯಾಪ್ತಿಯಲ್ಲಿ ಪ್ರಚಲಿತವಿರುವ ಜನಪದ ದೇವತೆ ರೆಡ್ಡಮ್ಮ; ಸಂತಾನಾಪೇಕ್ಷೆಯಿಂದ ಭಕ್ತಾಧಿಗಳು ಈ ದೈವದ ಆಚರಣೆಯನ್ನು ಅನುಸರಿಸುತ್ತಾರೆ. ಉಂಟಾದ ಸಂತಾನಕ್ಕೆ ಹೆಸರಿಡುವಾಗ ತಮ್ಮ ತಮ್ಮ ಕುಲಾಚಾರದ ಹೆಸರಿನೊಂದಿಗೆ ಈ ದೇವತೆಯ ಹೆಸರನ್ನು ಸೇರಿಸುತ್ತಾರೆ. ಜಿಲ್ಲೆಯ ಜನತೆ ಜಾತಿ ಧರ್ಮದ

ಭೇದವಿಲ್ಲದೆ ದೇವಿಗೆ ಹರಕೆ ಹೊರುತ್ತಾರೆ. ಕ್ಷೇತ್ರದರ್ಶನ ಮಾಡಿ ಪೂಜೆ ಮಾಡಿಸಿ ಹರಕೆ ಹೊತ್ತು ಬರುವುದು ವಾಡಿಕೆ ಅಂತೆಯೇ ಹರಕೆ ಫಲಿಸಿತೆಂದೆನಿಸಿದರೆ ಹರಕೆ ತೀರಿಸಲು ಮತ್ತೆ ಹೋಗುತ್ತಾರೆ. ಹೀಗೆ ದೈವ ಸಾನ್ನಿಧ್ಯದ ಭೇಟಿ-ದರ್ಶನ, ಹರಕೆ ಕಟ್ಟುವಿಕೆ ಹಾಗೂ ಸಲ್ಲಿಸುವಿಕೆ ಇತ್ಯಾದಿ ಆಚರಣೆಗಳು ನಿರಂತರವಾಗುತ್ತವೆ.

ಮಕ್ಕಳಿಲ್ಲದ ಕಾರಣಕ್ಕಾಗಿ ತನ್ನೆಲ್ಲ ಆಸ್ತಿ ಪಾಸ್ತಿ ಮತ್ತಿತರ ಸಂಪತ್ತನ್ನು ಬಡವರಿಗೆ ದಾನಮಾಡಿ ಜನಸಾಮಾನ್ಯರಲ್ಲಿ ಒಬ್ಬಳಾಗಿ ಬದುಕಿದ ರೆಡ್ಡೆಮ್ಮನನ್ನು ಜನರು ಅವಳ ಮರಣಾನಂತರ ದೈವವನ್ನಾಗಿಸಿದರು. ಬದುಕಿನುದ್ದಕ್ಕೂ ಅವಳು ಮಾಡಿದ ಸಹಾಯ ಸೇವಾರ್ಥಗಳನ್ನು ನಂತರವೂ ಆಶಯದ ರೂಪದಲ್ಲಿ ಜನ ಅನುಸರಿಸುವುದು ಇಲ್ಲಿನ ಗಮನೀಯ ಅಂಶ. ಆಂಧ್ರ ಹಾಗೂ ಕರ್ನಾಟಕದ ಗಡಿಭಾಗಗಳಲ್ಲಿ ನೆಲೆಸಿರುವ ರೆಡ್ಡಿ ಜನಾಂಗದ ಬಹುಪಾಲು ಕುಟುಂಬಗಳು ಶ್ರೀಮಂತ ವರ್ಗಕ್ಕೆ ಸೇರಿವೆ. ಇಂಥ ಶ್ರೀಮಂತ ಮಹಿಳೆ ತನ್ನ ಸಂಪತ್ತನ್ನು ದಾನಮಾಡಿ ಮಕ್ಕಳಿರುವ ಬಡವರಿಗೆ ಬಡವರ ಮಕ್ಕಳಿಗೆ ಸಹಾಯ ಮಾಡಿ ಸ್ಪಂದಿಸಿದ ಈಕೆ ತನ್ನ ಬಂಜೆತನದ ಕೊರಗನ್ನು ನೀಗಿ ಜನಪದರಿಗೆ ಪೂಜನೀಯವಾದದ್ದು ವಿಶೇಷ ಅಂಶ.

ಬಂಜೆಯ ಬಗ್ಗೆ ಸಮಾಜ ತಾಳುವ ನಿಲುವು ಕ್ಲಿಷ್ಟಕರವಾದದ್ದು. ಮಕ್ಕಳಿಲ್ಲದ ಹೆಣ್ಣು ಸ್ವರ್ಗಕ್ಕೆ ಅರ್ಹಳಲ್ಲವೆಂಬ ನಂಬಿಕೆಯಿದೆ. ಪುತ್ರಸಂತಾನದಿಂದ ವಂಶ ಬೆಳೆಯುತ್ತದೆಯೆಂಬ ಭಾವನೆಯಿರುವುದರಿಂದ ಎಂದಾದರೂ ಗಂಡು ಸಂತಾನವನ್ನು ಪಡೆಯದ ಹೆಣ್ಣು ತನ್ನ ಕೌಟುಂಬಿಕ ವಲಯದಲ್ಲಿ ಅವಹೇಳನ ಹಾಗೂ ತಿರಸ್ಕಾರಗಳಿಗೆ ಗುರಿಯಾಗುತ್ತಾಳೆ. ಆದ್ದರಿಂದ ಇಂಥ ಸಾಮಾಜಿಕ ಒತ್ತಡಗಳಿಂದಾಗಿ ಹೆಣ್ಣು ತಾಯ್ತನವನ್ನು ಬಯಸುತ್ತಾಳೆ. ವಂಶಕ್ಕೆ ವಾರಸುದಾರರನ್ನು ನೀಡದವಳು ಬದುಕಿದ್ದಾಗ ಬಂಜೆ ಎಂಬ ಕೊರಗಿನಲ್ಲಿ ಬದುಕನ್ನು ಸವೆಸಿ ಸತ್ತ ನಂತರ ಯಾರೂ ಅವಳನ್ನು ಸ್ಮರಿಸುವುದಿಲ್ಲ. ಬದುಕಿದ್ದಾಗಲೂ ಬಂಜೆಯಾದವಳಿಗೆ ಧಾರ್ಮಿಕ ಆಚರಣೆಗಳಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ. ಜೀವನಾವರ್ತ ಆಚರಣೆಗಳಾದ ಜನನ ಸಂಬಂಧಿ ಆಚರಣೆ, ನಾಮಕರಣ, ಚೌಲ, ತೊಟ್ಟಿಲು ಕಟ್ಟುವ ಶಾಸ್ತ್ರ, ಮದುವೆ ಇತ್ಯಾದಿಗಳಲ್ಲಿ ಬಂಜೆಯಾದವಳಿಗೆ ಆದ್ಯತೆ ಇರುವುದಿಲ್ಲ, ಸೀಮಂತದಂತಹ ಫಲವಂತಿಕೆಯ ಸಂಭ್ರಮದ ಆಚರಣೆಗಳಲ್ಲಿ ಮಕ್ಕಳಿಲ್ಲದ ಮಹಿಳೆ ಪಾಲ್ಗೊಳ್ಳುವಲ್ಲಿ ನಿಷೇಧವಿರುತ್ತದೆ. ಅವಳು ಯಾವುದೇ ಮಂಗಳಸೂಚಕ ಶಾಸ್ತ್ರಗಳನ್ನು ಮಾಡುವಂತಿರುವುದಿಲ್ಲ. ಮುತ್ತೈದೆಯರಿಗೆ ಅರಿಷಿಣ ಕುಂಕುಮ ಹೂವು ಬಳೆ ಇತ್ಯಾದಿಗಳನ್ನು ನೀಡುವಲ್ಲಿಯೂ ನಿರ್ಬಂಧವಿರುತ್ತದೆ. ಬಂಜೆಯ ಕೈಲಿ ಊಟ ಮಾಡಬಾರದು, ಭಿಕ್ಷೆ ಪಡೆಯಬಾರದೆಂಬ ನಿಲುವುಗಳು ಸಮಾಜದಲ್ಲಿ ನೆಲೆಯೂರಿವೆ. ಇಂಥ ಸಂದರ್ಭಗಳ ಹಿನ್ನೆಲೆಯಲ್ಲಿ

ರೆಡ್ಡಮ್ಮ ದಾನ ನೀಡಿದ್ದು ಜನಸಾಮಾನ್ಯರಿಗೆ ಬಡಬಗ್ಗರಿಗೆ ಎಂಬ ಅಂಶ ಇಲ್ಲಿ ಮುಖ್ಯವಾಗುತ್ತದೆ. ಅವಳು ದಾನ ಮಾಡಿದ ಚರಾಸ್ತಿ-ಸ್ಥಿರಾಸ್ತಿಗಳ ಬಗ್ಗೆಯಾಗಲಿ ಸಂಪತ್ತಿನ ಬಗ್ಗೆಯಾಗಲಿ ಐತಿಹ್ಯದಲ್ಲಿ ವಿವರಗಳು ಸಿಗುವುದಿಲ್ಲ. ಮಕ್ಕಳಿಲ್ಲದವರು ಸಂತಾನಾಪೇಕ್ಷೆಯಿಂದ ರೆಡ್ಡಮ್ಮನ ಭಕ್ತರಾಗುತ್ತಾರೆ. ತಮ್ಮ ಹರಕೆಗೆ ಅನುಗುಣವಾಗಿ ರೆಡ್ಡಮ್ಮನ ವರದಿಂದ ತಮಗೆ ಸಂತಾನವಾಯಿತು ಎಂದು ನಂಬುವವರು ತಾವು ಭಕ್ತರಾಗುವುದಲ್ಲದೆ, ಆ ಮಕ್ಕಳಿಗೆ ರೆಡ್ಡಪ್ಪ, ರೆಡ್ಡಮ್ಮ ಎಂಬ ಹೆಸರನ್ನು ಹಾಕುತ್ತಾರೆ. ಅವರವರ ಜಾತಿಸೂಚಕಗಳ ಜೊತೆಗೆ ಈ ಹೆಸರುಗಳು ಬೆರೆತು ಹೋಗುತ್ತವೆ. ಉದಾ: ರೆಡ್ಡಿರಾಮಪ್ರಸಾದ್, ಗುರುರಾಜರಾವ್‌ರೆಡ್ಡಿ, ಗಂಗಾಧರಶಾಸ್ತ್ರಿರೆಡ್ಡಿ, ಅಶ್ವತ್ಥಗೌಡರೆಡ್ಡಿ, ರೆಡ್ಡಿಸಾಬ್ ಇತ್ಯಾದಿ.

ತುಮಕೂರು ಜಿಲ್ಲೆಯ ಕೊರಟಗೆರೆ-ಮಧುಗಿರಿಗಳ ಸಮೀಪದಲ್ಲಿ ರೆಡ್ಡಪ್ಪನೆಂಬ ಕುರುಬರ ದೈವವಿದೆ. ಇಲ್ಲಿಗೆ ಸಮೀಪವಿರುವ ಜಿಲ್ಲೆಯ ಗೌರಿಬಿದನೂರು ಗುಡಿಬಂಡೆ ಬಾಗೇಪಲ್ಲಿ ತಾಲೂಕುಗಳ ಕುರುಬ ಸಮುದಾಯಗಳಲ್ಲಿ ಈ ದೇವರ ಒಕ್ಕಲುಗಳಿದ್ದು ಇವರು ತಮ್ಮ ಗಂಡು ಮಕ್ಕಳಲ್ಲಿ ಒಬ್ಬರಿಗೆ ರೆಡ್ಡಪ್ಪನೆಂದು ಹೆಸರಿಡುವುದು ವಾಡಿಕೆ. ಜನಪದ ದೇವತೆಗಳಲ್ಲಿ ರೋಗದೇವತೆಗಳೇ ಅತ್ಯಂತ ಪ್ರಭಾವಿ ದೇವತೆಗಳಾಗಿವೆ. ಈ ದೇವತೆಗಳಲ್ಲಿ ಐತ್ಗಮ್ಮ, ಪ್ಲೇಗಮ್ಮ, ಸೀತಾಳಮ್ಮ, ಕಾಲರಮ್ಮ, ದಡಾರಮ್ಮ, ಸಿಡುಬಮ್ಮ ಮುಂತಾದವರು ಸುಪ್ರಸಿದ್ಧರು. ಗ್ರಾಮದೇವತೆ ದುರ್ಬಲಳಾದಾಗ ಇವರು ಊರನ್ನು ಪ್ರವೇಶಿಸುತ್ತಾರಂತೆ. ಇವರು ಒಂದು ಕಿವಿಯನ್ನು ಹಾಸಿಕೊಂಡು ಒಂದು ಕಿವಿಯನ್ನು ಹೊದ್ದುಕೊಂಡು ಕಗ್ಗತ್ತಲ ಗವಿಯಲ್ಲಿ ಮಲಗಿರುತ್ತಾರಂತೆ. ಹಸಿವಿನಿಂದ ತತ್ತರಿಸಿದಾಗ ಕಾಕುಹಾಕುತ್ತ ಗುಡ್ಡದ ಗಾತ್ರ ಕಣ್ಣುಗಳಲ್ಲಿ ಕಿಡಿಕಾರುತ್ತ ಕೊಳಗದ ಅಗಲ ಬಾಯಿ ಬಿಟ್ಟುಕೊಂಡು ಎಡಗೈಯಲ್ಲಿ ಮೊರ ಹಿಡಿದುಕೊಂಡು ಮಾನವರನ್ನೆಲ್ಲ ತೊಡೆದು ತಿಪ್ಪೆಗೆಸೆಯಲು ಬರುತ್ತಾರಂತೆ. ಕಾಯಿಲೆಗಳ ರೂಪದಲ್ಲಿ ಮಾನವರನ್ನು ಇವರು ಕೊಲ್ಲುತ್ತಾರೆ. ಇವರಿಗೆ ಕೋಳಿ ಕುರಿ ಆಡು ಹಂದಿ ಕೋಣಗಳನ್ನು ಬಲಿಕೊಟ್ಟು, ಜನ ತಮ್ಮ ಗ್ರಾಮವನ್ನು ಉಳಿಸಿಕೊಳ್ಳುತ್ತಾರೆ.

ಸಣ್ಣ ಪುಟ್ಟ ಚಳಿಜ್ವರಗಳಿಗೆಲ್ಲಾ ಚೌಡಿ ಎಂಬ ದೇವತೆಯ ಸೋಂಕೇ ಕಾರಣವಂತೆ. ಇವಳ ಸ್ಪರ್ಶದಿಂದ ಕಾಯಿಲೆಗಳು ಬರುತ್ತವೆ. ಆದರೆ ಹರಕೆ ಹೊತ್ತು ಕೋಳಿ ಬಲಿಕೊಟ್ಟರೆ ಈ ದೇವತೆ ತೃಪ್ತಳಾಗುತ್ತಾಳೆ. ಇವಳ ಗಂಡ ಮುನೇಶ್ವರ (ಮುನೇಶ್ವರನನ್ನು ಬ್ರಹ್ಮಚಾರಿ ಎಂದೇ ಸಾರ್ವತ್ರಿಕವಾಗಿ ಪರಿಗಣಿಸುತ್ತಾರೆ. ಆದರೆ ಇಲ್ಲಿ ಇದೊಂದು ಅಪವಾದವಾಗಿದೆ.) ಅಥವಾ ಜಡೇಮುನಿ ಈತ ಭೂತಪ್ರೇತಗಳ ಒಡೆಯನೆಂದೂ ನಟ್ಟನಡುರಾತ್ರಿ ಕಲ್ಲು ನೀರು ಕರಗುವ ವೇಳೆಯಲ್ಲಿ ಸಂಚಾರ ಮಾಡುತ್ತಾನೆಂದೂ ಹೇಳಲಾಗುತ್ತದೆ. ಇಂಥ ಬಗೆ ಬಗೆಯ ಬಣ್ಣ ಬಣ್ಣದ ಕಲ್ಪನೆಯ ದೇವತೆಗಳು

ಆದಿವಾಸಿಗಳಲ್ಲಿ ಜೀವಂತವಾಗಿವೆ. ತಮ್ಮ ಜೀವನದ ಸರ್ವಸ್ವವೂ ಈ ದೇವತೆಗಳ ಅವಲಂಬನೆಯಿಂದಲೆ ರೂಪಿತವಾಗುತ್ತದೆ ಎಂದು ಅವರು ದೃಢವಾಗಿ ನಂಬುತ್ತಾರೆ ಎಂದು ಕರ್ನಾಟಕ ಕನ್ನಡ ವಿಷಯ ವಿಶ್ವಕೋಶದಿಂದ ತಿಳಿಯುತ್ತದೆ. (ಪು.೬೫೬)

**ಒಡ್ಡಮ್ಮ-ಗುಡಿಬಂಡೆ:** ಮಳೆ ಬಾರದಿದ್ದಾಗ ಕೆರೆಗೆ ನೀರು ಬರಲೆಂದು ಜಾತ್ರೆ ದೀಪ ಮಾಡುತ್ತಾರೆ. ಇಲ್ಲಿನ ಅಮಾನಿ ಭೈರಸಾಗರ ಕೆರೆಯನ್ನು ಕಟ್ಟುವಾಗ ಕಟ್ಟೆ ಒಡೆದು ಹೋಗುತ್ತಿತ್ತು. ಗರ್ಭಿಣಿಯನ್ನು ಬಲಿ ಕೊಡಬೇಕೆಂದು ಶಾಸ್ತ್ರ ಹೇಳಿದ ಪ್ರಕಾರ ಒಡ್ಡರ ಮಹಿಳೆಯನ್ನು ಬಲಿಕೊಟ್ಟರು. ಅಂದಿನಿಂದ ಕೆರೆಕಟ್ಟೆ ಕಿತ್ತು ಹೋಗಲಿಲ್ಲವಂತೆ. ಅವಳ ನೆನಪಿಗೆ ಕಲ್ಲೊಂದನ್ನು ನೆಟ್ಟು ಪೂಜಿಸುತ್ತಾರೆ. ಮತ್ತೊಂದು ಐತಿಹ್ಯ ಕಟ್ಟೆ ಕಟ್ಟುತ್ತಿದ್ದ ಒಡ್ಡರ ಕೂಲಿ ಹೆಂಗಸು ಗರ್ಭಿಣಿ ಆಯಾಸವಾಗಿ ಕಟ್ಟೆಯ ಮೇಲೆಯೇ ಪ್ರಾಣ ಬಿಡುತ್ತಾಳಂತೆ. ಆಕೆಯನ್ನು ಕೆರೆಯೇ ಬಲಿ ತೆಗೆದುಕೊಂಡಿದೆ ಎಂದು ನಂಬಿ ಪೂಜಿಸುತ್ತಾರೆ.

**ದುರ್ಗಾದೇವಿ** (ವಿರೂಪಾಕ್ಷಿ, ಮುಳುಬಾಗಿಲು ತಾ) : ವಿಕ್ರಮಾರ್ಕ ರಾಜನ ಕಾಲದಿಂದಲೂ ಇರುವ ದೇವಾಲಯವೆನ್ನುತ್ತಾರೆ. ವಿಗ್ರಹ ಶಿಲ್ಪಕಲೆಯ ದೃಷ್ಟಿಯಿಂದ ಗಮನಾರ್ಹ. ಇದು ಸಾಲಿಗ್ರಾಮದ ಶಿಲೆ ಎಂಬ ನಂಬಿಕೆ ಇದೆ. ಗಂಡಕಿ ನದಿಯಿಂದ ಬೇತಾಳ ಈ ಶಿಲೆಯನ್ನು ಭಟ್ಟಿ ವಿಕ್ರಮಾರ್ಕನಿಗೆ ತಂದುಕೊಟ್ಟಿತೆಂದೂ ಐತಿಹ್ಯವಿದೆ. ಅವನು ಶಿಲ್ಪವನ್ನು ಮಾಡಿದನೆಂದೂ ಹೇಳುತ್ತಾರೆ. ಪಲ್ಲವರು ಅಥವಾ ಅದಕ್ಕೂ ಮೊದಲಿನ ಕಾಲಕ್ಕೆ ಸೇರಿದ್ದಿರಬಹುದು.

**ಗಂಗಮ್ಮ, ಪೆದ್ದಪಲ್ಲಿ** (ಉರಿಗಾಂಪೇಟೆ-ಕೆ.ಜಿ.ಎಫ್) : ಐತಿಹ್ಯದ ಪ್ರಕಾರ ದಕ್ಷಿಣ ಭಾರತದಲ್ಲಿ ನೆಲೆಸಿರುವ ಜನರಿಗೆ ಒಮ್ಮೆ ಬರಗಾಲ ಬಂತು. ಊರಿನವರೆಲ್ಲರೂ ಭಿಕ್ಷಾಟನೆಗಾಗಿ ಉತ್ತರದ ಕಡೆಗೆ ಹೋದರು. ಪೆದ್ದಂಪಲ್ಲಿಯಿಂದ ಹೊರಡುವಾಗ ರುಬ್ಬುವ ಕಲ್ಲನ್ನು ಮರೆತಿದ್ದರು. ತರಲು ಮತ್ತೆ ತಮ್ಮ ಊರಾದ ಪೆದ್ದಂಪಲ್ಲಿಗೆ ಬಂದು, ಹೂತುಹೋಗಿದ್ದ ಕಲ್ಲನ್ನು ಕೀಳಲು ಪ್ರಯತ್ನಿಸಿದಾಗ ಒಬ್ಬ ಹುಡುಗಿಯ ಮೈಮೇಲೆ ದೇವರು ಬಂದು ನಾನು ನಿಮ್ಮ ಜೊತೆಗೆ ಬರುವುದಿಲ್ಲ ಈ ಊರಿನಲ್ಲಿಯೇ ಇರುತ್ತೇನೆ ಎಂದಿತು. ಅಂದಿನಿಂದ ಆ ದೇವರಿಗೆ ಸರಿಯಾಗಿ ಜನರೂ ಅಲ್ಲಿ ನೆಲೆನಿಂತು ಗಂಗಮ್ಮನ ಪೂಜೆ, ಜಾತ್ರೆಗಳನ್ನು ಮಾಡುತ್ತ ಬಂದರೆಂದು ಹಿರಿಯರ ಅಭಿಪ್ರಾಯ. ರುಬ್ಬುವ ಕಲ್ಲೊಂದು ಗಂಗಮ್ಮನ ಗುಡಿಯ ಮುಂದಿದೆ. ಜಾತ್ರೆಯ ದಿನ ಮೊದಲ ಪೂಜೆ ರುಬ್ಬುವ ಕಲ್ಲಿಗೆ ಸಲ್ಲುತ್ತದೆ.

**ಉದ್ದಂಡಮ್ಮ ಬಂಗಾರಪೇಟೆಯ ಮಾರಿಕುಪ್ಪಂನ ಗ್ರಾಮದೇವತೆ ನಂಬಿಕೆ-ಐತಿಹ್ಯ** : ೧. ಊರು ಎಲ್ಲಿ ಕಟ್ಟಿದರೂ ಬಿದ್ದುಹೋಗುತ್ತಿತ್ತು. ಮಾರಿಕುಪ್ಪಂ ಇರುವ ಸ್ಥಳದಲ್ಲಿ ಬೀಳಲಿಲ್ಲ ಕಾರಣ ಈ ದೇವತೆ ಎಂದು ಅನಂತರಾಮ ಶೆಟ್ಟಿ ಅವರ ಅಭಿಪ್ರಾಯ.

೨. ಒಬ್ಬ ಭಕ್ತನಿಗೆ ೪೧ ದಿನಗಳ ನಂತರ ದೇವಾಲಯದ ಬಾಗಿಲನ್ನು ತೆಗೆಯಬೇಕೆಂದೂ ತಾನು ಉದ್ಭವಗೊಂಡಿರುತ್ತಾಳೆಂದೂ ಅವಧಿ ಮುಗಿಯುವವರೆಗೂ ಬಾಗಿಲನ್ನು ತೆಗೆಯಬಾರದೆಂದೂ ಕನಸಿನಲ್ಲಿ ಹೇಳಿರುತ್ತಾಳೆ. ಆತ ೨೧ನೆಯ ದಿನವೇ ಕುತೂಹಲದಿಂದ ಬಾಗಿಲು ತೆಗೆದು ನೋಡಿದ. ದೇವಿ ವಿಗ್ರಹ ಸ್ವಲ್ಪ ಮಾತ್ರ ಉದ್ಭವಗೊಂಡಿತ್ತು. ಆದ್ದರಿಂದ ವಿಗ್ರಹ ಚಿಕ್ಕದಾಗಿದೆ ಎಂದು ನಂಬಿಕೆ.

೩. ಕೆ.ಜಿ.ಎಫ್‌ನ ಚಿನ್ನದ ಗಣಿಗಳ ಚಿನ್ನಕ್ಕೆ ಈಕೆ ಆಧಿದೇವತೆ. ಹಿಂದೆ ಮೂಡಲ ದೇಶಕ್ಕೆ ಈ ಮಾರ್ಗವಾಗಿ ವ್ಯಾಪಾರಕ್ಕೆ ಹೋಗುತ್ತಿದ್ದರಂತೆ. ಅವರು ಸಿರಿ ಸಂಪತ್ತನ್ನು ತುಂಬಿಕೊಂಡು ಎತ್ತು ಕತ್ತೆಗಳ ಮೇಲೆ ಹೇರಿಕೊಂಡು ಬರುತ್ತಿದ್ದರಂತೆ. ದೇವಾಲಯವಿರುವ ಸ್ಥಳಕ್ಕೆ ಬಂದ ನಂತರ ಎತ್ತು ಕತ್ತೆಗಳು ಇನ್ನು ಮುಂದಕ್ಕೆ ಹೋಗಲಾರದೆ ನಿಂತವು. ಹಿಂದೆ ತಿರುಗಿ ನೋಡಿದಾಗ ರೂಪವತಿಯಾದ ಸ್ತ್ರೀ ಇದರಲ್ಲಿರುವ ಐಶ್ವರ್ಯವನ್ನು ಬಯಸಿ ಬರುತ್ತಿದ್ದಳಂತೆ. ಆಕೆ ತನಗೆ ಬಟ್ಟೆ ಬೇಕೆಂದು ಹೇಳಿ ತರಲು ಹೊಲೆಯನನ್ನು ಕಳಿಸಿ ತಾನು ಬೆತ್ತಲೆ ಕುಳಿತಿದ್ದಳು. ಅವನು ಕುತೂಲದಿಂದ ಮರೆಯಲ್ಲಿ ನಿಂತು ಬಗ್ಗಿ ನೋಡಿದ. ಅವಳಿಗದು ಗೊತ್ತಾಗಿ ಅಲ್ಲಿಯೇ ಐಕ್ಯಳಾದಳೆಂದು ಕತೆ. ಕೆ.ಜಿ.ಎಫ್ ದೇವತೆಯ ಮೂಲ ಹೆಸರುಗಳು ಶಿವಶಕ್ತಿ, ಸೀತೋದ್ದಂಡ, ಚಿನ್ನಶ್ರೀ ಉದ್ದಂಡಮ್ಮ, ಪ್ರಸನ್ನ ಉದ್ದಂಡಮ್ಮ.

**ಬಂಡೆಣ್ಣ** (ಕೆಂಪನಹಳ್ಳಿ, ಶಿಡ್ಲಘಟ್ಟ ತಾ) : ನಾಲ್ಕು ಕಲ್ಲುಗಳನ್ನಿಟ್ಟು ಸಣ್ಣದಾದ ಗುಡಿಯನ್ನು ಕಟ್ಟಿದ್ದಾರೆ. ಹರಿಜನರು ಮುಟ್ಟಬಾರದು. ತಮಟೆ ಶಬ್ದ ಮಾಡಿದರೆ ಮೈಮೇಲೆ ಬರುವುದಿಲ್ಲ. ಹಬ್ಬದಂದು ಹೋತವನ್ನೇ ಬಲಿಕೊಡಬೇಕು. ಐತಿಹ್ಯದ ಪ್ರಕಾರ ದೊಡ್ಡಅಕ್ಕ, ಚಿಕ್ಕಅಕ್ಕ, ಸೂರ್ಯಕಾಂತಿ ಮುಂತಾದ ಏಳು ಜನ ಅಕ್ಕತಂಗಿಯರು ಭೂಲೋಕಕ್ಕೆ ಬರುತ್ತಿರುತ್ತಾರೆ. ಅದನ್ನು ಕಂಡು ಈಶ್ವರ ಮೋಹಗೊಂಡು ಅವರನ್ನು ಮದುವೆಯಾಗಲು ಬಯಸುತ್ತಾನೆ. ಆಗ ತನ್ನ ಜಡೆಯನ್ನು ಸಮುದ್ರಕ್ಕೆ ಅಡ್ಡವಾಗಿ ಬಿಡುತ್ತಾನೆ. ಇದನ್ನು ಕಂಡು ಸೂರ್ಯಕಾಂತಿ ಮೋಹಗೊಳ್ಳುತ್ತಾಳೆ. ಆಗ ಜಡೆಗೆ ಬೆಂಕಿ ಹತ್ತಿಕೊಂಡು ಶಿವನ ಬಳಿಗೆ ಹೋಗುತ್ತದೆ. ಶಿವ ಹೆದರಿ ನಿಮ್ಮ ಏಳು ಜನರಿಗೂ ನಾನು ರಕ್ಷಣೆಯಾಗಿರುತ್ತೇನೆ ಬಂಡಣ್ಣನೆಂಬ ಹೆಸರಿನಿಂದ ಎಂದು ಹೇಳಿ ಇಲ್ಲಿದ್ದಾನಂತೆ. (ಸಪ್ತಮಾತೃಕೆಯರು ಮತ್ತು ಮುನೇಶ್ವರನಿಗೆ ಸಂಬಂಧಿಸಿದ್ದಿರಬಹುದು.)

**ಸಾಸುರಮ್ಮ** (ಅಬ್ಲೂಡು ಶಿಡ್ಲಘಟ್ಟ ತಾ) : ಪಾಳೇಗಾರರ ಕಾಲದಲ್ಲಿ ಶಿಡ್ಲಘಟ್ಟಕ್ಕೆ ಅಬ್ಲೂಡು ರಾಜಧಾನಿಯಾಗಿತ್ತು. ಆಗ ಊರನ್ನು ಕಟ್ಟುವುದಕ್ಕೆಂದು ಪಾಯ ತೋಡಿಸಿದರು. ಅದನ್ನೆ ಈಗ ಸಾಸೂರಮ್ಮ ಎಂದು ಪೂಜಿಸುತ್ತಾರೆ. ಊರ ಹೊರಗಿನ ಬಯಲಲ್ಲಿ ೨½ ಅಡಿ ಎತ್ತರದ ಆರು ಕಲ್ಲುಗಳಿವೆ. ಲಿಪಿಯನ್ನು ಕೆತ್ತಿದ್ದಾರೆ. ಅದನ್ನೇ ಸಾಸೂರಮ್ಮನೆಂದು ಪೂಜಿಸುತ್ತಾರೆ.

**ಮಾಲೂರಿನ ಕೋಟೆ ಮಾರೆಮ್ಮ:** ಈ ಗುಡಿಯು ಊರಿನ ಮಧ್ಯಭಾಗದಲ್ಲಿದ್ದು ಮೊದಲಿಗೆ ಇದು ಕೋಟೆಯ ಪ್ರದೇಶವಾಗಿತ್ತೆಂದು ಹೇಳುತ್ತಾರೆ. ದೇವಾಲಯದ ಒಳಗೆ ಎರಡು ಕಲ್ಲಿನ ವಿಗ್ರಹಗಳಿವೆ. ಆರಂಭದಿಂದಲೂ ಇವು ಪೂಜೆಗೊಳ್ಳುತ್ತಿವೆ. ಕ್ಷೌರಿಕ ಮನೆತನದವರು ದೇವಾಲಯದ ಉಸ್ತುವಾರಿಯನ್ನು ನೋಡಿಕೊಳ್ಳುವುದು ಇಲ್ಲಿನ ವಿಶೇಷ. ಮಾಲೂರಿನ ಕರಗದ ಮೊದಲ ಆಚರಣೆ ಸಾರುವುದು (ಡಂಗೂರ ಹಾಕುವುದು) ಈ ದೇವಾಲಯದಿಂದಲೇ ಆರಂಭಗೊಳ್ಳುತ್ತದೆ. ಆದ್ದರಿಂದ ಮೊದಲಿಗೆ ಈ ಮಾರೆಮ್ಮನ ಕರಗ ನಡೆಯುತ್ತಿದ್ದಿರಬಹುದೆಂದು ಊಹಿಸಬಹುದು. ಪ್ರಸ್ತುತ ದೇವಾಲಯವನ್ನು ರಜಪೂತ್ ವಂಶದ ಜಮೀನ್ದಾರ ಹಿರ್ದೇರಾಂಸಿಂಗನ ವಂಶಸ್ಥರು ಕಟ್ಟಿಸಿದರೆಂಬ ಮಾಹಿತಿಯು ದೊರೆಯುತ್ತದೆ.

**ಐತಿಹ್ಯ:** "ಭಾವನಹಳ್ಳಿ ಜೋಡಿದಾರರೆಂದು ಪ್ರಸಿದ್ಧಿಯಾಗಿರುವ ಹಿರ್ದೇರಾಂಸಿಂಗ್ ವಂಶಸ್ಥರು ಪಟ್ಟಣದ ಜನರಿಗೆ ಕುಡಿಯುವ ನೀರಿನ ಸೌಲಭ್ಯಕ್ಕಾಗಿ ಗಂಜಾಗುಂಡ್ಲ ಎಂಬ ಕಲ್ಯಾಣಿಯನ್ನು ಕಟ್ಟಿಸಿದರು. ಕಲ್ಯಾಣಿಯನ್ನು ಅಗೆಯುವಾಗ ಅಲ್ಲಿ ಮಾರೆಮ್ಮನ ಕಂಚಿನ ವಿಗ್ರಹಗಳು ಸಿಕ್ಕಿದವು. ಮಾರೆಮ್ಮನು ಅಂದು ರಾತ್ರಿ ಒಬ್ಬ ಭಕ್ತನ ಕನಸಿನಲ್ಲಿ ಕಾಣಿಸಿಕೊಂಡು ನನ್ನನ್ನು ಈ ಊರಿನಲ್ಲಿ ಪ್ರತಿಷ್ಠಾಪಿಸಬೇಕು. ಇಲ್ಲದಿದ್ದರೆ ಈ ಊರನ್ನೇ ಕಬಳಿಸುತ್ತೇನೆ ಎಂದು ನುಡಿದಳು. ಆಗ ಸಿಂಗ್ ಮನೆತನದವರು ಊರಿನ ರಕ್ಷಣೆಯಾಗಿ ಗುಡಿ ಕಟ್ಟಿಸಿದರೆಂದು ಪ್ರತೀತಿ" ಕಲ್ಯಾಣಿಯನ್ನು ಕಟ್ಟಿಸಲೆಂದು ನೆಲವನ್ನು ಅಗೆಯುತ್ತಿದ್ದಾಗ ಸಿಕ್ಕ ವಿಗ್ರಹಗಳನ್ನು ಕೋಟೆಯ ಆವರಣದಲ್ಲಿ ಪ್ರತಿಷ್ಠಾಪಿಸಿ ಗುಡಿಯನ್ನು ಕಟ್ಟಿಸಿದ ವಿವರವು ಇಲ್ಲಿ ಸ್ಪಷ್ಟವಾಗುತ್ತದೆ. ಆ ಜಾಗದಲ್ಲಿ ಮೊದಲಿನಿಂದಲೂ ಕಲ್ಲಿನ ವಿಗ್ರಹಗಳು ಪೂಜೆಗೊಳಗಾಗುತ್ತಿದ್ದು ನಂತರ ದೇವಾಲಯ ನಿರ್ಮಾಣಗೊಂಡು ಕಂಚಿನ ವಿಗ್ರಹಗಳು ಪ್ರತಿಷ್ಠಾಪಿತವಾಗಿವೆ. ಅಂದಿನಿಂದ ಕರಗದ ಉತ್ಸವವು ನಡೆದು ನಂತರ ಅದು ಮತ್ತೊಂದು ಗುಡಿಗೆ ವರ್ಗವಾಗಿರಬಹುದು. ಮೂಲದಲ್ಲಿ ಪೂಜೆಗೊಳಗಾಗುತ್ತಿದ್ದ ಕಲ್ಲಿನ ಒಂದು ವಿಗ್ರಹ ಪಟಾಲಮ್ಮನಿರಬಹುದು. ಗುಡಿಗಳೆಂದು ಪ್ರತ್ಯೇಕವಾದಾಗ ಕರಗದ ಆಚರಣೆ ಪಟಾಲಮ್ಮನದಾಗಿರಬಹುದು.

**ಮಾಲೂರು ಪಟಾಲಮ್ಮ:** ಊರಿನ ಕೊನೆಯ ಭಾಗದಲ್ಲಿ ಪಟಾಲಮ್ಮನ ಗುಡಿ ಇದ್ದು ಪೂರ್ವ ದಿಕ್ಕಿಗೆ ಇದರ ಬಾಗಿಲು ಇದೆ. ಈ ಗುಡಿಯಲ್ಲಿ ಪಟಾಲಮ್ಮ ಹಾಗೂ ಮುತ್ಯಾಲಮ್ಮನ ಎರಡು ಮಣ್ಣಿನ ಮೂರ್ತಿಗಳಿವೆ. ಐತಿಹ್ಯದ ಪ್ರಕಾರ ಮೊದಲಿಗೆ ಮಾಲೂರಿನಿಂದ ಕಾಡದೇವನಹಳ್ಳಿಗೆ ಹೋಗುವ ಮಾರ್ಗದಲ್ಲಿ ನೆಲೆಸಿದ್ದಳಂತೆ. ಮಾಲೂರಿನ ಸ್ಥಳೀಯರು ತಮ್ಮ ಊರಿನಲ್ಲಿ ಈ ದೇವತೆಯ ಗುಡಿ ಕಟ್ಟಿಸಿ ಪ್ರತಿಷ್ಠಾಪಿಸಿದರೆಂದು ತಿಳಿದುಬರುತ್ತದೆ. ಮೊದಲಿಗೆ ಕಲ್ಲಿನ ರೂಪದಲ್ಲಿ ಪೂಜಿಸುತ್ತಿದ್ದರೆಂಬ ಹೇಳಿಕೆಯ ಹಿನ್ನೆಲೆಯಲ್ಲಿ ಯೋಚಿಸಿದಾಗ ಪಟಾಲಮ್ಮನು ಮೊದಲು ಕೋಟೆಮಾರಮ್ಮನ ಜೊತೆಯಲ್ಲಿ

ಪೂಜೆಗೊಳ್ಳುತ್ತಿದ್ದಳೆಂದು ತಿಳಿದುಬರುತ್ತದೆ. ಪಟಾಲಮ್ಮನ ಗುಡಿಯ ಮೇಲುಸ್ತುವಾರಿ ಹಾಗೂ ಅರ್ಚನೆಯ ಕಾರ್ಯಗಳನ್ನು ಗಾಣಿಗ ಮನೆತನದವರು ನೋಡಿಕೊಳ್ಳುತ್ತಾರೆ. ಇಲ್ಲಿನ ತಿಗಳರಿಗೆ ಈ ಗುಡಿಯು ದ್ರೌಪದಿಯು ತವರುಮನೆಯೆಂಬ ನಂಬಿಕೆ ಇದೆ. ಆದ್ದರಿಂದ ಕರಗವನ್ನು ಹೊರುವ ವ್ಯಕ್ತಿಗೆ ಈ ಗುಡಿಯಲ್ಲಿ ಬಳೆತೊಡಿಸುವ ಶಾಸ್ತ್ರವನ್ನು ನೆರವೇರಿಸುತ್ತಾರೆ. ಕರಗಕ್ಕೆ ಪೂರಕವಾದ ಕೊಂಡ ಹಾಯುವ ಆಚರಣೆ, ಸಿಡಿ, ಬಲಿ, ದೀಪದಾರತಿಯಂತಹ ಮುಖ್ಯ ಆಚರಣೆಗಳು ಈ ದೇವಾಲಯದಲ್ಲಿ ಆರಂಭಗೊಳ್ಳುತ್ತವೆ.

**ಘಟ್ಟದಕೆಳಗಿನಹಳ್ಳಿ ಸತ್ಯಮ್ಮ** (ಗೌರಿಬಿದನೂರು ತಾ) : ಜನಪದ ವಲಯದಲ್ಲಿ ಗ್ರಾಮದೇವತೆಗಳನ್ನು ಅತಿ ಮಾನುಷ ಶಕ್ತಿಗಳೆಂದು ಪರಿಭಾವಿಸುವುದಿಲ್ಲ. ಬದಲಾಗಿ ತಮಗಿಂತ ಸಾಹಸಿಗರು, ಬಲಿಷ್ಠರೂ, ಧೈರ್ಯಸ್ಥರು, ಮುಂದಾಲೋಚನೆಯುಳ್ಳವರೆಂದು ಪರಿಗಣಿಸುತ್ತಾರೆ. ಮಾನವ ಸಹಜ ನೋವು-ನಲಿವು ದೌರ್ಬಲ್ಯಗಳು ತಮ್ಮ ಗ್ರಾಮದೇವತೆಗಳನ್ನೂ ಕಾಡುತ್ತವೆಯೆಂದು ಭಾವಿಸುತ್ತಾರೆ. ಇಂಥ ಆರೋಪಣೆಗಳ ಹಿನ್ನೆಲೆಯಲ್ಲಿಯೇ ಸಂಬಂಧಿಸಿದ ದೈವದ ಅಸ್ತಿತ್ವ ಹಾಗೂ ಅಲ್ಲಿನ ಜನಸಮುದಾಯಗಳು ನೆಲೆಗಳ ಕುರಿತ ಸುಳಿವುಗಳು ಲಭ್ಯವಾಗುತ್ತವೆ. ಇದಕ್ಕೆ ಉದಾಹರಣೆಯಾಗಿ ಘಟ್ಟದ ಕೆಳಗಿನ ಸತ್ಯಮ್ಮನ ಐತಿಹ್ಯವು ನೆರವಾಗುತ್ತದೆ. (ಮೊದಲಿಗೆ ಈ ಊರನ್ನು ಘಟ್ಟದ ಕೆಳಗಿನ ಹಳ್ಳಿ ಎಂದು ಕರೆಯುತ್ತಿದ್ದರು. ಈಗ ಈ ಸ್ಥಳನಾಮವು 'ಕೃಷ್ಣರಾಜಪುರ'ವಾಗಿದೆ.)

ಸತ್ಯಮ್ಮನು ದಂಡಿನ ಮೇಲೆ ಯುದ್ಧಕ್ಕೆ ಹೋಗಿ ದುಷ್ಟ ಶಕ್ತಿಗಳನ್ನು ಗೆದ್ದು ಹಿಂದಿರುಗುತ್ತಿದ್ದಳು. ದೂರದಿಂದ ನೋಡಿದ ಪೋತರಾಜುವಿಗೆ ಆಕೆ ತನ್ನ ತಂಗಿ ಎಂದು ತಿಳಿಯಲಿಲ್ಲ. ಯಾವುದೋ ದುಷ್ಟ ಶಕ್ತಿ ಹೋಗುತ್ತಿದೆಯೆಂದು ತಿಳಿದು ತನ್ನ ಕತ್ತಿಯನ್ನು ಎಸೆದ. ಅದು ಸತ್ಯಮ್ಮನ ಕಾಲಿಗೆ ತಾಕಿದ್ದರಿಂದ ಕಾಲು ಮುರಿದು ಹೊಯಿತು. ಮುಂದೆ ನಡೆಯಲಾರದೆ ಅಲ್ಲಿಯೇ ಇದ್ದ ಗಿಡವಡಿ ಅಡಗಿ ಕುಳಿತಳು. ದೇವರಾಯನದುರ್ಗದ (ಬೆಂಗಳೂರು ಗ್ರಾಮಾಂತರ ಜಿಲ್ಲೆ) ಪಾಳೆಯಗಾರರ ಕಿರುಕುಳದಿಂದ ತಪ್ಪಿಸಿಕೊಂಡು ಗೂರ್ಲಪ್ಪ ಹಾಗೂ ಪೆನ್ನಪ್ಪ ಎಂಬ ಇಬ್ಬರು ವ್ಯಕ್ತಿಗಳು ಈ ಮಾರ್ಗದಲ್ಲಿ ನಡೆದು ಹೋಗುತ್ತಿದ್ದರು. ಇವರು ಅಲ್ಲಿಗೆ ಬರುವಷ್ಟರಲ್ಲಿ ಗಿಡದ ಕೆಳಗಿನಿಂದ ನಾನೂ ಬರುತ್ತೇನೆ ನನ್ನನ್ನೂ ಕರೆದುಕೊಂಡು ಹೋಗಿ ಎಂಬ ಹೆಣ್ಣು ಧ್ವನಿ ಕೇಳಿಸಿತು. ಅದೇನೆಂದು ಅವರು ಗಮನಿಸುವಷ್ಟರಲ್ಲಿ ಹದಿನಾರರ ಪ್ರಾಯದ ಯುವತಿಯೊಬ್ಬಳು ಅವರ ಮುಂದೆ ಪ್ರತ್ಯಕ್ಷಳಾದಳು. ಅಲ್ಲದೆ ಅವರಿಗೆ ತಾನು ದೇವತೆಯೆಂದೂ ತನಗೆ ಕಾಲು ಮುರಿದು ನಡೆಯಲು ಆಗುತ್ತಿಲ್ಲವೆಂದೂ ತಿಳಿಸಿದಳು. ಅವರು ಅವಳನ್ನು ಭುಜದ ಮೇಲೆ ಕೂರಿಸಿಕೊಂಡು ಮುಂದೆ ನಡೆದರು. ದಾರಿ ಸಾಗುತ್ತಿದ್ದಂತೆ ಸಂಜೆಯಾಯಿತು. ಒಂದು ಬೆಟ್ಟ ಪ್ರದೇಶದ

ತಪ್ಪಲಲ್ಲಿ ಮಲಗಿ ನಿದ್ರಿಸಿದರು. ಬೆಳಿಗ್ಗೆ ಎದ್ದು ಬೆಟ್ಟ ಪ್ರದೇಶದಲ್ಲಿ ಬೇಟೆಯಾಡಲು ಹೊರಟರು. ಇವರ ಬೇಟೆಯ ನಾಯಿಯನ್ನು ಮೊಲವೊಂದು ಅಟ್ಟಿಸಿಕೊಡು ಬಂದದ್ದನ್ನು ನೋಡಿದರು. ಇದು ವೀರಭೂಮಿಯೆಂದು ತಿಳಿದು ಅಲ್ಲಿಯೇ ಊರನ್ನು ಕಟ್ಟಿದರು. ತಮ್ಮೊಂದಿಗೆ ಬಂದ ದೇವತೆಯನ್ನು ಅಲ್ಲಿಯೇ ಉಳಿಸಿಕೊಂಡರು. ಈ ದೇವತೆಯು ಪೂಜಾರಿಯ ಮೈಮೇಲೆ ಬಂದಾಗ ಕುಂಟುತ್ತದೆ. ಜನರ ಕಷ್ಟ-ಕಾರ್ಪಣ್ಯಗಳ ವಿಚಾರ ನಡೆಸಿ ಸೂಕ್ತ ಸಲಹೆ ನೀಡುತ್ತದೆ.

ಬೈಜಾಪುರದ ಸತ್ಯಮ್ಮನು ಹೊಸೂರಿನ ಕೋಟೆಯಲ್ಲಿ 'ಉಟ್ಲುಹೆಂಡ'ವನ್ನು ತಯಾರಿಸುತ್ತಿದ್ದವರ ಬಳಿಗೆ ಮುದುಕಿಯ ವೇಷದಲ್ಲಿ ಬಂದಳು. ಉಪ್ಪಾರ ಜಾತಿಯ ಬಂಗಾರ ಲಿಂಗಪ್ಪ ಎಂಬುವವರು ಕುದುರೆ ಮೇಲೆ ಬರುತ್ತಿದ್ದ. ಆತನ ಜೊತೆಯಲ್ಲಿ ಕುದುರೆಯೇರಿ ದೇವಗಾನಹಳ್ಳಿಗೆ ಬಂದಿಳಿದಳು. ಆದಿಕರ್ನಾಟಕ ಜಾತಿಯವರು ಅಲ್ಲಿಂದ ಬೈಜಾಪುರಕ್ಕೆ ಕರೆದುಕೊಂಡು ಬಂದರು. ಅವರೊಂದಿಗೆ ಬೈಜಾಪುರದಲ್ಲಿ ಉಳಿದಳು. ಈತನ ಪೂಜಾರಿಯನ್ನು ಸತ್ಯಪ್ಪನೆಂದು ಕರೆಯುತ್ತಾರೆ. ಸತ್ಯಮ್ಮನು ಬೇಡರ ಇಲ್ಲವೇ ಆದಿಕರ್ನಾಟಕ ದೇವತೆಯಾಗಿ ಗುರುತಿಸಲ್ಪಡುತ್ತಾಳೆ. ಬೇಡರಕೇರಿ ಇಲ್ಲವೇ ಮಾದಿಗರಹಟ್ಟಿಗಳಲ್ಲಿ ಸತ್ಯಮ್ಮನ ಗುಡಿಗಳಿದ್ದು ಪೂಜಾರಿಯು ಈ ಯಾವುದಾದರೊಂದು ಜಾತಿಗೆ ಸೇರಿದವರಾಗಿರುತ್ತಾರೆ. ಒಟ್ಟಾರೆ ಶೂದ್ರ ಸಮುದಾಯದವರು ಆರಾಧಿಸುತ್ತಾರೆ. ಇವರಲ್ಲಿ ಸತ್ಯದ ಅಧಿದೇವತೆಯನ್ನು ಆರಾಧಿಸುವ ಆಚರಿಸುವ ಪರಿಕಲ್ಪನೆ ಮೌಲ್ಯವೊಂದನ್ನು ಉಳಿಸಿಕೊಳ್ಳುವ ಪ್ರಯತ್ನವಾಗಿದೆ.

**ಡಿ.ಪಾಳ್ಯ** (ಬಯಲು ಹನುಮಂತ ಗೌರೀಬಿದನೂರು ತಾ) : ಊರಿನ ದೈವ ಹನುಮಂತ ಪಕ್ಕದ ಮುದುಗಾನಕುಂಟೆಯಲ್ಲಿ ಪಗಡೆಕಾಯಿ ಆಟ ಆಡುತ್ತಿದ್ದವನು ಊರಿನಲ್ಲಿ ತುರಕರು ನಿಧಿ ಅಗೆಯಲು ತೊಡಗಿದ್ದ ತಕ್ಷಣ ಓಡಿಬಂದ ಕದಿರಿದ್ಯಾವರಗುಟ್ಟೆಯಲ್ಲಿ ಒಂದು ಹೆಜ್ಜೆ ಊರಿನ ಮುಂದೆ ಒಂದು ಹಾಕಿದ ಕಳ್ಳರು ಓಡಿದರು ಬಯಲಿನಲ್ಲಿ ಗುಡಿಕಟ್ಟಿದರು. ಛಾವಣಿ ಇಲ್ಲ.

**ಕಾಟನಗಲ್ಲು ಹನುಮಂತರಾಯ** (ಗೌರೀಬಿದನೂರು ತಾ) : ಈತ ಸಾಸಲು ಚಿನ್ನಮ್ಮನು ಬೆಂಡಿನ ರಥದಲ್ಲಿ ಕದ್ರಿದೇವರಿಗೆ ಯಾತ್ರೆ ಹೊರಡುತ್ತಿರುವುದನ್ನು ಬಹುದೂರದವರೆಗೆ ನೋಡಲೆಂದು ಬೆಳೆಯುತ್ತಾ ಹೋದನಂತೆ. ಇದನ್ನು ಗಮನಿಸಿ ಭಕ್ತರು ದೈವದ ತಲೆಯ ಮೇಲೆ ಮೊಳೆ ಹೊಡೆದರು. ಆಗ ಬೆಳವಣಿಗೆ ನಿಂತಿತು ಎಂದು ಐತಿಹ್ಯವಿದೆ. ಶಿಷ್ಟ ಪರಂಪರೆಯಲ್ಲಿ ಬಾಲಕ ಹನುಮನು ಸೂರ್ಯನನ್ನು ಹಣ್ಣೆಂದು ಪರಿಭಾವಿಸಿ ಆಗಸದ ಎತ್ತರಕ್ಕೆ ಬೆಳೆದ ಪ್ರಸಂಗವಿದೆ. ಆದರೆ, ಸ್ಥಳೀಯವಾಗಿ ಇಲ್ಲಿನ ಜನಪದರ ಪರಿಕಲ್ಪನೆ ಸಾಸಲ ಚಿನ್ನಮ್ಮನ ಕಥೆಯೊಂದಿಗಿನ ಸ್ಪಂದನೆಯಾಗಿದೆ.

**ಬ್ಯಾಟರಾಯಸ್ವಾಮಿ** (ಬ್ಯಾಟರಾಯನಹಳ್ಳಿ, ಬಂಗಾರಪೇಟೆ ತಾ) : ಬೇಟೆಗಾಗಿ ಭೂಮಿಗೆ ಬಂದ ವಿಷ್ಣುವಿನ ಒಂದು ಅವತಾರ ಎಂದು ಹೇಳುತ್ತಾರೆ. ವಿಷ್ಣುವನ್ನು ಅಗಲಿದ ಲಕ್ಷ್ಮೀ ಭೂಮಿಯಲ್ಲಿ ಪದ್ಮಾವತಿಯಾಗಿ (ಚಂಚುಲಕ್ಷ್ಮೀ) ಅವತರಿಸಿದಳಂತೆ. ಆಗ ವಿಷ್ಣು ಬೇಟೆಗಾರನಾಗಿ ಇಲ್ಲಿಗೆ ಬಂದನೆಂದೂ ಸ್ಥಳಪುರಾಣವಿದೆ. ಮಾಗಡಿಯಿಂದ ಈ ದೇವರು ಬಂದಿತೆಂದೂ ಮುಳಮಾಚನಹಳ್ಳಿಯಲ್ಲಿ ಕೆಲವು ಕಾಲ ಉಳಿದುಕೊಂಡಿತ್ತೆಂದೂ ಹೇಳುವುದುಂಟು. ಮುಳಮಾಚನಹಳ್ಳಿಯಲ್ಲೂ ಈ ದೇವಾಲಯವಿದೆ. ಈ ದೈವವು ನಾಯಕ ಜನಾಂಗದ ಕುಲದೈವವಾಗಿದ್ದಾನೆ.

**ಭೈರವ** : ಸೀತಿಗ್ರಾಮ ಕೋಲಾರ ತಾಲ್ಲೂಕು (ಬೆರಳೊಕ್ಕಲಿಗರ ಕುಲದೇವತೆ) ಮೊರಸು ಒಕ್ಕಲಿಗರು ಈ ದೈವಕ್ಕೆ ತಮ್ಮ ತೋರುಬೆರಳುಗಳನ್ನು ನೀಡುತ್ತಿದ್ದರೆಂದು ಐತಿಹ್ಯವಿದೆ. ಚೋಳರ ದೊರೆ ರಾಜೇಂದ್ರ (ಕಿ.ಶ.ಸು.೧೦೨೦), ಕುಲೋತ್ತುಂಗ ಚೋಳ (ಸು. ೧೦೮೦). ಇವರಿಬ್ಬರೂ ಈ ಗುಡಿಯ ಬಗ್ಗೆ ಆಸಕ್ತಿ ಹೊಂದಿರುವುದರ ಬಗ್ಗೆ ಶಾಸನಾಧಾರಗಳಿವೆ. ಈ ದೇವರಿಗೆ ಬೆರಳು ಕೊಡುವ ಪದ್ಧತಿಯೊಂದಿಗೆ ರುಂಡಬಲಿ, ಶಿಶ್ನಪೂಜೆ, ಹೆಂಡಮಾಂಸದೊಂದಿಗೆ ನೈವೇದ್ಯ ಮತ್ತು ಬೆತ್ತಲೆ ಪೂಜೆಗಳು ನಡೆಯುತ್ತಿದ್ದವು. ಈಗ ತೋರುಬೆರಳಿಗೆ ಹೂವು ಸುತ್ತಿ ಅದನ್ನು ಕತ್ತರಿಸುತ್ತಾರೆ. ಸೀತಿಬೆಟ್ಟದ ಹತ್ತಿರದಲ್ಲಿ ಗೌತಮನಗುಡ್ಡ ಭಸ್ಮಾಸುರನ ಬೆಟ್ಟಗಳಿವೆ. ಈ ಗುಡ್ಡದಲ್ಲಿ ಭಸ್ಮಾಸುರನು ಮೋಹಿನಿ ರೂಪದ ವಿಷ್ಣುವಿನಿಂದ ಹತನಾದನೆಂಬ ಐತಿಹ್ಯವಿದೆ. ಗೌತಮನ ಗುಡ್ಡದ ಮೇಲಿರುವ ಹುತ್ತಕ್ಕೆ ವರ್ಷಕ್ಕೊಮ್ಮೆ ಪೂಜೆ ಮಾಡುತ್ತಾರೆ. ಇಲ್ಲಿ ಗೌತಮ ಋಷಿ ಇದ್ದನೆಂಬ ಪ್ರತೀತಿ ಇದೆ. ಭಸ್ಮಾಸುರನ ಬೆಟ್ಟದ ಮೇಲೆ ಬೀಳುವ ಮಳೆಯ ನೀರು ಕೆಳಕ್ಕೆ ಹರಿಯುವುದೇ ಇಲ್ಲವೆಂದು ಹೇಳುತ್ತಾರೆ. ಮಳೆಯ ನೀರಿನ ಗುರುತು ಸಹ ಈ ಗುಡ್ಡದ ಮೇಲೆ ಕಾಣಲು ಸಾಧ್ಯವಿಲ್ಲ ಎನ್ನುತ್ತಾರೆ. ತನ್ನ ಮೇಲೆ ಬಿದ್ದ ನೀರಿನ್ನೆಲ್ಲ ಹೀರಿಕೊಳ್ಳುವ ಗುಣ ಈ ಬೂದಿಮಣ್ಣಿಗಿದೆ.

**ಕರಾಳಉದ್ದಂಡಮ್ಮ** (ಕೆ.ಜಿ.ಎಫ್. ಬಂಗಾರಪೇಟೆ ತಾ) : ಉದ್ದಂಡಮ್ಮನ ಅಕ್ಕನೆಂದು ಕರೆಯುತ್ತಾರೆ. ಈಕೆ ಪ್ರಭಾವಶಾಲಿ ವನದೇವತೆ. ಐತಿಹ್ಯಗಳು ಹೀಗಿವೆ : ೧. ಚಿನ್ನದ ಆಸೆಗಾಗಿ ಬಂದ ಬ್ರಿಟಿಷರು ಮಹಿಮೆಯನ್ನು ಕಡೆಗಣಿಸಿ ಆಸ್ಪತ್ರೆಯನ್ನು ಕಟ್ಟಲು ಬಯಸಿದರು. ಆಗ ಬುನಾದಿ ತೆಗೆಯಲು ಪ್ರಯತ್ನಿಸಿದರು. ಆದರೆ ಸಾಧ್ಯವಾಗಲಿಲ್ಲ. ಆದ್ದರಿಂದ ಮಾರಿಕುಪ್ಪಂ ಬಳಿ ಆಸ್ಪತ್ರೆಯನ್ನು ತಿರುಗಿಸಿ ಕಟ್ಟಿದರು. ೨. ಆಸ್ಪತ್ರೆ ಕಟ್ಟಿಸಲು ಪ್ರಯತ್ನಿಸಿ ದೇವರನ್ನು ನಂಬದ ತೆಂಕ್ಲ ಎಂಬ ಬ್ರಿಟೀಷ ವೈದ್ಯಕಾರಿಗೆ ಕಣ್ಣು ಕಾಣದಾಯಿತು. ದೇವಿ ಭಕ್ತನ ಮೇಲೆ ಆವೇಶವಾಯಿತು. ಕುಂಕುಮವನ್ನು ತೆಂಕ್ಲನ ಕಣ್ಣುಗಳಿಗೆ ಬಳಿಯಲಾಯಿತು. ಆಗ ಅವರಿಗೆ ಕಣ್ಣು ಕಾಣಿಸಿತಂತೆ. ಭಕ್ತರು ಮತ್ತು ವೈದ್ಯರು ಅದೇ ಜಾಗದಲ್ಲಿ ದೇವಾಲಯ ಕಟ್ಟಿಸಿ ಆಸ್ಪತ್ರೆಯನ್ನು ಕ್ರಾಸಾಗಿ ಕಟ್ಟಿಸಿದರು.

**ವೇಣುಗೋಪಾಲ ಸ್ವಾಮಿ** (ಕುರುಗಲ್, ಕೋಲಾರ ತಾ) : ವೇಣುಗೋಪಾಲ ಸ್ವಾಮಿಯ ಅಣ್ಣ ಸೋಮೇಶ್ವರ ಕೋಡಿಯ ದಡದಲ್ಲಿದ್ದಾನೆ. ಒಮ್ಮೆ ಕೆರೆ ತುಂಬಿ ಕೋಡಿ ಹರಿಯುತ್ತಿರುವಾಗ ಸೋಮೇಶ್ವರ ಗುಡಿಯಲ್ಲಿದ್ದ ಲಿಂಗ ಮುಳುಗುವ ಸ್ಥಿತಿಗೆ ಬಂತಂತೆ. ಆಗ ಇಲ್ಲಿನ ಪೂಜಾರಿ ಎಲೆ ಅಡಿಕೆ ತೆಗೆದುಕೊಂಡು ಕರ್ಪೂರವನ್ನು ಅದರಲ್ಲಿ ಅಂಟಿಸಿ ಒಂದು ತಟ್ಟೆಯಲ್ಲಿಟ್ಟು ನೀರಿನ ಮೇಲೆ ತೇಲಿ ಬಿಟ್ಟರಂತೆ. ಅದು ನೀರಿನ ನಡುವೆ ಹೋಗುವ ವೇಳೆಗೆ ಕಟ್ಟೆ ಒಡೆದು ನೀರಿನ ಮಟ್ಟ ಕಡಿಮೆ ಆಯಿತಂತೆ. ಅಂದಿನಿಂದ ಸೋಮೇಶ್ವರ ಸ್ವಾಮಿಯನ್ನು ರಕ್ಷಿಸುವ ಹೊಣೆ ವೇಣುಗೋಪಾಲಸ್ವಾಮಿಯದು ಆಗಿದೆಯೆಂದು ನಂಬಿಕೆಗೆ ಪೂರಕವಾದ ಐತಿಹ್ಯವಿದೆ.

**ವೀರಚಿಕ್ಕಪ್ಪ ಸ್ವಾಮಿ** (ಕಾಡಹಳ್ಳಿ, ಕೋಲಾರ ತಾ) : ಈತ ಒಕ್ಕಲಿಗರ ಮನೆದೈವ. ಬಲಗೈಯ ಆನೇ ಬೆರಳನ್ನು ಒಂದು ಅಂಗುಲದಷ್ಟು ಕತ್ತರಿಸಿ ಬಲಿಕೊಡುವ ಪದ್ಧತಿ ಇತ್ತು. ಈಗ ಬೆರಳಿಗೆ ಸುತ್ತಿರುವ ಹೂವನ್ನು ಕತ್ತರಿಸುತ್ತಾರೆ. ಪಾಳೆಯಗಾರರ ಕಾಲದಲ್ಲಿ ಸೈನ್ಯಕ್ಕೆ ಸೇರುವುದರಿಂದ ಪಾರಾಗಲು ದೈವಕ್ಕೆ ಕಿರುಬೆರಳನ್ನು ಅರ್ಪಿಸುತ್ತಾ ಬಂದಿರಬಹುದೆಂದು ಊಹಿಸಬಹುದು. ಶ್ರೀವೀರಭದ್ರಸ್ವಾಮಿ, ದಳಸನೂರು, ಶ್ರೀನಿವಾಸಪುರ ತಾಲ್ಲೂಕು ಬ್ರಾಹ್ಮಣನೊಬ್ಬ ತನ್ನ ಸೊಪ್ಪಿನ ತೋಟದಲ್ಲಿ ಅಗಿಯುತ್ತಿದ್ದಾಗ ಅವನ ಗುದ್ದಲಿಗೆ ಸಿಕ್ಕಿ ಮೇಲೆದ್ದ ವಿಗ್ರಹ ದೊರೆತ ಒಂದು ವಾರದಲ್ಲಿ ಆತ ಸತ್ತನಂತೆ. ಊರವರು ಭಕ್ತಿಯಿಂದ ದೇವಾಲಯ ಕಟ್ಟಿಸಿದ್ದಾರೆಂದು ಐತಿಹ್ಯ.

**ಬುರುಜು ಗಂಗಮ್ಮ** (ರಾಗಿಮಾಕಲಪಲ್ಲಿ, ಬಾಗೇಪಲ್ಲಿ ತಾ) : ಐತಿಹ್ಯ ೧. ಬಹಳ ಹಿಂದೆ ಒಬ್ಬ ವ್ಯಕ್ತಿ ಬಾವಿ ತೋಡಿಸುತ್ತಿದ್ದಾಗ ವಿಗ್ರಹರೂಪದ ಕಪ್ಪು ಕಲ್ಲು ಸಿಕ್ಕಿತಂತೆ. ನೀರು ಚೆನ್ನಾಗಿ ಸಿಕ್ಕಿತಂತೆ, ಬಾವಿಯ ಪಕ್ಕದಲ್ಲಿ ಜನ ಗುಡಿ ಕಟ್ಟಿ ಆ ವಿಗ್ರಹವನ್ನೇ ಪ್ರತಿಷ್ಠಾಪಿಸಿದರೆಂದು ಹೇಳುತ್ತಾರೆ. ೨. ಕೆರೆಗೆ ಕಟ್ಟೆ ಕಟ್ಟುತ್ತಿರುವಾಗ ಒಂದು ಗುಣಿ ಕಾಣಿಸಿತಂತೆ. ಅಲ್ಲಿ ಅಗೆದಾಗ ನೀರು ಉಕ್ಕಿತಂತೆ ಒಳಗೆ ಏನಾದರೂ ಇದೆಯೇನೋ ಎಂದು ಅನುಮಾನದಿಂದ ಅಗೆದಾಗ ಗಂಗಮ್ಮನ ಕಲ್ಲು ವಿಗ್ರಹ ಸಿಕ್ಕಿತೆಂದು ಪ್ರತೀತಿ. ೩. ಪಾಳೆಗಾರರ ಕಾಲದಲ್ಲಿ ಊರ ಸುತ್ತಲೂ ಕೋಟೆಗಳನ್ನು ಕಟ್ಟಿಕೊಂಡಿದ್ದರು. ಇದರಲ್ಲಿ ನಾಲ್ಕು ಕಡೆ ಬುರುಜುಗಳಿರುತ್ತವೆ. ಊರ ಬಾಗಿಲ ಹತ್ತಿರ ಬುರುಜು ಗಂಗಮ್ಮ ದೇವತೆಯೆಂದು ಇಟ್ಟುಕೊಂಡಿದ್ದರೆಂಬ ಪ್ರತೀತಿ.

**ನರಸಿಂಹ ಸ್ವಾಮಿ** (ಅಬ್ರಕವಾರಪಲ್ಲಿ, ಬಾಗೇಪಲ್ಲಿ ತಾ) : ಒಬ್ಬ ಹುಡುಗ ದನ ಕಾಯುತ್ತಿದ್ದ. ಒಂದು ಹಸು ಬೆಟ್ಟದ ಒಂದು ಹುತ್ತದ ಬಳಿ ಪ್ರತಿದಿನ ನಿಲ್ಲುತ್ತಿತ್ತಂತೆ. ಏಕೆಂದು ಒಂದು ದಿನ ಹುಡುಗ ನೋಡಿದ. ಒಂದು ನಾಗರಹಾವು ಹುತ್ತದಿಂದ ಹೊರಬಂದು ಹಾಲು ಕುಡಿಯುತ್ತಿದೆ. ಆಗ ಅವನಿಗೆ

ಒಂದು ಶಬ್ದ ಕೇಳಿಸಿತಂತೆ. ನನಗೆ ಇಲ್ಲಿ ದೇವಾಲಯ ಕಟ್ಟಿಸು ನೀನು ಪೂಜಾರಿಯಾದರೆ ನಿನಗೆ ಐಶ್ವರ್ಯವನ್ನು ಕೊಡುತ್ತೇನೆ ಎಂದಿತು. ದೇವಾಲಯ ಕಟ್ಟಿಸಿದರು. ಈ ದೇವರ ಮೂಲ ಕದ್ರಿ. ರಾಮನ ಹುಣ್ಣಿಮೆಯ ದಿನ ಜಾತ್ರೆ ನಡೆಯುವುದು ಇಲ್ಲಿನ ವಾಡಿಕೆ.

**ರಾಮಸ್ವಾಮಿ** (ರಾಮೋಜಪಲ್ಲಿ, ಬಾಗೇಪಲ್ಲಿ ತಾ) : ಸೀತೆಗಾಗಿ ರಾಮ ಜಿಂಕೆಯ ಮೇಲೆ ಬಾಣ ಪ್ರಯೋಗಿಸಿದ ರಾಮನಿದ್ದ ಸ್ಥಳ ರಾಮೋಜಪಲ್ಲಿ. ಜಿಂಕೆ ಸತ್ತ ಸ್ಥಳ ಜಿಂಕೆಪಲ್ಲಿ. ಬಾಣ ಬಿದ್ದ ಸ್ಥಳ ಬಾಣಾಲಪಲ್ಲಿ ಎಂಬ ಹಳ್ಳಿಗಳಾದವೆಂದು ಐತಿಹ್ಯ.

**ಅಕ್ಕಾಯಮ್ಮ** (ರಾಯರೇಕಲಹಳ್ಳಿ, ಗೌರಿಬಿದನೂರು ತಾ) : ಯುದ್ಧದಲ್ಲಿ ಏಳು ಜನ ಅಣ್ಣ-ತಮ್ಮಂದಿರು ಮಡಿದು ಅವರ ಹೆಂಡತಿಯರು ಸಹಗಮನಕ್ಕೆ ಹೆದರಿದಾಗ ಧೈರ್ಯದಿಂದ ಮೊದಲು ಸಹಗಮನ ಮಾಡಿದ ಹಿರಿಯ ಸೊಸೆಯೊಬ್ಬಳ ಆರಾಧನೆಯ ಮಹಾಸತಿ ಆರಾಧನೆಯ ಐತಿಹ್ಯವಾಗಿದೆ.

**ಗಂಟಲು ಮಲ್ಲಮ್ಮ** (ಪಾತಪಾಳ್ಯ, ಬಾಗೇಪಲ್ಲಿ ತಾ) : ದೇವಾಲಯವಿರುವ ಪ್ರದೇಶದಲ್ಲಿ ಮೊದಲಿಗೆ ಲಂಬಾಣಿ ತಾಂಡಗಳಿದ್ದು ಕಳ್ಳತನವಾಗುತ್ತಿದ್ದವಂತೆ. ಚಿಂತಾಮಣಿ ಬಾಗೇಪಲ್ಲಿಯ ಬಸ್ ಓನರ್ ಚೆಲುವರಾಜು ಎರಡು ಸಲ ಕಳ್ಳರಿಗೆ ಸಿಕ್ಕಿಹಾಕಿಕೊಂಡರು. (ಬಸ್ ದೋಚುತ್ತಿದ್ದರು) ದೇವರಿಗೆ ಹರಕೆ ಮಾಡಿಕೊಂಡು ಅಲ್ಲಿ ದೇವಾಲಯ ಕಟ್ಟಿಸಿದರು. ಅಂದಿನಿಂದ ಕಳ್ಳತನವಿಲ್ಲ.

**ಕೋಳಾಲಮ್ಮ** (ಬನಹಳ್ಳಿ, ಚಿಂತಾಮಣಿ ತಾ) : ಒಬ್ಬ ಮಾದಿಗ ಮಂತ್ರವಾದಿಯ ಕಾಟಕ್ಕೆ ತಾಳಲಾರದೆ (ದ್ವಾಪರಯುಗದಲ್ಲಿ) ಗಂಗಮ್ಮ ಮಾರಮ್ಮ ಇವರುಗಳ ಜೊತೆ ಕೈವಾರ ಬೆಟ್ಟಕ್ಕೆ ಬಂದ ಬ್ರಾಹ್ಮಣ ಕನ್ಯೆ ಕೋಳಾಲಮ್ಮ. ಏಳು ಜನ ಅಕ್ಕಂದಿರೊಂದಿಗೆ ಕೈವಾರದಲ್ಲಿ ನೆಲೆಸಿದ್ದರೂ ಕೋಳಾರಮ್ಮನಿಗೆ ಕೈವಾರದವರು ಸೀರೆ ಕೊಡಲಿಲ್ಲವೆಂದು ಕೋಪಿಸಿಕೊಂಡು ಪಕ್ಕದ ಊರಾದ ಬನಹಳ್ಳಿಯಲ್ಲಿ ನೆಲಸಿದ್ದಾಳೆ ಎಂದು ಐತಿಹ್ಯವಿದೆ. ಹಬ್ಬದ ದಿನ ಕೈವಾರದವರು ಕೋಳಾರಮ್ಮನಿಗೆ ಎರಡು ಸೀರೆ, ಎರಡು ಕುಪ್ಪಸ ತೆಗೆದುಕೊಂಡು ಹೋಗುತ್ತಾರೆ. ಈ ಆಚರಣೆಯಲ್ಲಿ ಅಡಗಿದ ಐತಿಹ್ಯದ ಅಂಶಗಳು ಹೀಗಿವೆ : ಹೊಸೂರಿನ ಬೇಡನಾಯಕರ ಮನೆಯ ದೀಪ ಬರುವವರೆಗೂ ಅಂದು ಯಾರೂ ದೀಪ ತರಬಾರದು, ಬೆಳಗಬಾರದು. ಬನಹಳ್ಳಿಯ ಒಕ್ಕಲಿಗರ ಹೆಣ್ಣನ್ನು ಹೊಸೂರಿನ ನಾಯಕ ಮದುವೆ ಆಗಿದ್ದನಂತೆ. ಜಾತ್ರೆಯ ದಿನ ಹೊಸೂರಿನ ನಾಯಕರ ದೀಪ ಬರದಿದ್ದರೆ ಏನಾದರೂ ತೊಂದರೆ ಬರುತ್ತಂತೆ. ಜಾತ್ರೆಯ ಬಲಿ ಕೊಡುವುದಕ್ಕೆ ಕೈವಾರದವರೇ ಹೋಗಬೇಕು. ದೇವಿಯ ವಿಗ್ರಹದ ಮೆರವಣಿಗೆಯ ಮುಂದೆ ಮಾದಿಗರ ವಂಶಕ್ಕೆ ಸೇರಿದವನೊಬ್ಬ ಒಂದು ಕಾಲಿಗೆ ಚಪ್ಪಲಿ ಮತ್ತೊಂದು ಕಾಲಿಗೆ ಬೂಟು ಹಾಕಿಕೊಂಡು ಹೋಗುತ್ತಾನೆ. ಅವನು ಹಿಂದೊಮ್ಮೆ ಬನಹಳ್ಳಿಯವನನ್ನು ರಕ್ಷಿಸಿದವನನ್ನು ಪ್ರತಿನಿಧಿಸುತ್ತಿರುತ್ತಾನೆ.

ಭರಣಿ ಮಳೆಯ ಕೊನೆಯ ದಿನಗಳಲ್ಲಿ ನಡೆಯುವ ಇಲ್ಲಿನ ಜಾತ್ರೆಯಲ್ಲಿ ಅಕ್ಕತಂಗಿಯರಿಗೆ ಒಬ್ಬೊಬ್ಬರಿಗೂ ಒಂದೊಂದು ದಿನ ಜಾತ್ರೆ. ಕೊನೆಯ ದಿನ ಕೋಳಾಲಮ್ಮನಿಗೆ ಜಾತ್ರೆ, ಕೋಲಾಳಮ್ಮನಿಗೆ ಸಂಬಂಧಿಸಿದಂತೆ ಒಕ್ಕಲಿಗರು, ನಾಯಕರು ಮತ್ತು ಮಾದಿಗರ ಸಾಂಸ್ಕೃತಿಕ ಅನನ್ಯತೆಯ ಸಾಮರಸ್ಯ ಕಂಡುಬರುತ್ತದೆ.

**ಸತ್ಯಮ್ಮ** (ತಿಮ್ಮಸಂದ್ರ, ಚಿಂತಾಮಣಿ ತಾ) : ಮೊದಲಿಗೆ ಬಯಲಿನ ಮಧ್ಯದಲ್ಲಿ ಕಲ್ಲಿನ ಸತ್ಯಮ್ಮನಿದ್ದು ದೇವಾಲಯವಿರಲಿಲ್ಲ. ಕಾಗೆ-ಗುಬ್ಬಿಗಳು ಕಲ್ಲಿನ ಮೇಲೆ ಹೊಲಸು ಮಾಡುತ್ತಿದ್ದವು. ಬೇಸರಗೊಂಡು ದೇವಿ ಅಲ್ಲಿನ ಬಿಲ್ವಪತ್ರೆ ಮರ ಸೇರಿದಳು. ಆ ಸ್ಥಳದಲ್ಲಿ ಅಪಘಾತಗಳು ಹೆಚ್ಚಾದವು. ಜನ ತಮ್ಮ ಕಷ್ಟಗಳಿಗೆ ಕಾರಣ ಏನೆಂದು ಪಕ್ಕದ ಊರಾದ ದೊಡ್ಡಹಳ್ಳಿ ಮಾರಮ್ಮನನ್ನು ಕೇಳಲು ಆಕೆ ಕಾರಣ ವಿವರಿಸುತ್ತಾಳೆ. ಪರಿಹಾರವನ್ನು ಸೂಚಿಸುತ್ತಾಳೆ. ಯುಗಾದಿಯ ಮೂರನೆಯ ದಿವಸ ಅಖಂಡ ದೀಪವನ್ನು ೯ ದಿನಗಳವರೆಗೆ ಬೆಳಗಿಸಬೇಕು. ೯ನೇ ದಿನ ೯ ಬ್ರಹ್ಮಚಾರಿಗಳನ್ನು ಸ್ನಾನ ಮಾಡಿಸಿ ಬಿಲ್ವಪತ್ರಿಯ ಮರದಡಿ ನಿಲ್ಲಿಸಬೇಕು. ಅವರಲ್ಲಿ ಯಾರಿಗೆ ದೇವಿ ಮೈಮೇಲೆ ಬಂದರೆ ಅವರು ಪೂಜಾರಿ ಆಗಬೇಕು ಎಂದಳಂತೆ. ಆದರೆ ಬ್ರಹ್ಮಚಾರಿಗಳ ಮೈಮೇಲೆ ದೇವಿ ಆವಾಹನೆಯಾಗದೆ, ಹುಲ್ಲಿಗೆ ಹೊರಟ ವೆಂಕಟರಾಯಪ್ಪನ ಮೈಮೇಲೆ ಬಂತಂತೆ. ಒಂದು ಕೊಂಬೆ ವಾಲಿರುವ ಕಡೆ ದೇವಿಯ ಸೂಚನೆಯಂತೆ ಗುಡಿ ಕಟ್ಟಿದರು. ವೆಂಕಟರಾಯಪ್ಪನಿಗೆ ಪ್ರತಿ ಶುಕ್ರವಾರ ಮೈಮೇಲೆ ಬರುತ್ತಿದ್ದಳು. ಆತ ಸತ್ತು ಈಗ ಆತನ ಮಗ ನಾರಾಯಣಪ್ಪನ ಮೈಮೇಲೆ ಬರುತ್ತಾಳೆ. ಇವರು ಹೊಲೆಯ ಜಾತಿಯವರು.

**ಪಟಾಲದಮ್ಮ** (ಚಿಂತಾಮಣಿ) : ಐತಿಹ್ಯದ ಪ್ರಕಾರ ನಾಯಕನಹಳ್ಳಿಯ ಬ್ರಾಹ್ಮಣ ಕನ್ಯೆ ಮೆಚ್ಚಿದ ಹುಡುಗನನ್ನು ಮದುವೆ ಆಗಲು ಸಾಧ್ಯವಾಗಲಿಲ್ಲವೆಂದು ಆ ಊರನ್ನು ಬಿಟ್ಟು ಚಿಂತಾಮಣಿಗೆ ಬರುತ್ತಾಳೆ. ಕೋಪಿಸಿಕೊಂಡು ಬಂದು ಇಲ್ಲಿಯೇ ಉಳಿದವಳಿಗೆ ನಾಯಕನಹಳ್ಳಿಯ ಜನರೇ ಒಂದು ಗುಡಿ ಕಟ್ಟಿಸಿದ್ದಾರೆ. ಈಕೆ ಒಕ್ಕಲಿಗರ ಕುಲ/ಮನೆದೇವತೆ. ಅರ್ಚಕ ಬ್ರಾಹ್ಮಣನಾಗಿದ್ದಾನೆ.

**ಬಾಣಂತಿ ಭೈಯಮ್ಮ** (ನಗರಗೆರೆ. ಗೌರೀಬಿದನೂರು ತಾ) : ಗುಡ್ಡಕೊತ್ತೂರು ಗ್ರಾಮದ ರೆಡ್ಡಿಮನೆಯ ಸೊಸೆ ಗರ್ಭಿಣಿ ಭೈಯಮ್ಮ ಜಗಳವಾಡಿಕೊಂಡು ಬಂದು ಕೆರೆಯಲ್ಲಿ ಬಿದ್ದು ಸಾಯುತ್ತಾಳೆ. ಹಿಂಬಾಲಿಸಿಕೊಂಡು ಬಂದ ತಳವಾರ ಮತ್ತು ಅವನ ನಾಯಿಯೂ ಕೆರೆಗೆ ಬೀಳುತ್ತಾರೆ. ಅಲ್ಲೇ ಮೇಯುತ್ತಿದ್ದ ಹಾವೂ ಬೀಳುತ್ತದೆ. ಕೆರೆತೂಬಿನ ಬಳಿ ದೇವಾಲಯವಿದೆ. ಪುಟ್ಟಕಲ್ಲುಗಳು ಅನೇಕವಿದ್ದು ದೊಡ್ಡ ಕಲ್ಲು ಮಧ್ಯೆ ಇದೆ. ಪ್ರತಿ ವರ್ಷವೂ ಅವಳಿಗೆ ಮಗುವಾಗುತ್ತಿತ್ತಂತೆ. ಅಂದರೆ ಒಂದೊಂದು ಕಲ್ಲು ಉದ್ಭವಿಸುತ್ತಿತ್ತಂತೆ. ರಾತ್ರಿಯಿಡೀ ಮಗುವನ್ನು ಸುಧಾರಿಸುವ ಶಬ್ದ ಕೇಳಿ ಬರುತ್ತಿತಂತೆ. ಒಮ್ಮೆ

ಯಾರೋ ರಾತ್ರಿಯ ವೇಳೆ ಕಳ್ಳತನದಲ್ಲಿ ಹಸುವನ್ನು ಆ ದೇವಾಲಯದಲ್ಲಿ ಕೊಂದು ಮಾಂಸ ಪಾಲು ಮಾಡಿಕೊಂಡರಂತೆ. ಅಂದಿನಿಂದ ಕಲ್ಲುಗಳು ಹುಟ್ಟುವುದು, ಮಗುವನ್ನು ಸುಧಾರಿಸುವುದು ನಿಂತವಂತೆ ದೇವಾಲಯದ ಹೊಸ್ತಿಲನ್ನು ಕೆರೆಯ ನೀರು ದಾಟುವುದಿಲ್ಲ.

**ಮುದುಗಾನಕುಂಟೆ ಗಂಗಮ್ಮ** (ಗೌರೀಬಿದನೂರು ತಾ) : ಗಂಗಮ್ಮನೊಂದಿಗೆ ಸಪ್ತಮಾತೃಕೆಯರು ರಾತ್ರಿ ವೇಳೆ ಸೇರುತ್ತಾರಂತೆ. ರಾತ್ರಿ ವೇಳೆ ಈ ಸ್ಥಳದಲ್ಲಿ ಉಳಿದವರು ರಕ್ತ ವಾಂತಿ ಮಾಡಿ ಸಾಯುತ್ತಾರೆ. ಬಳೆಗಾರನೊಬ್ಬ ಹೊರಡಲು ತಡವಾಗಿ ಒಂದು ರಾತ್ರಿ ಉಳಿದಿದ್ದ. ಬೆಳಕು ಹರಿಯುವ ಸಮಯಕ್ಕೆ ಸತ್ತಿದ್ದನೆಂಬ ಐತಿಹ್ಯವಿದೆ.

**ಮುಕ್ಕಡಿ ಲಚ್ಚುಮಮ್ಮನ ದೇವಾಲಯದ ಐತಿಹ್ಯಗಳು** : ೭ ಕೊಪ್ಪರಿಗೆಯ ನಿಧಿಯಿದೆಯೆಂಬ ನಂಬಿಕೆ. ಕಂಬಗಳ ಆಧಾರದ ಮೇಲೆ ದೇವಾಲಯದ ಚಾವಣಿ ನಿಂತಿದೆ. ಕಾಡಕ್ಕನವರ ಮನೆಯವರು ಪ್ರಯಾಣಿಕರನ್ನು ಕೊಂದು ಲೂಟಿ ಮಾಡುತ್ತಿದ್ದರು. ಗರ್ಭಿಣಿ ಹೆಣ್ಣನ್ನು ಬಲಿಕೊಟ್ಟು ನಿಧಿ ತಂದು ಊರ ಬಾಗಿಲಲ್ಲಿ ನೆತ್ತರು ವಾಂತಿ ಮಾಡಿ ಸತ್ತರು. ನಿಧಿ ಅಲ್ಲಲ್ಲಿ ನೆಲದೊಳಕ್ಕೆ ಸೇರಿಕೊಂಡಿತು. ಆಂಧ್ರದ ಮೋಡಿಕಾರರು ಮೋಡಿ ಮಾಡಿ ದೇವತೆಯನ್ನು ಕಟ್ಟಿಹಾಕಿ ನಿಧಿ ತೆಗೆಯುತ್ತಿದ್ದರು. ಬಾಯಿ ಸ್ವಲ್ಪ ಸಡಿಲ ಮಾಡಿಕೊಂಡು ತನ್ನ ಅಣ್ಣ ಕಳಂಕರಾಯನನ್ನು (ಹತ್ತಿರದ ದೇವಾಲಯ) ಕೂಗಿದಳು. ಆತ ಬರುವ ವೇಳೆಗೆ ಕಳ್ಳರು ಅವಳ ಮೂಗನ್ನು ಕತ್ತರಿಸಿದರಂತೆ. ಅವರಿಗೆ ಕಲ್ಲುಗಳಾಗುವಂತೆ ಶಾಪ ಹಾಕಿದಳಂತೆ. ಅಂದಿನಿಂದ ಜಾತ್ರೆ ನಡೆಯುವುದಿಲ್ಲ. ಬಲಿಯಾದ ಗರ್ಭಿಣಿ ಹೆಣ್ಣು ತನ್ನ ಮಗುವನ್ನು ಸುಧಾರಿಸುತ್ತಾ ತಿರುಗುತ್ತಿದ್ದಳಂತೆ. ಇದು ಜಾತ್ರೆ ನಿಲ್ಲಲು ಕಾರಣವಾಯಿತಂತೆ.

**ಅಕ್ಕೋಜಮ್ಮ** (ಅಂಕತಟ್ಟಹಳ್ಳಿ, ಬಂಗಾರಪೇಟೆ ತಾ) : ತಮಿಳುನಾಡು ಕರ್ನಾಟಕ ಆಂಧ್ರ ಒಕ್ಕಲಿಗರು ಆರಾಧಿಸುವ ಮನೆದೇವತೆ. ಅತ್ಯಾಚಾರಕ್ಕೆ ಒಳಗಾದ ಒಕ್ಕಲಿಗರ ಹೆಣ್ಣು ಮಗಳು ದೇವತೆಯಾದಳೆಂದು ಐತಿಹ್ಯವಿದೆ. ಮಕ್ಕಳಿಗೆ ಕಿವಿ ಚುಚ್ಚುವುದು, ಮದುವೆ ಮಾಡಿಕೊಡುವುದು ಇತ್ಯಾದಿ ಆಚರಣೆಗಳನ್ನು ಇಲ್ಲಿ ನಡೆಸುತ್ತಾರೆ.

**ಚೌಡೇಶ್ವರಿ** (ಕಲ್ಲೂರು, ಶ್ರೀನಿವಾಸಪುರ ತಾ) : ಮೈಸೂರು ಅರಸರ ಆಳ್ವಿಕೆಯ ಕಾಲದಲ್ಲಿ ಮೈಸೂರಿಗೆ ದಸರಾ ಹಬ್ಬಕ್ಕೆ ಈ ಊರಿನವರು ಹೋಗಿದ್ದಾಗ ಈ ದೇವಿಯು ಮೈಮೇಲೆ ಬಂದು ದೇವಿ ತನ್ನೂರಿನ ಶಿಶುಗಳನ್ನು ಸಂಸ್ಕಾರ ಮಾಡುತ್ತಿಲ್ಲವೆಂದು ಆಕ್ಷೇಪಿಸಿದಳು. ಅಷ್ಟು ಜನರಲ್ಲಿ ಈ ಊರಿನಿಂದ ಹೋಗಿದ್ದವರನ್ನು ಗುರ್ತಿಸಿ ರಾಜನಿಗೆ ತೋರಿಸಿದಳಂತೆ. ದೇವಾಲಯವು ಮೈಸೂರು ರಾಜರ ಕಾಲದಲ್ಲಿ ಕಟ್ಟಿಸಿದ್ದು ಎನ್ನುತ್ತಾರೆ. ೫೦ ವರ್ಷಗಳ ಹಿಂದೆ ಕಳ್ಳರು ದೇವಿಯ ಆಭರಣಗಳನ್ನು ರಾತ್ರಿಯ ವೇಳೆ ಕದ್ದು

ಹುಣಸೆ ಮರದಡಿ ಭಾಗ ಮಾಡಿಕೊಳ್ಳುತ್ತಿದ್ದಂತೆ. ಮರ ಬುಡದಿಂದ ಬಗ್ಗಿ (ಶಬ್ದಮಾಡುತ್ತಾ) ಅವರು ಸತ್ತರಂತೆ. ಬಗ್ಗಿದ ಹಳೆ ಹುಣಸೆ ಮರವಿದೆ.

**ಮಹೇಶ್ವರಿ** (ಅಕ್ಕಮಂಗಲ, ಚಿಂತಾಮಣಿ ತಾ) : ಚಿಕ್ಕನರಸಿಂಹಯ್ಯನೆಂಬ ನಾಯಕರ ಜಾತಿಯ ವ್ಯಕ್ತಿಯು ಕೆರೆಯಲ್ಲಿ ಈಜುತ್ತಿದ್ದಾಗ ಈ ವಿಗ್ರಹವು ಸಿಕ್ಕಿತಂತೆ. ಅದನ್ನು ೩ ಮುದ್ದೆಗೆ ಕಾಡಳ್ಳಿಯ ಮುನೆಪ್ಪನಿಗೆ ಮಾರಿದನಂತೆ. ಆದರೆ ವರ್ಷಕ್ಕೊಮ್ಮೆ ದೇವತೆಯನ್ನು ತನ್ನೂರಿಗೂ ಕರೆಸುತ್ತಿದ್ದನಂತೆ. ಮಹಿಮೆ ಹಬ್ಬಿ ಭಕ್ತಾದಿಗಳು ದೇವಾಲಯ ಕಟ್ಟಿಸಿದರು. ವಿಗ್ರಹದ ಹಕ್ಕನ್ನು ಇವರಿಗೆ ಕೊಟ್ಟರು. ಅಂದಿನಿಂದ ದೇವತೆ ಏಕಾಂತದಲ್ಲಿ ನರಸಿಂಹಜ್ಜನ ಜೊತೆಯಲ್ಲಿ ಮಾತನಾಡುತ್ತಾಳಂತೆ.

**ಕರಗದಮ್ಮ** (ಶಿಡ್ಲಘಟ್ಟ) : ಮುತ್ತೂರಿನ (ಶಿಡ್ಲಘಟ್ಟರ ಜೀದಿ) ಬ್ರಾಹ್ಮಣರ ಮನೆಯ ಬಾವಿಯಲ್ಲಿ ಕೆಸರು ತೆಗೆಯಲು ಹೋದಾಗ ಮೊದಲಿಗೆ ರಾಗಿ (ತಾಮ್ರ) ಸಿಕ್ಕಿತು. ನಂತರ ಕೂದಲು ಮತ್ತು ರಕ್ತ ಕಾಣಿಸಿತು. ಅಷ್ಟರಲ್ಲಿ ಅವರ ಮನೆಯಲ್ಲಿ ಒಂದು ಜೀವ ಹೋಯಿತು. ಆದ್ದರಿಂದ ಅಲ್ಲೊಂದು ದೇವಸ್ಥಾನ ಕಟ್ಟಿ ದೇವರನ್ನು ಇಟ್ಟರು. ಮೊದಲು ಮನೆಯವರು ಪೂಜೆ ಮಾಡುತ್ತಿದ್ದರು. ನಂತರ ಊರಿನವರು ಹೋಗಲಾರಂಭಿಸಿದರು. ಬೆಂಗಳೂರಿನ ಕರಗದಂದು ಇಲ್ಲೂ ಕರಗ ನಡೆಯುತ್ತದೆ. (ನಾಯಕರು) ಇಲ್ಲಿನ ಪೂಜಾರಿಗಳು. ಜೇಟಪ್ಪ ನಾಯಕ್-ಕರಗದಮ್ಮನ ಪೂಜಾರರು. ಕರಗವನ್ನು ತಿಗಳರು ಹೊರುತ್ತಾರೆ. ಈಕೆ ಒಕ್ಕಲಿಗರ ಮನೆದೇವತೆ.

**ಬಂಡಿಮಂಕಾಳಮ್ಮ** (ಗೋಪಾಲಪುರ, ಚಿಂತಾಮಣಿ ತಾ) : ಹಿಂದಿನ ಕಾಲದಲ್ಲಿ ಎತ್ತು ಬಂಡಿ ಓಟದ ಸ್ಪರ್ಧೆ ದಿನ ಮಂಕಾಳಮ್ಮನಿಗೆ ಹರಸಿಕೊಂಡು ದೇವಾಲಯದ ಆವರಣಕ್ಕೆ (ಬಂಡಿ ಎತ್ತಿನೊಡನೆ) ಬಂದು ಪೂಜೆ ಮಾಡಿಸಿಕೊಂಡು ಹೋಗಿ ಸ್ಪರ್ಧೆಯಲ್ಲಿ ಭಾಗವಹಿಸುತ್ತಿದ್ದರು. ಹಾಗಾಗಿ ಈ ಹೆಸರು ಬಂದಿದೆ.

**ಮಹೇಶ್ವರಿ** (ಮಿಣಕನಗುರ್ಕಿ, ಗೌರಿಬಿದನೂರು ತಾ) : "ಕೊಂಡಾರೀಲು" ಎಂಬ ಮಠದ ಸನ್ಯಾಸಿ ಸ್ನಾನ ಮಾಡದೆ ಅಸಹ್ಯವಾಗಿದ್ದ ಈತನಿಗೆ ಭಿಕ್ಷೆ ಹಾಕಲೂ ಹಿಂಜರಿಯುತ್ತಿದ್ದರು. ಆತ ಮಿಣಕನ ಗುರ್ಕಿಯ ನದಿಯಲ್ಲಿ ಚಿಲುಮೆ ತೋಡಿ ನೀರು ಕುಡಿಯುತ್ತಿದ್ದಾಗ ತಾತ ನಿನ್ನ ಜೊತೆ ನಾನು ಬರುತ್ತೇನೆ ಎಂಬ ಅವ್ಯಕ್ತ ಧ್ವನಿ ಕೇಳಿಸಿತು. ಬಾ ಎಂದು ಕರೆಯಲು ಚಿಕ್ಕ ಕಲ್ಲೊಂದು ಚಿಲುಮೆಯಲ್ಲಿ ಹುಟ್ಟಿತು. ಅದೊಂದು ಚಿಕ್ಕ ಹುಡುಗಿಯಾಯಿತು. ಸನ್ಯಾಸಿ ಹುಡುಗಿಯನ್ನು ಕರೆತರುತ್ತಿರಲು ಊರಿನ ಜನ ಕಲ್ಲು ಎಸೆದರು. ಅವರಿಗೆ ಕಣ್ಣು ಕಾಣಿಸದಾಯಿತು. ಪ್ರಾರ್ಥಿಸಿದ ನಂತರ ಕಾಣಿಸಿತು. ಮಹೇಶ್ವರಿ ನನಗೆ ಮದುವೆ ಮಾಡೆಂದಳು. ಕುಂಭೇಶ್ವರನಿಗೆ ಮದುವೆ ಮಾಡಿದನು. ಅವರಿಬ್ಬರೂ ಶಿವ-ಪಾರ್ವತಿಯರ

ಪ್ರತಿರೂಪ ದೇವಿ ಅಲ್ಲೆ ನೆಲೆಸಿದಳು. ಕೊಂಡಾರೀಲು ಕುಂಬಾರ ಜಾತಿಯವನಾಗಿದ್ದರಿಂದ ಕುಂಭೇಶ್ವರನ ಭಕ್ತನಾಗಿದ್ದ.

**ಈರದಿಮ್ಮಮ್ಮ** (ತಿಪ್ಪೇನಹಳ್ಳಿ, ಚಿಕ್ಕಬಳ್ಳಾಪುರ) : ಒಕ್ಕಲಿಗರ ಹೆಣ್ಣು ಮಗಳು. ಏಳು ಜನ ಅಣ್ಣ-ತಮ್ಮಂದಿರ ಏಕೈಕ ತಂಗಿ ತಿಮ್ಮಮ್ಮ. ಬಾಲ್ಯ ವಿವಾಹಿತೆ. ಬೇಡರ ಬೊಮ್ಮಣ್ಣನೆಂಬ ಅನಾಥ ಹುಡುಗನನ್ನು ಸಾಕಿರುತ್ತಾಳೆ. ಆಕೆ ದೊಡ್ಡವಳಾಗಿ ಗಂಡನ ಮನೆಗೆ ಹೋಗಬೇಕಾಗಿ ಬಂದಾಗ ಆತನೂ ಹಿಂದೆ ಬೀಳುತ್ತಾನೆ. ಕಣಿವೆಯ ಪ್ರದೇಶದಲ್ಲಿ ಅವಕಾಶ ನೋಡಿಕೊಂಡಿದ್ದು ಅತ್ಯಾಚಾರ ಮಾಡುತ್ತಾನೆ. ಅವನನ್ನು ಕಡಿದು ತಲೆಯನ್ನು ಮಡಿಲಲ್ಲಿ ಕಟ್ಟಿಕೊಂಡು ಆಕೆ ಬೆಂಕಿಗೆ ಆಹುತಿಯಾಗುತ್ತಾಳೆ. ಪಾಠಾಂತರ ಅತ್ಯಾಚಾರಕ್ಕೆ ಪ್ರಯತ್ನಿಸಿದ್ದಕ್ಕೆ ಕಲ್ಲಾಗುವಂತೆ ಶಾಪ ಕೊಡುತ್ತಾಳೆ. ಓಡಾಡುವ ಜನರೆಲ್ಲಾ ಅವನಿಗೆ ಒಂದು ಕಲ್ಲು ಎಸೆದು ಎಲೆ ಅಡಿಕೆ ಅಗಿದು ಉಗುಳುತ್ತಾರೆ. ಅವಳು ದೇವತೆಯಾಗಿ ನೆಲಸಿದ್ದರಿಂದ ಪೂಜೆ ಮಾಡುತ್ತಾರೆ. ೧೦,೧೫ ವರ್ಷಗಳ ಹಿಂದೆ ಒಬ್ಬ ಮಂತ್ರಿ ಆ ಸ್ಥಳಕ್ಕೆ ಭೇಟಿ ನೀಡಿ ಶಿಕ್ಷೆಯ ಪದ್ಧತಿ ಒಂದು ಜನಾಂಗಕ್ಕೆ ಅವಮಾನವೆಂದು ಅದನ್ನು ನಿಲ್ಲಿಸಿದ್ದಾನೆ. ಈರದಿಮ್ಮಮ್ಮ ಮನೆದೈವ ಭೈರವೇಶ್ವರ ಗುಡಿ ಇದೆ. ಭೈರವನಿಗೂ ಈರದಿಮ್ಮಮ್ಮನಿಗೂ ಒಟ್ಟಾರೆ ಪೂಜೆಯನ್ನು ನಡೆಸುತ್ತಾರೆ. ಈರದಿಮ್ಮಮ್ಮನ ಗಂಡನು ಹಳ್ಳದಲ್ಲಿ ನೀರು ಕುಡಿಯಲೆಂದು ಬಗ್ಗಿದಾಗ ಬೊಮ್ಮಣ್ಣನು ಕತ್ತಿಯಿಂದ ಆತನನ್ನು ಕತ್ತರಿಸಿದ. ನಂತರ ಈರಮ್ಮನನ್ನು ಪಡೆಯಲು ಪ್ರಯತ್ನಿಸಿದ. ಆಕೆಯು ಉಪಾಯದಿಂದ ಆತನ ತಲೆಕಡಿದು, ಗಂಡನ ಶವದೊಂದಿಗೆ ಸಹಗಮನವೇರಿದಳೆಂದು.

**ಗಂಗಮ್ಮ** (ಸಜ್ಜುಪಲ್ಲಿ, ಬಾಗೇಪಲ್ಲಿ ತಾ) : ಕೆರೆಯ ಕಟ್ಟೆ ಒಡೆದು ಹೋಗುತ್ತಿದ್ದ ಕಾರಣಕ್ಕಾಗಿ ಗಂಗಮ್ಮನ ಗುಡಿಯನ್ನು ನಿರ್ಮಿಸಿದರೆಂದು ತಿಳಿದುಬರುತ್ತದೆ. ಇಲ್ಲಿ ಬಲಿ ನೀಡುವುದಕ್ಕೆ ಬದಲಾಗಿ ಗುಡಿ ಕಟ್ಟಿಸಿರುವುದು ವಿಶೇಷವೆನಿಸುತ್ತದೆ.

**ಸಪ್ಲಮ್ಮ** (ಅಬ್ಲೂಡು-ಶಿಡ್ಲಘಟ್ಟ) : ಚಿಕ್ಕಬಳ್ಳಾಪುರ ತಾಲೂಕಿನ ಗಂಗರೆ ಕಾಲುವೆಯಿಂದ ಬಂದಿದ್ದಾಳೆನ್ನುತ್ತಾರೆ. ೧೯೧೨ರಲ್ಲಿ ಬಟ್ಟಿರಾಮಪ್ಪ ಎಂಬುವವರಿಗೆ ಸ್ವಪ್ನದಲ್ಲಿ ಬಂದು ತನ್ನನ್ನು ಪ್ರತಿಷ್ಠಾಪಿಸುವಂತೆ ಹೇಳಿದಳಂತೆ. ಇಬ್ಬರು ಬ್ರಹ್ಮಚಾರಿಗಳಿಂದ ವ್ರತ ಮಾಡಿಸಿ ದೇವಿಯನ್ನು ಕರೆತಂದರಂತೆ. ಒಂದು ತ್ರಿಶೂಲ ಹಾಗೂ ಮೂರು ಕಲ್ಲಿನ ಬೊಂಬೆಗಳನ್ನು ಮೊದಲಿಗೆ ತಂದರು. ಆ ಸಮಯದಲ್ಲಿ ಉತ್ಸವ ದೇವರನ್ನು ಮಾಡಿಸಿದರು. ೧೯೬೦ರಲ್ಲಿ ಗರ್ಭಗುಡಿಯ ದೇವರನ್ನು ಮಾಡಿಸಿದರು. ದನಗಳಿಗೆ ಬರುವ ಸಪ್ಪೆರೋಗದ ಕೀಲು ನೋವು ಅಧಿದೇವತೆ ಸಪ್ಪಲ ಗಂಗರೆ ಕಾಲುವೆ (ಗಂಗರೇಕಲು) ಎಂಬಂಥವು ಗಂಗರ ಆಳ್ವಿಕೆಯ ನೆನಪನ್ನು ಬಿಂಬಿಸುವ ಸ್ಥಳಗಳು.

**ಗಂಗಮ್ಮ** (ಬುರಡಗುಂಟೆ, ಚಿಂತಾಮಣಿ ತಾ) : ಕ್ಷತ್ರಿಯ ಮನೆತನದ ಬೊಮ್ಮರಾಜು ತಿಮ್ಮರಾಜು ಎಂಬ ಇಬ್ಬರು ಅಣ್ಣ ತಮ್ಮಂದಿರು ಪಕ್ಕದ ಊರಿನಲ್ಲಿ ಕುಡಿಯಲು ನೀರು ಕೇಳಿದಾಗ ನದಿಯಲ್ಲಿದೆ ತೆಗೆದುಕೊಂಡು ಹೋಗಿ ಎಂದು ಹೇಳಿದರು. ನದಿಗೆ ಹೋದಾಗ ಹರಿಯುತ್ತಿದ್ದ ನದಿಯು ನಿಂತು ನೀರಿಗೆ ಬದಲು ಒಂದು ಕಟ್ಟಿಗೆ ಸಿಕ್ಕಿತು. ಅಶರೀರ ವಾಣಿಯೊಂದು ಆ ಕಟ್ಟಿಗೆಯನ್ನು ತೆಗೆದುಕೊಂಡು ಹೋಗಿ ಅದು ಕದಲದೆ ನಿಂತಲ್ಲಿ ನೀರು ಸಿಕ್ಕುತ್ತದೆ ಎಂದು ಹೇಳಿತು. ಹಾಗೆ ಕದಲದೆ ನಿಂತು ನೀರು ಸಿಕ್ಕಿದ ಸ್ಥಳವೆ ಬುರುಡುಗುಂಟೆ ಇಲ್ಲಿ ಗಂಗಮ್ಮ ನೆಲೆಸಿದಳು ಎಂದು ಐತಿಹ್ಯವಿದೆ.

**ಗಂಗಮ್ಮ** (ಮೇಲೂರು) : ಮೇಲೂರು, ಯರಜಿನಹಳ್ಳಿ (ಮುಳ್ಳೂರು) ಹಾಗೂ ಪಟಾಲದಮ್ಮನ ಹಳ್ಳಿಯ ಜನರು ಶಿವಪುರಕ್ಕೆ ಗಂಗಮ್ಮನ ಜಾತ್ರೆಗೆ ಹೋಗಿ ದೇವಿಯ ದರ್ಶನವಾಗದೆ ಬೇಸರದಿಂದ ಹಿಂದಿರುಗುತ್ತಾರೆ. ದಾರಿಯಲ್ಲಿ ಮೇಲೂರು ಮುಳ್ಳೂರಿನ ಮಧ್ಯೆ ಕುಂಟೆಯ ಹತ್ತಿರ ಕುಳಿತು ಊಟ ಮಾಡುತ್ತಿರುವಾಗ ಗಂಗಮ್ಮ ಅವರಿಗೆ ದರ್ಶನ ನೀಡುತ್ತಾಳೆ. ಅವರು ತಮ್ಮ ತಮ್ಮ ಊರುಗಳಿಗೆ ಕರೆಯುತ್ತಾರೆ. ಅದಕ್ಕೆ ಗಂಗಮ್ಮ ಒಪ್ಪದೆ ಕುಂಟೆಯ ಬಳಿಯೇ ಇರುವುದಾಗಿ ಹೇಳುತ್ತಾಳೆ. ಅಂದಿನಿಂದ ಸಂಬಂಧಿಸಿದ ಊರುಗಳವರು ಇಲ್ಲಿಗೆ ಒಕ್ಕಲಾದರೆಂದು ಹೇಳುತ್ತಾರೆ. **ಹುಚ್ಚಕೆಂಪಮ್ಮ**ನೆಂಬ ಹರಿಜನರ ಹುಡುಗಿ ೭ ವರ್ಷಗಳಿಂದ ೭೦ ವರ್ಷಗಳವರೆಗೆ ದನ ಮೇಯಿಸಲು ಕುಂಟೆಯ ಕಡೆ ಹೋಗುತ್ತಿದ್ದಳು. ಅವಳಿಗೆ ಜೊತೆಯಾಗಿ ಗಂಗಮ್ಮ ಇರುತ್ತಿದ್ದಳು. ಕೆಂಪಮ್ಮನಿಗೆ ಮನೆಯಲ್ಲಿ ದನ ಮೇಯಿಸಲು ಹೋಗಬಾರದೆಂದು ಹೇಳಿದರುಅವಳು ಯಾತ್ರೆ ಹೋಗುವುದಾಗಿ ತಿಳಿಸಿ ಕುಂಟೆಯ ಗಂಗಮ್ಮನನ್ನು ತನ್ನ ಜೊತೆ ಕರೆದೊಯ್ದು ಮನೆಯ ಮುಂದಿನ ಹುತ್ತದಲ್ಲಿ ಬಚ್ಚಿಟ್ಟಳು. ಗಂಗಮ್ಮನಿಗೆ ನಾಯಕರ ಮನೆಯ ಸೊಪ್ಪಿನ ಸಾರು ಇಷ್ಟವಾಗಿ ಕೆಂಪಮ್ಮನಿಗೆ ಹೇಳುತ್ತಾಳೆ. ಅವಳು ಬೇಡರಲ್ಲಿ ಕೇಳಿದಾಗ ಕೆಂಪಮ್ಮನ ಕೆನ್ನೆಗೆ ಹೊಡೆದು ಕಳುಹಿಸುತ್ತಾರೆ . ಆಗ ಆ ಬೇಡ ನಾಯಕರ ಎತ್ತುಗಳು ಬಾವಿಗೆ ಬೀಳುವಂತೆ ಗಂಗಮ್ಮ ಮಾಡುತ್ತಾಳೆ. ಸಾರು ಬಂದರೆ ಬದುಕಿಸುವುದಾಗಿ ಕೆಂಪಮ್ಮನಿಗೆ ಹೇಳುತ್ತಾಳೆ. ಅಂದಿನಿಂದ ನಾಯಕರ ಮನೆಯಿಂದ ಹಸಿರಥದಲ್ಲಿ ಜಾತ್ರೆಗೆ ಸೊಪ್ಪಿನ ಸಾರು ತರುತ್ತಾನೆ. ರಥೋತ್ಸವದ ದಿನ ಬ್ರಾಹ್ಮಣರ ಪೂಜೆ. ಉಳಿದಂತೆ ಹರಿಜನರದು. ೧೦ ದಿನ ಜಾತ್ರೆ ನಡೆಯುತ್ತದೆ. ಜಾತ್ರೆಯ ಮೊದಲ ದಿನ ಯುಗಾದಿಯ ನಂತರ ಎರಡನೇ ಮಂಗಳವಾರ ರಾತ್ರಿ ಹನ್ನೆರಡು ಗಂಟೆಗೆ ಹಸಿರಥದಲ್ಲಿ ನಾಯಕರ ಮನೆಯಿಂದಲೇ ಸೊಪ್ಪಿನ ಸಾರು ಬರುತ್ತದೆ. ರಥ ಅವರಿಂದಲೇ ಬರಬೇಕು ಅಂದೇ ಮಾಡಿರಬೇಕು.

**ಚೌಡೇಶ್ವರಿ** (ಹೊಲ್ಲಂಬಳ್ಳಿ, ಕೋಲಾರ ತಾ) : ಹಿಂದಿನ ಕಾಲದಲ್ಲಿ ಒಬ್ಬಾತ ಇಲ್ಲಿ ಮೇಕೆಗಳನ್ನು ಮೆಯಿಸುತ್ತಿದ್ದ. ಮಧ್ಯಾಹ್ನ ಆಯಾಸ ಪರಿಹಾರಕ್ಕೆಂದು ಮಲಗಿದಾಗ ಇದ್ದಕ್ಕಿದ್ದಂತೆ ಒಂದು ಕಲ್ಲಿನ

ವಿಗ್ರಹ ಆತನ ತಲೆಯ ಪಕ್ಕದಲ್ಲಿ ಕಾಣಿಸಿತು. ಅದನ್ನು ತನ್ನ ಕೊಡಲಿಯಿಂದ ಹಾಕಿದ ತಕ್ಷಣ ಅದಕ್ಕೆ ಗಾಯವಾಯಿತು. ಈತನಿಗೆ ಕಣ್ಣು ಕಾಣಿಸದಂತಾಯಿತು. ಕೂಡಲೆ ದೇವಿ ಚಾಮುಂಡೇಶ್ವರಿಯನ್ನು ಪ್ರಾರ್ಥಿಸಿದ್ದರಿಂದ ದೃಷ್ಟಿ ಬಂತು. ಆದ್ದರಿಂದ ಆತನು ಆ ಸ್ಥಳದಲ್ಲಿ ಕಲ್ಲಿನ ವಿಗ್ರಹವನ್ನು ಪ್ರತಿಷ್ಠಾಪಿಸಿ ಚಾಮುಂಡೇಶ್ವರಿಯ ಗುಡಿಯನ್ನು ಕಟ್ಟಿಸಿದ.

**ವಿರೂಪಾಕ್ಷಿ ದೇವಾಲಯ** (ಮುಳುಬಾಗಿಲು ತಾ) : ಹೊಯ್ಸಳ ದೊರೆ ವಿಕ್ರಮಾರ್ಕ ರಾಜನು ಈ ಗುಡಿಯನ್ನು ಕಟ್ಟಿಸಿದನೆಂದು ಪ್ರತೀತಿ. ಹಂಪೆಯ ವಿರೂಪಾಕ್ಷನನ್ನೂ ಹಕ್ಕ-ಬುಕ್ಕರು ಪ್ರತಿಷ್ಠಾಪಿಸಿದಂತೆ ಇಲ್ಲಿನ ದುರ್ಗಾದೇವಿ ಮತ್ತು ಮುಕ್ಕಣ್ಣ ಶಿವ ವಿರೂಪಾಕ್ಷನ ಪ್ರತಿಮೆಗಳನ್ನು ಅಕ್ಕಣ್ಣ-ಮುಕ್ಕಣ್ಣ ಎಂಬ ಇಬ್ಬರು ಸಹೋದರರು ಪ್ರತಿಷ್ಠಾಪಿಸಿದರೆಂದು ಐತಿಹ್ಯವಿದೆ. ಈ ವಿವರಣೆಯಲ್ಲಿ ಬರುವ ವಿಕ್ರಮಾರ್ಕ ರಾಜನಿಗೂ ಹೊಯ್ಸಳರಿಗೂ ಯಾವ ಸಂಬಂಧವೂ ಇಲ್ಲ. ಏಕೆಂದರೆ ಹೊಯ್ಸಳರಲ್ಲಿ ಈ ಹೆಸರಿನ ರಾಜನ್ಯಾರೂ ಇಲ್ಲ. ಇದು ವಿಜಯನಗರ ಸಾಮ್ರಾಜ್ಯವು ಕೋಲಾರ ಜಿಲ್ಲೆಯವರೆಗೂ ವ್ಯಾಪಿಸಿ ಮುಳಬಾಗಿಲನ್ನು ಸಾಂಸ್ಕೃತಿಕ ರಾಜಧಾನಿಯನ್ನಾಗಿಸಿಕೊಂಡಿದ್ದ ಸಂದರ್ಭದಲ್ಲಿ ನಿರ್ಮಾಣವಾದ ದೇವಾಲಯವಾಗಿದೆ. ಹಂಪೆಯ ವಿರೂಪಾಕ್ಷನ ನೆನಪನ್ನು ಇಲ್ಲಿ ಕಾಣಲಾಗುತ್ತಿದೆ.

**ಮುಕ್ಕಡಿ ಲಚ್ಚುಮಮ್ಮನ ದೇವಾಲಯ** (ಚಿಕ್ಕಕುರುಗೋಡು, ಗೌರೀಬಿದನೂರು ತಾ) : ಊರಿನ ಆಚೆ ಇರುವ ದೇವಾಲಯದ ಹಿಂದೆ ಲಕ್ಷ್ಮಿ ಜಾತ್ರೆ ನಡೆಯುತ್ತಿತ್ತು. ದನಗಳ ಜಾತ್ರೆ ತೇರು ಉತ್ಸವಗಳೂ ನಡೆಯುತ್ತಿದ್ದವು. ಈ ದೇವಾಲಯದಲ್ಲಿ ಏಳು-ಏಳು- ನಲವತ್ತೊಂಬತ್ತು ಕೊಪ್ಪರಿಗೆ ಧನವಿದೆಯಂತೆ. ಐತಿಹ್ಯದ ಪ್ರಕಾರ ಚಿಕ್ಕಕುರುಗೋಡಿನ ತಾಡಕ್ಕ ಎಂಬುವವರ ಮನೆಯವರು ಈ ನಿಧಿ ತೆಗೆಯಲು ಸಂಚು ಹಾಕಿದರಂತೆ. ಯಾವುದೋ ಊರಿಗೆ ರಸ್ತೆಯಲ್ಲಿ ನಡೆದು ಹೋಗುತ್ತಿದ್ದ ಗರ್ಭಿಣಿಯೊಬ್ಬಳು ರಾತ್ರಿ ಕತ್ತಲಾಯಿತೆಂದು ಇವರ ಮನೆಯಲ್ಲಿ ಉಳಿದುಕೊಂಡಳಂತೆ. ಅಂದು ಅಮವಾಸ್ಯೆ ತಾಡಕ್ಕನ ಮನೆಯವರು "ನೀನು ನಮ್ಮ ಹೆಣ್ಣುಮಗಳಿಗೆ ಸಮ. ಆದ್ದರಿಂದ ಲಕ್ಷ್ಮಿದೇವಾಲಯಕ್ಕೆ ದೀಪದಾರತಿ ಮಾಡಮ್ಮ" ಎಂದು ಪೂಸಿ ಮಾಡಿದರಂತೆ. ಅದರಂತೆ ಅವಳು ಆರತಿ-ಪೂಜೆ ಎಲ್ಲ ಮಾಡಿದಳು. ಬಗ್ಗಿ ನಮಸ್ಕರಿಸುವಾಗ ಅವಳ ತಲೆಯನ್ನು ಕಡಿದು ನಿಧಿ ತೆಗೆದು ಕಷ್ಟದಿಂದ ಹೊತ್ತು ತಂದರಂತೆ.

ಊರ ಬಾಗಿಲನ್ನು ದಾಟುವಾಗ ನಿಧಿಯನ್ನು ಹೊತ್ತಿದ್ದ ನಾಗನ್ನ ಎಂಬುವವನು ಎಡವಿ ಬಿದ್ದನಂತೆ. ನಿಧಿಯೆಲ್ಲ ಚಲ್ಲಾಪಿಲ್ಲಿಯಾಗಿ ಮರಿಗಳನ್ನು ಮಾಡಿಕೊಂಡು ಓಡಿಹೋಗಿ ನಾಲ್ಕೂ ಮೂಲೆಗಳಲ್ಲಿ ಭೂಮಿಯೊಳಗೆ ಬಚ್ಚಿಟ್ಟುಕೊಂಡಿತಂತೆ. ನಾಗನ್ನ ನೆತ್ತರು ಕಕ್ಕಿ ಸತ್ತನಂತೆ. ಇತ್ತ ದೇವಾಲಯದಲ್ಲಿ ಬಲಿಯಾದ ಹೆಂಗಸು ದೆವ್ವ ಆದಳಂತೆ ರಾತ್ರಿಯಿಡೀ ಅವಳ ಮಗು ಅಳುತ್ತದಂತೆ

ಅವಳು ಸುಧಾರಿಸುತ್ತಾಳಂತೆ. ಅದು ಈಗಲೂ ಓಡಾಡುವ ಜನರಿಗೆ ಚೆನ್ನಾಗಿ ಕೇಳಿಸುತ್ತದಂತೆ. ಹೆದರಿಕೆಯಿಂದ ಜನ ದೇವಾಲಯಕ್ಕೆ ಹೋಗುವುದನ್ನು ಬಿಟ್ಟರು.

**ಆಲಮ್ಮಗಿರಿ ಜಾತ್ರೆ** (ಚಿಂತಾಮಣಿ ತಾ) : ತಿರುಪತಿಯಲ್ಲಿ ಸೇರಿದ ಜಾತ್ರೆ ಇಲ್ಲಿ ಚದುರುತ್ತದೆ. ಜಾತ್ರೆ ಇನ್ನೇನು ಮುಗಿಯಬೇಕೆನ್ನುವ ವೇಳೆಗೆ ಸಿಡಿಲು ಬಿದ್ದಂತೆ ಅಲ್ಲೋಲ ಕಲ್ಲೋಲವಾಗಿ ಚದುರುತ್ತದೆ ಎಂದು ನಂಬಿಕೆ. ಮೊದಲನೆಯ ಮಗುವನ್ನು ತನಗೆ ಒಪ್ಪಿಸಬೇಕೆಂಬ ಕರಾರಿನಂತೆ ತಿಮ್ಮಪ್ಪದೇವರು ಮಾದಿಗಸಾನಿಗೆ ವರ ಕೊಡುತ್ತಾನೆ. ಒಂದು ಹೆಣ್ಣು ಮತ್ತೊಂದು ಗಂಡು ಮಗುವಾಗುತ್ತದೆ. ತಾಯಿ ದೇವರಿಗೆ ಒಪ್ಪಿಸುವುದಿಲ್ಲ. ತಾಯಿ ಬೇಡವೆಂದರೂ ಮಗಳು ಜಾತ್ರೆಗೆ ಹೋಗುತ್ತಾಳೆ. ಪರೀಕ್ಷೆ ಬೆದರುವ ಸಮಯದಲ್ಲಿ ದೇವರೇ ಅವಳ ಸೆರಗು ಹಿಡಿದು ತನ್ನ ಬಲಗಡೆ ನಿಲ್ಲಿಸಿಕೊಂಡನೆಂದು ಐತಿಹ್ಯ.

**ಜೈನ ಪರಂಪರೆ ಕೋಡಿಬ್ರಹ್ಮದೇವರು** (ಮಂಚೇನಹಳ್ಳಿ, ಗೌರೀಬಿದನೂರು ತಾ) : ಕೆರೆಯ ಒಂದು ಕೋಡಿಯಲ್ಲಿ ಬ್ರಹ್ಮದೇವರು ಕುದುರೆಯ ಮೇಲೆ ಕುಳಿತಿರುವ ವಿಗ್ರಹವಿದೆ. ಮತ್ತೊಂದು ಕೋಡಿಯಲ್ಲಿ ಆಂಜನೇಯ ದೇವರಿದ್ದಾನೆ. ಕುದುರೆಯ ಮೇಲೆ ಕುಳಿತ ಬ್ರಹ್ಮನು ಆಂಜನೇಯನ ಉದರ ಬಗೆದನೆಂಬ ಐತಿಹ್ಯವಿದೆ. ಸ್ಥಳೀಯವಾಗಿ ಜೈನ ಧರ್ಮವು ಪ್ರಭಾವ ಬೀರಿದ್ದರ ಅಂಶವು ಇದರಿಂದ ತಿಳಿದುಬರುತ್ತದೆ. ಗುಡಿಬಂಡೆ ಸಮೀಪದ ಬ್ರಹ್ಮದೇವರ ಗುಡಿಯಲ್ಲಿ ಕುದುರೆಯ ಮೇಲೆ ಕುಳಿತ ವೀರ ಬ್ರಹ್ಮದೇವನಿದ್ದಾನೆ. ಇವು ಜೈನ ಕ್ಷೇತ್ರಗಳಾಗಿದ್ದು ವೃಷಭದೇವ ಅಥವ ವೃಷಭನಾಥನನ್ನು ಬ್ರಹ್ಮದೇವನೆಂದು ಕರೆಯಲಾಗಿದೆ. ನಗರಗೆರೆಯ ಕೆರೆಯ ಕೋಡಿಯಲ್ಲಿರುವ ಕೋಡೀರ್ಲಪ್ಪನೆಂದು ಆರಾಧಿಸುವ ವೀರಗಲ್ಲು ಸಹ ಕುದುರೆಯ ಮೇಲೆ ಕುಳಿತ ವೀರನದೇ ಆಗಿದೆ. ಈ ವೀರಗಲ್ಲಿಗೂ ಕೋಡೀರ್ಲಪ್ಪನಿಗೂ ಯಾವ ಸಂಬಂಧವೂ ಇದ್ದಂತಿಲ್ಲವೆಂಬ ಸಂಶೋಧಕರ ಅಭಿಪ್ರಾಯವನ್ನು ಗಮನಿಸಿದಾಗ ಈ ವಿಗ್ರಹವೂ ಜೈನಪರಂಪರೆಗೆ ಸಂಬಂಧಿಸಿದ್ದಿರಬಹುದೆನಿಸುತ್ತದೆ. ಇಂಥ ಬ್ರಹ್ಮದೇವರ ಆರಾಧನೆಗೆ ಸಂಬಂಧಿಸಿದ ತಾಲ್ಲೂಕಿನ ಐತಿಹ್ಯಗಳು ಜೈನಪರಂಪರೆಯು ಅಸ್ತಿತ್ವದಲ್ಲಿದ್ದುದರ ನೆನಪುಗಳು ಪಡೆದ ರೂಪಾಂತರಗಳಾಗಿವೆ.

**ಆನಗಮರಾಯ** : ಹಿಂದೊಮ್ಮೆ ಉಪ್ಪು ಕಡಲೆಯ ಬರ ಬಂದಿದ್ದಾಗ ಗುಟ್ಟೆ-ಮೊಸರಪಡಿ (ತುಮಕೂರು ಜಿಲ್ಲೆಯ ಮಧುಗಿರಿ ತಾ.) ಬೇಡರು ತಮ್ಮ ಸಾಮಾನು ಸರಂಜಾಮುಗಳನ್ನು ಎತ್ತಿನ ಗಾಡಿಗಳಿಗೆ ಹೇರಿಕೊಂಡು ದೇಶಾಂತರ ಹೊರಟಿದ್ದರು. ಆಗ ಅವರ ಗಾಡಿಯಲ್ಲಿ ಸಾಮಾನುಗಳ ಜೊತೆಗೆ ಇದ್ದ ಒಂದು ಗುಂಡುಕಲ್ಲು ಕುಣಿಯುತ್ತಿತ್ತು. ಇದರಿಂದ ಪ್ರಯಾಣಕ್ಕೆ ತೊಂದರೆಯಾಗುತ್ತದೆಯೆಂದು ಮಾರ್ಗ ಮಧ್ಯದಲ್ಲಿ ಎಲ್ಲಿಗೆ ಎಸೆದರೂ ಮತ್ತೆ ಮತ್ತೆ ಗಾಡಿಯೊಳಕ್ಕೆ ಹಾರಿ ಕುಪ್ಪಳಿಸುತ್ತಿತ್ತು. ಗೌರೀಬಿದನೂರು ತಾಲೂಕಿನ ನಕ್ಕಲಹಳ್ಳಿಗೆ ಸಮೀಪಿಸುತ್ತಿದ್ದಂತೆ ಬೆಟ್ಟದೊಳಕ್ಕೆ ತಾನೇ ಹಾರಿ ಅಲ್ಲಿನ

ಗುಹೆಯೊಳಕ್ಕೆ ಸೇರಿಕೊಂಡಿತು. ಅದನ್ನು ತಮ್ಮ ಕುಲದೈವ ನರಸಿಂಹಸ್ವಾಮಿಯೆಂದು ತಿಳಿದ ಆ ಜನರು ಅಲ್ಲಿನ ಬೆಟ್ಟ ಪ್ರದೇಶದಲ್ಲಿ ನೆಲೆಸಿದರು. ತಮ್ಮ ದೈವಕ್ಕೆ ಆನಗಮರಾಯನೆಂದು ಹೆಸರಿಸಿ ಆರಾಧಿಸ ತೊಡಗಿದರೆಂದು ಐತಿಹ್ಯವಿದೆ. ಕಾಲಕ್ರಮೇಣ ಬೆಟ್ಟದ ಕೆಳಗಿನ ಗುಹೆಯಲ್ಲಿದ್ದ ದೈವವು ನಂತರ ಮೇಲೆ ನೆಲೆಸಿತೆಂದು ಮತ್ತೊಂದು ಐತಿಹ್ಯದಿಂದ ತಿಳಿಯುತ್ತದೆ.

ಆನಗಮರಾಯನ ಬೆಟ್ಟ ಪ್ರದೇಶದಲ್ಲಿ ದನ ಮೇಯಿಸುತ್ತಿದ್ದ ಹೆಂಗಸೊಬ್ಬಳು ಮಳೆ ಸುರಿಯುತ್ತಿದ್ದುದರಿಂದ ಆಶ್ರಯಕ್ಕಾಗಿ ಗುಹೆಯೊಳಕ್ಕೆ ಹೋದಳು. ಆಕೆಗೆ ಇನ್ನೂ ಬಹಿಷ್ಟೆಯ ನೀರು ಆಗಿರಲಿಲ್ಲ. ಇದರಿಂದ ಆನಗಮರಾಯನಿಗೆ ಮೈಲಿಗೆಯಾಯ್ತು. ತಕ್ಷಣವೇ ಆತ ಗುಹೆಯಿಂದ ಮೇಲಕ್ಕೆ ಸಿಡಿದು ಬೆಟ್ಟದ ಮೇಲೆ ನೆಲೆಸಿದ. ಅಂದಿನಿಂದ ಭಕ್ತಾದಿಗಳು ಮಡಿಯಿಂದ ಬೆಟ್ಟದ ಮೇಲಕ್ಕೆ ಹೋಗಿ ಆರಾಧಿಸತೊಡಗಿದರು. ಮಡಿಯಲ್ಲಿ ಲೋಪವುಂಟಾದರೆ ಹೆಜ್ಜೇನು ಕಡಿದು ಹಿಂದಕ್ಕೆ ಅಟ್ಟುತ್ತದೆಯೆಂದು ನಂಬಿಕೆ. ಒಮ್ಮೆ ಆಮದಾಲಗೊನ ಎಂಬ ಊರಿನ ಹೆಣ್ಣು ಮಗಳು ಹೆಂಗಸು ತನ್ನ ತಲೆಗೂದಲನ್ನು ನೀಡುವುದಾಗಿ ಹರಕೆ ಮಾಡಿಕೊಂಡಿದ್ದಳಂತೆ. ಬೆಟ್ಟದ ಕೆಳಗಿನ ಗುಹೆಯಲ್ಲಿ ದೇವರಿಲ್ಲದ್ದನ್ನು ನೋಡಿ ಬೆಟ್ಟದ ಮೇಲಕ್ಕೆ ಹುಡುಕಿಕೊಂಡು ಹೋದಳು. ತನ್ನ ತಲೆಗೂದಲನ್ನು ಕತ್ತರಿಸಿ ಕಂಬಿಗಳಿಗೆ ಸಿಕ್ಕಿಸಿ ಬಂದಳು ಎಂದು ಮತ್ತೊಂದು ಐತಿಹ್ಯವಿದೆ.

## ಆಕಾಶ ಕುರಿತ ಐತಿಹ್ಯಗಳು

ಆಕಾಶ ಸಂಬಂಧಿ ಐತಿಹ್ಯಗಳಲ್ಲಿ ಕಂಡುಬರುವ ಕೆಲವು ಅಂಶಗಳೆಂದರೆ, ೧. ಭೂಮಿ-ಆಕಾಶಗಳು ತಂದೆ-ತಾಯಿಗಳೆಂಬುದು. ಇದು ಗಾದೆಮಾತಿನಲ್ಲಿ ವ್ಯಕ್ತವಾಗುವುದು ಹೀಗೆ : ಅಮ್ಮನ ಸೀರೆ ಮಡಚೋಕಾಗಲ್ಲ, ಅಪ್ಪನ ದುಡ್ಡು ಎಣಿಸೋಕಾಗಲ್ಲ. (ಒಗಟು) ೨. ಸೂರ್ಯನ ಬಿಸಿಲು ಚಂದ್ರನ ಬೆಳದಿಂಗಳು ಭಿನ್ನವಾದದ್ದು ಹೇಗೆ ಎಂಬ ಕೌತುಕ, ಸೂರ್ಯ ಹಗಲಿನಲ್ಲಿ ಪ್ರಸನ್ನನಾಗಿದ್ದು ರಾತ್ರಿ ಮರೆಯಾಗುವುದೇಕೆಂಬ ಪ್ರಶ್ನೆ. ೩. ಚಂದ್ರ-ನಕ್ಷತ್ರಗಳು ರಾತ್ರಿ ವೇಳೆ ಪ್ರಕಾಶಮಾನವಾಗಿರಲು ಕಾರಣಗಳು ನಕ್ಷತ್ರ ಸಮೂಹದ ಬಗ್ಗೆ ಕಲ್ಪನೆಗಳು. ಆಕಾಶಕಾಯಗಳನ್ನು ಒಳಗೊಂಡಂತೆ ನೈಸರ್ಗಿಕ ವ್ಯಾಪಾರಗಳನ್ನು ಅರ್ಥೈಸಿಕೊಳ್ಳಲು ಜನಪದರು ಮಾಡಿದ ಗಂಭೀರ ಯತ್ನಗಳು ಮತ್ತು ಚಿಂತನೆಗಳು ಆಕಾಶ ಕುರಿತ ಐತಿಹ್ಯಗಳಾಗುತ್ತವೆ. ಸೂರ್ಯ ಚಂದ್ರರ ಸಂಬಂಧ ಅಣ್ಣ-ತಮ್ಮ; ಅಣ್ಣ-ತಂಗಿ, ಗಂಡ-ಹೆಂಡತಿ, ಗೆಳೆಯರು ಹೀಗೆ. ಸೂರ್ಯನ ಸುಡುಬಿಸಿಲಿನ ಗುಣ ಹಾಗೂ ಚಂದ್ರನ ಪ್ರಶಾಂತತೆಯ ಬಗ್ಗೆ -

**ಐತಿಹ್ಯ:** ಸೂರ್ಯ-ಚಂದ್ರರು ಅಣ್ಣ-ತಮ್ಮಂದಿರು ಭೂತಾಯಿಯ ಮಕ್ಕಳು. ಇವರಿಬ್ಬರೂ ಇಂದ್ರನ ಸಭೆಯ ಭೋಜನಕೂಟದಲ್ಲಿ ಪಾಲ್ಗೊಂಡಿದ್ದರು. ಚಂದ್ರನು ತಾಯಿಗೆ ಸಾಕಾಗುವಷ್ಟು ಭಕ್ಷ-

ಭೋಜ್ಯಗಳನ್ನು ತನ್ನ ಉಗುರುಗಳಲ್ಲಿ ತುಂಬಿಕೊಂಡು ತಂದ. ಸೂರ್ಯನು ಚೆನ್ನಾಗಿ ತಿಂದು ಬಂದು ತಾಯಿಯ ಮೇಲೆ ರೇಗಾಡಿದ. ತಾಯಿಯು ಚಂದ್ರನನ್ನು ಸದಾ ತಂಪಾಗಿರುವಂತೆ ಆಶೀರ್ವದಿಸಿ ಸೂರ್ಯನಿಗೆ ಸದಾ ಕೋಪಿಷ್ಟನಾಗಿಯೇ ಉರಿಯುವಂತೆ ಶಾಪ ಹಾಕಿದಳು. ಅಂದಿನಿಂದ ಸೂರ್ಯನು ಸದಾಕಾಲವೂ ಉರಿಯುವ ಬಿಸಿಲಿನ ಕಿರಣಗಳನ್ನು ಚೆಲ್ಲಲು ಆರಂಭಿಸಿದ. ಸೂರ್ಯನ ತಾಪ ಮತ್ತು ಚಂದ್ರನ ತಂಪುಗುಣದ ಬಗ್ಗೆ ಸಾರ್ವತ್ರಿಕವಾಗಿ ಇದೇ ಅಂಶಗಳನ್ನು ಒಳಗೊಂಡು ಭಿನ್ನ ಪಾಠಾಂತರಗಳ ಐತಿಹ್ಯವು ಪ್ರಚಲಿತವಿದೆ. ಒಂದು ದಿನ ಸೂರ್ಯ ಚಂದ್ರರು ತಮ್ಮ ಚಿಕ್ಕಪ್ಪ-ಚಿಕ್ಕಮ್ಮಂದಿರಾದ ಮಿಂಚು ಗುಡುಗುಗಳ ಮನೆಗೆ ಔತಣಕೂಟಕ್ಕಾಗಿ ಹೋದರು. ಅವರ ತಾಯಿ ನಕ್ಷತ್ರ ಒಂಟಿಯಾಗಿ ಮನೆಯಲ್ಲಿ ಕುಳಿತು, ಮಕ್ಕಳು ಎಷ್ಟು ಹೊತ್ತಿಗೆ ಹಿಂದಿರುಗುತ್ತವೊ ಎಂದು ನಿರೀಕ್ಷಿಸುತ್ತಿದ್ದಳು.

ಚಿಕ್ಕಪ್ಪನ ಮನೆಯಲ್ಲಿ ಊಟ ಭರ್ಜರಿಯಾಗಿತ್ತು. ರುಚಿ ರುಚಿಯಾದ ಭಕ್ಷ್ಯಗಳು, ಹಣ್ಣುಗಳು, ಪಾನೀಯಗಳು ಎಲ್ಲವನ್ನು ತೃಪ್ತಿಯಾಗಿ ತಿಂದರು. ಚಂದ್ರ ಮಾತ್ರ ತನ್ನ ಪಾಲಿನ ಭಕ್ಷ್ಯ ಹಣ್ಣುಗಳ ಪೈಕಿ ಉತ್ತಮವಾದವು ಒಂದೊಂದನ್ನು ತನ್ನ ತಾಯಿಗಾಗಿ ಉಳಿಸಿಕೊಂಡು ಅದನ್ನು ಒಂದು ಕೈ ವಸ್ತ್ರದಲ್ಲಿ (ಉಗುರುಗಳಲ್ಲಿ ಮತ್ತು ಹಲ್ಲಿನ ಸಂದಿಗಳಲ್ಲಿ ತುಂಬಿಸಿ ತಾಯಿಗಾಗಿ ತಂದನೆಂದು ಹೇಳುತ್ತಾರೆ.) ಕಟ್ಟಿಕೊಂಡನು. ಮನೆಗೆ ಹಿಂದಿರುಗಿದ ನಂತರ ತಾಯಿ ತನ್ನ ಮಗನನ್ನು ಕರೆದು ಅಪ್ಪಾ ಔತಣಕೂಟದಿಂದ ನೀನು ನನಗಾಗಿ ಏನನ್ನಾದರೂ ತಂದಿದ್ದೇಯಾ? ಎಂದು ಕೇಳಿದಳು. ಸೂರ್ಯನು ಊಟದ ಅವಸರದಲ್ಲಿ ನಿನ್ನ ನೆನಪೇ ಬರಲಿಲ್ಲ ಎಂದನು. ಚಂದ್ರನನ್ನು ಕೇಳಿದಾಗ ಅವನು ನನ್ನ ಭಾಗದ ಭಕ್ಷ್ಯ ಭೋಜನ ಹಣ್ಣುಗಳಿಂದ ಅತ್ಯುತ್ತಮವಾದುವು ಒಂದೊಂದನ್ನು ನಿನಗೂ ತಂದಿದ್ದೀನಿ ಎಂದು ತನ್ನ ಗಂಟನ್ನು ಕೊಟ್ಟನು. ಅಪರೂಪವೂ ತುಂಬ ಪ್ರಿಯವೂ ಆದ ಆ ಪದಾರ್ಥಗಳನ್ನು ಅವನ ತಾಯಿ ತೆಗೆದುಕೊಂಡಳು. ಅವಳಿಗೆ ತುಂಬ ಆನಂದವಾಯಿತು. ಆಮೇಲೆ ಅವಳು ಸೂರ್ಯನನ್ನು ಕರೆದು ಮಗನೆ ನೀನು ಸ್ವಾರ್ಥಿ ನಿನ್ನ ವಿನೋದದಲ್ಲಿ ನಿನಗೆ ತಾಯಿಯ ನೆನಪೂ ಬರಲಿಲ್ಲ. ನಿನ್ನ ಕಿರಣಗಳು ಎಲ್ಲರನ್ನೂ ದಹಿಸುವುದಾಗಲಿ ಎಲ್ಲರಿಗೂ ನಿನ್ನಲ್ಲಿ ಕೋಪ ಬರಲಿ ನಿನ್ನನ್ನು ಕಂಡ ಕೂಡಲೆ ಎಲ್ಲರೂ ತಲೆಗೆ ಮುಸುಕು ಹಾಕಿಕೊಂಡು ನಿನ್ನನ್ನು ನೋಡದೆ ಓಡಲಿ. ನೀನು ತಾಪದಾಯಕನಾಗಿರು ಎಂದು ಶಪಿಸಿದಳು. ಆದ್ದರಿಂದಲೇ ಸೂರ್ಯನು ಯಾವಾಗಲೂ ಸುಡುತ್ತಿರುವುದು.

ಚಂದ್ರನ ಮೇಲೆ ತಾಯಿಗೆ ವಿಶೇಷ ಮಮತೆ ಇತ್ತು. ಆವಳು ಚಂದ್ರನಿಗೆ ಅಪ್ಪಾ ನೀನು ನಿನ್ನ ಸೌಖ್ಯದ ಕಾಲದಲ್ಲಿಯೂ ತಾಯಿಯನ್ನು ಮರೆಯಲಿಲ್ಲ. ನಿನಗೆ ದೊರೆತ ಆಹಾರ ಪಾನೀಯಗಳನ್ನು ನನಗೂ ತಂದು ಕೊಟ್ಟೆ. ಆದುದರಿಂದ ನಿನ್ನಲ್ಲಿ ಇಂದಿನಿಂದ ಯಾವಾಗಲೂ ತಂಪು ಶಾಂತಿ ಸುಖವಾದ

ಬೆಳದಿಂಗಳು ಇರಲಿ ನಿನ್ನ ಅಮೃತ ಕಿರಣಗಳಲ್ಲಿ ಯಾವ ಕೇಡಿನ ಅಂಶವೂ ಸೇರದಿರಲಿ, ನಿನ್ನನ್ನು ಜನ ಯಾವಾಗಲೂ ಪ್ರಿಯವಾದ ಮಿತ್ರ ಎಂದು ಕೊಂಡಾಡಲಿ, ನಿನ್ನ ರೂಪ ಮನೋಹರವಾಗಿರಲಿ ಎಂದು ಹರಸಿದಳು. ಆದುದರಿಂದಲೇ ಚಂದ್ರನು ಎಲ್ಲ ಕಾಲದಲ್ಲಿಯೂ ತಂಪಾಗಿ ಎಲ್ಲರಿಗೂ ಹಿತವನ್ನುಂಟು ಮಾಡುವ ಸ್ವಭಾವ, ಸ್ವರೂಪವುಳ್ಳವನಾಗಿದ್ದಾನೆ."

ಮೇಲಿನ ಎರಡೂ ಐತಿಹ್ಯಗಳಲ್ಲಿ ಆಕಾಶಕಾಯಗಳಾದ ಸೂರ್ಯ ಚಂದ್ರರಿಗೆ ಮಾನವ ಸಹಜ ಗುಣಗಳನ್ನು ಆರೋಪಿಸಲಾಗಿದೆ. ಸೂರ್ಯ ಚಂದ್ರರಿಗೆ ಇರುವ ಪುರಾಣ ಕಲ್ಪನೆಗಳನ್ನು ಮೀರಿ ಜನಪದ ಮನಸ್ಸುಗಳು ಸೃಷ್ಟಿಸಿರುವ ಘಟನಾ ಸ್ವರೂಪದ ಐತಿಹ್ಯವು ಸ್ಥಳೀಯವಾಗಿಯೇ ಭಿನ್ನವಾಗುತ್ತಾ ಹೋಗುತ್ತದೆ. ಸೂರ್ಯನು ತನಗೆ ಮದುವೆ ಮಾಡದಿದ್ದರೆ ನಿನ್ನನ್ನೇ ಸುಡುತ್ತೇನೆ ಎಂದು ತನ್ನ ತಾಯಿ ಭೂಮಿಗೆ ಕಾಡಿಸತೊಡಗಿದ. ಅವಳು "ನೀನು ಆಕಾಶದಲ್ಲಿ ಒಬ್ಬನೇ ಒಬ್ಬಂಟಿಯಾಗಿ ಹಗಲಿಡೀ ಅಲೆದಾಡು" ಎಂದು ಶಾಪ ಹಾಕಿದಳು. ತನ್ನನ್ನು ಪೀಡಿಸದ ಮಗ ಚಂದ್ರನು ನಕ್ಷತ್ರಗಳೊಂದಿಗೆ ತಂಪಾಗಿರಲಿ ಎಂದು ಹಾರೈಸಿದಳು ಎಂಬುದಾಗಿಯೂ ಐತಿಹ್ಯವು ಕವಲೊಡೆಯುತ್ತದೆ. ಹಾಗೆಯೇ ಚಂದ್ರನ ಬೆಳದಿಂಗಳು ಮತ್ತು ಕಾರ್ಗತ್ತಲೆಗಳಿಗೆ ಸಂಬಂಧಿಸಿದಂತೆ ಐತಿಹ್ಯವು ಮತ್ತೊಂದು ವಿವರಣೆಯನ್ನು ಕೊಡುತ್ತದೆ. ಅಮವಾಸ್ಯೆ ಮತ್ತು ಹುಣ್ಣಿಮೆಗಳ ನೈಸರ್ಗಿಕ ಬದಲಾವಣೆಯನ್ನು ಜನಪದರು ತಮ್ಮ ಆರ್ಥಿಕ ಪರಿಸ್ಥಿತಿಯ ಏರು-ಪೇರುಗಳೊಂದಿಗೆ ಸಮನ್ವಯ ಮಾಡಿಕೊಳ್ಳುವುದನ್ನು ಮತ್ತೊಂದು ಐತಿಹ್ಯ ಹೀಗೆ ವಿವರಿಸುತ್ತದೆ. ಸೂರ್ಯನು ಆಕಾಶದಲ್ಲೆಲ್ಲ ಸಂಚರಿಸಿ ಬೆಳಕಿನ ಸಂಪತ್ತನ್ನು ಅತಿಯಾಗಿ ಸಂಪಾದಿಸಿದ್ದಾನೆ. ಅವನು ಒಬ್ಬಂಟಿಯಾಗುವುದಿಲ್ಲ. ಚಂದ್ರನು ಸೂರ್ಯನ ಬಳಿಯಿಂದ ತಿಂಗಳಿಗೆ ಒಮ್ಮೆ ಬೆಳಕನ್ನು ಸಾಲವಾಗಿ ಪಡೆಯುತ್ತಾನೆ. ಆದರೆ ಆಕಾಶದ ಎಲ್ಲ ಗ್ರಹ ನಕ್ಷತ್ರಗಳೂ ಚಂದ್ರನನ್ನು ಅವಲಂಬಿಸಿ ಅವನ ಬೆಳಕಿನಲ್ಲಿ ಹೊಳೆಯುವುದರಿಂದ ಎಲ್ಲರಿಗೂ ಬೆಳಕು ಹಂಚಿಕೆಯಾಗಿ ಹದಿನೈದು ದಿನಗಳಿಗೆ ಮುಗಿಯುತ್ತದೆ. ಬೆಳಕನ್ನು ಸಾಲವಾಗಿ ತಂದ ದಿನವೂ ಹುಣ್ಣಿಮೆಯಾಗುತ್ತದೆ. ದಿನೆ-ದಿನೆ ಖರ್ಚಾದಂತೆಲ್ಲ ಬೆಳಕು ಕ್ಷೀಣಿಸುತ್ತದೆ. ಖಾಲಿಯಾದ ದಿನ ಅಮವಾಸ್ಯೆ ನಂತರದ ಹದಿನೈದು ದಿನಗಳೂ ಬೆಳಕಿನ ಕೊರತೆಯಿಂದಾಗಿ ಚಂದ್ರ ಹಾಗೂ ಅವನ ಪರಿವಾರ ಕತ್ತಲಲ್ಲಿ ಮಲಗಬೇಕಾಗುತ್ತದೆ.

ಇದು ಮಾಲಿಕನಿಂದ ಸಾಲ ಪಡೆದು ಜೀವನ ಸಾಗಿಸುವ ಕೂಲಿಕಾರನ ಬದುಕಿನ ಬವಣೆಯ ಹಿನ್ನೆಲೆಯಲ್ಲಿ ಪ್ರಕೃತಿ ನಿಯಮಕ್ಕೆ ಆರೋಪಿಸುವ ದೃಷ್ಟಿಯದಾಗಿದೆ. ಹಾಗೆಯೇ ಆಕಾಶ-ಭೂಮಿಗಳನ್ನು ಗಂಡ-ಹೆಂಡತಿಯೆಂದು ಜನಪದರು ಪರಿಭಾವಿಸುತ್ತಾರೆ. ಭೂತಾಯಿಯ ಮಡಿಲಿನ ಜೀವರಾಶಿಗೆ ಆಕಾಶರಾಜನು ಮಳೆ ನೀಡುವ ಕೆಲಸವನ್ನು ಅಳಿಯ ಮೇಘರಾಜನಿಗೂ ಬಿಸಿಲು-ಬೆಳದಿಂಗಳನ್ನು

ಖಗೋಲಶಾಸ್ತ್ರ ಹಾಗೂ ಪುರಾಣಗಳಲ್ಲಿ ಆಕಾಶಕಾಯಗಳ ಚಲನವಲನಗಳ ಬಗ್ಗೆ ವೈಜ್ಞಾನಿಕ ಹಾಗೂ ಪಾರಂಪರಿಕ ವಿವರಣೆಗಳು ಲಭಿಸುತ್ತವೆ. ಕೆಲವೊಮ್ಮೆ ಖಗೋಲಶಾಸ್ತ್ರದ ವಿವರಣೆಗಳೊಂದಿಗೆ ಅತಿರಂಜನೆಯ ಅತಿಮಾನುಷ ಕಲ್ಪನೆಗಳು ಹೆಣೆಯಲ್ಪಟ್ಟು ಪುರಾಣ ಪ್ರತಿಮೆಗಳು ಏರ್ಪಟ್ಟಿವೆ. ಉದಾ: ಗ್ರಹಣಗಳು ಗ್ರಹಕೂಟಗಳು ಇತ್ಯಾದಿ. ನಮ್ಮ ಹಬ್ಬ ಆಚರಣೆಗಳಲ್ಲಿ ಬಹುಪಾಲು ಖಗೋಲಶಾಸ್ತ್ರವು ಹೇಳುವ ನಿಸರ್ಗ ಚಕ್ರದ ಪರಿವರ್ತನೆಗಳನ್ನು ಅವಲಂಭಿಸಿರುತ್ತದೆ. ಇದಕ್ಕೆ ಅನುಗುಣವಾಗಿ ಜನಪದರಲ್ಲಿ ನಂಬಿಕೆ-ಸಂಪ್ರದಾಯಗಳು ರಚನೆಯಾಗಿರುತ್ತವೆ. ಜನಪದರು ಖಗೋಲಶಾಸ್ತ್ರವನ್ನು ಅಧ್ಯಯನ ಮಾಡದಿದ್ದರೂ ಖಗೋಲ ಸತ್ಯಗಳ ಬಗ್ಗೆ ಅರಿವನ್ನು ಹೊಂದಿರುತ್ತಾರೆ. ಇವರು ಜ್ಯೋತಿಶ್ಯಾಸ್ತ್ರವನ್ನು ಕೇಳಿಕೊಂಡು ಬರುತ್ತಾರೆ. ನಂಬುತ್ತಾರೆ. ಅದರಂತೆ ಆಚರಣೆಗಳನ್ನು ಕಟ್ಟಿಕೊಳ್ಳುತ್ತಾರೆ. ಅದರ ಆಚೆಗೂ ಚಿಂತನೆ ನಡೆಸುತ್ತಾರೆ. ಇವು ಸತ್ಯಾ ಸತ್ಯವೇ ಎಂಬ ಮಾತು ಬೇರೆಯಾಗುತ್ತದೆ. ಗ್ರಹಗಳ ಚಲನೆ ಪಥ ಪರಿವರ್ತನೆ ಇತ್ಯಾದಿಗಳಿಂದಾಗಿ ಪ್ರಕೃತಿಯಲ್ಲಾಗುವ ಬದಲಾವಣೆಗಳಿಗೆ ಅನುಗುಣವಾಗಿ ಜನ ಜೀವನಕ್ರಮವನ್ನು ಬದಲಾಯಿಸಿಕೊಂಡು ಹೊಂದಾಣಿಕೆ ಮಾಡಿಕೊಂಡು ಬದುಕಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಆಚರಣೆಗಳು ಪುರಾಣಗಳು ಕಥೆಗಳು ರೂಪುಗೊಳ್ಳುತ್ತವೆ. ಇವುಗಳಿಗೆ ನಂಬಿಕೆಗಳು ಪೋಷಕವಾಗುತ್ತವೆ. ಇವುಗಳಲ್ಲಿ ಮನ ಮುಟ್ಟುವ ಸಂಗತಿ ಕುತೂಹಲಗಳು ಐತಿಹ್ಯಗಳ ಸ್ವರೂಪವನ್ನು ಪಡೆಯುತ್ತವೆ. ಇಂಥವುಗಳಲ್ಲಿ ಘಟನೆ ನಡೆದಿದೆ ಎಂಬ ಅಂಶವು ಜನಪದರಲ್ಲಿ ದೃಢವಾಗಿರುವುದರಿಂದ ಇವು ಐತಿಹ್ಯಗಳಾಗಿ ಅಥವಾ ಐತಿಹ್ಯಗಳಿಗೆ ಸಮೀಪವಾದ ಸಂಗತಿಗಳಾಗಿ ಉಳಿದುಕೊಳ್ಳುತ್ತವೆ.

ಮಕರ ಸಂಕ್ರಮಣದ ಆಚರಣೆಗೆ ಸಂಬಂಧಿಸಿದಂತೆ ಸಂಕ್ರಾಂತಿ ಪುರುಷನು ಭೂಮಿಗೆ ಬರುವ: ಫಲಾ-ಫಲಗಳನ್ನು ಕೊಡುವ ನಂಬಿಕೆ ಪ್ರತಿವರ್ಷವೂ ಸಂಬಂಧಿಸಿದ ಐತಿಹ್ಯಗಳನ್ನು ಪುನರ್ ನವೀಕರಿಸುತ್ತಿರುತ್ತದೆ. ಇನ್ನು ಸೂರ್ಯಗ್ರಹಣ ಚಂದ್ರಗ್ರಹಣಗಳಿಗೆ ಸಂಬಂಧಿಸಿದ ಖಗೋಲ ವಿಜ್ಞಾನ ಪುರಾಣ ಹಾಗೂ ನಂಬಿಕೆಗಳು ಕೆಲವು ಘಟನೆಗಳನ್ನು ಪುಷ್ಠಿಗೊಳಿಸಿ ಅವು ನಡೆದಿವೆಯಾದ್ದರಿಂದ ಹೀಗೆ ಆಗುತ್ತದೆ ಎಂಬ ಮೌಖಿಕ ಆಧಾರವನ್ನು ಒದಗಿಸುವುದರಿಂದ ಅಂಥವು ಸ್ವರೂಪದಲ್ಲಿ ಐತಿಹ್ಯವನ್ನು ಹೋಲುತ್ತವೆ.

ರಾಹು-ಕೇತುಗಳೆಂಬ ಗ್ರಹಗಳು ದೇವತೆಗಳ ವೇಷದಲ್ಲಿ ದೇವತೆಗಳು ಅಮರತ್ವಕ್ಕಾಗಿ ಅಮೃತ ಸೇವಿಸುತ್ತಿದ್ದ ಸಮಾರಂಭದಲ್ಲಿ ಭಾಗವಹಿಸಿದ್ದರು. ಸೂರ್ಯ ಚಂದ್ರನು ಅಮೃತವನ್ನು ಬಡಿಸುತ್ತಿದ್ದರು. ರಾಹು-ಕೇತುಗಳ ಎಲೆಗೂ ಅಮೃತವನ್ನು ಬಡಿಸಿ ಆಗಿತ್ತು. ಅವರಿಬ್ಬರೂ ಅಮೃತವನ್ನು ಬಾಯಲ್ಲಿಟ್ಟು ನುಂಗಬೇಕು ಅನ್ನುವಷ್ಟರಲ್ಲಿ ಸೂರ್ಯ-ಚಂದ್ರರಿಗೆ ಅವರ ಗುರುತು ಸಿಕ್ಕಿತು. ಅಮೃತವು ಗ್ರಹಗಳ ಹೊಟ್ಟೆಗೆ ಇಳಿಯುವ ಮುನ್ನವೇ ತಲೆಗಳನ್ನು ತುಂಡರಿಸಿದರು. ತಕ್ಷಣವೇ ತುಂಡರಿಸಲ್ಪಟ್ಟ ತಲೆಗಳು

ಸೂರ್ಯ-ಚಂದ್ರರನ್ನು ನುಂಗಿದವು. ಆದರೆ ಅವರಿಗೆ ಶರೀರವಿಲ್ಲದ್ದರಿಂದ ಗಂಟಲಿನ ಮೂಲಕ ಸೂರ್ಯ ಚಂದ್ರರು ಹೊರಗೆ ಬಂದರು. ಅಂದಿನಿಂದ ರಾಹು-ಕೇತುಗಳು ವರ್ಷಕ್ಕೊಮ್ಮೆ ಸೂರ್ಯ ಚಂದ್ರರನ್ನು ನುಂಗುತ್ತಾರೆ. ಇವರು ಕಷ್ಟಪಟ್ಟು ಹೊರಬರುತ್ತಾರೆ. ಇದೇ ನಡೆದ ಘಟನೆ ಗ್ರಹಣಕ್ಕೆ ಕಾರಣವೆಂಬ ನಂಬಿಕೆ ಐತಿಹ್ಯ ರೂಪವನ್ನು ನೀಡುತ್ತದೆ. ಇದಕ್ಕೆ ಸಂಬಂಧಿಸಿದಂತೆ ಶಿಷ್ಟ-ಜನಪದಗಳೆರಡರಲ್ಲಿಯೂ ನಂಬಿಕೆ-ಆಚರಣೆಗಳು ಹೇರಳವಾಗಿವೆ. "ಗ್ರಹಣ ಸಂಭವಿಸಿದಾಗ ಆಕಳು ಈಯುತ್ತಿದ್ದರೆ ಅದಕ್ಕೆ ಪ್ರದಕ್ಷಿಣೆ ಹಾಕುವುದು ಪದ್ಧತಿ. ಆದರಿಂದ ಭೂಪ್ರದಕ್ಷಿಣೆ ಮಾಡಿದ ಪುಣ್ಯ ಲಭಿಸುತ್ತದೆಂದು ನಂಬಿಕೆ."[೬]

ಸೂರ್ಯ-ಚಂದ್ರರಲ್ಲಿ ಸೂರ್ಯನು ತಾಪದಾಯಕನೂ ಚಂದ್ರನು ತಂಪನ್ನೀಯುವವನೂ ಆಗಿದ್ದಾರೆ. ಸೂರ್ಯನು ಪೂರ್ವದಲ್ಲಿ ಮೂಡಿ ಪಶ್ಚಿಮದಲ್ಲಿ ಮುಳುಗುತ್ತಾನೆ. ಚಂದ್ರನು ಸಂಜೆಯೊಂದಿಗೆ ಮೂಡಿ 'ದಿನ ದಿನಕ್ಕೂ ತನ್ನ ಅವಸ್ಥೆಗಳನ್ನು ಬದಲಿಸುತ್ತಾ ಇಂದು ವೃದ್ಧಿಯಾಗಿ ನಾಳೆ ಕ್ಷೀಣಿಸುವವನು'.[೭] ಇಂತಹ ಇವರಿಬ್ಬರೂ ಸಾಲ ಮಾಡಿ ಸಾಲಗಾರರು ಬಂದು ಹುಡುಕುವಾಗ ಬಚ್ಚಿಟ್ಟುಕೊಳ್ಳುತ್ತಾರೆ. ಆಗ ಗ್ರಹಣಗಳಾಗುತ್ತವೆ ಎಂಬ ನಂಬಿಕೆಯೂ ಜನಪದರಲ್ಲಿದೆ. ಹಾಗೆಯೇ ಸೂರ್ಯ ಚಂದ್ರರನ್ನು ನುಂಗುವವರೆಂದು ಹೇಳಲಾಗಿರುವ ರಾಹುಕೇತುಗಳನ್ನು ಸೂರ್ಯ ಚಂದ್ರರ ವೈರಿಗಳೆಂದು ಪರಿಗಣಿಸಲಾಗಿದ್ದು ಅವರು ಹೊಲೆ ಮಾದಿಗ ಜಾತಿಗೆ ಸೇರಿಗೆ ಸೇರಿದವರು ಎಂಬ ಕಲ್ಪನೆ ಜನಜನಿತವಾಗಿದೆ. ಹೊಲೆ ಮಾದಿಗರಿಗೆ ವಸ್ತ್ರದಾನ ಮಾಡದಿದ್ದರೆ ಗ್ರಹಣ ಬಿಡುವುದಿಲ್ಲ ಎಂಬ ನಂಬಿಕೆ ಎಲ್ಲೆಡೆ ಪ್ರಬಲವಾಗಿದೆ.

ಜನಪದರಿಗೆ ಶನಿಗ್ರಹದ ಬಗ್ಗೆ ಅತಿಯಾದ ಭಯ ಭಕ್ತಿಗಳಿರುವಂತೆ ತೋರುತ್ತದೆ. ಶನಿಯು ಯಾರನ್ನೂ ಬಿಡದೆ ಕಾಡಿಸಿದ ಕಾಡಿಸುವ ಗ್ರಹವೆಂದು ವಾಡಿಕೆ. ಆದ್ದರಿಂದಲೇ 'ರಾಮೇಶ್ವರಕ್ಕೋದರೂ ಶನೇಶ್ವರ ಬಿಡ' ಎಂಬ ಗಾದೆ ಹುಟ್ಟಿಕೊಂಡಿದೆ. ಶನಿಕಾಟವೆಂಬ ನುಡಿಗಟ್ಟು ಕಷ್ಟಗಳ ಕಾಲವನ್ನು ಸಂಕೇತಿಸುತ್ತದೆ. ಶನಿಯು ತನ್ನ ತಂದೆ-ತಾಯಿಗಳಾದ ಸೂರ್ಯ-ಛಾಯಾ ದೇವಿಯರನ್ನೂ ಬಿಡದೆ ಕಾಡಿದನೆಂದು ಹೇಳುತ್ತಾರೆ. ಸೂರ್ಯನಿಗೆ ಎದುರಾಗಿ ಸರ್ಪರೂಪದಲ್ಲಿ ಕಾಡಿದ. ಹೀಗೆ ತಂದೆಗೆ ಎದುರಾಗಿ ಈ ಮಗ ನಿಂತಾಗ ಗ್ರಹಣವೇರ್ಪಟ್ಟಿತು. ಅದರ ಅನುಕರಣೆಯೇ ಮತ್ತೆ ಮತ್ತೆ ಗ್ರಹಣಗಳಾಗಿ ಸಂಚಲನಗೊಳ್ಳುತ್ತದೆಂದು ನಂಬಿಕೆಯಿದೆ.

ಶನಿಯು ಕಾಡಿಸುವುದರ ಸಂಕೇತವಾದರೆ ಶುಕ್ರಗ್ರಹವು ಅದೃಷ್ಟದ ಸಂಕೇತವಾಗುತ್ತಾನೆ. ಶುಕ್ರಗ್ರಹದ ಬೆಂಬಲವನ್ನು 'ಶುಕ್ರದೆಸೆ'ಯೆಂದು ಕರೆಯುತ್ತಾರೆ. ಶನಿಕಾಟದಿಂದ ಮುಕ್ತರಾದವರಿಗೆ ಶುಕ್ರದೆಸೆ ತಿರುಗುತ್ತದೆಂದು ನಂಬಿಕೆ. ಈ ದೆಸೆ ಇರುವವರೆಗೂ ಐಶ್ವರ್ಯದ ಜೊತೆಗೆ ವೈಭವವೂ ದೊರೆಯುತ್ತದೆ. ವೈಭವದಲ್ಲಿ ಮೆರೆಯುವಾಗ ಮೈ ಮರೆಯದೆ ಎಚ್ಚರದಿಂದಿರಬೇಕು. ಏಕೆಂದರೆ ಶನಿಯು ಸಹಿಸಲಾರದೆ

ಮತ್ತೆ ಕಾಡಿಸಲು ಹವಣಿಸುತ್ತಿರುತ್ತಾನಂತೆ. ಶುಚಿತ್ವ ತಪ್ಪಿದರೂ ಅಲ್ಲೇ ಪ್ರವೇಶಿಸುತ್ತಾನಂತೆ. ಈ ಶುಚಿತ್ವವು ಬರೀ ದೈಹಿಕವಷ್ಟೇ ಅಲ್ಲ ನಡತೆಗೆ ಸಂಬಂಧಿಸಿದ್ದನ್ನೂ ಸಂಕೇತಿಸುತ್ತಾರೆ. ಎರಡನೆಯ ಭಾರಿ ಶನಿ ವಕ್ಕರಿಸಿ ಕಾಟಕ್ಕೆ ತುತ್ತಾದವರು ಸರ್ವನಾಶವಾಗುತ್ತಾರೆಂಬ ನಂಬಿಕೆ ಪ್ರಬಲವಾದದ್ದು. ಇದು ಐತಿಹ್ಯಗಳನ್ನು ವ್ಯಕ್ತಿ ಔನ್ನತ್ಯ ಹಾಗೂ ಸಾಮ್ರಾಜ್ಯಗಳ ಔನ್ನತ್ಯ ಅಥವಾ ಪಾಳೇಗಾರರ ಔನ್ನತ್ಯಕ್ಕೆ ಸಂಬಂಧಿಸಿದಂತೆ ಆಶಯವಾಗಿ ಕಂಡುಬರುತ್ತದೆ.

ಉದಾ: ಶನಿಕಾಟದಿಂದ ತತ್ತರಿಸಿ ಬಡತನದಲ್ಲಿ ಬೇಯುತ್ತಿದ್ದ ದಂಪತಿಗಳ ಮಗನಾದ ಕೆಂಪೇಗೌಡ ಇಲ್ಲವೇ ಸರ್ಜಪ್ಪನಾಯಕ ಇತ್ಯಾದಿ ವ್ಯಕ್ತಿ ತರುಣಾವಸ್ಥೆಯಲ್ಲಿ ಶುಕ್ರದೆಸೆಯಿಂದ ರಾಜ್ಯ ಕಟ್ಟಿದ. ಸಹಿಸದೆ ಕಾಯುತ್ತಿದ್ದ ಶನಿಗೆ ಒಂದು ದಿನ ಈ ವ್ಯಕ್ತಿ ಕಾಲು ತೊಳೆದಾಗ ಹಿಮ್ಮಡಿ ನೆನೆಯದಿರುವುದು ಕಂಡುಬಂತು. ಆ ಜಾಗದಲ್ಲಿ ಕುಳಿತ ....ಮುಂದೆ ಸಾಮ್ರಾಜ್ಯ ನಾಶ ಮಾಡಿದನೆಂದು ಐತಿಹ್ಯ ಅಥವಾ ಕತೆಗಳಲ್ಲಿ ಆಶಯವೊಂದು ಸೇರುವುದುಂಟು. ನಿಸರ್ಗದಲ್ಲಿ ಸೂರ್ಯನು ಬಿಸಿಲಾಗಿ ಉರಿಯುವುದಕ್ಕೂ ಚಂದ್ರನು ತಂಪಾಗಿ ಮೆರೆಯುವುದಕ್ಕೂ ಕಾರಣವೇನೆಂಬ ಕುತೂಹಲ-ಪ್ರಶ್ನೆಗಳನ್ನು ತಣಿಸಲು ಉಂಟಾದ ಐತಿಹ್ಯ ಹೀಗಿದೆ : "ಒಮ್ಮೆ ಸೂರ್ಯ ಚಂದ್ರರ ತಾಯಿಗೆ ಅನಾರೋಗ್ಯವಾಯಿತು. ಅವಳು ಹಾಸಿಗೆ ಹಿಡಿದಳು. ಓಡಾಡಲು ಅಶಕ್ತಳಾಗಿದ್ದರಿಂದ ಸೂರ್ಯನಿಗೆ ಒಲೆ ಹತ್ತಿಸುವಂತೆಯೂ ಚಂದ್ರನಿಗೆ ಪಾತ್ರೆಯಲ್ಲಿ ನೀರು ತಂದು ಒಲೆಯ ಮೇಲೆ ಇಟ್ಟುಕೊಡುವಂತೆಯೂ ಹೇಳಿದಳು. ಸೂರ್ಯನು ಒಲೆ ಹತ್ತಿಸಲು ಬೆಂಕಿಯನ್ನು ತರುತ್ತಿದ್ದಾಗ ಆಕಸ್ಮಿಕವಾಗಿ ಕೆಂಡವೊಂದು ತಾಯಿಯ ಹಾಸಿಗೆಯ ಮೇಲೆ ಬಿತ್ತು. ಅದರಿಂದ ಬೆಂಕಿ ಹರಡಿ ಉರಿಯಲಾರಂಭಿಸಿತು. ಚಂದ್ರನು ಪಾತ್ರೆಯಲ್ಲಿ ತಂದಿದ್ದ ನೀರಿನಿಂದ ಬೆಂಕಿಯನ್ನು ಆರಿಸಿದ ತಾಯಿಯು ನೀವಿಂದು ನನಗೆ ಮಾಡಿದ ಸಹಾಯದ ಹಾಗೆಯೇ ನಿಮ್ಮ ಬದುಕೂ ಉಳಿಯಲಿ ಎಂದು ನಿಟ್ಟುಸಿರಿಟ್ಟಳು. ಅದರಂತೆ ಸೂರ್ಯನು ಬೆಂಕಿಯಂತೆ ಉರಿಯುತ್ತಾನೆ. ಚಂದ್ರನು ತಂಪಾಗಿ ಇರುತ್ತಾನೆ."

ಸೂರ್ಯ, ಚಂದ್ರ ಮತ್ತಿತರ ಆಕಾಶಕಾಯಗಳಿಗೆ ಸಂಬಂಧಿಸಿದ ಜನಪದರ ಜ್ಞಾನವು ಶಿಷ್ಟಮೂಲದ ವಿವರಗಳಿಗೆ ಕೆಲವೊಮ್ಮೆ ಸಮೀಪವರ್ತಿಯಾಗಿಯೂ; ಕೆಲವು ಸಾರಿ ಭಿನ್ನವಾಗಿಯೂ ವಿಶಿಷ್ಟತೆಯನ್ನು ಉಳಿಸಿಕೊಂಡಿರುತ್ತದೆ. ಮಾಹಿತಿಯ ರೂಪದ ಇಂಥ ರಚನೆಗಳು ಪಡೆದುಕೊಳ್ಳುವ ಸ್ವರೂಪ ನಂಬಿಕೆಯೊಂದನ್ನು ಆಧರಿಸಿರುತ್ತದೆ. ಪ್ರಕೃತಿಯಲ್ಲಿ ಸಂಭವಿಸುವ ಆಕಸ್ಮಿಕಗಳ ವಿಕೋಪಗಳ ಸಹಜತೆಗಳು ಉಂಟುಮಾಡುವ ಪರಿಣಾಮಗಳು ಸಂದರ್ಭಗಳು ಜನರನ್ನು ಚಿಂತನೆಗೆ ಒಳಪಡಿಸುತ್ತವೆ. ಹೀಗೇಕೆ ಆಯಿತು ಎಂಬ ಪ್ರಶ್ನೆಗೆ ಉತ್ತರಗಳನ್ನು ಹುಡುಕಲು ಹೊರಟ ಮನಸುಗಳಿಗೆ ದೈನಂದಿನ ಬದುಕಿನ

ಅನುಭವಗಳಾಗಲಿ ಪುರಾಣದ ಘಟನೆಗಳಾಗಲಿ ಅಥವಾ ಅತ್ಯದ್ಭುತ ಕಲ್ಪನೆಗಳಾಗಲಿ ಪುಷ್ಟಿಕೊಡುತ್ತವೆ. ಅದರೊಂದಿಗೆ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡುತ್ತಾರೆ.

ಮಿಂಚು-ಗುಡುಗು ಹೇಗೆ ಉಂಟಾಗುತ್ತವೆ? ಏಕೆ ಉಂಟಾಗುತ್ತವೆ? ಎಂಬ ಪ್ರಶ್ನೆಗೆ ಯಾರೋ ಒಬ್ಬರಿಗೆ ಪುರಾಣದ ಘಟನೆ ಪುಷ್ಟಿಕೊಟ್ಟಿದೆ. ಆದ್ದರಿಂದಲೇ ಆಕಾಶದಲ್ಲಿ ಅರ್ಜುನನು ರಥವನ್ನು ಓಡಿಸುತ್ತಿರುತ್ತಾನೆ. ರಥಕ್ಕೆ ಕಟ್ಟಿದ ಕುದುರೆಗಳ ಗೊರಸಿನ ಶಬ್ದವು ಗುಡುಗು ಆಗಿ ಕೇಳಿಸುತ್ತದೆ. ಕುದುರೆಗಳ ಚಲನೆ ನಿಧಾನವಾದಾಗ ಅರ್ಜುನನು ಚಾಟಿಯಿಂದ ತೀಡುತ್ತಾನೆ. ಆ ಪೆಟ್ಟಿನೊಂದಿಗೆ ಮಿಂಚು ಮೂಡುತ್ತದೆ; ರಭಸವಾಗಿ ಕುದುರೆಗಳು ಓಡಲಾರಂಭಿಸುತ್ತವೆ; ರಥದ ಚಕ್ರಗಳು ವೇಗವಾಗಿ ಉರುಳುತ್ತಿರುತ್ತವೆ. ಇಂಥ ಸಂದರ್ಭದಲ್ಲಿ ಸಿಡಿಲು ಬಡಿಯುತ್ತದೆ ಎಂಬ ಐತಿಹ್ಯವನ್ನು ಸೃಷ್ಟಿ ಮಾಡಿದ ಮನಸ್ಸಿನಲ್ಲಿ ರಥ ಓಡಿಸುವ ಪರಿಣತಿಯಲ್ಲಿ ಪ್ರಚಂಡವಾದ ಪುರಾಣ ಪ್ರತಿಮೆ ಅರ್ಜುನನ ಹೆಸರು ಸಾಹಸ ದೃಢವಾಗಿದೆ. ಅದನ್ನು ಮಿಂಚು ಗುಡುಗು ಸಿಡಿಲಿನ ಸನ್ನಿವೇಶಕ್ಕೆ ಅನ್ವಯಿಸಿದ್ದಾರೆ. ಸಮೂಹವೂ ಇದನ್ನು ಒಪ್ಪಿ ಪರಂಪರೆಯಲ್ಲಿ ಈ ಪರಿಕಲ್ಪನೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ ಎಂದರೆ ಇಲ್ಲಿ ಸಹೃದಯತೆ ಸಾರ್ವತ್ರಿಕತೆಯನ್ನು ಪಡೆಯುತ್ತದೆ. ಸಿಡಿಲು ಹೊಡೆಯಬಾರದೆಂದರೆ ಕುಂತಿಯೊಂದಿಗೆ ಪಂಚಪಾಂಡವರ ಹೆಸರುಗಳನ್ನು ಪಠಿಸಬೇಕೆಂಬ ನಿಯಮ-ನಂಬಿಕೆಗಳಿವೆ.

ಸೂರ್ಯ ಚಂದ್ರರು ಒಂದಾದ ದಿನ ಭೂಮಿ ಉಳಿಯುವುದಿಲ್ಲವೆಂಬ ನಂಬಿಕೆಯಿದೆ. ಹಗಲಿಗೆ ಸೂರ್ಯನೂ ರಾತ್ರಿಯಲ್ಲಿ ಚಂದ್ರನೂ ಇರುವುದು ಲೋಕ ನಿಯಮ ಹಾಗೂ ಸಹಜ. ಪ್ರಕೃತಿಯಲ್ಲಿ ಅಸಹಜತೆಯೇರ್ಪಟ್ಟಾಗ ನಾಶದ ಪರಿಣಾಮಗಳಾಗುವುದು ಭೂಮಿಯ ಮೇಲೆ ಮಾತ್ರ. ಖಗೋಲಶಾಸ್ತ್ರ ಅಥವಾ ಖಗೋಲವಿಜ್ಞಾನದ ಪ್ರಕಾರ ಜೀವಸಂಪತ್ತು ಇರುವುದು ಭೂಗ್ರಹದಲ್ಲಿ ಮಾತ್ರವಾದ್ದರಿಂದ ಗುರುತಿಸಲ್ಪಡುವುದು ಇಲ್ಲಿಯೇ. ಈ ಜಗತ್ತಿಗೆ ಹಗಲು-ರಾತ್ರಿಗಳು ಸಮವಾಗಿ ಕಾಲನಿರ್ಣಯವನ್ನು ಕೊಡುತ್ತವೆ. ಹಗಲಿನ ಅಧಿಪತಿಯಾಗಿ ಸೂರ್ಯನೂ ರಾತ್ರಿಯಲ್ಲಿ ರಾರಾಜಿಸುವವನು ಚಂದ್ರನೂ ಆಗಿ ಗುರುತಿಸಲ್ಪಟ್ಟಿರುವ ಸೂರ್ಯ-ಚಂದ್ರರ ಲೋಕ ಜವಾಬ್ದಾರಿಯನ್ನು ಕೌಟುಂಬಿಕ ಜವಾಬ್ದಾರಿಗೆ ಹೋಲಿಸಿ ಐತಿಹ್ಯವೊಂದನ್ನು ಹೀಗೆ ಸೃಷ್ಟಿಸಿದ್ದಾರೆ.

"ಭೂಮಿಯ ಹಿರಿಯ ಮಗ ಸೂರ್ಯ ಮದುವೆಯಾಗಿ ಸುಖವಾಗಿದ್ದಾನೆ. ಚಂದ್ರನು ತನಗೂ ಮದುವೆ ಮಾಡಬೇಕೆಂದು ತಾಯಿಯನ್ನು ಸುತ್ತಿ-ಸುತ್ತಿ ಪೀಡಿಸುತ್ತಾನೆ. ಇವರು ಮೂರು ಜನ ಒಂದೆಡೆ ಸೇರಲಿಲ್ಲ ಚಂದ್ರನಿಗೆ ಮದುವೆ ಮಾಡಲಿಲ್ಲ".[೬] ಇದಕ್ಕೆ ಪೂರಕವಾಗಿ ಸೂರ್ಯನು ಹುಣ್ಣಿಮೆಯ ದಿನ ಅಗೋಚರನಾಗುವುದಕ್ಕೆ ಜನಪದರ ಮನಸ್ಸು ಶೋಧಿಸಿದ ರೀತಿ ಹೀಗಿದೆ. ತಾಯಿಗೆ ಕಿರಿಯ ಮಗನಿಗೂ

ಮದುವೆ ಮಾಡುವ ಹಂಬಲ ಅವಳು ಸೂರ್ಯನನ್ನು ಸುತ್ತಿ-ಸುತ್ತಿ ಚಂದ್ರನಿಗೆ ಹೆಣ್ಣು ನೋಡುವಂತೆ ಎಚ್ಚರಿಸುತ್ತಾಳೆ. "ಸೂರ್ಯನಿಗೆ ಮೊದಲು ಮದುವೆಯಾಯಿತು. ಆಗ ಚಂದ್ರನು ತನಗೂ ಮದುವೆ ಮಾಡಬೇಕೆಂದು ಹಠ ಹಿಡಿದನು. ಆಗ ಸೂರ್ಯನು 'ನೀನು ಇನ್ನೂ ಚಿಕ್ಕವನು ಬೆಳೆದು ಬಾ' ಎಂದನು. ಅದಕ್ಕೆ ಚಂದ್ರನು ಪೂರ್ಣವಾಗಿ ಬೆಳೆದು ಸೂರ್ಯನಲ್ಲಿಗೆ ಹೋದಾಗಲೆಲ್ಲ ಸೂರ್ಯ ಕಣ್ಮರೆಯಾಗುತ್ತಿರುವುದು."[೯]

ಕೌಟುಂಬಿಕ ಜೀವನದಲ್ಲಿ ಜವಾಬ್ದಾರಿಗಳಿಂದ ತಪ್ಪಿಸಿಕೊಂಡು ಅಣ್ಣನಾದವನು ತಮ್ಮನಿಂದ ತಲೆ ಮರೆಸಿಕೊಂಡು ಓಡಾಡುವ ಚಿತ್ರಣ ಥಟ್ಟನೆ ನೆನಪಿಗೆ ಬರುತ್ತದೆ. ಇಂಥದ್ದೊಂದು ಅನುಭವವನ್ನು ಸೂರ್ಯ ಚಂದ್ರರು-ಭೇಟಿಯಾಗದ ಸಂದರ್ಭಕ್ಕೆ ಸಮನ್ವಯ ಮಾಡಿರುವುದು ಸಮಂಜಸವೇ ಸರಿ. ಆದರೆ ಇದು ಸರಿಯೇ ತಪ್ಪೇ ಎಂಬ ತೀರ್ಮಾನ ಕೈಗೊಳ್ಳುವುದು ಬೇರೆ ವಿಷಯವಾಗುತ್ತದೆ. ಏಕೆಂದರೆ ಮನುಷ್ಯನು ತನ್ನ ಸಹಜ ನಡವಳಿಕೆಗಳನ್ನು ಕಲ್ಪನೆಗಳೊಂದಿಗೆ ಸಾಕಾರಗೊಳಿಸಲು ಪ್ರಯತ್ನಿಸುವುದು ವಾಡಿಕೆ. ಪ್ರಕೃತಿಯ ಅತ್ಯದ್ಭುತ ಶಕ್ತಿ-ಸಾಮರ್ಥ್ಯವನ್ನು ಈ ಹಿನ್ನೆಲೆಯಲ್ಲಿ ಅರ್ಥೈಸಿಗೊಳ್ಳಲು ಹವಣಿಸುತ್ತಾನೆ. ಹೀಗೆ ಸೃಷ್ಟಿಸಿಕೊಳ್ಳುವ ದೈವ-ದೈವ ಭೂತ-ರಾಕ್ಷಸ ಸಂಬಂಧಿ ಪುರಾಣಗಳಲ್ಲೂ ಅತಿಮಾನವೀಯ ಅಂಶಗಳ ಲೇಪನಮಾಡುತ್ತಾ ಮಾನವ ಸಹಜ ನಡವಳಿಕೆಗಳನ್ನು ತುಂಬಿ ಗಟ್ಟಿಗೊಳಿಸುತ್ತಾರೆ. ಪುರಾಣ ಪ್ರತಿಮೆ ಪಾತ್ರಗಳಿಗೆ ಅಪರಿಮಿತ ಸಾಮರ್ಥ್ಯವಿದ್ದರೂ ಮಾನವ-ಸಹಜ ನೋವು-ನಲಿವುಗಳನ್ನು ಅನ್ನುವುದರ ಮೂಲಕವೇ ಗಟ್ಟಿಗೊಳಿಸುತ್ತಾರೆ. ಇಂಥ ಸಂದರ್ಭಗಳಲ್ಲಿ ಪ್ರಕೃತಿ ಮತ್ತು ಪುರಾಣಗಳಿಗೆ ಸಂಬಂಧಿಸಿದ ಐತಿಹ್ಯಗಳು ಆಕಾರ ಪಡೆಯುತ್ತವೆ. ಸೂರ್ಯ-ಚಂದ್ರರ ರಚನೆಯನ್ನು ಕುರಿತ ಚಿಂತನೆಯೊಂದು ಹೀಗಿದೆ.

"ಮೊದಲಿಗೆ ಮನುಷ್ಯರು ಕತ್ತಲಲ್ಲಿ ಜೀವನ ನಡೆಸುತ್ತಿದ್ದರು. ಎಲ್ಲರೂ ವಿಶ್ವದೇವತೆಯನ್ನು ನಂಬಿದ್ದರು. ಏಕೆಂದರೆ ಆಕೆಯೊಬ್ಬಳಿಗೆ ಮಾತ್ರ ಬೆಳಕನ್ನು ಕೊಡುವ ಚೈತನ್ಯವಿತ್ತು. ಕ್ರಮೇಣ ಜನರಿಗೆ ಕತ್ತಲು ಜೀವನ ದುಸ್ತರವಾಯಿತು. ಬೆಳಕಿಗಾಗಿ ದೇವಿಯನ್ನು ಓಲೈಸಿದರು. ಉಪಾಸನೆಗೈದರು. ದೇವಿ ಸಂತೃಪ್ತಳಾಗಿ ತನ್ನ ಕಣ್ಣುಗಳಲ್ಲಿರುವ ಬೆಳಕಿನಿಂದ ಒಂದು ಹುಡುಗ ಮತ್ತೊಂದು ಹುಡುಗಿಯನ್ನು ಸೃಷ್ಟಿಸಿದಳು. ಹುಡುಗನ ಬೆಳಕು ಪ್ರಜ್ವಲಿಸುತ್ತಿತ್ತು. ಹುಡುಗಿಯು ಹೆಚ್ಚು ಪ್ರಖರವಾಗಿರಲಿಲ್ಲ. ಅವರೇ ಸೂರ್ಯ-ಚಂದ್ರರು. ಇಬ್ಬರೂ ಬೆಳೆದು ದೊಡ್ಡವರಾದರು. ದೇವಿ ಅವರಿಬ್ಬರಿಗೂ ಮದುವೆ ಮಾಡಿಸಿದಳು. ಸೂರ್ಯ-ಚಂದ್ರರಿಗೆ ಅಸಂಖ್ಯಾತ ಮಕ್ಕಳಾದರು. ಆ ಮಕ್ಕಳೇ ನಕ್ಷತ್ರಗಳು, ಈ ಅಸಂಖ್ಯಾತ ನಕ್ಷತ್ರಗಳಲ್ಲಿ ಇಬ್ಬರನ್ನುಳಿದು ಮಿಕ್ಕವರಾರೂ ತಂದೆಯನ್ನು ಹೋಲುತ್ತಿರಲಿಲ್ಲ. ಸೂರ್ಯನಿಗೆ ಹೆಂಡತಿಯ ಮೇಲೆ ಸಂಶಯ ಉಂಟಾಯಿತು. ಅವಳಿಂದ ದೂರವಾದ. ಅಂದಿನಿಂದ ದೂರ ಸರಿದರು. ಆದರೆ

ಇಬ್ಬರಿಗೂ ತಿಂಗಳಿಗೊಮ್ಮೆಯಾದರೂ ಪರಸ್ಪರರನ್ನು ನೋಡಿಕೊಳ್ಳುವ ಆಸೆ. ಗಂಡ ಊಟಕ್ಕೆ ಕುಳಿತಾಗ ಅವಳು ಅವನ ನೆರವಿಗೆ ಬರುತ್ತಾಳೆ. ಅವನು ಊಟ ಮಾಡುವುದನ್ನು ಬಿಟ್ಟು ಅವಳನ್ನು ಹಿಡಿಯಲು ಯತ್ನಿಸುತ್ತಾನೆ. ಅವಳು ಇನ್ನೇನು ತನ್ನನ್ನು ಹಿಡಿದೇ ಬಿಟ್ಟನೆನ್ನುವಾಗ-ಅವಳು ಕೆಂಪಾಗಿ ಬಹಿಷ್ಠೆಯಾಗಿರುವುದಾಗಿ ತಿಳಿಸುತ್ತಾಳೆ''[೧೦] ಇಲ್ಲಿ ಸೂರ್ಯ-ಚಂದ್ರರನ್ನು ದಂಪತಿಗಳಾಗಿಯೂ ನಕ್ಷತ್ರ ಮಂಡಲವನ್ನು ಅವರ ಮಕ್ಕಳಾಗಿಯೂ ಪರಿಕಲ್ಪಿಸಿಕೊಳ್ಳಲಾಗಿದೆ. ಆದರೆ ತಂದೆಯನ್ನು ಹೋಲುತ್ತಿದ್ದ ಎರಡು ಮಕ್ಕಳು ಯಾರೆಂದು ತಿಳಿದುಬರುವುದಿಲ್ಲ.

ಮೇಲಿನ ಉದಾಹರಣೆಯಲ್ಲಿ ಬಹಳಷ್ಟು ಸಮುದಾಯಗಳು ಅಥವಾ ಜನಾಂಗಗಳು ಮನುಷ್ಯ ಸಂತತಿಯ ಉಗಮವನ್ನು ಸಹೋದರ-ಸಹೋದರಿಯು ದಾಂಪತ್ಯ ಇಲ್ಲವೇ ಕೂಡುವಿಕೆಯಿಂದ ಉಂಟಾಯಿತೆಂದು ಹೇಳುವುದನ್ನು ಗಮನಿಸಬಹುದು. ಸಮಾಜದ ರೀತಿ-ನೀತಿಗಳನ್ನು ಹೆಚ್ಚು-ಹೆಚ್ಚಾಗಿ ಸೃಷ್ಟಿಸಿಕೊಳ್ಳುತ್ತಾ ಹೋದಂತೆ ಕೆಲವು ಸಂಬಂಧಗಳಲ್ಲಿ ದೈಹಿಕ ಸಂಪರ್ಕ ನಿಷೇಧವಾಗಿ ಬೆಳೆದಿದೆ. ಆದರೆ ಹಿಂದೆ ರೂಢಿಯಲ್ಲಿದ್ದ ಸಹೋದರ ಸಂಬಂಧದ ವೈವಾಹಿಕ ಅನುಮೋದನೆಯನ್ನು ಗಮನಿಸಬಹುದು. ಸೃಷ್ಟಿಯ ಆರಂಭವನ್ನು ಕುರಿತು ಜನಪದರ ಚಿಂತನೆಗಳು ಮಾನವಶಾಸ್ತ್ರದ ಬಗ್ಗೆ ಹಲವು ಆಯಾಮಗಳನ್ನು: ದೃಷ್ಟಿಕೋನಗಳನ್ನು ನೀಡುವಲ್ಲಿ ಯಶಸ್ವಿಯಾಗುತ್ತವೆ. "ಒಮ್ಮೆ ಸೂರ್ಯ-ಚಂದ್ರರಿಬ್ಬರೂ ಮನೆಗೆ ಬಂದಾಗ ತಾಯಿಯು ಸ್ನಾನ ಮಾಡುತ್ತಿದ್ದಳು. ಸೂರ್ಯನು ತಾಪದಿಂದ ದಿಟ್ಟಿಸಿ ನೋಡಿದ: ಚಂದ್ರನು ಸೌಜನ್ಯ ಸಂಕೋಚಗಳಿಂದ ಮುಖ ತಿರುಗಿಸಿಕೊಂಡ. ಇದೇ ಘಟನೆ ಹಗಲು-ರಾತ್ರಿಗಳಾಗುವುದಕ್ಕೂ ಬಿಸಿಲು-ಬೆಳದಿಂಗಳು ಸೂರ್ಯ-ಚಂದ್ರರ ಗುಣಗಳಾಗುವುದಕ್ಕೆ ಕಾರಣವೆಂದು ಐತಿಹ್ಯದಿಂದ ಕಂಡುಬಂದರೂ ತಾಯಿ-ಮಕ್ಕಳ ನಡುವಿನ ಸಂಕೋಚ ಮನೋಭಾವನೆಗಳನ್ನು ಹೇಳುತ್ತದೆ. ಮತ್ತೊಂದರ ಪ್ರಕಾರ ಬರಗಾಲದಲ್ಲಿ ಒಮ್ಮೆ ಸೂರ್ಯನು ತನ್ನ ಮಗಳನ್ನೇ ಕೊಂದು ತಿನ್ನಲು ಪ್ರಯತ್ನಿಸಿದ. ಅವಳು ತಪ್ಪಿಸಿಕೊಂಡು ಭೂಮಿಗೆ ಬಂದಳು. ಅಂದಿನಿಂದ ಅವನು ಕೋಪದಿಂದ ಭೂಮಿಯಲ್ಲೆಲ್ಲಾ ಹುಡುಕುತ್ತಿದ್ದಾನೆ".

ಇದಕ್ಕೆ ಪೂರಕವೆಂಬಂತೆ ಸೂರ್ಯನು ಬಿಸಿಲನ್ನು ಹೊಂದಲು ಕಾರಣವೇನು ಎಂಬುದಕ್ಕೆ ಹಾಲಕ್ಕಿ ಒಕ್ಕಲಿಗರಲ್ಲಿ ಹಾಗೂ ಹವ್ಯಕರಲ್ಲಿ ಪ್ರಚಲಿತವಿರುವ ಐತಿಹ್ಯ ಹೀಗಿದೆ: ಸೂರ್ಯ ಚಂದ್ರ ಸತ್ಯನಾರಾಯಣ ಶುಕ್ರ ಬೆಳ್ಳಿ ಇವರು ಕುಂತಿಯ ಮಕ್ಕಳು. ಮುಟ್ಟಾಗಿ ಸಮುದ್ರ ಮೀಯಲು ಹೋದ ಗಂಗೆಯನ್ನು ಸೂರ್ಯ ಕತ್ತಲೆಯನ್ನುಂಟು ಮಾಡಿ ಕೂಡಿದ ಫಲವಾಗಿ ಬಿಸಿಲಿನಲ್ಲಿ ತಿರುಗಬೇಕೆಂಬ ಶಾಪವನ್ನು ತಾಯಿಯಿಂದ ಪಡೆಯುತ್ತಾನೆ. ಸೂರ್ಯನು ಸಮುದ್ರದಲ್ಲಿ ಮುಳುಗುವಂತೆ ಕಾಣುವ ಸೂರ್ಯಸ್ತಮಾನದ

ದೃಶ್ಯವನ್ನು ತನ್ನ ಸಹೋದರಿ ಗಂಗೆಯೊಂದಿಗೆ ಕೂಡಿದನೆಂದು ಸಂಕೇತಿಸುವುದನ್ನು ಗಮನಿಸಬಹುದು. ಇಲ್ಲಿ ಸೂರ್ಯ ಮತ್ತು ಗಂಗೆ ಕುಂತಿಯ ಮಕ್ಕಳು ಎಂಬ ಅಂಶ ಪ್ರಕಟವಾದಂತೆ ತಂದೆಯ ವಿವರಗಳು ಗೌಣವಾಗಿವೆ. ಒಂದೇ ತಾಯಿಯ ಮಕ್ಕಳಲ್ಲಿ (ಸಹೋದರ-ಸಹೋದರಿಯರಲ್ಲಿ) ದೈಹಿಕ ಸಂಪರ್ಕಕ್ಕೆ ಸಾಮಾಜಿಕವಾಗಿ ವಿರೋಧ ಮೂಡಿದ ಘಟ್ಟಕ್ಕೆ ಈ ವಿವರಗಳು ಅನ್ವಯವಾಗುತ್ತವೆ. ಆ ನಿಷೇಧವನ್ನು ಭದ್ರಗೊಳಿಸಲು ಇಂಥ ರಚನೆಗಳನ್ನು ಕಟ್ಟಿಕೊಳ್ಳುತ್ತಾರೆ. ಪ್ರಕೃತಿಯ ಸಹಜ ಚಟುವಟಿಕೆಗಳನ್ನು ಸಾಂಸ್ಕೃತಿಕ ಆಯಾಮಗಳಿಗೆ ಅನ್ವಯಿಸಿ ಸಾಂಸ್ಕೃತಿಕ ಅನನ್ಯತೆಯನ್ನು ಕಟ್ಟಿಕೊಳ್ಳುವ. ಬೆಳೆಸಿ ಉಳಿಸಿಕೊಳ್ಳುವ ಪ್ರಯತ್ನಗಳು ಇವುಗಳಾಗಿವೆ. ಇಂಥ ವಿಚಾರಗಳಿಗೆ ಪುರಾಣ ವ್ಯಕ್ತಿಗಳನ್ನೋ ಪೌರಾಣಿಕ ಘಟನೆಗಳನ್ನೋ ಬಳಸಿಕೊಳ್ಳುವುದು ಏಕೆಂದರೆ ಪುರಾಣಗಳ ಬಗೆ ಜನರಿಗೆ ಗೌರವವಿದೆ; ಆದಕಾರಣ ಪೌರಾಣಿಕ ಅಂಶಗಳ ಅನ್ವಯದಿಂದ ನಂಬಿಕೆ ನಿಷೇಧಗಳನ್ನು ಸಾಧಿಸಬೇಕೆಂಬ ಉದ್ದೇಶವಿರುತ್ತದೆ. ಆದ್ದರಿಂದ ಈ ಐತಿಹ್ಯಗಳು ಕಟ್ಟಿಕೊಡುವ ಮೌಖಿಕ ಇತಿಹಾಸವು ಮಾನವ ಸಂಸ್ಕೃತಿಯ ಬೆಳವಣಿಗೆಯ ಹಂತಗಳು ಮತ್ತು ಆಯಾಮಗಳಿಗೆ ಸಂಬಂಧಿಸಿದ್ದಾಗಿರುತ್ತದೆ.

### ಸಾವು ಮತ್ತು ದೆವ್ವಸಂಬಂಧಿ ಐತಿಹ್ಯಗಳು

ಜೀವಜಗತ್ತಿನಲ್ಲಿ ಸಾವು ಸಹಜವಾದರೂ ಮನುಷ್ಯನಿಗೆ ತನ್ನ ಬದುಕಿನ ನಂತರದ ಅಸ್ತಿತ್ವದ ಬಗ್ಗೆ ಕೆಲವು ಕುತೂಹಲಗಳು ಕಲ್ಪನೆಗಳಾಗಿರುತ್ತವೆ. ೧. ಯಮಲೋಕದ ವಾಸಿಗಳಿಗೆ ಭೂಮಿಯ ಜೀವರಾಶಿಯೇ ಆಹಾರ. ಅಂದಂದಿನ ಆಹಾರ ಯಾವುದೆಂದು ತೀರ್ಮಾನಿಸಿ, ಇಲ್ಲಿಂದ ಜೀವಿಗಳನ್ನು ನಾಶಪಡಿಸಿ ಕೊಂಡೊಯ್ಯುತ್ತಾರೆ. ಇದೇ ಸಾವು. ಭೂಮಿಯಲ್ಲಿ ಚನ್ನಾಗಿ ಸೊಕ್ಕಿದ (ದುಷ್ಟರಾದ)ವರನ್ನು ನರಕಕ್ಕೆ ಹಾಕುತ್ತಾರೆ. ಅಲ್ಲಿ ಅಂಥವರನ್ನು ತುಂಡು ತುಂಡು ಮಾಡಿ ಕುದಿಸಿ ಕಾಯಿಸಿ ಬೇಯಿಸಿ ಎಣ್ಣೆಯಲ್ಲಿ ತೇಲಿಸಿ ವಿವಿಧ ಪದಾರ್ಥಗಳಾಗಿ ಪರಿವರ್ತಿಸಿ ಅಲ್ಲಿನ ಜೀವಗಳಿಗೆ ಹಾಕುತ್ತಾರೆ ಎಂಬ ನಂಬಿಕೆಯಿದೆ. ಆದ್ದರಿಂದಲೇ ಯಮನು ತನ್ನ ವಾಹನ ಕೋಣನ ಮೇಲೆ ಬಂದು ಇಷ್ಟ ಬಂದವರ ಜೀವನ ಮೇಲೆ ತನ್ನ ಪಾಶವನ್ನು ಹಾಕಿ ಎಳೆದೊಯ್ಯುತ್ತಾನೆಂದು ತಿಳಿಯುತ್ತಾರೆ. ಭೂಲೋಕಕ್ಕೆ ಸಾವು ಏಕೆ-ಹೇಗೆ ಬಂದಿತು ಎಂಬುದರ ಕುರಿತು ಅನೇಕ ಪುರಾಣ, ಐತಿಹ್ಯ, ಕಥೆಗಳು ವಿವರ ನೀಡುತ್ತವೆ. ಇವೆಲ್ಲವುಗಳೆಲ್ಲ ಸಾವಿಗೆ ಮನುಷ್ಯ ಸೋಲುತ್ತಾನೆಯೇ ಹೊರತು ಜೈಸಲಾಗುವುದಿಲ್ಲ ಎಂಬ ಸತ್ಯವನ್ನೇ ಹೇಳಲಾಗಿದೆ.

೨. ಸಾವು ಎನ್ನುವುದು, ಕತ್ತಲೆಯ ನಿಗೂಢ ಕ್ರೂರ ಶಕ್ತಿಯಾಗಿದ್ದು ಅದು ಮನುಷ್ಯನ ಜೀವವನ್ನು ತಿಂದೇ ಬದುಕಬೇಕಾದ ಒಂದು ವಿಕಾರ ಪ್ರಾಣಿ. ಆ ಪ್ರಾಣಿ ಹಸಿದಾಗ ಯಾರನ್ನು ತಿನ್ನಬೇಕೆಂದು ಆಯ್ಕೆ

ಮಾಡಿಕೊಂಡು ಕಾದಿದ್ದು ಸಂಚಿನಿಂದ ಹಿಡಿಯುತ್ತದೆ. ಭೀಕರ ಮಾಂಸಾಹಾರಿ ಪ್ರಾಣಿಗಳ ಕೃತ್ಯ ಸಹಜವಾಗಿಯೇ ಆ ಕಾಲದ ಮಾನವನ ಪ್ರಜ್ಞೆಯಲ್ಲಿ ಪರಿಣಾಮ ಬೀರುವುದರಿಂದ ಸಾವನ್ನು ಅಮೂರ್ತ ರೀತಿಯ ವಿಕೃತ ಶಕ್ತಿಯೆಂದು ಕಲ್ಪಿಸಲು ಸಾಧ್ಯವಾಗಿದೆ."

೩. ಒಮ್ಮೆ ಒಬ್ಬ ಹೆಂಗಸು ಕಾಡಿನ ಗುಹೆಯೊಂದರಲ್ಲಿ ಕಟ್ಟಿದ್ದ ಹೆಜ್ಜೇನನ್ನು ಕೀಳಲು ಯತ್ನಿಸಿದಳು. ತಕ್ಷಣ ಗೂಡಿನಿಂದ ಭಯಂಕರವಾದ ಹದ್ದು ಬಾವಲಿಗಳು ಹೊರಬಂದು ಜನರನ್ನು ಎತ್ತಿಕೊಂಡು ಒಯ್ಯಲು ಪ್ರಾರಂಭಿಸಿದವು. ಅದೇ ಶಾಶ್ವತವಾಗಿ ಸಾವಿನ ರೂಪದಲ್ಲಿ ಮುಂದುವರಿಯುತ್ತಿದೆ. ಸಾವನ್ನು ಜೈಸಿದವರು ಅಥವಾ ಯಮಪಾಶಕ್ಕೆ ಪರಪಾಟಾಗಿ ಬಲಿಯಾಗಿ ನಂತರ ಯಮಲೋಕದಿಂದ ಹಿಂದುರಿಗಿ ಬಂದವರು ಇತ್ಯಾದಿ ವಿಷಯಗಳ ಬಗ್ಗೆ ಏಕರೂಪದ ಐತಿಹ್ಯಗಳು ಲಭಿಸುತ್ತದೆ.

ಯಮನು ಸಾವಿಗೆಂದು ಸೂಚಿಸಿ ಯಮಪಾಶ ಹಾಕುವ ವ್ಯಕ್ತಿಗಳ ಹೆಸರಿನಲ್ಲಿ ಕೆಲವೊಮ್ಮೆ ಪರಪಾಟಾಗಿ ಅದೇ ಹೆಸರಿನ ಬೇರೆ ವ್ಯಕ್ತಿಗಳು ಸಾವಿಗೆ ಬಲಿಯಾಗುತ್ತಾರೆ. ಯಮಲೋಕಕ್ಕೆ ಹೋದ ಮೇಲೆ ಯಮ ಪರಿಶೀಲಿಸಿ ಅಂಥವರನ್ನು ಹಿಂದಕ್ಕೆ ಕಳುಹಿಸುತ್ತಾನೆ. ಅವರ ಜೀವವು ಅಲ್ಲಿಂದ ಹಿಂದಿರುಗಿ ಬಂದು ತನ್ನ ಶರೀರದಲ್ಲಿ ಸೇರಿಕೊಳ್ಳುತ್ತದೆ. ಆಗ ಮಲಗಿ ನಿದ್ರೆಯಿಂದ ಎದ್ದಂತೆ, ಸತ್ತಿರುವವನು ಎದ್ದು ಕೂಡುತ್ತಾನೆ ಎಂಬ ಅಂಶಗಳು ಸತ್ತವರು ಬದುಕಿದರೆಂದು ಹೇಳುವ ಐತಿಹ್ಯಗಳಲ್ಲಿ ಸಾಮಾನ್ಯವಾಗಿ ಬರುತ್ತವೆ. ಶವಸಂಸ್ಕಾರಕ್ಕೆ ಮುಂಚೆ ಯಮಲೋಕದಿಂದ ಜೀವವು ಹಿಂದಿರುಗಿ ಬರಬೇಕು. ತಡವಾಗಿ ಬಂದರೆ ದೇಹವಿಲ್ಲದೆ ಅದು ಭೂತ-ಪ್ರೇತವಾಗಿ ತನ್ನ ಆಯುಸ್ಸಿನವರೆಗೆ ಮರಗಿಡಗಳಲ್ಲಿ ನೇತಾಡುತ್ತಾ ಉಳಿಯುತ್ತದೆ ಎಂಬ ನಂಬಿಕೆ ಇದೆ. ಯಮಲೋಕದಿಂದ ಹಿಂದಿರುಗಿ ಬಂದ ಜೀವವು ತನ್ನ ಶರೀರದಲ್ಲಿ ಸೇರಿದ ಬಳಿಕ ಆ ವ್ಯಕ್ತಿಗೆ ಮರುಜೀವ ಬಂದು ಯಮಲೋಕದ ವಿವರಗಳನ್ನು ಹೇಳಿದರೆಂಬ ಸಂಗತಿಗಳು ಐತಿಹ್ಯಗಳಲ್ಲಿ ಬರುತ್ತವೆ. ಉದಾ: ಸಂಜೀವಮ್ಮನೆಂಬ ಹೆಂಗಸು ಆರು ಮಕ್ಕಳ ತಾಯಿ. ಅವಳು ನಾಲ್ಕು ಬಾರಿ ಸತ್ತಿದ್ದಳು. ಹಾಗೆಂದು ಶವವನ್ನು ಮನೆಯ ಹೊರಗಿಟ್ಟು ಅಳುತ್ತಿದ್ದರು. ಇದ್ದಕ್ಕಿದ್ದಂತೆಯೇ ಅವಳು ಎದ್ದು ಕುಳಿತು ತಾನು ಬದುಕಿ ಬಂದ ಬಗೆಯನ್ನು ವಿವರಿಸುತ್ತಿದ್ದಳು. ಪ್ರತಿ ಬಾರಿಯೂ ಸಂಜೀವಮ್ಮನೆಂಬ ಬೇರೆ ಬೇರೆ ವ್ಯಕ್ತಿಗಳು ಬದಲಿಗೆ ತನ್ನ ಜೀವವನ್ನು ಯಮಕಿಂಕರರು ಕರೆದೊಯ್ದಿದ್ದರು. ಮತ್ತೆ ಸಾವಿಗೆ ಈಡಾಗಬೇಕಾಗಿದ್ದ ವ್ಯಕ್ತಿ ಈಕೆಯಲ್ಲವೆಂದು ಹಿಂದಿರುಗಿಸಿ ಕಳುಹಿಸಿದ್ದರು. ಒಮ್ಮೆ ತನ್ನ ಊರಿನವಳೇ ಆದ ಬಾಣಂತಿ ಸಂಜೀವಮ್ಮನಿಗೆ ಬದಲಾಗಿ ಈಕೆಯ ಜೀವವನ್ನು ಕೊಂಡೊಯ್ದಿದ್ದರು. ಮತ್ತೆ ಜೀವಮರಳಿ ಬಂದು ಅಳುತ್ತಿದ್ದವರಿಗೆ ಎಲ್ಲ ವಿವರಿಸಿದಳು. ಅದೇ ಸಮಯಕ್ಕೆ ಪಕ್ಕದ ಕೇರಿಯ ಬಾಣಂತಿ ಸಂಜೀವಮ್ಮನು ಸತ್ತಿದ್ದಳು.

ಸತ್ತು-ಬದುಕಿ ಬಂದೆವೆಂದು ಹೇಳುವ ವ್ಯಕ್ತಿಗಳು ಯಮಲೋಕದ ಬಗ್ಗೆ; ಸ್ವರ್ಗ-ನರಕಗಳ ಬಗ್ಗೆ; ಸ್ವರ್ಗದ ಸುಖ, ನರಕದ ಶಿಕ್ಷೆಗಳ ಬಗ್ಗೆ ನೀಡುವ ವಿವರಗಳು ಅವು ಕಣ್ಣಾರೆ ಅವರು ಕಂಡಂಥವೆಂದು ಹೇಳುತ್ತಾರೆ. ಮನುಷ್ಯರ ಪ್ರಾಣಗಳನ್ನು ಕೊಂಡೊಯ್ಯುವ ಯಮಧೂತರು ಭೀಕರವಾದ ಮುಖ, ಕ್ರೂರವಾದ ನೋಟದಿಂದ ಕಟಕಟನೆ ಹಲ್ಲು ಕಡಿಯುತ್ತಾರೆ. ಇವರು ಕಪ್ಪು ಶರೀರದವರು ನಗ್ನ ದೇಹಗಳು ಇವರಿಗೆ ಎಮ್ಮೆ ಕೋಣದ ಕೋಡುಗಳಿರುತ್ತವೆ. ಸಾಯುವ ವಕ್ತಿಯು ಇವರನ್ನು ನೋಡಿ ಹೆದರಿಕೊಂಡು ಸತ್ತಿರುತ್ತಾನೆ. ಆದ್ದರಿಂದಲೇ ಮಲಮೂತ್ರ ವಿಸರ್ಜನೆಯಾಗಿರುತ್ತದೆ. ಆಯುಷ್ಯ ಮುಗಿದು ಸತ್ತವರು ಸ್ವರ್ಗ ಇಲ್ಲವೇ ನರಕಕ್ಕೆ ಹೋಗುತ್ತಾರೆಂದು ಎಲ್ಲ ಜನಪದ ನಂಬಿಕೆ. ಅದು ಆಯಾ ಧರ್ಮ, ಜಾತ್ರೆ, ದೈವದ ಒಕ್ಕಲು ಇಂಥವುಗಳಿಗೆ ಅನುಗುಣವಾಗಿರುತ್ತದೆ. ಶಿವನ ಭಕ್ತರು ಕೈಲಾಸಕ್ಕೆ; ವಿಷ್ಣುವಿನ ಭಕ್ತರು ವೈಕುಂಠಕ್ಕೆ; ಹೀಗೆ ನಿರ್ಧಿಷ್ಟವಾದ ಸ್ವರ್ಗಕ್ಕೇ ಪುಣ್ಯಾತ್ಮರು ಸೇರುತ್ತಾರೆ. ಆದರೆ ನರಕ ಮಾತ್ರ ಎಲ್ಲರಿಗೂ ಒಂದೇ ಆಗಿರುತ್ತದೆ. ಭೂಲೋಕದಲ್ಲಿ ಒಳಿತನ್ನು ಮಾಡಿದವರಿಗೆ ಪುಣ್ಯವು ಲಭಿಸಿ ಅದರ ಫಲವಾಗಿ ಸ್ವರ್ಗ ಪ್ರಾಪ್ತವಾಗುತ್ತದೆ. ಹಾಗೆಯೇ ಕೆಡಕನ್ನು ಮಾಡಿದವರಿಗೆ ಪಾಪವು ಒದಗಿ ನರಕ ಪ್ರಾಪ್ತವಾಗುತ್ತದೆ ಎಂಬ ನಂಬಿಕೆ ಸಾರ್ವತ್ರಿಕವಾದದ್ದು. ನರಕದಲ್ಲಿ ಸದಾ ಶಿಕ್ಷೆಗಳಿಗೆ ಗುರಿಯಾಗುವುದೇ ಆಗುತ್ತದೆ. ಅಲ್ಲಿ ಪರಿಚಿತರ ಪರಸ್ಪರ ಭೇಟಿಗಳು ಸಾಧ್ಯತೆಗಳಿರುವುದಿಲ್ಲ. ಆದರೆ ಸ್ವರ್ಗದಲ್ಲಿರುವವರು ಅಲ್ಲಿ ತಮ್ಮವರಿಗಾಗಿ ಕಾಯುತ್ತಿರುತ್ತಾರೆಂದು ನಂಬಿಕೆ ಇದೆ. ತಮ್ಮ ಊರಿನವರು ಸತ್ತು ಸ್ವರ್ಗ ಸೇರಿದಾಗ ಮೊದಲಿನ ಸ್ವರ್ಗವಾಸಿಗಳು ಅವರನ್ನು ತಮ್ಮ ಗುಂಪಿಗೆ ಸೇರಿಸಿಕೊಳ್ಳುತ್ತಾರೆ. ತಮ್ಮ ಮಕ್ಕಳು ಸ್ನೇಹಿತರು ಬಂಧು-ಬಳಗದ ಯೋಗ-ಕ್ಷೇಮವನ್ನು ಕೇಳುತ್ತಾರೆ ಎಂದೆಲ್ಲ ಹೇಳುತ್ತಾರೆ.

**ಸತ್ತವರು ದೆವ್ವಗಳಾದ ಐತಿಹ್ಯಗಳು :** ಅಕಾಲ ಮರಣಕ್ಕೆ ತುತ್ತಾದವರ ಆತ್ಮಗಳು ಸ್ವರ್ಗ-ನರಕಗಳಿಗೆ ಹೋಗದೆ ಪ್ರೇತಗಳಾಗಿ ಇಹಲೋಕದಲ್ಲಿಯೇ ಸುತ್ತುತ್ತಿರುತ್ತವೆಯೆಂಬ ನಂಬಿಕೆ ಸಾರ್ವತ್ರಿಕವಾದದ್ದು. ವ್ಯಕ್ತಿಯ ಆಯುಷ್ಯ ಅವಧಿಯು ಮುಗಿಯುವ ಮೊದಲೇ ಅಕಾಲ ಮರಣ ಸಂಭವಿಸಿದರೆ. ಅವಧಿಗೆ ತಲುಪುವವರೆಗೂ ಆತ್ಮವು ಭೂಮಿಯ ಮೇಲಿನ ನಿರ್ಜನ ಪ್ರದೇಶಗಳಾದ ಪಾಳುಮಂಟಪಗಳು, ಗುಹೆಗಳು, ಮರ-ಗಿಡಗಳು ಮುಂತಾದವುಗಳಲ್ಲಿ ತೂಗಾಡಿಕೊಂಡಿರುತ್ತವೆಯೆಂದು ಹೇಳುತ್ತಾರೆ. ಆಸೆ-ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವಲ್ಲಿ ಇವರು ಬದುಕಿನಿಂದ ವಂಚಿತರಾದ ಕಾರಣ ದೆವ್ವಗಳಾಗಿ ಈಡೇರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಈ ಕಾರಣದಿಂದಾಗಿ ಮನುಷ್ಯರನ್ನು ಪೀಡಿಸುತ್ತಾರೆ. ಸತ್ತ ನಂತರ ಮೋಕ್ಷಕ್ಕೂ ಹೋಗದೆ ಆಯುಷ್ಯ ಪೂರ್ಣ ಬದುಕಲೂ ಆಗದೆ ಉಳಿಯುತ್ತಾರೆಂಬ ವ್ಯಕ್ತಿಗಳನ್ನು ಅಂತರಪಿಶಾಚಿಗಳೆಂದು ಕರೆಯುತ್ತಾರೆ. ಆದರೆ ಈ ಸ್ಥಿತಿಯು ಶಾಶ್ವತವಲ್ಲದ್ದು. ಅವರ

ಬದುಕಿನ ಅವಧಿ ಮುಗಿಯಬೇಕಾದದ್ದು ಮುಗಿದರೆ, ನಂತರ ಅವರಿಗೆ ಮುಕ್ತಿ ದೊರೆಯುತ್ತದೆಯೆಂದು ನಂಬಿಕೆ. ಆತ್ಮಹತ್ಯೆ ಮಾಡಿಕೊಂಡವರು ಕೊಲೆಯಾದವರು ಅಪಘಾತಗಳಿಗೆ ಬಲಿಯಾದವರು ಹೀಗೆ ಆಕಸ್ಮಿಕವಾಗಿ ಮರಣಹೊಂದಿದವರಲ್ಲದೆ ಅತಿ ಜಿಪುಣರು ಲೋಭಿಗಳು ಸ್ವಾರ್ಥಿಗಳು ಹಣವನ್ನು ಬಚ್ಚಿಟ್ಟಿರುವವರು, ಸಾಲ ನೀಡಿ ಅತಿಯಾದ ಪ್ರಮಾಣದ ಬಡ್ಡಿಯನ್ನು ಪಡೆಯುತ್ತಿದ್ದವರು. ಮತ್ತೊಬ್ಬರ ಬಗ್ಗೆ ಅತಿಯಾದ ಪ್ರೀತಿ ಇಲ್ಲವೇ ಸೇಡನ್ನು ಹೊಂದಿದವರು ಸತ್ತರೆ ನಂತರ ದೆವ್ವಗಳಾಗಿ ಆಯಾ ಕಾರಣಕ್ಕೆ ಸಂಬಂಧ ಪಟ್ಟವರನ್ನು ಪೀಡಿಸುತ್ತಾರೆಂದು ನಂಬಿಕೆ. ಇಂಥವರ ಪೀಡೆಯ ಪರಿಹಾರಕ್ಕಾಗಿ ತಾಯತಗಳನ್ನು ಕಟ್ಟಿಸಿಕೊಳ್ಳುತ್ತಾರೆ. ಮೈಮೇಲೆ ದೆವ್ವ ಬಂದಿದೆಯೆನ್ನುವವರಿಗೆ ದೆವ್ವ ಬಿಡಿಸುತ್ತರೆ. ಕೆಲವು ಜನಪದ ದೇವತೆಗಳು ದೆವ್ವ ಬಿಡಿಸುತ್ತವೆ. ಶಿಷ್ಟ ಪರಂಪರೆಯಲ್ಲಿ ನರಸಿಂಹ ಮಂತ್ರ, ರಾಘವೇಂದ್ರ ಶ್ಲೋಕ ವಾದಿರಾಜ, ಭೂತರಾಜರಂಥ ದೆವ್ವಗಳ ಆರಾಧನೆಯಿಂದ ದೆವ್ವಗಳು ಹತ್ತಿರ ಸುಳಿಯುವುದಿಲ್ಲವೆಂದು ಹೇಳುತ್ತಾರೆ. ಆಂಜನೇಯನು ಶಿಷ್ಟ ಜನಪದಗಳೆರಡರಲ್ಲೂ ದೆವ್ವಗಳಿಂದ ರಕ್ಷಿಸುತ್ತಾನೆ.

ಸತ್ತವರು ದೆವ್ವಗಳಾಗಿ ಬಂದು ಕಾಡದಿರಲೆಂದು ಜನಪದರು ಕೆಲವು ಆಚರಣೆಗಳನ್ನು ಸಂಸ್ಕಾರದ ಸಂದರ್ಭದಲ್ಲಿ ನೆರವೇರಿಸುತ್ತಾರೆ. ಸ್ಮಶಾನದಿಂದ ಊರಿನವರೆಗೆ ಧಾನ್ಯಗಳನ್ನು ಸಂಸ್ಕಾರದ ದಾರಿಯುದ್ದಕ್ಕೂ ಚೆಲ್ಲುತ್ತಾ ಬರುತ್ತಾರೆ. ರಾಗಿ, ಸಜ್ಜೆ, ನವಣೆಯಂಥ ಧಾನ್ಯಗಳ ಮೇಲೆ ನಡೆದು ಬರಲಾಗದೆ ದೆವ್ವಗಳು ಉರುಳಿ ಬೀಳುತ್ತವೆ. ಹಾಗೆಂದು ಒಂದೊಂದೇ ಧಾನ್ಯಗಳನ್ನು ಆರಿಸಿ ತಿಂದು ಬರುವಲ್ಲಿ ಬೆಳಕಾಗಿರುತ್ತದೆ. ಹಗಲಿನಲ್ಲಿ ಬರುವುದಕ್ಕಿಂತ ರಾತ್ರಿಯ ವೇಳೆ ದೆವ್ವ-ಭೂತಗಳು ಹೆಚ್ಚು ಸಂಚರಿಸುತ್ತವೆ. ಗ್ರಹಣ, ಹುಣ್ಣಿಮೆ, ಅಮವಾಸ್ಯೆಗಳ ನಡುರಾತ್ರಿ ಸಮಯ ಇವುಗಳಿಗೆ ಪ್ರಾಶಸ್ತ್ಯ ಕಾಲವೆಂದು ತಿಳಿಯುತ್ತಾರೆ. ಕೆಲವು ಮಾಂತ್ರಿಕರು ದೆವ್ವಗಳು ಅವಧೂತರು ಸಂತರು ಸೂಫಿಗಳು ಮೈಮೇಲೆ ಬರುವ ದೆವ್ವಗಳನ್ನು ಬಿಡಿಸುತ್ತಾರೆಂಬ ನಂಬಿಕೆಯ ಐತಿಹ್ಯಗಳು ದೊರೆಯುತ್ತವೆ. ದೆವ್ವ ಮೈಮೇಲೆ ಬಂದಾಗ ಸಂಬಂಧಿಸಿದ ವ್ಯಕ್ತಿಯ ತಲೆಗೂದಲನ್ನು ಕಿತ್ತುಕೊಂಡು ಕಟ್ಟಿ ಗಂಟು ಹಾಕುವುದರ ಮೂಲಕ ಕೆಲವರು ದೆವ್ವಗಳನ್ನು ಬಾಟೆಲ್‌ಗಳಲ್ಲಿ ಬಂಧಿಸುವುದರ ಮೂಲಕ ಕೆಲವರು ಹೀಗೆ ಹಲವು ರೀತಿಗಳಲ್ಲಿ ದೆವ್ವದ ಕಾಟವನ್ನು ನಿವಾರಿಸುತ್ತಾರೆ ಎಂಬುದನ್ನು ಐತಿಹ್ಯಗಳು ವಿವರಿಸುತ್ತವೆ.

ಅವಿವಾಹಿತರು ಸತ್ತರೆ ದೆವ್ವಗಳಾಗಿ ವಯಸ್ಕರನ್ನು ಕಾಡಿಸುತ್ತಾರೆಂಬ ನಂಬಿಕೆಗೆ ಪೂರಕವಾಗಿ ಹಲವು ರೀತಿಯ ಸ್ಥಳೀಯ ಐತಿಹ್ಯಗಳು ದೊರೆಯುತ್ತವೆ. ಒಬ್ಬಂಟಿಯಾಗಿ ಓಡಾಡುವ ಯುವಕರನ್ನು ಹೆಣ್ಣು ದೆವ್ವಗಳು ಕಾಡಿಸುತ್ತವೆಯೆಂಬ ಐತಿಹ್ಯಗಳೇ ಹೆಚ್ಚು. ಇವುಗಳನ್ನು ಮೋಹಿನಿಗಳೆಂದೂ ಮೋಹಿನಿಕಾಟವೆಂದೂ ಗುರ್ತಿಸುತ್ತಾರೆ. ವಯಸ್ಕ ಅವಿವಾಹಿತ ದೆವ್ವಗಳು ಒಬ್ಬಂಟಿಯಾಗಿ ಇರಲಾರದೆ ತಮಗೆ ಮನಸ್ಸಾದ ವ್ಯಕ್ತಿಗಳನ್ನು ಕೊಂದು ತಮ್ಮೊಂದಿಗೆ ಉಳಿಸಿಕೊಳ್ಳುತ್ತವೆಯೆಂಬ ಭಯ ಜನಪದರದು.

ಶವಸಂಸ್ಕಾರದ ಬಳಿಕ ಸ್ಮಶಾನದಲ್ಲಿ ವ್ಯಕ್ತಿಯನ್ನು ಹೂಳಿರುವ ಗುಣಿಯ ಮೇಲೆ ಔಡಲ ಬೀಜವನ್ನು ಬಿತ್ತಿದರೆ ಅವರು ದೆವ್ವವಾದರೂ ಗುಣಿಯ ಒಳಗೆ ಇರುತ್ತಾರೆಯೇ ಹೊರತು ಮೇಲೆ ಬರುವುದಿಲ್ಲವೆಂದು ಹೇಳುತ್ತಾರೆ. ಕೆಲವರು ಶವ ಯಾತ್ರೆಯ ಸಮಯದಲ್ಲಿ ಅಲ್ಲಲ್ಲಿ ಮೊಳೆಗಳನ್ನು ಔಡಲ ಬೀಜಗಳನ್ನು ಸ್ಮಶಾನದವರೆಗೂ ಹಾಕಿ ಬರುತ್ತಾರೆ. ಕೆಲವರು ಮಣ್ಣು ಮಾಡುವಾಗ ಮಣ್ಣಿನ ಜೊತೆ ಇವುಗಳನ್ನು ಸೇರಿಸಿ ಹಾಕಿ ಬರುತ್ತಾರೆ. ಈ ಕೆಲಸವು ಗುಪ್ತವಾಗಿ ನಡೆದಿರುತ್ತದೆ. ದೆವ್ವದ ಹೆದರಿಕೆ ಇರುವವರು ಶವದ ಸಂಬಂಧಿಕರಿಗೆ ತಿಳಿಯದಂತೆ ಇಂಥ ಕೆಲಸಗಳನ್ನು ರಹಸ್ಯವಾಗಿ ಮಾಡಿ ಬಂದಿರುತ್ತಾರೆ. ಬದುಕಿನ ಅವಧಿಯಲ್ಲಿ ಕಾಟ ಅಥವಾ ಪೀಡನೆ ಕೊಡುವ ವ್ಯಕ್ತಿಗಳು ಸತ್ತಾಗ ಮುಂದೆ ಅವರು ದೆವ್ವಗಳಾಗಿಯೂ ಪೀಡಿಸುತ್ತಾರೆಂಬ ಭಯದಿಂದ ಪೀಡನೆಗೆ ಒಳಗಾದ ವ್ಯಕ್ತಿಗಳು ಇಂಥ ಆಚರಣೆಗಳನ್ನು ಮಾಡುತ್ತಾರೆ. ಉದಾ: ಸಾಲ ನೀಡಿ ಅಸಲು ಅಥವಾ ಬಡ್ಡಿಗಾಗಿ ವ್ಯಕ್ತಿಗಳನ್ನು ಪೀಡಿಸುವವರು ಸತ್ತಾಗ ಸಾಲಗಾರನು ತನಗೆ ಸಾಲ ನೀಡಿದ ವ್ಯಕ್ತಿಯು ಸತ್ತಿದ್ದರಿಂದ ಸಾಲ ತೀರಿಸುವುದು ತಪ್ಪಿತೆಂದು ಸಂತೋಷಪಡುವದರ ಬದಲು ಆತಂಕಗೊಳ್ಳುತ್ತಾನೆ. ಸತ್ತ ವ್ಯಕ್ತಿಯು ದೆವ್ವವಾಗಿ ತನ್ನ ಸಾಲ ತೀರಿಸಲಿಲ್ಲವೆಂದು ಕಾಡುತ್ತಾನೆಂಬ ಹೆದರಿಕೆಗೆ ಒಳಗಾಗಿರುತ್ತಾರೆ. ಹೀಗೆ ಸತ್ತ ವ್ಯಕ್ತಿಯ ಬಗ್ಗೆ ಹಲವು ಕಾರಣಗಳಿಗೆ ಹೆದರುವವರು ದೆವ್ವವಾಗಿ ಕಾಡದಿರಲೆಂದು ಮಾಡುವ ಆಚರಣೆಗಳು ಸಾಮಾನ್ಯವಾಗಿ ಗೌಪ್ಯವಾಗಿಯೇ ನಡೆದಿರುತ್ತವೆ. ಇಂಥ ವಿಷಯಗಳಿಗೆ ಸಂಬಂಧಿಸಿದ ವಿವರಗಳನ್ನು ಐತಿಹ್ಯಗಳು ಹೇಳುತ್ತವೆ. ಇವುಗಳಲ್ಲಿ ದೆವ್ವ-ಭೂತಗಳ ಪೀಡನೆ ಮತ್ತು ನಿಯಂತ್ರಣದ ವಿವರಗಳಿರುತ್ತವೆ.

ಐತಿಹ್ಯ : ಗಂಗಸಂದ್ರದ ಅಂಜಮ್ಮನು ತುಂಬ ಗಯ್ಯಾಳಿ ಹೆಂಗಸೆಂದು ಹೆಸರುವಾಸಿಯಾಗಿದ್ದಳು. ಬದುಕಿದಾಗ ನೆರೆ-ಹೊರೆಯವರೊಂದಿಗೆ, ವಾರಗಿತ್ತಿಯರೊಂದಿಗೆ ಸದಾ ಜಗಳವಾಡುತ್ತಿದ್ದಳು. ಖಾಯಿಲೆ ಯಿಂದ ಆಕೆ ಹಾಸಿಗೆ ಹಿಡಿದು ಸತ್ತಳು. ಅವಳ ಅಸಮಾಧಾನಕ್ಕೆ ಒಳಗಾಗಿದ್ದ ಹೆಂಗಸರು ಶವದ ಮೆರವಣಿಗೆಯ ಸಮಯದಲ್ಲಿ ದಾರಿಯುದ್ದಕ್ಕೂ ಮೊಳೆಗಳನ್ನು ಅರಳು ಬೀಜ (ಔಡಲ ಬೀಜ)ಗಳನ್ನು ಚೆಲ್ಲಿ ಬಂದಿದ್ದರು. ಅವಳ ವಾರಗಿತ್ತಿಯರು ಶವದ ಮೇಲೆ ಮೂರು ಹಿಡಿ ಮಣ್ಣು ಹಾಕುವಾಗ ಅದರೊಂದಿಗೆ ಅರಳು ಬೀಜ ಹಾಗೂ ಸಣ್ಣ ಮೊಳೆಗಳನ್ನು ಸೇರಿಸಿ ಹಾಕಿಬಂದಿದ್ದರು. ಅವರಿಗೆ ಯಾರಿಗೂ ಅವಳು ದೆವ್ವವಾಗಿ ಕಾಡಲಿಲ್ಲ. ಉಳಿದವರ ಮೈ ಮೇಲೆ ದೆವ್ವವಾಗಿ ಬಂದು ಕಾಡುತ್ತಿದ್ದಳು. ಅವರು ಜಗರೆಡ್ಡಿಹಳ್ಳಿ (ಗೌರೀಬಿದನೂರು ತಾಲೂಕು) ಆಂಜನೇಯನಿಗೆ ಹೋಗಿ ದೆವ್ವವನ್ನು ಬಿಡಿಸಿಕೊಂಡರು.

ಕೆಲವೆಡೆಗಳಲ್ಲಿ ವ್ಯಕ್ತಿ ಸತ್ತ, ಮಲಗಿಸಿದ ಇಲ್ಲವೇ ಶವಕ್ಕೆ ಸ್ನಾನ ಮಾಡಿಸಿದ ಜಾಗಗಳಲ್ಲಿ ಕಬ್ಬಿಣದ ಮೊಳೆಗಳನ್ನು ಹೊಡೆಯುತ್ತಾರೆ. ಸತ್ತವನ ಪ್ರೇತವನ್ನು ಬಂಧಿಸುವ ಸಂಕೇತವಾಗಿ ಈ ಆಚರಣೆ

ಕಂಡುಬರುತ್ತದೆ. ಸತ್ತವರ ಆತ್ಮವು ಈ ಭೂಮಿಯ ಮೇಲೆ ಪಿಶಾಚಿಯಾಗಿ ಅಲೆದಾಡುತ್ತಾ ಜನರಿಗೆ ತೊಂದರೆ ಕೊಡದಿರಲಿ ಎಂದು ಅದರ ಆಯಸ್ಸಿನ ಅವಧಿಯನ್ನು ಪೂರ್ಣಗೊಳಿಸಲು ಕೆಲವು ಆಚರಣೆಗಳನ್ನು ಮಾಡುತ್ತಾರೆ. ಸತ್ತ ಕೂಡಲೆ ಜೀವಾತ್ಮವು ಶರೀರದ ಸಂಬಂಧವನ್ನು ಕಳೆದುಕೊಂಡು ತಕ್ಷಣ ಘೋರ ನರಕಗಳ ದರ್ಶನ ಮಾಡಿ ಭೂಮಿಗೆ ಹಿಂದಿರುಗುತ್ತದೆ. ಸತ್ತ ವ್ಯಕ್ತಿಯ ಸಂಬಂಧಿಕರು ಶವಸಂಸ್ಕಾರ ತಿಥಿ ಶ್ರದ್ಧಾ ಮುಂತಾದ ಆಚರಣೆಗಳನ್ನು ಮುಗಿಸುವ ತನಕ ಅದು ಈ ಲೋಕದಲ್ಲಿಯೇ ಓಡಾಡಿಕೊಂಡಿರುತ್ತದೆ. ಈ ಆಚರಣೆಗಳಲ್ಲಿ ಆಹಾರ ಪಡೆದು ಸ್ವರ್ಗ ಇಲ್ಲವೇ ನರಕದ ಕಡೆಗೆ ಒಬ್ಬಂಟಿಯಾಗಿ ಪ್ರಯಾಣ ಬೆಳೆಸುತ್ತದೆ. ಸಾವಿನ ಬಗ್ಗೆ ಎಲ್ಲ ಮನುಷ್ಯರಿಗೂ ಭಯವಿದ್ದೇ ಇರುತ್ತದೆ. ಇದಕ್ಕೆ ಕಾರಣ ಸಾವಿನಿಂದ ತಾನು ಈ ಜಗತ್ತನ್ನು ಇಲ್ಲಿನ ವಸ್ತುಗಳನ್ನು ವ್ಯಕ್ತಿಗಳನ್ನು ತ್ಯಜಿಸಬೇಕೆನ್ನುವುದಾಗಿರುತ್ತದೆ. ತನ್ನ ಶರೀರದ ಮೇಲಿರುವ ಮೋಹ ಮತ್ತು ಮರಣದ ನಂತರ ಏನಾಗುತ್ತೇವೋ ಎಂಬ ಆತಂಕ ಇವೆಲ್ಲವೂ ಸಾವಿನ ಬಗ್ಗೆ ಹೆದರಿಕೆ ಮೂಡಿಸುವ ಅಂಶಗಳಾಗಿರುತ್ತವೆ. ಸಾವನ್ನು ಮೀರಿ ಬದುಕಬೇಕೆಂಬುದು ಮನುಷ್ಯನ ಹಂಬಲವಾದರೂ ಅದು ಅಸಾಧ್ಯವಾದದ್ದು. ಆದ್ದರಿಂದಲೇ ಸಾವಿನ ಬಗ್ಗೆ ಹಲವು ಬಗೆಯ ನಂಬಿಕೆಗಳು ಕಥೆಗಳು ಸೃಷ್ಟಿಯಾಗಿವೆಯಲ್ಲದೆ ಪುರಾಣಗಳು ಸೃಷ್ಟಿಯಾಗಿವೆ. ಇವು ಧರ್ಮದಿಂದ-ಧರ್ಮಕ್ಕೆ ಭಿನ್ನವಾಗಿದೆ. ವೈದಿಕ ಧರ್ಮದ ಭಗವದ್ಗೀತೆಯ ಪ್ರಕಾರ ಮರಣವೆಂಬುದು ಒಂದು ಬದಲಾವಣೆ. ವ್ಯಕ್ತಿಯು ಹಳೆಯ ಬಟ್ಟೆಯನ್ನು ಕಳಚಿ ಹೊಸ ಬಟ್ಟೆಯನ್ನು ತೊಡುವಂತೆ ಆತ್ಮವು ಬಂದು ಶರೀರವನ್ನು ತೊರೆದು ಮತ್ತೊಂದು ಶರೀರವನ್ನು ಪಡೆಯುತ್ತದೆ. ಇದನ್ನು ಪುನರ್ಜನ್ಮವೆನ್ನುತ್ತಾರೆ.

ಸಾವಿನ ನಂತರ ಆತ್ಮವು ಸ್ವರ್ಗ ಅಥವಾ ನರಕಕ್ಕೆ ಹೋಗುತ್ತದೆ. ಇಲ್ಲವೇ ಮತ್ತೊಂದು ದೇಹ ಧಾರಣೆ ಮಾಡುತ್ತದೆ. ಕೆಲವೊಮ್ಮೆ ಇವೆರಡನ್ನೂ ಹೊರತುಪಡಿಸಿ ಪರಮಾತ್ಮನಲ್ಲಿ ಒಂದಾಗುವ ಮೂಲಕ ಮುಕ್ತಿಯನ್ನು ಪಡೆಯಲಾಗುತ್ತದೆ. ಇದು ಮಾಯೆಯಿಂದ ಮುಕ್ತವಾಗುವ ಸ್ಥಿತಿ. ಪ್ರತಿ ಜನ್ಮದಲ್ಲಿಯೂ ಮುಂದಿನ ಸ್ಥಿತಿಗೆ ಅಂದರೆ ಸಾವಿನ ನಂತರದ ಅವಸ್ಥೆಗೆ ತಯಾರಿ ನಡೆಯುತ್ತಿರುತ್ತದೆ. ಬದುಕಿದ್ದಾಗ ಒಳ್ಳೆಯದನ್ನು ಮಾಡಿದರೆ ಒಳ್ಳೆಯ ಸ್ಥಿತಿಯೂ ಕೇಡನ್ನು ಮಾಡಿದರೆ ಕೆಟ್ಟ ಅವಸ್ಥೆಯೂ ಒದಗುತ್ತವೆಂಬ ನಂಬಿಕೆಗಳಿವೆ. ಸಾವನ್ನಪ್ಪಿದ ಪೂರ್ವಿಕರು ಮತ್ತೆ ತಮ್ಮ ಮಕ್ಕಳಾಗಿ ಮೊಮ್ಮಕ್ಕಳಾಗಿ ಹುಟ್ಟುತ್ತಾರೆಂದು ಭಾವಿಸುವ ಮೂಲಕ ಜಾನಪದರು ಹಿರಿಯರ ನೆನಪನ್ನು ಪುನರ್‌ಸೃಷ್ಟಿಸಿಕೊಳ್ಳುತ್ತಾರೆ.

ವ್ಯಕ್ತಿ ಸಾಧನೆಯನ್ನು ಗೌರವಿಸುವ ಜನಪದರ ಮನಸ್ಸು ವ್ಯಕ್ತಿಯ ಸಾವಿನ ಬಗೆಗೂ ಸಾವಿನಾಚೆಯ ಬದುಕಿನ ಬಗೆಗೂ ತುಂಬ ಕುತೂಹಲಕಾರಿಯಾದ ಘಟನೆಗಳನ್ನು ಸನ್ನಿವೇಶಗಳನ್ನು ವಿವರಣಾತ್ಮಕವಾಗಿ ಕಟ್ಟಿಕೊಡುತ್ತದೆ. ಜನಪದ ನಾಯಕರು ಕೆಲವೊಮ್ಮೆ ಸಾವಿನ ನಂತರ ರೂಪಾಂತರಗೊಳ್ಳುತ್ತಾರೆ. ಈ

ರೂಪಾಂತರವು ವೀರತ್ವದ ಕಲ್ಪನೆಯೊಂದಿಗೆ ಸಂಬಂಧ ಪಡೆದಿರುತ್ತದೆ. ಕೆಲವು ಬಿಕ್ಕಟ್ಟಿನ ಪರಿಸ್ಥಿತಿಗಳಲ್ಲಿ ವೀರತ್ವದಿಂದ ಮೆರೆದ ನಾಯಕರು ಅಕಾಲ ಮರಣಕ್ಕೆ ತುತ್ತಾದ ನಂತರ ತಮ್ಮ ಸಾವಿಗೆ ಕಾರಣರಾದವರ ಮೇಲೆ ಸೇಡು ತೀರಿಸಿಕೊಳ್ಳುತ್ತಾರೆ. ಜೊತೆಗೆ ತಮ್ಮ ಹೋರಾಟಕ್ಕೆ ಈ ಮೂಲಕ ವಿಜಯವನ್ನು ತಂದುಕೊಡುತ್ತಾರೆ. ಈ ಆಶಯಕ್ಕೆ ಸಂಬಂಧಿಸಿದ ನಿರೂಪಣೆಗಳು ಆಕರ್ಷಕ ರಚನೆಗಳನ್ನು ಸೃಷ್ಟಿಸುತ್ತವೆ. ನಾಯಕನು ಕಟ್ಟಬೇಕೆಂದಿದ್ದ ಲೌಕಿಕ ಪ್ರಪಂಚದ ಭಾವನೆಗಳು ಛಿದ್ರಗೊಂಡು ಅಥವಾ ಪಲ್ಲಟಗೊಂಡು ಯೋಜನೆಗಳು ವಿಫಲಗೊಳ್ಳುವುದರ ಮೂಲಕ ನಾಯಕನು ಸತ್ತಿರುತ್ತಾನೆ. ಆ ನಂತರ ಅವನು ಹಿಂದೆ ಸಾಧಿಸಬೇಕೆಂದಿದ್ದ ಯೋಜನೆಗಳನ್ನು ಚಾಲ್ತಿಗೆ ತರುತ್ತಾನೆ. ಇದನ್ನು ಆಯಾ ವ್ಯಕ್ತಿಗೆ ಸಂಬಂಧಿಸಿದ ವಾರ್ಷಿಕ ಆಚರಣೆಗಳಲ್ಲಿ ಗುರುತಿಸುತ್ತೇವೆ. ಹೀಗೆ ರೂಪಾಂತರಗೊಳಿಸುವ ಲೋಕ ಮತ್ತು ಲೌಕಿಕ ಜಗತ್ತಿನ ನಡುವೆ ಘರ್ಷಣೆ ಹಾಗೂ ಸಾಮರಸ್ಯಗಳನ್ನು ಸಾಧಿಸುತ್ತೇವೆ. ಈ ಸಂಬಂಧ ಪರಸ್ಪರ ಪೂರಕವೂ ವೈರುಧ್ಯಮಯವೂ ಆಗಿದ್ದು, ಸಮತೋಲನವನ್ನುಂಟು ಮಾಡುತ್ತಿರುತ್ತದೆ. ವ್ಯಕ್ತಿ ಸತ್ತು ರೂಪಾಂತರ ಹೊಂದಿಯಾದರೂ ತನ್ನ ತತ್ವಗಳನ್ನು, ನಿಯಮಗಳನ್ನು ರಕ್ಷಿಸುತ್ತಾನೆ. ಸತ್ತವರು ರೂಪಾಂತರಗೊಂಡು ರಕ್ಷಕ ದೈವಗಳಾಗುವ ಧಾರ್ಮಿಕತೆಗೂ, 'ಜನಪದರು ಸಾವಿನ ಬಗೆಗೆ ಹೊಂದಿರುವ ಲೋಕ ದೃಷ್ಟಿಗೂ ಆಳದಲ್ಲಿ ಜೈವಿಕ ಸಂಬಂಧವಿದೆ. ಎರಡೂ ಕಡೆ ಲೌಕಿಕಕ್ಕೆ ಪ್ರಾತಿನಿಧ್ಯ ನೀಡಲಾಗಿದೆ. ಮತ್ತು ಸಾವಿನಾಚೆಗಿನ ಜಗತ್ತನ್ನು ಕಲ್ಪಿಸಿ ನಿರಾಕರಿಸಲಾಗಿದೆ'.[೨]

ಸಾವಿನ ನಂತರದ ರೂಪಾಂತರಗಳು ಜನಸಾಮಾನ್ಯರ ನೆಲೆಯಿಂದ ಅವರನ್ನು ಉನ್ನತ ಸ್ಥಿತಿಗೆ ಅಥವಾ ಅಧೋಗತಿಗೆ ಒಳಪಡಿಸುತ್ತವೆ. ಜನಪದರ ಈ ಕಲ್ಪನೆ ಪುನರ್ಜನ್ಮದ ಕಲ್ಪನೆಗಿಂತ ಬೇರೆಯಾದದ್ದು. ಏಕೆಂದರೆ ಸಾವಿನ ಆಚರಣೆಗಳು ವ್ಯಕ್ತಿ ಸತ್ತದ್ದರಿಂದ ಆ ಪರಿಸರದಲ್ಲಿ ತಪ್ಪಿದ ಸಮತೋಲನವನ್ನು ಕಟ್ಟಿಕೊಡುವುದಾಗಿರುತ್ತವೆ. ಪ್ರಸ್ತುತ ಸತ್ತ ವ್ಯಕ್ತಿಯನ್ನು ಈಗಾಗಲೇ ಸತ್ತಿರುವ ವ್ಯಕ್ತಿಗಳ ಸಾಲಿಗೆ ಸೇರಿಸಿ ಅಲ್ಲಿಂದ ಮುಂದಕ್ಕೆ ಸತ್ತ ವ್ಯಕ್ತಿಗೆ ಲೌಕಿಕ ಜಗತ್ತಿನಲ್ಲಿ ಸ್ಥಾನವಿಲ್ಲವೆಂದು ಮಾನಸಿಕವಾಗಿ ದೃಢಪಡಿಸಿಕೊಳ್ಳುವಿಕೆ ಸಾವಿನ ಆಚರಣೆಗಳಲ್ಲಿರುತ್ತದೆ.

ಕ್ಷುದ್ರಶಕ್ತಿಗಳು ಗಾಳಿಯ ರೂಪದಲ್ಲಿದ್ದುಕೊಂಡು ಸಮಯ ನೋಡಿ ಮಾನವನನ್ನು ಹಿಂಸಿಸುತ್ತವೆ ಎಂದು ಜನಪದರು ಭಾವಿಸುತ್ತಾರೆ. ಇದನ್ನು ಗಾಳಿಚೇಷ್ಟೆ ಎಂದು ಕರೆಯುತ್ತಾರೆ. ಇದರ ನಿವಾರಣೆಗೆಂದು ಮಾಟ-ಮಂತ್ರಗಳಿಗೆ ಮೊರೆ ಹೋಗುತ್ತಾರೆ. ಸತ್ತವರು ಬದುಕಿದವರ ಮೈ ಮೇಲೆ ಗಾಳಿಯಾಗಿ ಬಂದು ಪೀಡಿಸುವುದರ ಬಗ್ಗೆ ಅನೇಕ ಕಥೆ-ಐತಿಹ್ಯಗಳು ದೊರೆಯುತ್ತವೆ. ಶಿಷ್ಟ ಪರಂಪರೆ ಗಾಳಿಯನ್ನು ವಾಯುದೇವನೆಂದು ಗಂಡಿನ ರೂಪದಲ್ಲಿ ಗುರುತಿಸಿದರೆ ಜನಪದದಲ್ಲಿ ದುರುಗವ್ವ, ಗಾಳಿಮರೆವ್ವ,

ಗಾಳೆಮ್ಮ ಮೊದಲಾದ ಸ್ತ್ರೀ ದೇವತೆಗಳ ರೂಪದಲ್ಲಿ ಗುರುತಿಸುತ್ತಾರೆ. ಜೊತೆಗೆ ಸತ್ತ ಮನುಷ್ಯರ ಆತ್ಮಗಳಾಗಿ ಹಾಗೂ ಅಂಥ ಆತ್ಮಗಳ ವಿವಿಧ ಪ್ರಕಾರಗಳಾದ ದೆವ್ವ, ಭೂತ, ಪಿಶಾಚಿಗಳಾಗಿ ಒಟ್ಟು ಕ್ಷುದ್ರಶಕ್ತಿಗಳ ರೂಪದಲ್ಲಿ ಕಲ್ಪಿಸಿಕೊಳ್ಳುತ್ತಾರೆ. ಉಸಿರಾಟಕ್ಕೆ ಗಾಳಿ ಅಗತ್ಯವಾದ್ದರಿಂದ ಪ್ರಾಣವೆಂದು ಪರಿಭಾವಿಸುತ್ತಾರೆ. ಪಂಚಭೂತಗಳೆಲ್ಲೆಲ್ಲ ಗಾಳಿಯು ಆಕಾರ ರಹಿತವೂ ರೂಪಾತೀತವೂ ಆಗಿರುವುದರಿಂದ ಗಾಳಿಯನ್ನು ಕಾಣಲು ಸಾಧ್ಯವಿಲ್ಲ. ಇಂಥ ಕಾರಣಗಳಿಂದಾಗಿಯೇ ಗಾಳಿಯ ವಿಗ್ರಹ, ಮೂರ್ತಿ ಶಿಲ್ಪಗಳಾಗಲಿ ಗುಡಿಗಳಾಗಲಿ ಇಲ್ಲವೆಂದೇ ಹೇಳಬೇಕಾಗುತ್ತದೆ.

**ಗಾಳಿ-ದೆವ್ವಗಳನ್ನು ಬಿಡಿಸುವ ಶಕ್ತಿಗಳ ಕುರಿತ ಐತಿಹ್ಯಗಳು :** ಮನುಷ್ಯನ ಮೈಮೇಲೆ ದೆವ್ವಗಳು ಬರುತ್ತವೆಯೆಂದು ನಂಬಿಕೆ. ಹಾಗೆ ಬರುವ ದೆವ್ವಗಳು ವ್ಯಕ್ತಿಯನ್ನು ಆವರಿಸಿಕೊಂಡು ನಿಧಾನವಾಗಿ ಸಾಯಿಸಿ ತಮ್ಮ ಜೊತೆಗೆ ಕರೆದುಕೊಳ್ಳುತ್ತವೆಂದು ಹೇಳುತ್ತಾರೆ. ಈ ನಂಬಿಕೆಗೆ ಪೂರಕವಾಗಿ ಜನಪದ ವಲಯದಲ್ಲಿ ಹಲವರ ಮೈಮೇಲೆ ದೆವ್ವ-ಭೂತಗಳು ಬರುವ ಅಭಿನಯ ಕಂಡುಬರುತ್ತದೆ. ಬದುಕಿನ ಬಗ್ಗೆ ಆಸೆಯನ್ನು ಇಟ್ಟುಕೊಂಡಿರುವವರು ಸತ್ತರೆ ದೈವ್ವಗಳಾಗಿ ಈ ರೀತಿಯಲ್ಲಿ ಕಾಡುತ್ತಾರೆಂದು ಭಾವಿಸಲಾಗಿದೆ. ಇಂಥ ದೆವ್ವಗಳನ್ನು ದುಷ್ಟ ಶಕ್ತಿಗಳೆಂದು ತಿಳಿದು ಇವುಗಳನ್ನು ಬಿಡಿಸಲು ಮಂತ್ರ ಶಕ್ತಿಗಳ ನೆರವನ್ನು ಕೆಲವರು ಪಡೆಯುತ್ತಾರೆ. ಮಂತ್ರ ಶಕ್ತಿಗಳನ್ನು ಸಿದ್ಧಿಸಿಕೊಂಡಿದ್ದರೆನ್ನಲಾದ ಮಾಂತ್ರಿಕರು ದೆವ್ವ ಹಿಡಿದಿದೆಯೆನ್ನಲಾದ ವ್ಯಕ್ತಿಯ ಮುಂದೆ ಪೂಜೆ ಹಾಕಿ ದೆವ್ವವನ್ನು ಆವಾಹನೆಯಾಗುವಂತೆ ಮಾಡುತ್ತಾರೆ. ಅಂದರೆ ಸಂಬಂಧಿಸಿದ ವ್ಯಕ್ತಿಯು ಆವೇಶಕ್ಕೊಳಗಾಗಿ ತಾನು ಮೈಮೇಲೆ ಬಂದಿರುವ ದೆವ್ವವೆಂದು ಹೇಳಿಕೊಂಡು ವ್ಯಕ್ತಿಯನ್ನು ಬಿಟ್ಟು ಹೋಗುನಂತೆ ಭಾಷೆ ನೀಡಿ ಸಮಸ್ಥಿತಿಗೆ ತಲುಪುತ್ತಾನೆ/ಳೆ. ಮಾಂತ್ರಿಕರ ಮೂಲಕ ದೈವ್ವ ಬಿಡಿಸುವುದೆಂದರೆ ಅವರು ತಮ್ಮ ಮಂತ್ರಶಕ್ತಿಯಿಂದ ಆವಾಹನೆಗೊಂಡ ದೆವ್ವಕ್ಕೆ ಶಿಕ್ಷೆ ವಿಧಿಸುವ ಮೂಲಕ ಬಿಡುಗಡೆಗೊಳಿಸುವುದು ಎಂದರ್ಥ.

ಮಾಂತ್ರಿಕರು ಎಂಥೆಂಥ ದೆವ್ವಗಳನ್ನು ಹೇಗೆ ಬಿಡಿಸಿದರೆನ್ನುವುದನ್ನು ಕುರಿತಂತೆ ಹೇಳುವ ಸಂಗತಿಗಳು ಕೆಲವೊಮ್ಮೆ ಐತಿಹ್ಯಗಳಾಗಿ ಬಿಡುತ್ತವೆ. ಎಲ್ಲ ದೆವ್ವಗಳನ್ನು ಬಿಡಿಸುವ ಸಂಗತಿಗಳು ಐತಿಹ್ಯಗಳೆನಿಸುವುದಿಲ್ಲ. ಪ್ರಭಾವಶಾಲಿ ದೆವ್ವ ಹಿಡಿದು ಜೀವಾಪಾಯದ ಸ್ಥಿತಿಯಲ್ಲಿದ್ದು ಮಾಂತ್ರಿಕನಿಗೆ ಸವಾಲಾದ ಪ್ರಕರಣಗಳು ಐತಿಹ್ಯಗಳಾಗುತ್ತವೆ. ಇಂಥವು ಹೆಚ್ಚಾಗಿ ಲಭಿಸುವುದಿಲ್ಲವಾದರೂ ಅಲ್ಲೊಂದು ಇಲ್ಲೊಂದು ಪ್ರಕರಣಗಳು ಕೆಲ ಕಾಲದವರೆಗೆ ಜನಜನಿತವಾಗಿ ಬಿಡುತ್ತವೆ. ಎಷ್ಟೋ ಭಾರಿ ವ್ಯಕ್ತಿಯೊಬ್ಬರ ಮೈಮೇಲೆ ಬಂದ ದೆವ್ವವು ತನ್ನನ್ನು ಶಿಕ್ಷಿಸಲು ತೊಡಗಿರುವ ಮಾಂತ್ರಿಕನನ್ನೇ ಕೊಂದು ಬಿಟ್ಟಿತೆಂಬ ಸಂಗತಿಯು ಐತಿಹ್ಯವಾಗಿರುವುದುಂಟು. ಮಂತ್ರ ಶಕ್ತಿಯಲ್ಲಿ ಲೋಪವುಂಟಾದಾಗ ಅದಕ್ಕೆ ವ್ಯತಿರಿಕ್ತವಾಗಿ

ದೆವ್ವವು ಮಾಂತ್ರಿಕನನ್ನೇ ಬಲಿ ತೆಗೆದುಕೊಂಡಿತು ಎಂಬ ಘಟನೆಗಳು ಐತಿಹ್ಯಗಳಾಗುತ್ತವೆ. ಆದರೆ ಇಂಥ ಐತಿಹ್ಯಗಳ ವಸ್ತು-ವಿವರಣೆಗಳು ಎಲ್ಲ ಕಾಲದಿಂದ-ಕಾಲಕ್ಕೆ ಮುಂದುವರಿಯಲ್ಪಡುವುದರೊಂದಿಗೆ ವ್ಯಕ್ತಿ ವಿವರಗಳು ಬೇರೆಯಾಗುತ್ತಾ ಹೋಗುವುದು ಇದರ ವಿಶೇಷ.

**ದೈವಶಕ್ತಿಗಳು :** ದೆವ್ವಗಳ ಭಯ ಹಾಗೂ ಕಾಟದಿಂದ ಪಾರಾಗಲು ಕೆಲವರು ಅಷ್ಟದೈವಗಳ ಪಠಣ ಮಾಡುತ್ತಾರೆ. ನರಸಿಂಹ ಮಂತ್ರ, ಹನುಮಂತ ಜಪ ಹೀಗೆ ಸ್ತುತಿಸಿ ಪೂಜಿಸಿದ ಪ್ರಸಾದ ಏರಿಸಿದ ಹೂವು ಮೊದಲಾದವುಗಳನ್ನು ದೆವ್ವ ಪೀಡಿತನು ತನ್ನ ಬಳಿ ಉಳಿಸಿಕೊಳ್ಳುವುದರಿಂದ ದೆವ್ವ ಬಾಧೆಯಿಂದ ಪಾರಾಗಬಹುದೆಂದು ಹೇಳುತ್ತಾರೆ. ಇದು ಶಿಷ್ಟ ದೈವಗಳಿಗೆ ಸಂಬಂಧಿಸಿದಂತಿರುವ ನಂಬಿಕೆ. ಆದರೆ ಜನಪದ ದೈವಗಳು ಮೈಮೇಲೆ ಆವಾಹನೆಗೊಳ್ಳುವ ದೆವ್ವಗಳನ್ನು ಹೊಡೆದು ಬಡಿದು ಹಿಂಸಿಸುವ ಮೂಲಕ ಬಿಡುಗಡೆಗೊಳಿಸುತ್ತವೆ ಎಂದು ಅಭಿಪ್ರಾಯಪಡುತ್ತಾರೆ. ಹೀಗೆ ಜನರನ್ನು ದೆವ್ವ ಬಾಧೆಯಿಂದ ಬಿಡಿಸಬೇಕಾದರೆ ದೆವ್ವವನ್ನು ವ್ಯಕ್ತಿಯ ಮೈಮೇಲೆ ಬರಿಸಿ ದೈವನೂ ಆವಾಹನೆಗೊಂಡು ಪೈಪೋಟಿ ನಡೆಸುತ್ತದೆ. ಈ ಹೋರಾಟದಲ್ಲಿ ಕಡೆಯಲ್ಲಿ ದೈವಕ್ಕೆ ದೆವ್ವವು ಶರಣಾಗುತ್ತದೆ. ಏಕವ್ಯಕ್ತಿಯ ಮೇಲೆ ಎರಡು ಶಕ್ತಿಗಳು ಆವಾಹನೆಗೊಂಡು ಹೊಡೆದಾಡುವುದು ನಾಟಕೀಯವಾದರೂ ದೃಶ್ಯಕ್ಕೆ ಎಟಕುವುದು ದೆವ್ವ ಪೀಡಿತ ವ್ಯಕ್ತಿಯ ದ್ವಿಪಾತ್ರಾಭಿನಯ ಮಾತ್ರ. ಆದರೆ ಪೀಡಿತ ವ್ಯಕ್ತಿಯು ತನ್ನನ್ನು ಮರೆತು ಮತ್ತೆರಡು ಶಕ್ತಿಗಳಲ್ಲಿ ತಲ್ಲೀನವಾಗಿರುವುದು ಗಮನಾರ್ಹ ಸಂಗತಿ.

ಮೈಮೇಲೆ ಬರುವ ದೆವ್ವಗಳ ಹಾವಳಿಯನ್ನು ಗಾಳಿ ಸೋಂಕು ಎಂಬಿತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಇಂಥ ಗಾಳಿಯನ್ನು ಕೆಲವು ಜನಪದ ದೈವಗಳು ಕೆಲವು ನಿಗದಿತ ದಿನ-ವಾರಗಳಂದು ಮಾತ್ರ ಬಿಡಿಸುವ ಪರಿಹಾರವಿದೆ. ಸಾಮಾನ್ಯವಾಗಿ ದೆವ್ವ ಬಿಡಿಸುವ ದಿನಗಳು ಆಚರಣಾತ್ಮಕವಾಗಿರುತ್ತವೆ. ಹೆಣ್ಣು ದೇವತೆಗಳು ಮಂಗಳವಾರ ಶುಕ್ರವಾರಗಳಂದು, ಗಂಡು ದೈವಗಳನ್ನು, ಭಾನುವಾರ, ಸೋಮವಾರ ಅಥವಾ ಶನಿವಾರಗಳಂದು ಇಂಥ ಆಚರಣೆಗಳಿಗೆ ಒಳಪಡಿಸುತ್ತಾರೆ. ಈ ದಿನಗಳಂದು ಜಾತ್ರೆ ವಿಶೇಷವಿರುವುದುಂಟು. ನೆರೆದಿರುವ ಸಮೂಹದೆದುರು ಸಂವಹನಗೊಳ್ಳುವ ಈ ಕ್ರಿಯೆಯು ಕಣ್ಣಮುಂದೆ ತೆರೆದಿಟ್ಟಂತೆ ಅಭಿನಯಗೊಳ್ಳುತ್ತಿರುತ್ತದೆ. ಇಂಥ ಸಂದರ್ಭಗಳಲ್ಲಿ ದೆವ್ವ ಬಿಡಿಸುವ ಅಥವಾ ಬಿಡುಗಡೆ ಯಾಗುವ ಆಚರಣೆಯು ಆ ಸಂಸ್ಕೃತಿಯ ಹರಕೆಯಾಗಿಯೂ ಧ್ವನಿಸುತ್ತದೆ. ಜನಪದರ ನೈಜ ಜೀವನದಲ್ಲಿ ಕಾಡುವ ಕೊರತೆಗಳು ಭಯ-ಭೀತಿಗಳು ದೆವ್ವ-ಭೂತಗಳ ಪರಿಭಾಷೆಯಲ್ಲಿ ಕಾಡುತ್ತಿರುತ್ತವೆ. ಇದೊಂದು ಭಾವುಕ ಜಗತ್ತು. ನೈಜಲೋಕದ ಒತ್ತಡಗಳು ಭಾವುಕ ಜಗತ್ತಿನ ಭ್ರಮೆಗಳು ಸಂಘರ್ಷದಲ್ಲಿ ದೆವ್ವ-ಗಾಳಿಗಳು ಹಿಡಿಯುವುದು-ಬಿಡುವುದು ಇವೆರಡರ ನಡುವೆ ಸೆಣಸಾಟ ಇತ್ಯಾದಿ ಅಂಶಗಳು ಪ್ರಮುಖವಾಗುತ್ತವೆ.

ಈ ರೀತಿಯ ಆಚರಣೆಗಳ ಮೂಲಕ ಪೀಡಿತ ಜನರು ನೈಜವಾಸ್ತವ ಲೋಕದಲ್ಲಿ ಪಡೆದುಕೊಳ್ಳಲಾಗದೆ ಇಲ್ಲವೇ ದಕ್ಕಿಸಿಕೊಳ್ಳಲಾಗದೆ ಕಳೆದುಕೊಂಡಿರುವುದನ್ನು ಭಾವುಕ ಕಲ್ಪನೆಯ ಮೂಲಕ ಭ್ರಮಾತ್ಮಕ ಲೋಕದಲ್ಲಿ ಪಡೆದುಕೊಳ್ಳುತ್ತಾರೆ. ವಾಸ್ತವದಲ್ಲಿ ಬೇಸತ್ತವರು ಇಲ್ಲೊಂದು ಆಶ್ರಯವನ್ನು ಕಾಣುವ ಮೂಲಕ ತಮ್ಮ ಮಾನಸಿಕ ತಳಮಳವನ್ನು ಸರಿಪಡಿಸಿಕೊಳ್ಳುತ್ತಾರೆ. ನೊಂದ ಜನರಿಗೆ ಸಾಂತ್ವನ ಸಿಗುವ ಈ ನೆಲೆಯು ಹಲವು ಹಂತಗಳಲ್ಲಿ ಬೆಳವಣಿಗೆ ಕಾಣುತ್ತದೆ. ಆವೇಶಕ್ಕೆ ಒಳಗಾದ ವ್ಯಕ್ತಿಗಳು ಭಾವ-ಪರವಶರಾಗಿ ತಮ್ಮ ಸುಖ-ದುಃಖಗಳನ್ನು ತೋಡಿಕೊಳ್ಳುವುದರ ಮೂಲಕ ಸಮಸ್ಥಿತಿಗೆ ಬರುತ್ತಾರೆ. ಸಾಮಾನ್ಯವಾಗಿ ಜನಪದ ಸ್ತ್ರೀದೈವಗಳೊಂದಿಗೆ ಸ್ತ್ರೀಯರ ಇಂಥ ಆಚರಣೆಗಳು ಬೆಸೆದುಕೊಂಡಿರುತ್ತವೆ. ಇಂತೆಡೆಗಳಲ್ಲಿ ಮಹಿಳೆಯರು ಪರಂಪರಾಗತವಾಗಿ ಅನುಭವಿಸಿಕೊಂಡು ಬಂದಿರುವ ಯಾತನೆಗಳನ್ನು ಹೀಗೆ ಪರಿಹರಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಸಮಾಜದಲ್ಲಿ ಯಾವ ಯಾವ ವಲಯದಲ್ಲಿ ಶೋಷಣೆಗೆ ಒಳಗಾಗಿ ಅಸಮಾಧಾನಗೊಂಡಿರುತ್ತಾರೋ ಅಂಥವರು ಆಚರಣೆಯ ಮೂಲಕ ಸಮಾಧಾನ ಹೊಂದುತ್ತಾರೆ. ವಾಸ್ತವದ ಬಿಕ್ಕಟ್ಟುಗಳು ಆಚರಣೆಯ ಮೂಲಕ ಪರಿಹಾರವಾಗುವುದು ಮನೋವೈಜ್ಞಾನಿಕವಾಗಿ ಪರಿಗಣಿಸುವ ಅಂಶ.

**ಕೊಳ್ಳಿದೆವ್ವಗಳು :** ಉತ್ತರ ಪಿನಾಕಿನಿ ಹಾಗೂ ಮೂಗನಹಳ್ಳ ನದಿಯ ದಡದಲ್ಲಿ ಕೊಳ್ಳಿ ದೆವ್ವಗಳು ಮಧ್ಯರಾತ್ರಿ ಪಂಜುಗಳನ್ನು ಹಿಡಿದು ಒಂದರ ಹಿಂದೆ ಒಂದು ಸಾಲಾಗಿ ಸಂಚರಿಸುತ್ತಿದ್ದವಂತೆ. ಅವು ಯಾರಿಗೂ ತೊಂದರೆ ಕೊಡುತ್ತಿರಲಿಲ್ಲ. ರಾತ್ರಿಯ ವೇಳೆ ಒಬ್ಬ ವ್ಯಕ್ತಿ ಸಿಕ್ಕಿಬಿದ್ದರೆ, ಬೆಳಗಿನ ಜಾವ ಕೋಳಿ ಕೂಗುವವರೆಗೂ ಅವನಿಗೆ ಚೇಷ್ಟೆ ತಮಾಷೆ ಮಾಡಿಕೊಂಡು ಕಾಲ ಕಳೆಯುತ್ತವೆ. ಕೋಳಿ ಕೂಗಿದ ತಕ್ಷಣ ಮಾಯವಾಗುತ್ತಿದ್ದವಂತೆ. ಅಲ್ಲಿಯ ತನಕ ಸೆರೆಸಿಕ್ಕ ವ್ಯಕ್ತಿಯನ್ನು ಕುಣಿಯುವಂತೆ ಒತ್ತಾಯಿಸಿ, ಅವನ ಸುತ್ತಲೂ ಪಂಜುಗಳನ್ನು ಹಿಡಿದು ಕುಣಿಯುತ್ತವೆ. ಆ ವ್ಯಕ್ತಿಯು ಧೈರ್ಯಸ್ಥನಾದರೆ ಕುಣಿಯುವಂತೆ ನಟಿಸಿ ಕೊಳ್ಳಿದೆವ್ವಗಳ ಕೂದಲುಗಳ್ನು ಕುಯ್ದು ತನ್ನ ಉಡುದಾರಕ್ಕೆ ಕಟ್ಟಿಕೊಂಡರೆ ಅವನು ಹೇಳಿದಂತೆ ಕೆಲಸ ಮಾಡುತ್ತವೆ. ಈ ಕೆಲಸವನ್ನು ಬಹುಪಾಲು ಪೂರ್ವಿಕರು ಮಾಡುತ್ತಿದ್ದರು. ಆಗ ಅವು ರಾತ್ರಿಯಿಡೀ ಬಾವಿ ಅಗೆಯುವುದು, ಏತ ಹೊಡೆಯುವುದು, ಹೊಲ-ಗದ್ದೆಗಳಿಗೆ ನೀರು ಕಟ್ಟುವುದು ಇತ್ಯಾದಿ ಕೆಲಸಗಳನ್ನು ಮಾಡಿಕೊಡುತ್ತಿದ್ದವು ಎಂಬುದಾಗಿ ಐತಿಹ್ಯವೊಂದು ಪರಿಚಲನೆಯಲ್ಲಿದೆ. ಇದು ಜನಪ್ರಿಯವಾದ ಸಂಚಾರಿ ಐತಿಹ್ಯಗಳಲ್ಲಿ ಒಂದು. ಪುಟ್ಟಾಪುರ್‍ಣಹಳ್ಳಿ (ಗೌರೀಬಿದನೂರಿನ ಉತ್ತರ ಪಿನಾಕಿನಿ ನದಿಯ ದಡ)

ಇಲ್ಲಿ ಒಬ್ಬ ಬ್ರಾಹ್ಮಣನು ರಾತ್ರಿಯ ವೇಳೆಯಲ್ಲಿ ತನ್ನ ಹೊಲಗದ್ದೆಗಳಿಗೆ ನೀರು ಕಟ್ಟಲೆಂದು ಹೋಗುವಾಗ ಕೊಳ್ಳಿದೆವ್ವಗಳು ತುಂಬಾ ಚೇಷ್ಟೆ ಮಾಡುತ್ತಿದ್ದವಂತೆ. ಅವನು ತಕ್ಷಣ ಅವುಗಳ ತಲೆಕೂದಲುಗಳನ್ನು ಕೊಯ್ದು ತನ್ನ ಸೊಂಟದಲ್ಲಿ ಸಿಕ್ಕಿಸಿಕೊಂಡ ತಕ್ಷಣ ಅವು ಶರಣಾಗಿ ತಮ್ಮ ಕೂದಲುಗಳನ್ನು ಹಿಂದಿರುಗಿಸುವಂತೆ ಬೇಡಿಕೊಂಡವು. ಅವನು ಬೆಳಗಿನ ಜಾವ ಕೋಳಿ ಕೂಗುವವರೆಗೂ ಎಲ್ಲ ಕೆಲಸಗಳನ್ನು ಮಾಡಿಸಿಕೊಳ್ಳುತ್ತಿದ್ದ. ಕೂದಲುಗಳನ್ನು ಮಾತ್ರ ಹಿಂದಿರುಗಿಸಲಿಲ್ಲ. ಅಂದಿನಿಂದ ಪ್ರತಿ ರಾತ್ರಿಯೂ ಕೊಳ್ಳಿದೆವ್ವಗಳು ಬ್ರಾಹ್ಮಣನು ಹೇಳಿದಂತೆ ಕೇಳುತ್ತಿದ್ದವು. ಹೀಗೆ ಕೊಳ್ಳಿದೆವ್ವಗಳ ಕಾಲವೊಂದಿತ್ತು. ಅವುಗಳ ಸಹಾಯದಿಂದ ರೈತ ರಾತ್ರಿಯಿಡೀ ನೀರಾವರಿ ಕೃಷಿಯನ್ನು ರೂಪಿಸಿ ಕೊಳ್ಳುತ್ತಿದ್ದನೆಂಬ ನಂಬಿಕೆ ಜನಪದದಲ್ಲಿ ಜನಜನಿತವಾಗಿವೆ. ವೈಜ್ಞಾನಿಕವಾಗಿ ನದಿದಡಗಳಲ್ಲಿನ ರಂಜಕವು ಸಂಜೆಗತ್ತಲಿನ ಸಮಯದಲ್ಲಿ ನೀರಿನ ಮೇಲೆ ಪ್ರತಿಬಿಂಬಿತವಾಗುವ ಬೆಳಕಿನಿಂದ ಹತ್ತಿ ಉರಿದಂತೆ ಕಾಣುತ್ತಿತ್ತು. ಈಗ ವಿದ್ಯುತ್ ಬೆಳಕು ಬಹುಪಾಲು ರಾತ್ರಿಯ ವೇಳೆ ಇರುವುದರಿಂದ ಈ ಮಿಂಚು ಮಾಯದ ಗುಣ ನಾಶವಾಗಿದೆ. ಆದರೆ ಕೊಳ್ಳಿದೆವ್ವಗಳ ಕಲ್ಪನೆ ರಂಜನೀಯವಾದದ್ದು.

## ಪಶು-ಪಕ್ಷಿ ಸಂಬಂಧಿ ಐತಿಹ್ಯಗಳು

**ಪಶು-ಪಕ್ಷಿ-ಜಂತು-ಕ್ರಿಮಿಕೀಟಗಳು :** ಪ್ರಕೃತಿಯಲ್ಲಿ ಮನುಷ್ಯನೂ ಸೇರಿದಂತೆ ಅಗಣಿತ ಜೀವಸಂಪತ್ತು ಅಡಗಿದೆ. ಪ್ರಾಣಿ ಸಂಕುಲವು ಸಸ್ಯವರ್ಗದ ಅವಲಂಬನೆಯನ್ನು ಪಡೆದಿದೆಯಾದರೂ ಮನುಷ್ಯ ಸಸ್ಯ ಹಾಗೂ ಪ್ರಾಣಿಗಳೆರಡನ್ನೂ ಅವಲಂಬಿಸಿರುತ್ತಾರೆ. ವಿವಿಧ ಕಾರಣಗಳಿಗಾಗಿ ಹಲವು ಪ್ರಾಣಿಗಳನ್ನು ಸಾಕುತ್ತಾನೆ. ಮತ್ತೆ ಕೆಲವನ್ನು ಕೊಲ್ಲುತ್ತಾನೆ. ಮನುಷ್ಯನ ಆಕ್ರಮಣದಿಂದ ಪಾರಾಗಿ ಉಳಿಯುವ ಜೀವರಾಶಿಯು ಪ್ರಕೃತಿಯಲ್ಲಿ ವೈವಿಧ್ಯಮಯವಾಗಿರುತ್ತದೆ. ಕಾಡು ಮತ್ತು ನಾಡುಗಳ ಸಂಬಂಧವಿರುವುದೇ ಜೀವಸಂಕುಲದ ಉಳಿವಿನಿಂದ ಎಂದರೆ, ತಪ್ಪಾಗಲಾರದು. ಜನಪದರಿಗೆ ಈ ಎರಡು ನೆಲೆಗಳ ಜೀವರಾಶಿಯ ಬಗ್ಗೆ ಕುತೂಹಲ ಕಾಳಜಿ ಹಾಗೂ ಗೌರವವಿದೆ. ಏಕೆಂದರೆ, ದುಡಿಮೆಯ ಶ್ರಮಕ್ಕೆ ಪ್ರಾಣಿವರ್ಗ ಪೂರಕ ಹಾಗೂ ಸಹಭಾಗಿ / ಸಹಕಾರಿಗಳಾಗುವುದರಿಂದ. ಹೈನುಗಾರಿಕೆ ಹಾಗೂ ಮಾಂಸದ ಉತ್ಪಾದನಾ ದೃಷ್ಟಿಯಿಂದ. ವಸ್ತು ವಿಶೇಷಗಳ ಉತ್ಪಾದನಾ ದೃಷ್ಟಿಯಿಂದ (ಉದಾ: ಜೇನು, ಪುನುಗು, ಉಣ್ಣೆ). ರಕ್ಷಣೆ, ರಂಜನೆ, ಹವ್ಯಾಸ ಇತ್ಯಾದಿ ಉದ್ದೇಶಗಳಿಗಾಗಿ (ಉದಾ: ನಾಯಿ, ಗಿಣಿ, ಹಾವು ಸಾಕಾಣಿಕೆ). ಜೀವನಾಶದ ಪಾಪಭೀತಿ ದುರ್ಗತಿಯ ಬಗ್ಗೆ ಹಿಂಜರಿಕೆ ಇತ್ಯಾದಿ ಕಾರಣಗಳು.

ಪಶು, ಪಕ್ಷಿ, ಜೀವಜಂತುಗಳನ್ನು ಕುರಿತಂತೆ ಇರುವ ಹಲವು ನಂಬಿಕೆಗಳ ಕಾರಣದಿಂದ ನಿಸರ್ಗದ ಸಂರಕ್ಷಣೆ ಹಾಗೂ ಸಾರಜನಕ ಚಕ್ರದ ನಿರಂತತೆ ಮತ್ತು ಜೀವ ಚೈತನ್ಯತೆಯು ಉಳಿಯುತ್ತದೆ. ಮನುಷ್ಯನ

ನೆರೆಹೊರೆಯಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾದರೆ ಮನುಷ್ಯ ಕೆಲವು ಮುಲಾಜು ಅಥವಾ ಮುತವರ್ಜಿಗಳನ್ನು ವಹಿಸಿರುತ್ತಾನೆ. ಅಂಥವುಗಳೇ ಜನಪದರಲ್ಲಿ ಮಹತ್ವವನ್ನು ಪಡೆದುಕೊಳ್ಳಲು ಕಾರಣಗಳಾಗುತ್ತವೆ. ಅವುಗಳ ವಾಸ್ತವ್ಯಕ್ಕೆ ಪೂರಕವಾದ ಐತಿಹ್ಯ, ಕತೆ, ನಂಬಿಕೆ, ಗಾದೆ, ಒಗಟು ಇತ್ಯಾದಿಗಳಿಂದ ಮಹತ್ವದ ಲಕ್ಷ್ಯತೆಗೆ ಆಧ್ಯತೆ ದೊರೆತಂತಾಗುತ್ತದೆ. ಸಾಕುವಿಕೆಯಿಂದ ಕೆಲವು ಪ್ರಾಣಿಗಳಿಗೆ ಪ್ರತ್ಯಕ್ಷ ಆಶ್ರಯ ಸಿಕ್ಕರೆ, ಮತ್ತೆ ಕೆಲವು ಪರೋಕ್ಷವಾಗಿ ಮನುಷ್ಯನನ್ನು ಅವಲಂಬಿಸಿರುತ್ತವೆ. ಆದರೆ ಇವು ಸ್ವತಂತ್ರವಾಗಿ ಜೀವಿಸುತ್ತಿರುತ್ತವೆ. ಉದಾ: ಗುಬ್ಬಿಗಳು ಊರಿನಲ್ಲಿ ಮನುಷ್ಯ ವಾಸಿಸುವ ಮನೆಗಳ ಮಾಡುಗಳಲ್ಲಿ ಸಂದಿ-ಗೊಂದಿಗಳಲ್ಲಿ ವಾಸಿಸುತ್ತವೆ. ಆದರೆ ಅವುಗಳ ಓಡಾಟದಲ್ಲಿ ಸ್ವತಂತ್ರವಿರುತ್ತದೆ.

**ಸಾಕುವಿಕೆಯಿಂದ ಆಶ್ರಯ ಪಡೆಯುವ ಪ್ರಾಣಿಗಳು-ನಾಯಿ :** ಮನುಷ್ಯ ತನ್ನ ವಸ್ತು ವಿಶೇಷಗಳನ್ನು ಕಳ್ಳರಿಂದ ರಕ್ಷಿಸಿಕೊಳ್ಳಲು ನಾಯಿಗಳನ್ನು ಸಾಕುತ್ತಾನಾದರೂ ಇದೊಂದು ಹವ್ಯಾಸವಾಗಿ ಪ್ರಾಮುಖ್ಯತೆಯನ್ನು ಪಡೆದಿದೆ. ಮಾನವ ವಿಕಾಸದ ಬೇಟೆಯ ಹಂತದಿಂದ ನಾಯಿ ಸಾಕಾಣಿಕೆಗೆ ಪ್ರಾಮುಖ್ಯತೆ ಹೆಚ್ಚುತ್ತಾ ಬಂದಿದೆ. ಜನಪದರು ನಾಯಿಯನ್ನು ನಾರಾಯಣನ ಅವತಾರವೆಂದು ನಂಬುತ್ತಾರೆ. ಹಬ್ಬದ ದಿನಗಳಲ್ಲಿ ನಾಯಿಯ ಹಣೆಗೆ ಕುಂಕುಮವಿಟ್ಟು ಹಬ್ಬದ ಅನ್ನವನ್ನು ನೀಡುತ್ತಾರೆ. ಪ್ರತಿದಿನ ಊಟಕ್ಕೆ ಕುಳಿತಾಗಲೂ ಒಂದು ತುತ್ತು ಅನ್ನವನ್ನು ಪಕ್ಕಕ್ಕೆ ತೆಗೆದಿಟ್ಟು ನಂತರ ಊಟ ಮಾಡುತ್ತಾರೆ. ಅಮೇಧ್ಯ ತಿನ್ನುವುದು ನಾಯಿಯ ಸ್ವಭಾವವಾದರೂ ಊಟ ಎಂಜಲಾಗುವ ಮುನ್ನ ಒಂದು ಮುಷ್ಟಿ ಅನ್ನವನ್ನು ತೆಗೆದಿಡುವುದರ ಮೂಲಕ ನಾಯಿಯ ನಿಯತ್ತಿಗೆ ಮಾನ್ಯತೆಯನ್ನು ಕೊಡುತ್ತಾರೆ. ಶಿಷ್ಟ ಪರಂಪರೆಯಲ್ಲಿ ನಾಯಿಗೆ ದೈವದ ಮಹತ್ವವಿಲ್ಲ. ಅದರ ಸ್ಪರ್ಶ ಮೈಲಿಗೆಯಾಗುತ್ತದೆ. ಆದರೆ ಜನಪದರಲ್ಲಿ ನಾಯಿ ನಾರಾಯಣ ನಾಗುತ್ತಾನೆ. ವರ್ಷಕ್ಕೆ ಎರಡು ಬಾರಿ ಮರಿ ಹಾಕುವ ಹೆಣ್ಣು ನಾಯಿಯ ಪಾಡು ಅವರ ಅಂತಃಕರಣವನ್ನು ಕರಗಿಸಿ ಕಥೆಯಾಗಿ ಹರಿದಿದೆ.

ಕಥೆ (ಐತಿಹ್ಯ)ಯ ಪ್ರಕಾರ ಹಿಂದೆ ಸ್ವರ್ಗದಲ್ಲಿ ಗುರುಭಕ್ತನೆಂಬುವವನಿದ್ದ. ಅವನಿಗೆ ಬಂಧು-ಬಳಗ ಬಹಳ. ನಮ್ಮವರು-ತಮ್ಮವರೆಂಬ ಬೇಧವಿಲ್ಲದ ಅವನ ಹೆಂಡತಿ ತುಂಬಾ ತಾರತಮ್ಯ ಮಾಡುತ್ತಿದ್ದಳು. ಅವಳು ಒಂದೇ ಪಾತ್ರೆಯಲ್ಲಿ ಬೇಯಿಸಿದ ಆಹಾರವನ್ನು ಹಂಚುವಾಗ ಏಳು ವ್ಯತ್ಯಾಸಗಳನ್ನು ಮಾಡುತ್ತಿದ್ದಳು. "ನಮ್ಮವರು ಬಂದರೆ ಮುಳುಗು ಸೌಟು ನಿಮ್ಮವರು ಬಂದರೆ ತೇಲು ಸೌಟು" ಎಂದು ತೆಗೆಯುತ್ತಿದ್ದಳು. ಒಂದು ದಿನ ಈ ವಂಚನೆ ಗುರುಭಕ್ತನಿಗೆ ಗೊತ್ತಾಯಿತು. ಅವಳನ್ನು ಹೆಣ್ಣು ನಾಯಿಯಾಗುವಂತೆ ಶಾಪ ಹಾಕಿದ. ಅಂದಿನಿಂದ ಹೆಣ್ಣು ನಾಯಿಯಾಗಿ ತನ್ನ ಮರಿಗಳನ್ನೂ ವಂಚಿಸಿ ಹೊಟ್ಟೆಪಾಡಿಗಾಗಿ ಹಾತೊರೆಯುತ್ತದೆಯಂತೆ.

ಬೆಕ್ಕು: ಮನೆಗೆ ಬರುವ ಇಲಿಗಳನ್ನು ಹಿಡಿದು ತಿನ್ನಲಿ ಎಂಬ ಉದ್ದೇಶದಿಂದ ಬೆಕ್ಕನ್ನು ಸಾಕುತ್ತಾರೆ. ಆದರೆ ಅದು ಆಹಾರ ಪದಾರ್ಥಗಳನ್ನು ಅದರಲ್ಲೂ ಹಾಲಿನ ಉತ್ಪನ್ನಗಳನ್ನು ಕದಿಯುವುದಲ್ಲದೆ, ಗಾಬರಿಯಲ್ಲಿ ಚೆಲ್ಲಿಯೂ ಹೋಗುತ್ತದೆಯೆಂಬುದೊಂದು ಬೆಕ್ಕಿನ ಬಗ್ಗೆ ಇರುವ ಅಸಮಾಧಾನ. ಬೆಕ್ಕನ್ನು ಸಾಕಬಾರದು. ಬೆಕ್ಕನ್ನು ಮುಟ್ಟಬಾರದು. ಒಳ್ಳೆಯ ಕೆಲಸಕ್ಕೆಂದು ಹೊರಟಾಗ ಬೆಕ್ಕು ಅಡ್ಡ ಬಂದರೆ ಒಳ್ಳೆಯದಾಗುವುದಿಲ್ಲ. ಕಪ್ಪು ಬೆಕ್ಕು ಮಾಟ ಮಂತ್ರಗಳಿಗೆ ಬಳಕೆಯಾಗುತ್ತದೆ ಎಂಬಿತ್ಯಾದಿ ನಂಬಿಕೆಗಳಿವೆ.

'ಬೆಕ್ಕನ್ನು ಸಾಕಬಾರದು' ಎಂಬ ನಂಬಿಕೆಯು ಸಾಕಿದವರ ಅಸಹನೆಯಿಂದ ಮೂಡಿದ್ದಾಗಿರಬಹುದು. ಏಕೆಂದರೆ ಮನೆಯಲ್ಲಿ ಆಹಾರ ಪದಾರ್ಥಗಳನ್ನು ಕೆಡಹುವುದಲ್ಲದೆ, ದವಸ ಧಾನ್ಯಗಳಲ್ಲಿ ಗಲೀಜು ಮಾಡಿ ಮುಚ್ಚಿಡುತ್ತದೆ. ತಿಂದದ್ದು ಜೀರ್ಣವಾಗದಿದ್ದರೆ ಮನೆಯಲ್ಲಿಯೇ ವಾಂತಿ ಮಾಡುತ್ತಿರುತ್ತದೆ. ಇದು ಹಸಿಮಾಂಸವನ್ನು ಹಾಗಾಗೆಯೇ ತಿನ್ನುವುದರಿಂದ ಹೊಟ್ಟೆಯಲ್ಲಿ ಹುಳುಗಳು ಇರುತ್ತವೆ. ವಾಂತಿಯಾದಾಗ ಅವು ಹೊರಬಿದ್ದು ಕಿರಿಕಿರಿಯಾಗುವುದುಂಟು. ಹೀಗೆ ವಾಸ್ತವ ಕಾರಣಗಳು ಬೆಕ್ಕಿನ ಬಗ್ಗೆ ಅಸಮಾಧಾನವನ್ನುಂಟು ಮಾಡುತ್ತವೆ. ಅಲ್ಲದೆ ಬೆಕ್ಕನ್ನು ಸಾಕಬಾರದು ಎಂಬ ನಿಷೇಧ ಏರ್ಪಡಲು ಮತ್ತೊಂದು ನಂಬಿಕೆ ಪೂರಕವಾಗುತ್ತದೆ. ಬೆಕ್ಕನ್ನು ಸಾಕಿದ ವ್ಯಕ್ತಿಯು ಸತ್ತು ಸ್ವರ್ಗಕ್ಕೆ ಹೋಗುವಾಗ, ಬೆಕ್ಕು ಅಡ್ಡ ಬಂದು ಅವನು/ಳು ನಡೆಯುವ ತಂತಿಯನ್ನು ಕತ್ತರಿಸುತ್ತದೆ. ಅಲ್ಲಿ ಕುಸಿದ ವ್ಯಕ್ತಿಗಳು ನರಕದಲ್ಲಿ ಬೀಳುತ್ತಾರೆ. ಇಂಥ ಸಂದರ್ಭದಲ್ಲಿ ಸಾಕಿದ ನಾಯಿಯು ಸಹಾಯ ಮಾಡುತ್ತದೆ. ಅದು ಬೆಕ್ಕನ್ನು ಓಡಿಸಿ ಹಾದಿ ಮುರಿಯುವುದನ್ನು ತಡೆಯುತ್ತದೆ. ವಾಸ್ತವ ಜಗತ್ತಿನಲ್ಲಿ ನಾಯಿ ಬೆಕ್ಕನ್ನು ಓಡಿಸುವುದು ಸಾಮಾನ್ಯ ಸಂಗತಿ. ಕೆಲವೊಮ್ಮೆ ಬೆಕ್ಕು ಅಕ್ಕ-ಪಕ್ಕದ ಮನೆಗಳಿಗೆ ದಾಳಿಯಿಟ್ಟಾಗ ಅವರ ಮನೆಯ ನಾಯಿಗಳು ಓಡಿಸಿ ಬೆಕ್ಕಿನ ಉಪದ್ರವವನ್ನು ಕಡಿಮೆ ಮಾಡುತ್ತವೆ. ಈ ಎಲ್ಲ ಪ್ರಯೋಗಗಳು ಇಂಥ ನಂಬಿಕೆಗಳಿಗೆ ಕಾರಣವಾಗಿರಬಹುದು.

ಬೆಕ್ಕನ್ನು ಮುಟ್ಟಬಾರದು ಎಂಬುದೂ ಅದರಿಂದ ಹರಡಬಹುದಾದ ಅಪಾಯ ಹಾಗೂ ರೋಗಗಳ ಮುನ್ನೆಚ್ಚರಿಕೆಯಾಗಿದೆ. ಮುಟ್ಟಿದವರನ್ನು ಬೆಕ್ಕು ಪರಚುವ ಸಾಧ್ಯತೆಗಳು ಬಹಳವಿರುತ್ತವೆ. ಅಲ್ಲದೆ ಬೆಕ್ಕಿನ ರೋಮಗಳು ಆಹಾರಗಳಲ್ಲಿ, ನೀರಿನ ಮೂಲಕ ಮನುಷ್ಯನ ಹೊಟ್ಟೆಯನ್ನು ಸೇರಿದರೆ ಅಪಾಯವಿದೆ. ಅಲ್ಲದೆ ಇದು ಹಲ್ಲಿ, ಜಿರಲೆ, ಹಾವು, ಇಲಿಗಳಿಂದ ಹಿಡಿದು ಪಕ್ಷಿ, ಕ್ರಿಮಿ-ಕೀಟ, ಹುಳು ಹುಪ್ಪಟೆಗಳನ್ನೆಲ್ಲ ಹಿಡಿದು ತಿನ್ನುವುದರಿಂದ ರೋಗಕಾರಕ ಬ್ಯಾಕ್ಟೀರಿಯಾಗಳು ಹರಡುವ ಸಾಧ್ಯತೆಗಳಿರುತ್ತವೆ. ಊರಿನಲ್ಲಿ ಬೆಕ್ಕು ಅಡ್ಡ ಬಂದರೆ ಹೊರಟ ಕೆಲಸ ಆಗುವುದಿಲ್ಲವೆಂಬ ನಂಬಿಕೆ ಬೆಕ್ಕಿನ ಚಟುವಟಿಕೆಗಳನ್ನೇ ಅವಲಂಬಿಸಿರುವಂಥದ್ದು. ಮೆಲ್ಲನೆ ಮನೆಯೊಳಕ್ಕೆ ನುಗ್ಗಿ ಸಿಕ್ಕ ಪದಾರ್ಥಗಳನ್ನು ನುಂಗಿ ದಾರಿಯಲ್ಲಿ

ಹೋಗುವ ಬೆಕ್ಕು ಏನೋ ಅಚಾತುರ್ಯವನ್ನು ಮಾಡಿ ಓಡುತ್ತಿದೆ ಎಂಬ ಅಭಿಪ್ರಾಯವು ಪ್ರಯಾಣ ಹೊರಟ ವ್ಯಕ್ತಿಯ ಕೆಲಸದೊಂದಿಗೆ ಹೋಲಿಕೆಯಾಗುತ್ತದೆ. ಆದರೆ ವ್ಯಕ್ತಿಯ ಕೆಲಸ ಆಗದಿರುವುದಕ್ಕೂ ಬೆಕ್ಕು ಅಡ್ಡ ಬರುವುದಕ್ಕೂ ಯಾವ ಸಂಬಂಧವೂ ಇಲ್ಲ. ಈ ನಂಬಿಕೆಗೆ ಪರಿಹಾರ ಒಂದು ನಿಮಿಷ ಅಲ್ಲೇ ಕುಳಿತು ಅಥವಾ ಮನೆಗೆ ಹಿಂದಿರುಗಿ ಮತ್ತೆ ಬರಬೇಕು ಎಂದಿದೆ. ಕಪ್ಪು ಬೆಕ್ಕನ್ನು ಮಂತ್ರವಾದಿಗಳು ಮಾಟ-ಮಂತ್ರಗಳಿಗೆ ಬಳಸಿಕೊಳ್ಳುತ್ತಾರೆ. ಅಮಾವಾಸ್ಯೆಯ ರಾತ್ರಿ ಅದರ ರಕ್ತದಿಂದ ಮಾಟ ಮಾಡಿಸುತ್ತಾರೆಂಬ ನಂಬಿಕೆಗಳಿವೆ. ಆದರೆ ಮಾಟ ಮಾಡಿಸುವಾಗ ಇತರೆ ಯಾವುದೇ ಬೆಕ್ಕು ಅರಚಬಾರದು. ಬೆಕ್ಕಿನ ಶಬ್ದ ಕೇಳಿದರೆ ಮಾಟ-ಮಂತ್ರದ ಸಿದ್ಧಿಯು ಸಾಧಿತವಾಗುವುದಿಲ್ಲವೆಂಬ ನಂಬಿಕೆಯೂ ಇದೆ. ಮಾಟ ಮಾಡಿಸಿದವರು ಯಾರು ಎಲ್ಲಿ ಮಾಟದ ಸಾಮಾಗ್ರಿಗಳನ್ನು ಹೂತಿಟ್ಟಿದ್ದಾರೆ (ಹೂಳಿದ್ದಾರೆ) ಇತ್ಯಾದಿಗಳನ್ನು ವೀಕ್ಷಿಸಲು ತಯಾರಿಸುವ ಕಣ್ಣ ಅಂಜನವನ್ನು ಕಪ್ಪುಬೆಕ್ಕಿನ ಕಣ್ಣುಗಳಿಂದ ತಯಾರಿಸುತ್ತಾರೆಂಬ ನಂಬಿಕೆಯೂ ಇದೆ.

ಬೇಟೆಯನ್ನು ಪತ್ತೆ ಹಚ್ಚುವುದರಲ್ಲಿ ಬೆಕ್ಕು ಚುರುಕಾದ ಪ್ರಾಣಿ. ಅದರ ದೃಷ್ಟಿ ತುಂಬ ತೀಕ್ಷ್ಣವಾಗಿದ್ದು, ಕತ್ತಲಿನಲ್ಲಿ ಹೊಳೆಯುವ ಗುಣ ಹೊಂದಿದೆಯೆಂಬ ಕುತೂಹಲವು ಮಾಟ-ಮಂತ್ರಗಳಿಗೆ ಸಂಬಂಧಿಸಿದಂತೆ ಬೆಕ್ಕಿನ ಬಗ್ಗೆ ನಂಬಿಕೆಗಳನ್ನುಂಟು ಮಾಡಿದೆ. "ಈಜಿಪ್ಟಿನಲ್ಲಿ ಐದು ಸಾವಿರ ವರ್ಷಗಳ ಹಿಂದೆ ಬೆಕ್ಕನ್ನು ಪೂಜಿಸುತ್ತಿದ್ದರು. ಅದು ಸತ್ತಾಗ ಅದನ್ನು ಮಮ್ಮಿಯ ರೂಪದಲ್ಲಿ ಸಂರಕ್ಷಿಸಿ ರಾಜ -ರಾಣಿಯರ ಹೆಣಗಳ ಜೊತೆಗೆ ಹೂಳುತ್ತಿದ್ದರು".[೧೩] ಭೀಕರವಾದ ಪ್ಲೇಗ್ ರೋಗವನ್ನು ಹರಡುವ ಇಲಿಗಳನ್ನು ಬೆಕ್ಕು ತಿನ್ನುತ್ತದೆಯೆಂಬುದು ಬೆಕ್ಕಿನ ಬಗ್ಗೆ ಪೂಜ್ಯ ಭಾವನೆ ತಾಳಲು ಕಾರಣವಿರಬಹುದು. ಬೆಕ್ಕು ಅಪಶಕುನ ಅನಿಷ್ಟ ಎಂಬ ನಂಬಿಕೆಗಳಿದ್ದರೂ ಸಾಕುವುದನ್ನು ಬಿಟ್ಟಿಲ್ಲ. ಕೆಲವರು ಅತಿ ಮುದ್ದಾಗಿಯೂ ಬೆಳೆಸಿದ್ದಾರೆ. ಸಾಕಿದ ಬೆಕ್ಕುಗಳನ್ನು ಸಾಮಾನ್ಯವಾಗಿ ಯಾರೂ ಕೊಲ್ಲುವುದಿಲ್ಲ. ಹಾಗೆಯೇ ತಿನ್ನುವುದಿಲ್ಲ. ಕಾಡುಬೆಕ್ಕುಗಳನ್ನು ಬೇಟೆಯಾಡುತ್ತಾರೆ. ಬೆಕ್ಕಿನ ಮಾಂಸವನ್ನು ತಿಂದರೆ, ಅಸ್ತಮ ಕಾಯಿಲೆಯಿಂದ ಉಂಟಾಗುವ ಉಬ್ಬಸ ನಿಯಂತ್ರಣಕ್ಕೆ ಬರುತ್ತದೆಂದು ಹೇಳುತ್ತಾರೆ. ಐತಿಹ್ಯದ ಪ್ರಕಾರ ಒಂದಾನೊಂದು ಕಾಲದಲ್ಲಿ ಬೆಕ್ಕು ಹುಲಿಗೆ ವಿದ್ಯೆ ಕಲಿಸುವ ಗುರುವಾಗಿತ್ತು. ಮರ ಹತ್ತುವುದನ್ನು ಹೊರತು ಪಡಿಸಿ ಎಲ್ಲ ವಿದ್ಯೆಯನ್ನು ಕಲಿಸಿತು. ವಿದ್ಯೆಯನ್ನು ಒಪ್ಪಿಸುವಾಗ ಹುಲಿ ತಪ್ಪು ಮಾಡಿದ್ದರಿಂದ ಬೆಕ್ಕು ಹೊಡೆಯಿತು. ತಕ್ಷಣ ಹುಲಿ ಬೆಕ್ಕನ್ನು ತಿನ್ನಲು ಪ್ರಯತ್ನಿಸಿತು. ಹುಲಿಗೆ ಮರವೇರಲು ಕಲಿಸಿಲ್ಲವಾದ್ದರಿಂದ ಬೆಕ್ಕು ಮರಹತ್ತಿ ಕುಳಿತುಕೊಂಡಿತು. ಹುಲಿ "ನಿನ್ನ ಮಲದ ವಾಸನೆ ಹಿಡಿದಾದರೂ ಬಂದು ನಿನ್ನನ್ನು ಕೊಲ್ಲುತ್ತೇನೆಂದು" ಶಪಥ ಮಾಡಿತು. ಆದ್ದರಿಂದಲೇ ಅಂದಿನಿಂದ ಬೆಕ್ಕು ಮಲವನ್ನು ಮಣ್ಣಿನಲ್ಲಿ ಮುಚ್ಚಿಡತೊಡಗಿತು.

**ಕೋಳಿ :** ಮೊಟ್ಟೆ ಹಾಗೂ ಮಾಂಸದ ಉದ್ದೇಶದಿಂದ ಕೋಳಿಗಳನ್ನು ಸಾಕುತ್ತಾರೆ. ಆದರೆ ಹುಂಜದ ಬಗ್ಗೆ ಬಹಳ ಹೆಮ್ಮೆಪಡುತ್ತಾರೆ. ಹೆಣ್ಣುಗಳನ್ನು ಆಕರ್ಷಿಸುವ ರಸಿಕನನ್ನು "ಕೋಳಿ ಹುಂಜದ ಹಾಗೆ ಮೆರೀತಾನೆ" ಎನ್ನುತ್ತಾರೆ. ಕಾಲಿನಿಂದ ಕೆದಕದೆ ಕೋಳಿಯು ಆಹಾರವನ್ನು ತಿನ್ನುವುದಿಲ್ಲ. ಎಂತಹ ರಾಶಿಯೇ ಇರಲಿ 'ತನ್ನ ಕಾಲು ಕೆದುಕಬೇಕು ತಾನು ತಿನ್ನಬೇಕು ಯಾರ ಹಂಗೇಕೆ ನನಗೆ!' ಎನ್ನುತ್ತದಂತೆ. ಏಕೆ ಕೋಳಿಗೆ ಕೆದಕುವ ಗುಣ ಎಂಬುದರ ಬಗ್ಗೆ ಒಂದು ಕಥೆ : (ಹುಂಜದ ಬಗ್ಗೆ) ಕೋಳಿ ಹುಂಜ ಮತ್ತು ನಾಯಿ ಇಂದ್ರನ ಆಸ್ಥಾನದಲ್ಲಿ ವಿದ್ವಾಂಸರಾಗಿದ್ದರು. ಒಮ್ಮೆ ಭೂಲೋಕ ನೋಡಲು ಪ್ರವಾಸ ಬಂದ್ರು. ಒಂದು ಮದುವೆಯ ಮಂಟದ ಹಿಂದೆ ಎಂಜಲ ಎಲೆಗಳ ರಾಶಿ ಕಾಣಿಸ್ತು. ನಾಯಿ ಎಂಜಲಎಲೆಗಳ ರಾಶಿಗೆ ನುಗ್ಗಿದ್ದು ಹೊರಗೆ ಬರಲೇ ಇಲ್ಲ. ಕೋಳಿ ಹುಂಜ ಕೆದಕುತ್ತಲೇ ಇತ್ತು. ಇಂದ್ರ ಮೇಲಿಂದ 'ಹಿಂದಿರುಗಿ ಬನ್ನಿ'ರೆಂದು ಆಜ್ಞಾಪಿಸುತ್ತಲೇ ಇದ್ದ. ಆಗೆಲ್ಲ ಹುಂಜವು "ನಾಯಿಬಾರದು" (ಕುಕ್ಕರಾದೂ) ಎಂದು ಉತ್ತರಿಸುತ್ತಲೇ ಇತ್ತು. ಇಂದಿಗೂ ಇವೆರಡೂ ಇಂದ್ರಲೋಕಕ್ಕೆ ಹೋಗದೆ ಭೂಮಿಯಲ್ಲಿ ಉಳಿದಿವೆ. ಇಂದ್ರ ಕರೆಯುತ್ತಲೇ ಇದ್ದಾನೆ. ಹುಂಜ ಉತ್ತರಿಸುತ್ತಲೇ ಇದೆಯೆಂಬ ನಂಬಿಕೆ ಇದೆ.

**ಕೋಳಿಯ ಕುರಿತ ಕಲ್ಪನೆ :** ಹೆಣ್ಣು ಕೋಳಿಗೆ ತನ್ನ ಮರಿಗಳ ಬಗ್ಗೆ ಮಮತೆ ಕಾಳಜಿ ಬಹಳ. ಏಕೆಂದರೆ, "ಕೋಳಿಗೆ ತನ್ನ ಮೊಟ್ಟೆಗಳೆ ಮಕ್ಕಳು". ತಾನು ಕಾವು ಕೊಡುತ್ತಿರುವಾಗ ಮೊಟ್ಟೆಯೊಡೆದು ಮರಿಗಳು ಬರುತ್ತವೆ. ಈ ಮರಿಗಳು ಕೋಳಿಯ ಮೊಮ್ಮಕ್ಕಳು. ಆದ್ದರಿಂದಲೇ ಕೋಳಿಯು ತಾಯಿಯಿಲ್ಲದ ತಬ್ಬಲಿಗಳೆಂದು ಅವುಗಳನ್ನು ಮುತುವರ್ಜಿ ವಹಿಸಿ ಸಾಕುತ್ತದೆ ಎನ್ನುತ್ತಾರೆ. ಮಾಟ-ಮಂತ್ರಗಳನ್ನು ಮಾಡಿಸಲು ಮತ್ತು ನಿಷ್ಕ್ರಿಯಗೊಳಿಸಲು ಕೋಳಿ ಬಲಿಯನ್ನು ನೀಡುತ್ತಾರೆ. ನಿಧಿ ತೆಗೆಯಲು ಕಪ್ಪು ಕೋಳಿಯ ಬಲಿ ಕೊಡುತ್ತಾರೆಂದು ನಂಬಿಕೆ. ಜನಪದ ದೇವತೆಗಳಿಗೂ ಕೋಳಿಬಲಿ ನೀಡುವುದು ವಿಶೇಷ ಸಂಪ್ರದಾಯದಲ್ಲಿ ಹುಂಜ, ಹೆಂಟೆ ಎಂಬ ಭೇದವಿಲ್ಲ.

ಜನಪದರು ಕೋಳಿ ಹುಂಜವು ರಾತ್ರಿಯ ವೇಳೆ ಕೂಗುವುದಕ್ಕೆ ಮಹತ್ವ ಕೊಡುತ್ತಾರೆ. ಬೆಳಗಿನ ಜಾವದಲ್ಲಿ ಹುಂಜವು ಕೂಗುವುದೇ ತಡ ಎಚ್ಚರಗೊಂಡು ದೈನಂದಿನ ಕೆಲಸ ಕಾರ್ಯಗಳಿಗೆ ಚಾಲನೆ ನೀಡುತ್ತಾರೆ. ಜಾತಿ ಹುಂಜಗಳು ಏಕಕಾಲಕ್ಕೆ ಕೂಗುತ್ತಾ ಬೆಳಗನ್ನು ವ್ಯಾಪಿಸುತ್ತವೆಯೆಂಬುದು ಜನಪದ ಜೀವನದ ಅನನ್ಯತೆಯನ್ನು ಹೇಳುತ್ತದೆ. ಬೆಳಗಿನ ಜಾವಕ್ಕಿಂತ ಮುಂಚೆ ಕೂಗುವ ಹುಂಜವನ್ನು ಕೇಡು ಎಂಬುದಾಗಿ ಭಾವಿಸಿ ಗ್ರಾಮದೇವತೆಗೆ ಬಲಿಕೊಡುತ್ತಾರೆ. ಸಾಮಾನ್ಯವಾಗಿ ಹುಂಜ ಕೂಗುವ ಸಮಯವನ್ನೇ ಆಶ್ರಯಿಸುವವರಿಗೆ ಹೊತ್ತಿಗೆ ಮುಂಚೆ ಕೂಗುವ ಹುಂಜದ ಸೂಚನೆಯಿಂದ ಅನುಸರಿಸುವ ಕೆಲಸಗಳಲ್ಲಿ ಏರುಪೇರುಗಳಾಗಿರುವ ಸಾಧ್ಯತೆಗಳಿವೆ.

**ಕೋಳಿ ಹುಂಜದ ಕೂಗಿನ ಬಗ್ಗೆ ನಂಬಿಕೆ-ಅನುಭವಗಳು :** ೧. ರಾತ್ರಿಯ ವೇಳೆಯಲ್ಲಿ ದೆವ್ವ, ಭೂತ, ಪ್ರೇತ, ಪಿಶಾಚಿ ಮುಂತಾದ ದುಷ್ಟಶಕ್ತಿಗಳು ಓಡಾಡುತ್ತಿರುತ್ತವೆಯೆಂದು ನಂಬಿಕೆಯಿದೆ. ಇವು ಜಾವದಲ್ಲಿ ಹುಂಜ ಕೂಗುವವರೆಗೂ ಸಂಚಾರದಲ್ಲಿದ್ದು ಕೋಳಿಯ ಕೂಗನ್ನು ಕೇಳಿದ ತಕ್ಷಣ ಮಾಯಾವಾಗುತ್ತವೆಂದು ಹೇಳುತ್ತಾರೆ. ೨. ಬೆಳಗಿನ ಜಾವ ಹುಂಜದ ಕೂಗು ಕೇಳುವವರೆಗೂ ರಾತ್ರಿ ಇಡೀ ಗಂಗೆಯು (ನೀರು) ನಿದ್ರಿಸುತ್ತಾಳೆಂದು ನಂಬಿಕೆ. ನಡುರಾತ್ರಿಯಲ್ಲಿ ಕೆರೆ, ಬಾವಿ, ನದಿ, ಹಳ್ಳ ಇತ್ಯಾದಿ ನಿರ್ಧಾರಗಳಿಂದ ನೀರನ್ನು ಮುಟ್ಟಬಾರದು, ತುಂಬಬಾರದು, ಯಾರೂ ಮುಳುಗಬಾರದು, ಅಂದರೆ ಸ್ನಾನಕ್ಕೆಂದು ನೀರಿಗೆ ಇಳಿಯಬಾರದು. ಅಕಸ್ಮಾತ್ ಜಾವಕ್ಕೆ ಮೊದಲೇ ಕೂಗುವ ಹುಂಜದ ಶಬ್ದದಿಂದ ಮೋಸ ಹೋಗಿ ನೀರಿಗೆ ಇಳಿದರೆ ಗಂಗೆಯು ಈಜಲು ಬಿಡುವುದಿಲ್ಲ. ೩. ಹೂವಿನ ಗಿಡಗಳಲ್ಲಿ ಭೂತಗಳಿದ್ದು ನಡುರಾತ್ರಿಯಲ್ಲಿ ಹೂವನ್ನು ಮುಟ್ಟಿದರೆ ಹೊಡೆದು ಸಾಯಿಸುತ್ತವೆ. ಜಾವದ ಕೋಳಿ ಕೂಗಿನ ನಂತರ ಅಲ್ಲಿಂದ ಅವು ಮಾಯವಾಗುತ್ತವೆ. ಕಣಗಿಲೆಯ ಗಿಡದಲ್ಲಿ ಬೇತಾಳವಿರುತ್ತದೆ. ಜಾವದ ಕೋಳಿ ಕೂಗುವ ಮುನ್ನ ಗಿಡಕ್ಕೆ ಕೈ ಹಾಕಿದರೆ ಕೊಂದು ಬಿಡುತ್ತದೆ. ೪. ಕೆಲವರು ನಡುರಾತ್ರಿಯಲ್ಲಿ ಈಜಲು ಪ್ರಯತ್ನಿಸಿ ನೀರಿನಲ್ಲಿ ಮುಳುಗಿ ಸತ್ತರೆಂದು, ಮತ್ತೆ ಕೆಲವರು ಜಾವದವರೆಗೂ ಸೆಣಸಾಡಿ ಜಾವದಲ್ಲಿ ಬಿಡಿಸಿಕೊಂಡು ಬಂದರೆಂದೂ ನಂಬಿಕೆಗಳನ್ನು ಅನುಭವಗಳಾಗಿ ಪರಿವರ್ತಿಸುತ್ತಾರೆ. ೫. ಕಣಗಲೆಯ ಹೂವಿಗಾಗಿ ಜಾವಕ್ಕೆ ಮುನ್ನ ಕೈ ಹಾಕಿ ಕೆಲವರು ಸತ್ತರೆಂಬ ಅನುಭವವನ್ನು ರೂಪಿಸುತ್ತಾರೆ. ೬. ಮಾಟ-ಮಂತ್ರ ಮುಂತಾದ ವಶೀಕರಣಗಳನ್ನು ಜಾವದ ಕೋಳಿ (ಹುಂಜ) ಕೂಗುವ ಮುನ್ನವೇ ಸಾಧಿಸಿಕೊಳ್ಳಬೇಕು. ನಂತರ ಸಿದ್ಧಿಯಾಗುವುದಿಲ್ಲ.

**ದನಕರುಗಳು :** ಕೃಷಿ, ಸಾಗಾಣಿಕೆ, ಹೈನುಗಾರಿಕೆ, ಮಾಂಸ ಹಾಗೂ ಹಲವು ಉತ್ಪನ್ನಗಳ ಉದ್ದೇಶ ಇತ್ಯಾದಿ ಕಾರಣಗಳಿಂದಾಗಿ ದನಕರುಗಳನ್ನು ಸಾಕುತ್ತಾರೆ. ಹಸುಗಳನ್ನು ಹೈನುಗಾರಿಕೆ ಮತ್ತು ಕೃಷಿಯ ಉಪಯೋಗದ ದೃಷ್ಟಿಯಿಂದ ಸಾಕುತ್ತಾರೆ. ಎತ್ತುಗಳನ್ನು ವ್ಯವಸಾಯ ಮತ್ತು ಉತ್ಪನ್ನಗಳ ಸಾಗಾಣಿಕೆಗಾಗಿ ಮೇಯಿಸುತ್ತಾರೆ.

**ಎತ್ತಿನ ಬಗ್ಗೆ ಕಥೆಗಳು :** ೧. ಕೈಲಾಸದ ಶಿವನ ಭೂಮಿಗೆ ಡಂಗೂರವನ್ನು ಸಾರಿಸಬೇಕಾಗಿತ್ತು. ಭೂಮಿಯ ಮೇಲಿನ ಮನುಷ್ಯರೆಲ್ಲರಿಗೂ ಮೂರು ಹೊತ್ತು ಸ್ನಾನ ಒಂದು ಊಟ ನಿಗದಿಯಾಗಿದೆ. ಇದು ಶಿವನಾಜ್ಞೆ ಎಂದು ಹೇಳಿ ಬರುವಂತೆ ತನ್ನ ವಾಹನ ನಂದಿಗೆ ಹೇಳಿದ. ಅವನು "ಭೂಲೋಕದ ಜನರಿಗೆಲ್ಲ ಒಂದು ಸ್ನಾನ ಮೂರು ಊಟವೆಂಬಂತೆ ಶಿವನ ಆಜ್ಞೆಯಾಗಿದೆ" ಎಂದು ಡಂಗೂರ ಸಾರಿದ. ಶಿವನಿಗೆ ಕೋಪ ಬಂತು. ನೀನು ರೈತನ ಮನೆಯಲ್ಲಿ ಎತ್ತಾಗಿ ದುಡಿ ಎಂದು ಶಾಪ ಹಾಕಿದ. ಅಂದಿನಿಂದ ರೈತನೊಂದಿಗೆ ಎತ್ತಿನ ದುಡಿಮೆ ಆರಂಭವಾಯಿತು. ೨. ಶಿವ ಮತ್ತು ಪಾರ್ವತಿ ವಾಹನ ನಂದಿಯೊಂದಿಗೆ

ಭೂಲೋಕ ಸುತ್ತಲು ಬಂದರು. ಒಂದು ಮಂಟಪ ಕಾಣಿಸಿತು. ಶಿವನು ತಾನು ಪಾರ್ವತಿಯ ಜೊತೆ ಮಂಟಪದಲ್ಲಿ ವಿಶ್ರಾಂತಿ ಪಡೆಯುವುದಾಗಿಯೂ ಬಾಗಿಲು ಇಲ್ಲದ್ದರಿಂದ ನಂದಿಯನ್ನು ಹೊರಗೆ ಕಾಯುವಂತೆಯೂ ಹೇಳಿದ. ನಂದಿಯು ಮತ್ತೆ ನನಗೆ ವಿಶ್ರಾಂತಿ" ಎಂದ. ಶಿವನು "ನಾನು ಹೊರ ಬಂದ ನಂತರ" ಅಂದ. ಶಿವ ಪಾರ್ವತಿ ಮಂಟಪದಲ್ಲಿ ಲಿಂಗ ರೂಪದಲ್ಲಿ ಉಳಿದರು. ಹೊರಗಡೆ ನಂದಿಯು ಕಾಯುತ್ತಲೇ ಕುಳಿತ. ಶಿವ ಹೊರಗೆ ಬರಲಿಲ್ಲ ನಂದಿಯು ಒಳಗೆ ಹೋಗಲಿಲ್ಲ.

**ಎಮ್ಮೆ ಮತ್ತು ಕೋಣ :** ಹಸು ಮತ್ತು ಎತ್ತಿಗೆ ಹೋಲಿಸಿದರೆ ಜನಪದ ವಲಯದಲ್ಲಿ ಎಮ್ಮೆ ಮತ್ತು ಕೋಣಕ್ಕೆ ಪ್ರಾಶಸ್ತ್ಯವಿರುವುದು ಕಡಿಮೆಯೆಂದೇ ಹೇಳಬೇಕು. ಸ್ವಭಾವಿತಃ ಹಸು ಸೌಮ್ಯವೆನಿಸಿದರೆ ಎಮ್ಮೆಯು ಮಂದವೆನಿಸುತ್ತದೆ. ಎಮ್ಮೆ ಮತ್ತು ಕೋಣಗಳನ್ನು ವ್ಯವಸಾಯದಲ್ಲಿ ಉಳಲು, ಭಾರವನ್ನು ಎಳೆಯಲು ಹಿಂದಿನಿಂದಲೂ ಬಳಸಿಕೊಂಡಿದ್ದಾರೆ. ಆದರೆ ಎತ್ತುಗಳ ಬಳಕೆ ಬಹಳವೆನಿಸುತ್ತದೆ. ಮಲೆನಾಡಿನ ಕೆಲವು ಭಾಗಗಳಲ್ಲಿ ಇಂದಿಗೂ ಎಮ್ಮೆ-ಕೋಣಗಳನ್ನು ಬಳಸಿಕೊಂಡು ವ್ಯವಸಾಯವನ್ನು ರೂಢಿಸಿಕೊಳ್ಳುತ್ತಾರೆ. ಎಮ್ಮೆಯ ಕೋಣವನ್ನು ಮಾರಿ ಜಾತ್ರೆಯಲ್ಲಿ ಬಲಿಯಾಗಿ ನೀಡುತ್ತಾರೆ. ಸುಳ್ಳು ಜಾತಿಯನ್ನು ಹೇಳಿ ಮಾರಿಯನ್ನು ಮದುವೆಯಾದ ಅಸ್ಪೃಶ್ಯ ಕೋಣನಾದನೆಂದು ನಂಬಿಕೆಯಿದೆ. ಸೊಕ್ಕಿನ ಮನುಷ್ಯನನ್ನು "ಮಾರಿಗೆ ಕಡಿಯುವ ಕೋಣದ ಹಾಗೆ ಇದ್ದಾನೆ" ಎನ್ನುತ್ತಾರೆ. ದಡ್ಡನನ್ನು 'ಎಮ್ಮೆ ಹಾಲು ಕುಡಿದವನು' ಎನ್ನುತ್ತಾರೆ. ಅಂದರೆ ಎಮ್ಮೆ ಹಾಲಿನಲ್ಲಿ ಕೊಬ್ಬಿನ ಅಂಶ ಹೆಚ್ಚಾಗಿದ್ದು ಮಾನಸಿಕ ಮಂದ ಉಂಟಾಗುತ್ತದೆ ಎನ್ನುತ್ತಾರೆ. "ಕೋಣದ ಮುಂದೆ ಕಿನ್ನರಿ ಭಾರಿಸಿದ ಹಾಗೆ" "ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೀತು" ಇತ್ಯಾದಿ ಗಾದೆಮಾತುಗಳಲ್ಲಿ ಎಮ್ಮೆ-ಕೋಣ ಮಂದ ಬುದ್ಧಿಯವೆಂಬ ಗ್ರಹಿಕೆಯಿದೆ. ಪುರಾಣಗಳಲ್ಲಿ ಎಮ್ಮೆ-ಕೋಣವು ಯಮನ ವಾಹನವಾಗಿದೆ. ಮಹಿಷಾಸುರನೆಂಬ ರಾಕ್ಷಸನು ಕೋಣ ರೂಪಿಯಾಗಿದ್ದು ಕಂಟಕಪ್ರಾಯನಾಗಿದ್ದುದ್ದರಿಂದ ಚಾಮುಂಡಿಯು ಕೊಂದಳೆಂದು ಮತ್ತೊಂದು ಪೌರಾಣಿಕ ಮಾಹಿತಿ ಲಭಿಸುತ್ತದೆ.

ಮನುಷ್ಯನು ಕಾಡಿನ ಪರಿಸರದಿಂದ ನಾಡಿಗೆ ಸರಿದಂತೆಲ್ಲ ಕೆಲವು ಪ್ರಾಣಿಗಳನ್ನು ಸಾಕುವ ಅವಶ್ಯಕತೆ ಕಂಡುಬಂತು. ಅರಣ್ಯ ಪ್ರಾಣಿಗಳ ಬೇಟೆಗೆ, ಆಸ್ತಿ ಕಾವಲಿಗೆ, ಪ್ರಾಣಿ ರಕ್ಷಣೆಗೆ ನಾಯಿಗಳ ನೆರವು ಬೇಕೇ ಬೇಕು. ಹಾಗೆ ನೋಡಿದರೆ ಕುರಿ, ಮೇಕೆ, ಕೋಳಿ, ದನ, ಕುದುರೆ, ಜೆಕ್ಕು, ಒಂಟೆ ಮೊದಲಾದ ಪ್ರಾಣಿಗಳು ಮನುಷ್ಯನ ಬದುಕಿನ ಅವಿಭಾಜ್ಯಂಗಗಳಾಗಿವೆ.[೧೦]

**ಪರಾವಲಂಬಿಗಳಾಗಿ ಮನುಷ್ಯನನ್ನು ಆಶ್ರಯಿಸಿರುವ ಜೀವಿಗಳು :** ಮನುಷ್ಯ ಇಷ್ಟಪೂರ್ವಕವಾಗಿ ಸಾಕದಿದ್ದರೂ ಅವಲಂಬಿಸಿ ಬದುಕುವ ಹೇನು, ಕೂರಿ, ಸೊಳ್ಳೆ, ತಿಗಣೆ ಇತ್ಯಾದಿಗಳ ಕಿರಿಕಿರಿಯನ್ನು

ಅನುಭವಿಸಿದರೂ, ಅನುಸರಿಸಿಕೊಂಡು ಹೋಗುತ್ತಾರೆ. ಇಂತಹ ತಾಳ್ಮೆಯ ಸಂದರ್ಭಗಳಲ್ಲಿ ಜನಪದರು ತಾಳುವ ನಿಲುವುಗಳು ಕಥೆಗಳನ್ನಾದರೂ ಕಟ್ಟಿಕೊಡುತ್ತವೆ. ಅಥವಾ ನಂಬಿಕೆಗಳಾಗಿ ಮಾರ್ಪಡುತ್ತವೆ. ಕೆಲವು ಗಾದೆಮಾತುಗಳಲ್ಲಿ ಸೂಚ್ಯವಾಗುತ್ತವೆ. ಹೇನು ಅಥವಾ ಕೂರಿಗಳು ಹೇರಳವಾಗಿರುವವರು ಹಣವನ್ನು ಹಾಳು ಮಾಡುವುದಿಲ್ಲ. ಬಹಳ ಜಿಪುಣರಾಗಿರುತ್ತಾರೆ. ದರಿದ್ರದ ಸೂಚನೆಗಳಾಗಿ ಹೇನು-ಕೂರಿಗಳು ಬೀಳುತ್ತವೆ. ಇವೆರಡು ನಂಬಿಕೆಗಳೂ ಹಣ ಮತ್ತು ದಾರಿದ್ರ್ಯದ ಸಂಬಂಧ ಮತ್ತು ವೈರುಧ್ಯಗಳನ್ನು ಕುರಿತಂಥವಾಗಿವೆ. ಜೊತೆಗೆ ಶುಚಿತ್ವದ ಬಗ್ಗೆ ಗಮನವಿರದ ದರಿದ್ರರಿಗೆ ಹೇನು-ಕೂರಿಗಳಿಂದ ಬಿಡುಗಡೆ ಇರುವುದಿಲ್ಲವೆಂಬ ಅಂಶವೂ ಗ್ರಹಿತವಾಗುತ್ತವೆ.

**ಕಥೆ :** ಒಂದಾನೊಂದು ಕಾಲದಲ್ಲಿ ಅಕ್ಕ-ತಂಗಿಯರು ಇಬ್ಬರಲ್ಲಿ ಅಕ್ಕ ಬಡವಿ. ತಂಗಿ ಶ್ರೀಮಂತಳು. ಬರ ಬಂತು. ಅಕ್ಕ ತನ್ನ ಮಕ್ಕಳನ್ನೆಲ್ಲ ಕರೆದುಕೊಡು ತಂಗಿಯ ಮನೆಗೆ ಹೋದಳು. ಹಸಿದಿದ್ದ ಅಕ್ಕನ ಮಕ್ಕಳಿಗೆ ತಂಗಿ ಒಳ್ಳೆಯ ಊಟವನ್ನು ಹಾಕಿದಳು. ಅಕ್ಕನಿಗೆ ಅಕ್ಕಾ ಅಕ್ಕಾ ನನ್ನ ತಲೆಯಲ್ಲಿರುವ ಹೇನುಗಳನ್ನೆಲ್ಲ ಹಿಡಿದು ಕೊಟ್ಟರೆ, ನಿನಗೆ ಹಾಲು - ಅನ್ನ ಬಡಿಸ್ತೀನಿ ಅಂದಳು. ಹಾಗೆಯೇ ಆಗಲೆಂದು ಅಕ್ಕನು ತಂಗಿಯ ತಲೆಯಿಂದ ಹೇನುಗಳನ್ನು ಹಿಡಿದು ಹಿಡಿದು ಕೊಟ್ಟಳು. ತಂಗಿಗೆ ಖುಷಿ ಆಯ್ತು. ಪ್ರೀತಿಯಿಂದ ಅಕ್ಕನಿಗೆ ಹಾಲು ಅನ್ನವನ್ನು ಬಡಿಸಿದಳು. ಅಕ್ಕನೂ ಹಾಲು ಅನ್ನವನ್ನು ಕಲಿಸಿಕೊಂಡು ಒಂದು ತುತ್ತು ಬಾಯಿಗೆ ಇಡುವಷ್ಟರಲ್ಲಿ ಎಲ್ಲೋ ತಂಗಿಯ ತಲೆಯಲ್ಲಿ ಅಡಗಿಕೊಂಡಿದ್ದ ಹೇನೊಂದು ಬುಳಬುಳನೆ ಹರಿದು ಬಂದು ಹಣೆಗೆ ಇಳಿಯಿತು. ತಡವಿದಾಗ ಸಿಕ್ಕಿಬಿತ್ತು. ಅವಳು ಕೋಪದಿಂದ ಅಕ್ಕನು ನುಂಗಲಿರುವ ಹಾಲು - ಅನ್ನದ ತುತ್ತನ್ನು ಗಂಟಲಿಗೆ ಬೆರಳು ಹಾಕ ತೋಡಿದಳು. ದುಃಖದಿಂದ ಅಕ್ಕನು ಹಾಲು ಅನ್ನವನ್ನು ಕಿತ್ತುಕೊಂಡ ಹೇನಿನ ಸಂತತಿ ಹೇರಳವಾಗಲಿ ಎಂದು ಶಪಿಸಿದಳು. ಅಂದಿನಿಂದ ಹೇನುಗಳು ಎಷ್ಟೇ ನಾಶ ಮಾಡಿದರೂ ಇದ್ದೇ ಇರುತ್ತವೆ ಎಂಬುದು ನಂಬಿಕೆ.

**ಜೇಡರ ಹುಳು :** ಮನುಷ್ಯನು ವಿಕಾಸದ ನೂಲಿನಿಂದ ಬಟ್ಟೆ ನೇಯುವ, ಬಲೆ ಹೆಣೆಯುವ ಕಲೆಗೆ ಬಹುಶಃ ಜೇಡರ ಹುಳು ಸ್ಫೂರ್ತಿದಾಯಕವಾಗಿರಬಹುದು. ರೇಷ್ಮೆ ನೂಲಿನ ನೇಯ್ಗೆಯಲ್ಲಿಯೂ ಚೀನಿಯರಿಗೆ ಜೇಡರ ಹುಳುವಿನ ಶ್ರಮವೇ ಕಾರಣವೆಂದು ಹೇಳುತ್ತಾರೆ. ಮನೆಯ ಮೂಲೆ - ಮೂಲೆಗಳ ಮಾಡು - ಗೋಡೆಗಳಿಗೆ ಬಲೆಯನ್ನು ಹರಡಿ ನೊಣ-ಸೊಳ್ಳೆ ಇತ್ಯಾದಿಗಳನ್ನು ಹಿಡಿದು ತಿನ್ನುವ ಜೇಡರ ಹುಳುವನ್ನು ಯಾರೂ ಕೊಲ್ಲುವುದಿಲ್ಲ. ದೂಳು ಕೂಡುತ್ತದೆಂದು ಅದರ ಬಲೆಗಳನ್ನು ಮಾತ್ರ ಕೊಡುಪುತ್ತಾರೆ. ಜೇಡನನ್ನು ಕೊಂದರೆ ಪಾಪ ಬರುತ್ತದೆ. ಜೇಡನ ಬಲೆಗಳನ್ನು ತೆಗೆಯದಿದ್ದರೆ ದರಿದ್ರ

ಬರುತ್ತದೆ. ಜೇಡರ ಗೂಡುಗಳಿರುವ ಮನೆಯಲ್ಲಿ ಹಣಕಾಸು ಉಳಿದು ಬರುವುದಿಲ್ಲ ಎಂಬಿತ್ಯಾದಿ ನಂಬಿಕೆಗಳಿವೆ. ನೊಣಗಳನ್ನು ಅನಾಯಾಸವಾಗಿ ಹಿಡಿದು ತಿನ್ನುವುದರಿಂದ ತೆಲುಗಿನಲ್ಲಿ ನೊಣಗಳ ರಾಜ ("ಈಗಲ ಪುಲಿ")ನೆಂದು ಕರೆಯುತ್ತಾರೆ.

ಹಲ್ಲಿ : ಮನೆಯ ಮಾಡು - ಗೋಡೆಗಳ ಮೇಲೆ ಓಡಾಡುತ್ತ ಸುಳಿದಾಡುವ ಕ್ರಿಮಿ-ಕೀಟಗಳನ್ನು ತಿಂದು ಹಲ್ಲಿಗಳು ಉಪಕಾರ ಮಾಡುತ್ತವೆ. ಹಲ್ಲಿಯ ಚರ್ಮವು ಬಹಳ ತೆಳ್ಳಗೆ ಇರುವುದರಿಂದ ಹೊಟ್ಟೆಯೊಳಗಿನ ಆಹಾರವು ಹೊರಗೆ ಕಾಣಿಸುತ್ತಿರುತ್ತದೆ. ಹಲ್ಲಿಯ ಹಿಕ್ಕೆಗಳಿಂದ ಮಾಟಮಂತ್ರ ಮಾಡಿಸಬಹುದು. ಹಲ್ಲಿಯ ಉಚ್ಚೆ ಮೇಲೆ ಬಿದ್ದರೆ ರೋಗ ಬರುತ್ತದೆ. ಹಲ್ಲಿಯು ಮನುಷ್ಯನ ಮೇಲೆ ಬೀಳಬಾರದು. ಹಾಗೆ ಬಿದ್ದರೆ ಬೆಳ್ಳಿಯ ಹಲ್ಲಿಯನ್ನು ಮಾಡಿಸಬೇಕು. ಅದನ್ನು ಕಾಶಿಗೆ ಕಳುಹಿಸಬೇಕು ಅಥವಾ ಈಗಾಗಲೇ ಬೆಳ್ಳಿಯ ಹಲ್ಲಿಯನ್ನು ಮಾಡಿಸಿ ಕಾಶಿಗೆ ಕಳುಹಿಸಿರುವವರನ್ನು ಮಾತನಾಡಿಸಬೇಕು. ಇಲ್ಲವೇ ಕಾಶಿಯಲ್ಲಿರುವ ಬೆಳ್ಳಿಯ ಹಲ್ಲಿಯನ್ನು ನೋಡಿ ಬಂದಂಥವರನ್ನಾದರೂ ಮಾತನಾಡಿಸಬೇಕು. ಇಲ್ಲದಿದ್ದರೆ ಅಪಶಕುನವಾಗುತ್ತದೆ ಎಂಬ ನಂಬಿಕೆಗಳಿವೆ. ಹಲ್ಲಿಯು ಮನುಷ್ಯನ ದೇಹದ ಯಾವ ಭಾಗದ ಮೇಲೆ ಬಿದ್ದಿದೆ ಎಂಬುದರ ಮೇಲೆ ಕೇಡು ನಿರ್ಣಯವಾಗುತ್ತದೆ. ಪರಿಹಾರಗಳೂ ಇರುತ್ತವೆ. ಹಲ್ಲಿಯು ಕೃಷ್ಣನ ಅವತಾರ. ಅದರ ಲೊಚಗುಟ್ಟುವಿಕೆಯು ಒಳಿತು-ಕೆಡಕುಗಳನ್ನು ಕುರಿತ ಶಕುನ. ಏನಾದರೂ ಕಾರ್ಯಸಿದ್ಧತೆಯಲ್ಲಿ ತೊಡಗಿರುವಾಗ ಹಲ್ಲಿಯು ಧ್ವನಿ ಮಾಡಿದರೆ ಕೃಷ್ಣ ಕೃಷ್ಣ ಎನ್ನುತ್ತಾರೆ. ಬಾಯಾರಿಕೆಯಾದವರಿಗೆ ನೀರು ಕೊಡದಿರುವವರು ಹಲ್ಲಿಗಳಾಗಿ ಹುಟ್ಟುತ್ತಾರೆಂದು ಹೇಳುತ್ತಾರೆ. ಹಲ್ಲಿಯು ಲೊಚಗುಟ್ಟುವಿಕೆಯನ್ನು ಗೌಳಿ ನುಡಿಯುವುದು ಎನ್ನುತ್ತಾರೆ. ಲೊಚಗುಟ್ಟುವಾಗ ಹಲ್ಲಿ ಇರುವ ಮೂಲೆ, ಸಮಯ, ಕೈಗೊಂಡಿರುವ ಕಾರ್ಯ ಇವುಗಳ ಮೇಲೆ ಶಕುನ ನಿರ್ಧಾರವಾಗುತ್ತದೆ.

**ವಿಷಜಂತುಗಳು-ಹಾವುಗಳು :** ಹಾವುಗಳು ಪಾತಾಳದಲ್ಲಿರುವ ನಾಗಲೋಕದ ಪರಿವಾರ ಮತ್ತು ಪ್ರಜೆಗಳು. ನಾಗರಹಾವಿನ ಜಾತಿಯು ಹಾವುಗಳಿಗೆಲ್ಲ ರಾಜ ಮನೆತನ. ಜಲರಾಶಿಯು ಉಕ್ಕುವಾಗ ಜಲಕನ್ಯೆಯರೊಂದಿಗೆ ಭೂಮಿಯ ಮೇಲಕ್ಕೆ ಹಾವಿನ ಸಂತತಿಯು ಬಂದು ನೆಲೆಸಿತು. ಹಾವುಗಳ ಕುರಿತ ನಂಬಿಕೆಗಳು ಹೀಗಿವೆ: ೧. ನಾಗರಹಾವುಗಳಲ್ಲಿ ಗಂಡು ಸರ್ಪಕ್ಕೆ ಹೆಡೆ ಇರುತ್ತದೆ. ಹೆಣ್ಣು ಸರ್ಪಕ್ಕೆ ಹೆಡೆ ಇರುವುದಿಲ್ಲ. ಅದು ಕೆರೆ ಹಾವು ಆಗುತ್ತದೆ. ಇವೆರಡೂ ಹೆಣೆದುಕೊಂಡು ಸಂತಾನಾಭಿವೃದ್ಧಿ ಮಾಡುತ್ತವೆ. ೨. ಅತಿ ಜಿಪುಣನು ಸತ್ತು ಸರ್ಪವಾಗುತ್ತಾನೆ. ತಾನು ಬಚ್ಚಿಟ್ಟ ನಿಧಿಯನ್ನೆ ಕಾಯುತ್ತಿರುತ್ತಾನೆ. ಹಾವಿನ ಭಯದಿಂದ ನಿಧಿಯು ಇತರರ ಪಾಲಾಗುವುದಿಲ್ಲ. ನಿಧಿ ಇರುವವರೆಗೂ ಕಾಯುತ್ತಿರುವ ಹಾವಿಗೆ ಮರುಜನ್ಮವಿರುವುದಿಲ್ಲ. ೩. ದೇವರ ನಿಧಿಯನ್ನು ಹೆಡೆಯಲ್ಲಿ ನಾಗರತ್ನವನ್ನುಳ್ಳ ನಾಗಸರ್ಪಗಳು

ಕಾಯುತ್ತಿರುತ್ತವೆ. ಇವು ರಾತ್ರಿ ಜನರೆಲ್ಲ ನಿದ್ರಿಸಿದ ನಂತರ ಹೆಡೆಯಲ್ಲಿರುವ ಮಣಿಯನ್ನು ಬಯಲಿನಲ್ಲಿ ತೆಗೆದಿಟ್ಟು ಆ ಬೆಳಕಿಗೆ ಆಕರ್ಷಿತವಾಗಿ ಬರುವ ಹುಳು ಹುಪ್ಪಟೆಗಳನ್ನು ಹಿಡಿದು ತಿನ್ನುತ್ತವೆ. ಇಂಥ ಸಂದರ್ಭಗಳಲ್ಲಿ ಜನರು ಎಚ್ಚರಿಕೆಯಿಂದ ಮೇಲೆ ಕುಳಿತಿದ್ದು ನಾಗರತ್ನದ ಮೇಲಕ್ಕೆ ಮುಚ್ಚುವಷ್ಟು ಮಣ್ಣು ಅಥವಾ ಸಗಣಿಯನ್ನು ಹಾಕುತ್ತಾರೆ. ಆಗ ನಾಗರಹಾವು ಕಣ್ಣು ಕಾಣಿಸದೆ ಸತ್ತು ಹೋಗುತ್ತದೆ. ನಾಗರತ್ನವನ್ನು ಅಪಹರಿಸಿದವನೂ ಅದೇ ಸಮಯಕ್ಕೆ ನರಳಿ ಸಾಯುತ್ತಾನೆ. ಆದರೆ, ಬೆಲೆ ಬಾಳುವ ನಾಗರತ್ನ ದೊರೆತ ಅವನ ಸಂತತಿಯವರು ಶ್ರೀಮಂತರಾಗುತ್ತಾರೆ. ಯಾವುದೇ ನಿಧಿಯನ್ನು ಕಾಯುವ ಸರ್ಪಗಳಿಗೂ ಸಹಜವಾಗಿ ಸಾವಿಲ್ಲ. ಅವುಗಳಿಗೆ ವಯಸ್ಸು ಆದಂತೆಲ್ಲ ಗಡ್ಡ-ಮೀಸೆಗಳು ಬರುತ್ತವೆ. ಅವು ಮುಂಜಾನೆ ಹಾಗೂ ಸಂಜೆಯ ಎಳೆ ಬಿಸಿಲಿನಲ್ಲಿ ನಲಿನಲಿದು ಕುಣಿಯುತ್ತಿರುತ್ತವೆ. ಯಾವುದೇ ಹಾವು ಸತ್ತರೂ ಮತ್ತೆ - ಮತ್ತೆ ಹಾವಿನ ಜನ್ಮಕ್ಕೆ ಬೀಳುತ್ತದೆ. ಹಾವನ್ನು ಕೊಂದವರು ಅವರ ಬಾಯಿಗೆ ನಾಣ್ಯ ಅಥವಾ ಅಮೇಧ್ಯವನ್ನಿಟ್ಟು ಸುಟ್ಟರೆ ಮರುಜನ್ಮಕ್ಕೆ ಹೋಗುತ್ತದೆ. ನಾಗರಹಾವುಗಳನ್ನು ಕೊಲ್ಲಬಾರದೂ, ಕೊಂದವರ ಸಂತತಿಗೆ ದೋಷ ಬರುತ್ತದೆ. ಗರುಡ ಮಚ್ಚೆ ಇರುವವರ ಬಳಿಗೆ ಹಾವು ಸುಳಿಯುವುದಿಲ್ಲ, ಕಡಿಯುವುದಿಲ್ಲ, ಕಡಿದರು ವಿಷವೇರುವುದಿಲ್ಲ. ಯಾವುದೇ ಹಾವು ಕಡಿದರೂ ಹಾವು ಕಚ್ಚಿದೆಯೆಂದು ಹೇಳಬಾರದು. ಹಾಗೆ ಹೇಳಿದರೆ ವಿಷವು ಹತ್ತುತ್ತದೆ. ಬದಲಿಗೆ ಬಳ್ಳಿ ಮುಟ್ಟಿದೆ ಅಥವಾ ಹುಳು ಮುಟ್ಟಿದೆ ಎಂದು ಹೇಳಬೇಕು. ಹೀಗೆ ಹೇಳುವುದರಿಂದ ವಿಷದ ಪರಿಣಾಮ ಕಡಿಮೆಯಾಗುತ್ತದೆ. ಸುಮಂಗಲೆಯರು ಹುತ್ತಕ್ಕೆ ಹಾಲೆರೆಯುವ ಆಚರಣೆಯಿದೆ. ಹಬ್ಬ-ಹರಿದಿನಗಳ ವಿಶೇಷ ಸಂದರ್ಭಗಳಲ್ಲಿ ಈ ಆಚರಣೆಯನ್ನು ಮಾಡುತ್ತಾರೆ. ಇದು ಸಂತಾನಾಪೇಕ್ಷೆಯ ಸೂಚಕವೂ ಹೌದು.

**ಚೇಳು :** ಚೇಳಿನ ಆಯುಷ್ಯ ಮರಿ ಮಾಡುವವರೆಗೆ ಮಾತ್ರ ಎಂದು ನಂಬುತ್ತಾರೆ. ಮರಿಗಳನ್ನು ತಂದೆ ಚೇಳು ತಾಯಿಯಿಲ್ಲದ ತಬ್ಬಲಿಗಳೆಂದು ಬೆನ್ನಮೇಲೆ ಕೂಡಿಸಿಕೊಂಡು ಬೆಳೆಸುತ್ತದೆಂದು ನಂಬಿಕೆ. ಕಥೆಯ ಪ್ರಕಾರ ಚೇಳು ಮೊದಲಿಗೆ ಇಂದ್ರನ ಆಸ್ಥಾನದಲ್ಲಿ ಇತ್ತು. ಅದರ ಬಗ್ಗೆ ಯಾರೂ ಗಮನ ಕೊಡುತ್ತಿರಲಿಲ್ಲ. ಚೇಳು ಇಂದ್ರನ ಬಳಿ ತನ್ನ ದುಃಖ ತೋಡಿಕೊಂಡು "ನಾನು ಸತ್ತರೆ ಅಳುವವರೇ ಇಲ್ಲ" ಎಂದಿತು. ಅದಕ್ಕೆ ಇಂದ್ರನು "ಹಾಗಾದ್ರೆ ನೀನು ಭೂಲೋಕಕ್ಕೆ ಹೋಗು ಅಲ್ಲಿ ಮನುಷ್ಯರು ಅಳುತ್ತಾರೆ" ಎಂದ. ಅದು ಹೇಗೆ ಸಾಧ್ಯ ಎಂದು ಕೇಳಿತು. "ವಿಷಾನ ಕುಟುಕು" ಅಂದ. ಚೇಳಿಗೆ ಸಮಾಧಾನವಾಯಿತು. ಒಂದು ಗಡಿಗೆಯ ತುಂಬ ವಿಷವನ್ನು ತುಂಬಿಕೊಂಡು ತಲೆಯ ಮೇಲೆ ಹೊತ್ತು ಭೂಮಿಗೆ ಬಂದಿಳಿಯಿತು. ಭೂಮಿಯ ಮೇಲೆ ಎಡವಿ ಗಡಿಗೆ ಒಡೆದು ವಿಷವೆಲ್ಲ ಚೆಲ್ಲಿ ಹೋಯಿತು. ಒಂದು ಹನಿ ವಿಷ ಅದರ ಬಾಲದ ಕೊಂಡಿಯ ಮೇಲಕ್ಕೆ ಸಿಡಿಯಿತು. ಅದರಿಂದಲೇ ಮನುಷ್ಯರನ್ನು ಕುಟುಕಲು ಆರಂಭಿಸಿತು. ಚೇಳು ಕಡಿದ ತಕ್ಷಣ ವಿಷವೇರಿ ಅಳುತ್ತಿರುವ ಹೊತ್ತಿಗೆ ಸರಿಯಾಗಿ ಚೇಳನ್ನು

ಹುಡುಕಿ ಕೊಲ್ಲುತ್ತಾರೆ. ಹಾಗೆ ಕೊಲ್ಲದಿದ್ದರೂ ಮನುಷ್ಯನನ್ನು ಕಡಿದ ಚೇಳಿಗೆ ಮನುಷ್ಯನ ಶರೀರದ ವಿಷವೇರಿ ಸಾಯುತ್ತದೆನ್ನುತ್ತಾರೆ. ಹೀಗೆ ಚೇಳಿನ ವಿಷಕ್ಕೂ ಅದರ ಸಾವಿಗೂ ಸಂಬಂಧವನ್ನು ಬೆಸೆಯಲಾಗಿದೆ. ಮನೆಯಲ್ಲಿ ಹಾವು-ಚೇಳುಗಳು ಕಾಣಿಸಿಕೊಳ್ಳುವುದು ಜನಪದರಿಗೆ ಅನಿಷ್ಟದ ಸಂಕೇತ. ತಮ್ಮ ಕುಲದೇವತೆ ಅಥವಾ ಮನೆ ದೇವತೆಯ ಆರಾಧನೆಯಲ್ಲಿ ಲೋಪ ಉಂಟಾಗಿದ್ದರೆ ಹಾವು-ಚೇಳುಗಳು ಕಾಣಿಸಿಕೊಳ್ಳಲು ಸಾಧ್ಯ ಎಂದು ನಂಬುತ್ತಾರೆ.

**ಉಪದ್ರ-ನಿರುಪದ್ರಕಾರಿ ಜೀವಿಗಳು-ಸೊಳ್ಳೆ :** ಕಥೆ-ನಂಬಿಕೆ, ಐತಿಹ್ಯಗಳ ಪ್ರಕಾರ ಇಂದ್ರಲೋಕದಲ್ಲಿ ಸೂಳೆಯರು ಹೆಚ್ಚಾದ ಕಾರಣ ಇಂದ್ರ ಭೂಮಿಗೆ ಕಳುಹಿಸಿದ. ಅವರು ಸೊಳ್ಳೆಗಳಾಗಿ ಭೂಮಿಗೆ ಬಂದ್ರು. ಇಲ್ಲಿನ ಮನುಷ್ಯ ಹಾಗೂ ಪ್ರಾಣಿಗಳನ್ನು ಮೊದಲು ತಮ್ಮ ಸಂಗೀತದಿಂದ ಎಚ್ಚರಿಸಲು ಪ್ರಯತ್ನಿಸುತ್ತವೆ. ನಂತರ ಕಚ್ಚಲು ಪ್ರಾರಂಭಿಸುತ್ತವೆ. ಮನುಷ್ಯನ ಕಿವಿಯ ಬಳಿಯಲ್ಲಿ ಗುಯ್‌ಗುಟ್ಟುತ್ತಾ ನಂತರ ಕಚ್ಚುತ್ತಾ ತಮ್ಮ ಆಸೆಯನ್ನು ತೀರಿಸಿಕೊಳ್ಳುತ್ತವೆ ಎಂದು ನಂಬುತ್ತಾರೆ. ಗಂಡು ಸೊಳ್ಳೆಗಳು ಭೂಲೋಕದಿಂದ ದೇವಲೋಕಕ್ಕೆ ಹೆಣ್ಣು ಕೇಳಲು ಹೋದವು. ದೇವೇಂದ್ರನ ಮಗಳನ್ನು ಕೇಳಿದವು. ಇಂದ್ರ ಆಷಾಢ ಮಾಸದಲ್ಲಿ ಬನ್ನಿ ಮದುವೆ ಮಾಡಿಕೊಡುತ್ತೇವೆ ಎಂದ. ಗಾಳಿಗೆ ಹಾರಲಾರದೆ ಸತ್ತವು.

**ಇಲಿ :** ಜನಪದರು ಯಾವುದೇ ಹಬ್ಬ ಅಥವಾ ಆಚರಣೆಯ ಸಂದರ್ಭದಲ್ಲಿ ಇಲಿಗೆಂದು ಒಲೆಯ ಮೇಲಿನ ಒಂದು ಮೂಲೆಯಲ್ಲಿ ಎಡೆಯನ್ನು ಹಾಕುತ್ತಾರೆ. ಇದನ್ನು ಮೂರು ದಿನಗಳವರೆಗೆ ಕದಲಿಸುವಂತಿಲ್ಲ. ಇಲಿಗಳೇ ಬಂದು ತಿಂದು ಹೋಗಬೇಕು. ಹೊಸಪೇಟೆಯ ಸುತ್ತಮುತ್ತಲಿನ ಕೆಲವು ಹಳ್ಳಿಗಳಲ್ಲಿ 'ಇಲಿಚಮ್ಮನ ಹಬ್ಬ'ವೆಂದು ಆಚರಿಸುತ್ತಾರೆ. ಇಲಿಗಳು ಮನೆಯಲ್ಲಿನ ಬಟ್ಟೆ-ಬರೆಗಳನ್ನು ಕಡಿಯದಿರಲೆಂಬ ಪ್ರಾರ್ಥನೆಯಿಂದ ಇಂಥ ಆಚರಣೆಯನ್ನು ಮಾಡುತ್ತಾರೆ. ಊರಿನ ಇಲಿಗಳನ್ನು ಯಾರೂ ತಿನ್ನುವುದಿಲ್ಲ. ಊರಾಚೆಯ ಪರಿಸರದಿಂದ ಇಲಿಗಳನ್ನು ಕೆಲವರು ತಿನ್ನುತ್ತಾರೆ.

**ಇರುವೆ : ಕಥೆ-ನಂಬಿಕೆ-ಐತಿಹ್ಯ :** ಇಂದ್ರನು ಸ್ವರ್ಗದ ಸೈನಿಕರನ್ನು ಯುದ್ಧಾನಂತರ ಭೂಮಿಗೆ ಕಳುಹಿಸಿದ. ಅಷ್ಟು ಸೈನ್ಯಕ್ಕೆ ಭೂಮಿಯು ಸಾಕಾಗುವುದಿಲ್ಲವೆಂದು ಸಣ್ಣ-ಸಣ್ಣ ಇರುವೆಗಳನ್ನಾಗಿ ಮಾಡಿದ. ಸೈನ್ಯದ ನಾಯಕರೆಲ್ಲ ಇರುವೆ ಗೊದ್ದಗಳಾದರು. ಆದ್ದರಿಂದಲೇ ಇವುಗಳಲ್ಲಿ ಸೈನ್ಯದ ಲಕ್ಷಣಗಳು, ಒಗ್ಗಟ್ಟು ಕಂಡುಬರುತ್ತದೆ ಎಂದು ಹೇಳುತ್ತಾರೆ. ಅಲ್ಲದೆ ಒಂದು ಇರುವೆ ಅಥವಾ ಗೊದ್ದ ಸತ್ತರೆ ಉಳಿದೆಲ್ಲವೂ ಹೊತ್ತು ಮಣ್ಣು ಮಾಡುತ್ತವೆ ಎಂಬುದಾಗಿ ಹೇಳುತ್ತಾರೆ. ಒಮ್ಮೊಮ್ಮೆ ಇರುವೆಗಳಿಗೆ ತೀರ್ಥಯಾತ್ರೆ ಕೈಗೊಳ್ಳಬೇಕು ಎನಿಸುತ್ತದೆಯಂತೆ. ಮನುಷ್ಯನನ್ನು ಪವಿತ್ರ ಬೆಟ್ಟವೆಂದು ತಿಳಿದು ಹತ್ತಲು ಪ್ರಯತ್ನಿಸುತ್ತವೆ. ಓಡಾಟ ಕಷ್ಟವಾದಾಗ ಕಚ್ಚುತ್ತವೆ. ಆಗ ಮನುಷ್ಯ ಹೊಸಕಿ ಹಾಕುತ್ತಾನೆ. ಸಾಯುತ್ತವೆ.

ತೀರ್ಥಯಾತ್ರೆಯಲ್ಲಿ ಪವಿತ್ರ ಮರಣ ಲಭಿಸಿದಂತೆ ಆಗುತ್ತದೆಯಂತೆ. ಇರುವೆಯ ಶ್ರಮದ ಬಗ್ಗೆ ಜನಪದರು ಅಪಾರ ಗೌರವವನ್ನು ಉಳಿಸಿಕೊಂಡಿದ್ದಾರೆ. "ಆನೆಯ ಭಾರ ಆನೆಗೆ ಹೆಚ್ಚು, ಇರುವೆಯ ಭಾರ ಇರುವೆಗೆ ಹೆಚ್ಚು"- ಎಂಬ ಗಾದೆ ಇರುವೆಯ ಅಸ್ತಿತ್ವಕ್ಕೆ ಇರುವ ಮಹತ್ವವನ್ನು ಹೇಳುತ್ತದೆ. ಪದಾರ್ಥದ ಪ್ರಮಾಣವನ್ನು ಅತಿ ಕಡಿಮೆ ಎಂದು ಹೇಳಲು ತೆಲುಗಿನಲ್ಲಿ "ಸೀಮಕ್ಕ ಸಿಳ್ಳಂತ" (ಇರುವೆಯ ಉಗುರಿನಷ್ಟು) ಎನ್ನುತ್ತಾರೆ. ಇರುವೆಗಳಿಗೆ ಸಕ್ಕರೆ ಅಕ್ಕಿಯನುಚ್ಚು ಇತ್ಯಾದಿಗಳನ್ನು ಹಾಕುವುದರಿಂದ ಪುಣ್ಯ ಬರುತ್ತದೆ ಎಂದು ಹೇಳುತ್ತಾರೆ.

**ಹೆಂಟೆಗೊದ್ದ :** ಇದನ್ನು ಕೊಂದು ಹೂಳಿದರೆ ದುಡ್ಡು ಸಿಗುತ್ತದೆಯೆಂದು ನಂಬಿಕೆ. ಮನೆಯಲ್ಲಿ ಓಡಾಡಿದರೆ ಅಡಿಗೆ ಹಳಸುತ್ತದೆಂದು ಹೇಳುತ್ತಾರೆ. ಹುಡುಗರು ಸಾಯಲಿ, ಹುಡುಗಿಯರು ಬದುಕಲಿ ಎಂದು ಪ್ರಾರ್ಥಿಸುತ್ತದೆಂದು ನಂಬಿಕೆ.

**ಸಂಜೀವಿನಿ ಹುಳು :** ಹೆಜ್ಜೇನು, ಕಟ್ರಂಗಿಗಳನ್ನು ಹೋಲುವ ಸಂಜೀವಿನಿ ಹುಳುವು ಕೀಟಗಳ ಜಾತಿಗೆ ಸೇರಿದುದು. ಆದರೆ ಇದನ್ನು ಜನಪದರು ಹುಳುವೆಂದು ಕರೆಯಲು ಕಾರಣವಿದೆ. ಮನೆಗಳ ಕಿಟಿಕಿ-ಬಾಗಿಲುಗಳ ಸರಳುಗಳಲ್ಲಿ ಅಥವಾ ಇತರೆ ಮೂಲೆಗಳು ಇಲ್ಲವೇ ಮನೆಯ ಮಾಡಿನ ತೊಲೆಗಳ, ಜಂತಿ ಇತ್ಯಾದಿಗಳಲ್ಲಿ ಈ ಕೀಟವು ಹಸಿಮಣ್ಣಿನ ಗೂಡನ್ನು ರಚಿಸಿಕೊಂಡಿರುತ್ತದೆ. ಹೂಜಿಯ ಆಕಾರದಲ್ಲಿ ಗೂಡನ್ನು ರೂಪಿಸಿಕೊಂಡು ಕೆಲವು ಹಸಿರು ಹುಳುಗಳನ್ನು ಹೊಯ್ದು ಗೂಡಿನಲ್ಲಿ ಬಂಧಿಸುತ್ತದೆ. ನಂತರ ಅವುಗಳ ಮೇಲೆ ತನ್ನ ಮೊಟ್ಟೆಗಳನ್ನು ಇಟ್ಟು ಕಾಪಾಡುತ್ತದೆ. ಮೊಟ್ಟೆಯೊಡೆದು ಹೊರಬಂದ ಮರಿಗಳು ಆ ಹುಳುಗಳನ್ನು ತಿಂದು ಬೆಳೆದು ರೆಕ್ಕೆ-ಪುಕ್ಕಗಳೊಂದಿಗೆ ಕೀಟಗಳಾಗಿ ಹೊರಬರುತ್ತವೆ.

ಈ ಪ್ರಕ್ರಿಯೆಯಲ್ಲಿ ಸಂಜೀವಿನಿಯು ಹಸಿರು ಹುಳುಗಳನ್ನು ಹಿಡಿದು ತಂದು ತನ್ನ ಗೂಡಿನಲ್ಲಿ ತುಂಬಿಸುವ ಕೆಲಸವು ಜನಪದರ ಕಣ್ಮನಗಳನ್ನು ಸೆಳೆಯುತ್ತದೆ. ಗುಯ್‌ಗುಟ್ಟುತ್ತಾ ಗೂಡಿನೊಳಕ್ಕೆ ಹಸಿರು ಹುಳುಗಳನ್ನು ತುಂಬಿಸಿಕೊಂಡ ನಂತರ ಗೂಡಿನ ದ್ವಾರವನ್ನು ಹಸಿ ಮಣ್ಣಿನಿಂದ ಮುಚ್ಚಿರುತ್ತದೆ. ಸ್ವಲ್ಪ ದಿನಗಳ ನಂತರ ಸಂಜೀವಿನಿ ಕೀಟಗಳು ಗುಯ್‌ಗುಡುತ್ತಾ ಹೊರಬಂದು ಹಾರಾಡುತ್ತಿರುತ್ತವೆ. ಇದನ್ನು ಜನರು ಬೇರೆಯದಾಗಿಯೇ ಭಾವಿಸುತ್ತಾರೆ. ಸಂಜೀವಿನಿ ಕೀಟವು ಹಸಿರು ಹುಳುಗಳನ್ನು ಗೂಡಿನಲ್ಲಿ ಸಂರಕ್ಷಿಸಿ ಸಂಜೀವಿನಿಕಡ್ಡಿಯನ್ನು ತಂದು ಅವುಗಳಿಗೆ ಸೋಕಿಸಿ ತನ್ನ ಮರಿಗಳನ್ನಾಗಿ ಮಾರ್ಪಡಿಸಿಕೊಳ್ಳುತ್ತದೆಯೆಂಬುದು ಒಂದು ನಿಲುವು. ಅದರ ಪ್ರಕಾರ ಹುಳುಗಳು ಸಂಜೀವಿನಿಯಿಂದ ಕೀಟಗಳಾಗುವುದರಿಂದ ಸಂಜೀವಿನಿ ಹುಳುಗಳೆಂದೇ ಪರಿಭಾವಿಸುತ್ತಾರೆ. ಇಲ್ಲಿ ಈ ಕೀಟದ ಮೊಟ್ಟೆಗಳು ಒಡೆದು ಮರಿಗಳಾಗಿ ಹೊರಬಂದು ಹಸಿರು ಹುಳುಗಳನ್ನು ತಿಂದು ಬೆಳೆದು ಕೀಟಗಳಾಗಿ

ಪರಿವರ್ತನೆಯಾಗುವುದು ಗೌಣವಾಗಿದೆ. ರೈತಾಪಿ ಜನರು ತಮ್ಮ ಮನೆಗಳಲ್ಲಿ ಸಂಜೀವಿನಿ ಗೂಡು ಕಟ್ಟುತ್ತಿದ್ದರೆ, ತಮ್ಮ ಕುಟುಂಬದಲ್ಲಾಗಲಿ, ದನ-ಕರುಗಳಲ್ಲಾಗಲಿ ಗರ್ಭ ನಿಂತಿರುವ ಸೂಚನೆಯೆಂದು ನಂಬುತ್ತಾರೆ. ಸಂಜೀವಿನ ಗೂಡು ಗರ್ಭಾಶಯದ ಆಕಾರಗಳನ್ನು ಹೋಲುವುದರಿಂದ ಈ ರೀತಿಯ ನಂಬಿಕೆಗೆ ಕಾರಣವಾಗಿರಬಹುದು.

**ಹೋತಿ :** ಹೋತಿಕ್ಯಾತ ತೊಂಡೆಕ್ಯಾತ ಎಂದೂ ಕರೆಯುತ್ತಾರೆ. ಪೊದೆ, ಕಲ್ಲಿನ ರಾಶಿ, ಹಾಳು ಗೋಡೆ ಹೀಗೆ ಊರಿನ ಆಸುಪಾಸಿನಲ್ಲಿ ಓಡಾಡಿಕೊಂಡಿರುತ್ತವೆ. ತಲೆಯಾಡಿಸುವುದು ಇದರ ಲಕ್ಷಣ. ಸಾಮಾನ್ಯವಾಗಿ ಇದು ಮನುಷ್ಯರನ್ನು ಕಚ್ಚುವುದಿಲ್ಲ. ಆಕಸ್ಮಿಕವಾಗಿ ಅದಕ್ಕೆ ತೊಂದರೆಯೊದಗಿದ ಸಂದರ್ಭಗಳಲ್ಲಿ ಕಚ್ಚಿದರೆ ಮಾಂಸ ಕಿತ್ತು ಬರುವಂತೆ ಕಚ್ಚುತ್ತದೆಯೆಂದು ಹೇಳುತ್ತಾರೆ. ಇದಕ್ಕೆ ಪಥ್ಯವಾಗಿ ಉಪ್ಪು-ಕಾರಗಳಿಲ್ಲದ ಸಪ್ಪೆ ಊಟವನ್ನು ಮಾಡಬೇಕೆನ್ನುತ್ತಾರೆ.

ಶೈಶವಾವಸ್ಥೆ ಹಾಗೂ ಬಾಲ್ಯಾವಸ್ಥೆಯಲ್ಲಿ ಮಕ್ಕಳು ಬೆಳವಣಿಗೆ ಇಲ್ಲದ ಸೊಣಕಲಾಗಿ ಶಕ್ತಿ ಗುಂದಿದರೆ ಅಂಥ ರೋಗವನ್ನು 'ತಲೆ ಮೇಲಿನ ಕಾಯಿಲೆ' ಎಂದು ಕರೆಯುತ್ತಾರೆ. ಇಂಥ ಕಾಯಿಲೆ ಇರುವವರಿಗೆ ಹೋತಿಯ ಮಾಂಸವನ್ನು ತಿನ್ನಿಸುತ್ತಾರೆ. ಇದರಿಂದ ರೋಗ ನಿವಾರಣೆಯಾಗುವುದಲ್ಲದೆ ಮಕ್ಕಳು ದಷ್ಟಪುಷ್ಟರಾಗುತ್ತಾರೆ. ಬಹುಪಾಲು ಜನ ಹೋತಿಯನ್ನು ಕೊಲ್ಲುವುದಿಲ್ಲ. ಕೊಂದವರು ಹೋತಿಯಂತೆಯೇ ಒಣಗಿ ಹೋಗುತ್ತಾರೆ (ದೈಹಿಕವಾಗಿ ನಶಿಸಿ ಹೋಗುತ್ತಾರೆ) ಎಂದು ನಂಬಿಕೆ. ಆದರೆ ಕೆಲವು ಜನ ಹೋತಿಯನ್ನು ಕೊಂದು ಮಣ್ಣಿನಲ್ಲಿ ಹೂತಿಟ್ಟರೆ ಹಣ ಸಿಗುತ್ತದೆಂದು ಹೇಳುತ್ತಾರೆ. ಹೀಗೇಕೆ ವೈರುಧ್ಯವೆಂಬುದಕ್ಕೆ ಐತಿಹ್ಯದಿಂದ ಸಮರ್ಥನೆ ಸಿಗುತ್ತದೆ. ಒಂದು ಗುಂಪಿನ ಜನರನ್ನು ಮತ್ತೊಂದು ಗುಂಪಿನವರು ಕೊಲ್ಲುತ್ತಾ ಹೋದರಂತೆ, ತಪ್ಪಿಸಿಕೊಂಡ ಕೆಲವು ಮಂದಿ ಭೂಗತರಾಗಿದ್ದರು. ಅಲ್ಲೊಂದು ಹೋತಿಕ್ಯಾತವು ತಲೆಯಾಡಿಸುತ್ತಿತ್ತು. ಹುಡುಕುತ್ತಾ ಹೋದವರು ಆ ಸ್ಥಳದಲ್ಲಿ ಹುಡುಕಾಟ ಮಾಡಿದರು. ಭೂಗತರು ಸಿಕ್ಕಿಬಿದ್ದರು. ಹೀಗೆ ಸಿಕ್ಕಿಬಿದ್ದ ಗುಂಪಿನವರಿಗೆ ಹೋತಿಯ ಬಗ್ಗೆ ಮತ್ಸರವಾಯಿತು. ಹುಡುಕಾಟದಲ್ಲಿದ್ದ ಗುಂಪಿನವರಿಗೆ ಮೆಚ್ಚುಗೆಯಾಯಿತು. ಇವೆರಡು ಕಾರಣಗಳು ಹೋತಿಯ ಅಳಿವು - ಉಳಿವುಗಳನ್ನು ರೂಪಿಸುವಂಥವು."[19]

**ನಂಬಿಕೆ :** ಕೈಮದ್ದು ಮಾಡುವವರು ಹೋತಿಯನ್ನು ಕತ್ತರಿಸಿ ನೇತು ಹಾಕಿ ತೊಟ್ಟಿಕ್ಕುವ ರಕ್ತದಲ್ಲಿ ಅಡಿಕೆಯನ್ನು ನೆನಸಿ ಚೆನ್ನಾಗಿ ಒಣಗಿಸಿ ಇಟ್ಟುಕೊಂಡಿರುತ್ತಾರೆ. ತಮ್ಮ ಮತ್ಸರಿಗಳಿಗೆ ನೀಡುತ್ತಾರೆ. ಆ ಅಡಿಕೆಯನ್ನು ತಿಂದವರು ನಿಧಾನವಾಗಿ ನಶಿಸಿ ನಶಿಸಿ ಸಾಯುತ್ತಾರೆಂದು ಹೇಳುತ್ತಾರೆ. ಮಕ್ಕಳ ಅಶಕ್ತತೆಗೆ ಮದ್ದಿನ ರೂಪದಲ್ಲಿ ಹೋತಿಯನ್ನು ಸುಟ್ಟು ತಿನ್ನಿಸುವುದಕ್ಕೂ ನಂಬಿಕೆಗೂ ವೈರುಧ್ಯತೆಯಿದೆ. ಆದರೂ

ನಂಬಿಕೆಯ ಜನಪ್ರಿಯತೆ ದೆವ್ವದ ಜೊತೆ ಮಾತನಾಡಿದವರ ಪರಾಕ್ರಮದಂತೆ ರಂಜನೀಯವಾಗಿರುತ್ತದೆ. ಯಾವುದೋ ಪೊದೆಯಲ್ಲಿ ಹೋತಿಯನ್ನು ಕತ್ತರಿಸಿ ನೇತು ಹಾಕಿತ್ತೆಂದು., ಅದರ ಅಡಿಯಲ್ಲಿ ಒಂದು ಹಿಡಿಯಷ್ಟು ಅಡಿಕೆಯನ್ನು ಮಣ್ಣಿನ ಬೋಕಿಯಲ್ಲಿಟ್ಟು ಹೋತಿಯ ರಕ್ತದಿಂದ ನೆನಸಲಾಗಿತ್ತೆಂದೂ, ಕಂಡ ವ್ಯಕ್ತಿಯು ಅಡಿಕೆಯನ್ನು ಸುಟ್ಟು ಹಾಕಿದುದಾಗಿಯೂ ಹೇಳಿಕೊಳ್ಳುತ್ತಾರೆ. ಕೈನೋಡಿ ಶಾಸ್ತ್ರ ಹೇಳುವವರು ಇಲ್ಲವೇ ಮೈಮೇಲೆ ಬಂದು ಶಾಸ್ತ್ರ ಹೇಳುವ ಕೆಲವು ದೆವ್ವ - ದೇವತೆಗಳು "ನಿನಗೆ ಹೋತಿಯ ರಕ್ತದಲ್ಲಿ ಕೈಮದ್ದು ಹಾಕಿದ್ದಾರೆ. ಅದು ಹೊಟ್ಟೆಯಲ್ಲಿ ಉಳಿದುಬಿಟ್ಟಿದೆ" ಎಂದು ಹೇಳುತ್ತಾರೆ. ಆಗ ಆ ಮದ್ದನ್ನು ತೆಗೆಸಲು ಮದ್ದು ತೆಗೆಯುವ ಪರಿಣಿತರ ಬಳಿಗೆ ಹೋಗುತ್ತಾರೆ.

ಕೈಮದ್ದು ತೆಗೆಯುವವರು ಬಿಸಿನೀರಿಗೆ ಬೆಣ್ಣೆಯನ್ನು ಹಾಕಿ, ಹೊಟ್ಟೆ ತುಂಬುವಷ್ಟು ಕುಡಿಸುತ್ತಾರೆ. ನಂತರ ವಿಳೇದೆಲೆಯ ರಸದೊಂದಿಗೆ ಗಿಡಮೂಲಿಕೆಗಳ ಪುಡಿಯನ್ನು ಮಿಶ್ರಮಾಡಿ ತಿನ್ನಿಸುತ್ತಾರೆ. ಇದರಿಂದ ಅತಿಯಾದ ವಾಂತಿಯಾಗುತ್ತದೆ. ಆ ವಾಂತಿಯೊಂದಿಗೆ ಬಿದ್ದ ಪದಾರ್ಥವೆಲ್ಲವೂ ಹೊಟ್ಟೆಯಲ್ಲಿ ಬೆಳೆದುಕೊಂಡಿದ್ದ ಕೈಮದ್ದು ಎಂದು ಹೇಳುತ್ತಾರೆ. ಖಾಲಿ ಹೊಟ್ಟೆಯಲ್ಲಿ (ಏನೂ ತಿನ್ನದೆ) ಕೈ ಮದ್ದಿನ ಚಿಕಿತ್ಸೆಯನ್ನು ಪಡೆಯಬೇಕೆಂಬ ನಿಯಮವಿದೆ. ಕೈಮದ್ದನ್ನು ತೆಗೆದ ನಂತರ ವ್ಯಕ್ತಿಯು ನಿಶ್ಚಿಂತನಾಗುತ್ತಾನೆ. ಹೀಗೆ ಹೋತಿಯ ಬಗ್ಗೆ ಜನಪದರಲ್ಲಿ ವಿವಿಧ ನಿಲುವುಗಳಿವೆ.

**ಹಾವುರಾಣಿ :** ಇದನ್ನು ನಾಗಲೋಕದ ನಾಗರಾಜನ ಗೂಢಚರನೆಂದು ನಂಬುತ್ತಾರೆ. ಜನರು ಮಾಡುವ ತಪ್ಪುಗಳನ್ನು ಗಮನಿಸಿ ನಾಗರಾಜನಿಗೆ ವರದಿ ಮಾಡುವುದು ಇದರ ಕೆಲಸ ಎಂಬುದು ನಂಬಿಕೆ. ಈ ವಿಷಯವನ್ನು ಆಟವಾಡುವ ಮಕ್ಕಳಿಗೆ ಹೇಳುತ್ತಾರೆ. ಮಕ್ಕಳು ಹಾವುರಾಣಿಯನ್ನು ಕಂಡರೆ ಸಾಕು "ಹಾವುರಾಣಿ ಹಾವುರಾಣಿ ನನ್ನ ಹೆಸರು ............ ನಾಗಪ್ಪನಿಗೆ ಹೇಳಬೇಡ ಹೇಳಬೇಡ" ಎಂದು ಪ್ರಾರ್ಥಿಸುತ್ತಾರೆ. (ನಲಕ್ರಿ ನಲಕ್ರಿ ನಾ ಪೇರು ...... ನಾಗಪ್ಪಕಿ ಚೆಪ್ಪೊದ್ದು ಚೆಪ್ಪೊದ್ದು......) ಹೀಗೆ ಪ್ರಾರ್ಥಿಸದಿದ್ದರೆ ಹಾವುರಾಣಿಯಿಂದ ನಾಗರಾಜನಿಗೆ ವಿಷಯ ಮುಟ್ಟಿ, ಆತನು ಬಂದು ನಿದ್ರೆಯ ಹೊತ್ತಿನಲ್ಲಿ ಕಣ್ಣುಗಳನ್ನು ಕುಕ್ಕಿ ಕುರುಡು ಮಾಡುತ್ತಾನೆಯೆಂಬುದಾಗಿ ನಂಬಿಕೆಯು ಮುಂದುವರೆಯುತ್ತದೆ.

**ಕಥೆ (ಐತಿಹ್ಯ) :** ಮೊದಲಿಗೆ ಹಾವುಗಳಿಗೆ ಕಾಲುಗಳಿದ್ದವು. ಹಾವುರಾಣಿಗಳಲ್ಲಿ ವಿಷವಿತ್ತು. ಒಮ್ಮೆ ಹಾವಿನ ಕಾಲುಗಳು ಹಾವುರಾಣಿಗೂ, ಹಾವುರಾಣಿಯ ವಿಷ ಹಾವಿಗೂ ಶಾಶ್ವತವಾಗಿ ಬದಲಾಯಿಸಿಕೊಂಡವು. ಅಂದಿನಿಂದ ಹಾವುಗಳಿಗೆ ಕಾಲುಗಳಿಲ್ಲ. ಹಾವುರಾಣಿಗಳಿಗೆ ವಿಷವಿಲ್ಲ ಎನ್ನುತ್ತಾರೆ. ಸಹಜವಾಗಿಯೂ ಹಾವುರಾಣಿ ಕಚ್ಚುವುದಿಲ್ಲ. ಆಟವಾಡುವ ಹಳ್ಳಿಗಾಡಿನ ಹುಡುಗರು ಆಯಾ ಪರಿಸದಲ್ಲಿ ಕಾಣಿಸುವ ಜೀವಿಗಳನ್ನು ಕೊಲ್ಲುವುದು ಹುಡುಗಾಟಿಕೆ. ಆದ್ದರಿಂದ ಮಕ್ಕಳಿಂದ ಇಂಥ ನಿರುಪದ್ರವ ಜೀವಿಗಳನ್ನು ಉಳಿಸಿಕೊಳ್ಳಲು ಜನಪದರು ಹೀಗೆ ನಂಬಿಕೆ ಮತ್ತು ಕಥೆಗಳನ್ನು ಕಟ್ಟಿಕೊಂಡಿರಬಹುದೆಂದು ಅನಿಸುತ್ತದೆ.

**ಕೋತಿ :** ಮನುಷ್ಯ ಸಂತತಿಗೆ ಮಂಗ ಮೂಲವೆಂಬ ಸಿದ್ಧಾಂತವನ್ನು ಜನಪದರು ರಾಮಾಯಣದ ಮೂಲಕ ಅರ್ಥೈಸಿಕೊಂಡಿದ್ದಾರೆ. ಶ್ರೀರಾಮಭಂಟ ಹನುಮಂತ ಹಾಗೂ ವಾನರ ವೀರರಾದ ವಾಲಿ - ಸುಗ್ರೀವ ಇತ್ಯಾದಿ ಪೌರಾಣಿಕ ಪಾತ್ರಗಳಿಂದ ಮಂಗ ಮತ್ತು ಮನುಷ್ಯನ ಸಂಬಂಧಾಂತರಗಳನ್ನು ಕಟ್ಟಿಕೊಳ್ಳುತ್ತಾರೆ. ಕೋತಿಯನ್ನು ಆಂಜನೇಯನೆಂದು ಪರಿಭಾವಿಸುವುದರಿಂದ ಅದನ್ನು ಹೊಡೆಯುವುದಾಗಲಿ, ಕೊಲ್ಲುವುದಾಗಲಿ ಬಯಲುಸೀಮೆಯ ಜನರಲ್ಲಿ ನಿಷಿದ್ಧ. ಹೀಗೆ ನಿಯಮಮೀರಿ ಕೊಂದರೆ ಅಂಥವರ ಸಂತತಿಯಲ್ಲಿ ಮಂಗನ ಚಹರೆಯ ಮಕ್ಕಳು ಹುಟ್ಟುತ್ತವೆ ಎಂಬ ನಂಬಿಕೆಯಿದೆ. ಗ್ರಾಮೀಣ ಪ್ರದೇಶದಲ್ಲಿ ಬುದ್ಧಿಮಾಂದ್ಯ ಮಕ್ಕಳು ಹುಟ್ಟಿದರೆ ಆ ಕುಟುಂಬದ ಹಿರಿಯರು ಯಾರೋ ಕೋತಿಗೆ ಹಿಂಸೆ ಮಾಡಿದ್ದಾರೆಂದು ಯೋಚಿಸುತ್ತಾರೆ. ಹೀಗೆ ಊರಿನಲ್ಲಿ ರಾಜಾರೋಷವಾಗಿ ಕೋತಿಗಳು ಅಡ್ಡಾಡಲು ಅವಕಾಶ ನೀಡುತ್ತಾರೆ. ಕೇವಲ ಹೆದರಿಕೆ ಬೆದರಿಕೆಗಳಿಂದ ಗದರಿಸುತ್ತಾರಷ್ಟೇ.

ಸಾಮಾನ್ಯವಾಗಿ ಕೋತಿಯು ಸತ್ತರೆ, ಊರಿನ ಜನರೆಲ್ಲ ಶವಸಂಸ್ಕಾರ ಮಾಡುತ್ತಾರೆ. ಸಾಮಾನ್ಯ ಮನುಷ್ಯನಿಗೆ ಮಾಡುವ ಅಂತ್ಯಕ್ರಿಯೆಗಳನ್ನು ತಿಥಿಯನ್ನು ಮಾಡುತ್ತಾರೆ. ಅವಿವಾಹಿತರಿಗೆ ಅನ್ವಯವಾಗುವ ಅಂತ್ಯಕ್ರಿಯೆಗಳನ್ನು ಮಾಡುತ್ತಾರೆ. ಕೋತಿಯ ಕುಣಿತದ ಜನಪದ ಕಲೆಗೆ ಇಂದಿಗೂ ಪ್ರಾಶಸ್ತ್ಯವಿದೆ. ಮನುಷ್ಯನ ಚಂಚಲ ಸ್ವಭಾವವನ್ನು ಕೋತಿಗೆ ಹೋಲಿಸುವುದು ಸರ್ವೇಸಾಮಾನ್ಯ. ಆದ್ದರಿಂದಲೇ ಕೆಲವರನ್ನು 'ಕೋತಿ' ಎಂದು ಸಂಭಾಷಣೆ ಆಡುನುಡಿಗಳಲ್ಲಿ ಬಳಸಿಕೊಳ್ಳುತ್ತಾರೆ. "ಕೋತಿಗೆ ಹೆಂಡ ಕುಡಿಸಿದ ಹಾಗೆ ಆಡ್ತಾರೆ" ಎಂಬ ಮಾತು ಮನುಷ್ಯನ ಚಂಚಲತೆಗೆ ಉತ್ತೇಜನ ನೀಡುವ ಸಂದರ್ಭವನ್ನು ನೀಡಿದ್ದಾಗಿರುತ್ತದೆ. ಕೋತಿಗೆ ದೈವದ ಮಹತ್ವವಿರುವುದರಿಂದ ಕೆಲವು ದೇವಾಲಯಗಳ ಪ್ರದೇಶದಲ್ಲಿ ಹೇರಳವಾಗಿರುತ್ತವೆ. ಕೆಲವು ಕಡೆ ಅವುಗಳಿಗೆಂದು ಮಾನ್ಯಗಳನ್ನು ಬಿಟ್ಟಿರುತ್ತಾರೆ. ಪ್ರತಿದಿನ ಅನ್ನವನ್ನು ಹಾಕುತ್ತಾರೆ. ಬಯಲು ಸೀಮೆಯ ಬೆಟ್ಟ ಪ್ರದೇಶಗಳಲ್ಲಿ ಕಪ್ಪು ಮುಖದ ಮುಸಿಯಗಳು ಕಂಡುಬರುತ್ತವೆ. ಅವು ಯುವತಿಯರ ಮೇಲೆ ಅತ್ಯಾಚಾರ ಮಾಡುತ್ತವೆಂದು ನಂಬಿಕೆ. ಛಾವಣಿಯಿಲ್ಲದೆ ತೆರೆದ ಬಚ್ಚಲಿನಲ್ಲಿ ಸ್ನಾನ ಮಾಡುತ್ತಿದ್ದವಳನ್ನು ಮುಸಿಯ ಹಿಡಿದುಕೊಂಡಿತೆಂಬ ಕತೆಗಳು ತಿರುವುಗಳನ್ನು ಪಡೆಯುತ್ತಿರುತ್ತವೆ.

**ಕರಡಿ :** ಬಯಲುಸೀಮೆಯ ಗುಡ್ಡ ಪ್ರದೇಶದ ಜನರಿಗೆ ಕರಡಿಗಳ ಭಯ ಜಾಸ್ತಿ. ಹೆಣ್ಣು ಕರಡಿಗೆ ಗಂಡಸರೂ ಗಂಡು ಕರಡಿಗೆ ಹೆಂಗಸು ಸಿಕ್ಕಿಬಿದ್ದರೆ ಗುಹೆಗೆ ಹೊತ್ತೊಯ್ದು ಲೈಂಗಿಕ ಕಿರುಕುಳವನ್ನು ನೀಡುತ್ತವೆಂದು ಹೇಳುತ್ತಾರೆ. ಹೀಗೆ ಕರಡಿಯ ಕಾಟಕ್ಕೆ ಸಿಕ್ಕಿದವರ ಬಗ್ಗೆ ಆಗಾಗ ವದಂತಿಗಳಾಗುತ್ತಿರುತ್ತದೆ. ಮರಿಗಳನ್ನು ಬೆಳೆಸುವ ಹಂತದಲ್ಲಿ ತಾಯಿ ಕರಡಿಯ ದೃಷ್ಟಿಗೆ ಮನುಷ್ಯ ಎಷ್ಟೇ ದೂರದಿಂದ ಕಂಡರೂ ಅಟ್ಟಿಸಿಕೊಂಡು ಹೋಗಿ ಕೊಂದುಬಿಡುತ್ತದೆ ಎಂಬ ಹೆದರಿಕೆಯೂ ಇದೆ. ಸೆರೆ ಸಿಕ್ಕವರನ್ನು ಹೊತ್ತೊಯ್ದು

ಕರಡಿಗಳು ಗುಹೆಯಲ್ಲಿ ಬಂಧಿಸಿ ಕಾಡಿನಲ್ಲಿ ಬೇಕಾದ ಹಣ್ಣು ಜೇನು ಇತ್ಯಾದಿಯನ್ನು ಕಿತ್ತು ತಂದು ತಿನ್ನಲು ನೀಡುತ್ತವೆಯಂತೆ. ಹಾಗೆ ಕರಡಿಯು ಆಚೆಗೆ ಹೋಗುವಾಗ ಮನುಷ್ಯನು ತಪ್ಪಿಸಿಕೊಳ್ಳಬಾರದೆಂದು ಗುಹೆಯ ಬಾಗಿಲಿಗೆ ದೊಡ್ಡ ಬಂಡೆಯನ್ನು ಅಡ್ಡ ಹಾಕುತ್ತವೆ. ತಂದ ಹಣ್ಣು - ಜೇನುಗಳನ್ನು ಮೆದ್ದಿ ತಿನ್ನಲು ರುಚಿಯಾದ ಪದಾರ್ಥವನ್ನು ಮಾಡಿಕೊಡುತ್ತವಂತೆ. ಆದರೆ ನಿರಂತರ ಲೈಂಗಿಕ ಕಿರುಕುಳವನ್ನು ನೀಡುತ್ತವೆ. ಕರಡಿಗೆ ಸಿಕ್ಕಿದ ಮನುಷ್ಯರಿಗೆ ಸೆರೆಯಿಂದ ಬಿಡುಗಡೆ ಇಲ್ಲ ಎಂದು ಹೇಳುತ್ತಾರೆ. ಸಮಾಜದಲ್ಲಿ ಅತಿ ಕಾಟ ಕೊಡುವ ಅತ್ತೆಯ ಬಗ್ಗೆ, ಅಥವಾ ಗಂಡನ ಕಿರುಕುಳದ ಬಗ್ಗೆ ಮಾತನಾಡುವಾಗ 'ಅದು ಕರಡಿ ಕಾಟ' ಎಂಬುದಾಗಿ ಸಂಕೇತಿಸುತ್ತಾರೆ.

ಕರಡಿಗಳನ್ನು ಜಾಂಬುವಂತನ ಅವತಾರವೆಂದು ನಂಬುವುದರಿಂದ ಕರಡಿಯ ಕುಣಿತದ ಜನಪದ ಕಲೆಯನ್ನು ಪೋಷಿಸುತ್ತಾರೆ. ಕರಡಿಯನ್ನು ಕುಣಿಸುತ್ತಾ ಮನೆ ಮನೆಗೆ ಭೇಟಿ ನೀಡಿದಾಗ ನಿದ್ದೆಯಲ್ಲಿ ಕನವರಿಸುವ ಮಕ್ಕಳನ್ನು ರಾತ್ರಿ ಹಾಸಿಗೆಯಲ್ಲಿಯೇ ಮೂತ್ರ ಮಾಡಿಕೊಳ್ಳುವ ಹುಡುಗರನ್ನು ಭೀತಿಯಿಂದ ಅಸ್ವಸ್ಥರಾದ ಬಾಲಕ-ಬಾಲಕಿಯರನ್ನು ಕರಡಿಯ ಮೇಲೆ ಕೂಡಿಸುತ್ತಾರೆ. ಹಾಗೂ ಕರಡಿಯ ರೋಮಗಳನ್ನು ಕಟ್ಟಿಕೊಳ್ಳಲು ನೀಡುತ್ತಾರೆ. ಅವುಗಳನ್ನು ತಾಯಿತದಲ್ಲಿ ತುಂಬಿಸಿ ತೋಳಿಗೆ, ಕೊರಳಿಗೆ ಅಥವಾ ಸೊಂಟದ ಉಡದಾರಕ್ಕೆ ಕಟ್ಟಿಕೊಂಡರೆ ಎಲ್ಲ ಭೀತಿ-ಭಯಗಳು ನಿವಾರಣೆಯಾಗುತ್ತವೆಂದು ನಂಬಿಕೆ. ಹೆಣ್ಣು ಕರಡಿ ಗಂಡಸರನ್ನು ಅಪಹರಿಸಿ ಗುಹೆಯಲ್ಲಿ ಬಂಧಿಸಿ ಕಾಟ ಕೊಡುತ್ತದೆ. (ಲೈಂಗಿಕ ಕಿರುಕುಳ ನೀಡುತ್ತದೆ ಎಂಬುದೊಂದು ನಂಬಿಕೆ). ಅದಕ್ಕೆ ಸಂಬಂಧಿಸಿದ ಐತಿಹ್ಯ: ಕುರುಬರ ಹೆಣ್ಣೊಬ್ಬಳು ಗಂಡನೊಂದಿಗೆ ತನ್ನ ತೌರಿಗೆ ಹೋಗುತ್ತಿದ್ದಳು. ಗಂಡನಿಗೆ ಅವಳನ್ನು ಕರಡಿಯ ವೇಷದಲ್ಲಿ ನೋಡಲು ಮನಸ್ಸಾಯಿತು. ಅದರಂತೆ ಅವಳು ಮರದ ಮರೆಗೆ ಹೋಗಿ ಕರಡಿಯ ವೇಷ ಹಾಕಿಕೊಂಡು ಬಂದಳು. ಮತ್ತೆ ಅವಳು ಮನುಷ್ಯಳಾಗಬೇಕಾದರೆ ಮರಳನ್ನು (ಮಣ್ಣನ್ನು) ಅವಳ ಮೇಲಕ್ಕೆ ಹಾಕಬೇಕಿತ್ತು. ಗಂಡ ಅದನ್ನು ಮರೆತ. ಅವಳು ಶಾಶ್ವತವಾಗಿ ಹೆಣ್ಣು ಕರಡಿಯಾಗಿ ಉಳಿದಳು. ಅವನು ಕರಡಿಯನ್ನು ಆಡಿಸುತ್ತಾ ಹೋದ. ಆ ಸಂತತಿಯವರಿಗೆ ಕರಡಿಯನ್ನು ಆಡಿಸುವುದು (ಕುಣಿಸುವುದು) ವೃತ್ತಿಯಾಯಿತು.

**ಕತ್ತೆ :** ಸಮಯ ಪ್ರಜ್ಞೆ ಅಥವಾ ವಸ್ತು ವಿಶೇಷದ ಮೌಲ್ಯವನ್ನು ಅರಿಯದ ಜನರನ್ನು "ನೀನು ಕತ್ತೆ" ಅಥವಾ "ಏ ಕತ್ತೆ" ಎಂದು ಗದರಿಸುತ್ತಾರೆ. ಈ ಹಿನ್ನೆಲೆಯಲ್ಲಿಯೇ 'ಕತ್ತೆಗೇನು ಗೊತ್ತು ಕಸ್ತೂರಿ ಪರಿಮಳ' ಎಂಬ ಗಾದೆಯು ಬಳಕೆಯಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಸೌದೆ ಮಾರುವವರು ಸುಣ್ಣ ಉಪ್ಪು ಮಾರುವವರು ಅಗಸರು ಇತ್ಯಾದಿ ಜನ ಕತ್ತೆಗಳ ಮೇಲೆ ತಮ್ಮ ಸರಕುಗಳನ್ನು ಹೇರಿ ಊರಿಂದ ಊರಿಗೆ ಓಡಾಡಿ ವ್ಯಾಪಾರ ನಡೆಸುತ್ತಾರೆ. ಹಿಂದಿನ ಕಾಲದಲ್ಲಿ ಕತ್ತೆಗಳಿಂದ ಬೇಸಾಯ ಮಾಡುತ್ತಿದ್ದರು.

ಈಗಲೂ ಕೆಲವು ದೇಶಗಳಲ್ಲಿ ಕತ್ತೆಗಳನ್ನು ಬೇಸಾಯಕ್ಕೆ ಬಳಸಿಕೊಳ್ಳುತ್ತಾರೆ ಎಂಬುದು ಜನಪದರ ನಂಬಿಕೆ. ಭಾರವನ್ನು ಸಹಿಸುವ ಸಹನೆ ಕತ್ತೆಗೆ ಇದ್ದರೂ ಬೆನ್ನ ಮೇಲಿರುವ ವಸ್ತುವಿನ ಮಹತ್ವ ಕತ್ತೆಗೆ ಗೊತ್ತಿರುವುದಿಲ್ಲವೆಂಬುದೇ ಕತ್ತೆಯ ಕುರಿತಂತೆ ಜನಪದರಿಗೆ ಇರುವ ಅಲಕ್ಷ. ಅಗಸರು ಬಟ್ಟೆಯ ಮೂಟೆಗಳನ್ನು ಕತ್ತೆಯ ಬೆನ್ನ ಮೇಲೆ ಹೊರಿಸಿ ನದಿ ಹಳ್ಳ ಕಾಲುವೆಗಳಲ್ಲಿ ಬಟ್ಟೆಗಳನ್ನು ಒಗೆದು ಒಣಗಿಸುತ್ತಾರೆ. ನಂತರ ಕತ್ತೆಗಳ ಮೇಲೆ ಹೊರಿಸಿ ಊರಿಗೆ ತರುತ್ತಾರೆ. ಇತರೆ ಭಾರಕ್ಕೆ ಹೋಲಿಸಿದರೆ ಬಟ್ಟೆಗಳ ಭಾರವು ಕತ್ತೆಗೆ ಹಿತವೆನಿಸಬಹುದು. ಅಗಸ ಮತ್ತು ಕತ್ತೆಗಳಿಗೆ ಅನೋನ್ಯವಾದ ವೃತ್ತಿ ಸಂಬಂಧವಿದೆ.

**ಕಥೆ :** ಒಮ್ಮೆ ಕತ್ತೆಗೆ ಅಗಸನ ಮನೆ ಬೇಸರವೆನಿಸಿತು. ಅವನಿಂದ ತಪ್ಪಿಸಿಕೊಂಡು ಹೊರಟಿತು. ಸುಣ್ಣ ಮಾರುವವನು ಹಿಡಿದು ಸುಣ್ಣದ ಮೂಟೆಗಳನ್ನು ಹಾಕಿ ಸಾಗಿಸಿದ. ಮಳೆ ಬಂದು ಸುಣ್ಣ ನೆನೆದು ಸೋರಿತು. ಬೆನ್ನೆಲ್ಲ ಗಾಯಗಳಾಗಿ ಚರ್ಮ ಕಿತ್ತು ಬಂತು. ಅವನಿಂದ ತಪ್ಪಿಸಿಕೊಂಡು ಸಾಗಿತು. ಸೌದೆ ಮಾರುವವನಿಗೆ ಸಿಕ್ಕಿತು. ಅವನು ಸೌದೆಯ ಹೊರೆಗಳನ್ನು ಹೇರಿದ ಅವು ಚುಚ್ಚಿ ಒತ್ತಿ ಗಾಯಗಳಿಂದ ರಕ್ತ ಚಿಮ್ಮಿತು. ಅವನಿಂದಲೂ ಜಾರಿಕೊಂಡು ಹೋಗುತ್ತಿತ್ತು. ಉಪ್ಪು ಮಾರುವವನು ಹಿಡಿದು ಉಪ್ಪಿನ ಮೂಟೆಗಳನ್ನು ಹಾಕಿದ. ಮಳೆಗೆ ಸಿಕ್ಕಿ ಉಪ್ಪು ಕರಗಲಾರಂಭಿಸಿತು. ಕತ್ತೆಯ ಗಾಯಗಳು ಉರಿಯಲಾರಂಭಿಸಿದವು. ಕೊನೆಗೆ ಅಲ್ಲಿಂದ ಜಾಗ ಖಾಲಿ ಮಾಡಿ ಮತ್ತೆ ಅಗಸನ ಮನೆಗೆ ಹೋಯ್ತು. ಅವನು ಅದರ ಗಾಯಗಳಿಗೆಲ್ಲ ಔಷಧಿ ಹಚ್ಚಿ ಆರೈಕೆ ಮಾಡಿ, ಬೆನ್ನ ಮೇಲೆ ಬಟ್ಟೆಯ ಮೂಟೆಗಳನ್ನು ಹೊರಸಿದ. ಅವು ಮೆತ್ತಗೆ ಇದ್ದದ್ದರಿಂದ ಹಿತವೆನಿಸಿತು. ಅಂದಿನಿಂದ ಕತ್ತೆ ಅಗಸನನ್ನು ತೊರೆಯಲಿಲ್ಲ. ಇದು ಅಗಸನ ವೃತ್ತಿ ಮತ್ತು ಕತ್ತೆಯ ಸಂಬಂಧದ ಬಗ್ಗೆ ಇರುವ ಐತಿಹ್ಯ.

ಕತ್ತೆಯನ್ನು ವಾಸುದೇವನ ಅವತಾರವೆನ್ನುತ್ತಾರೆ. ಆದರೆ ಪೂಜಿಸುವುದಿಲ್ಲ. ಅತೀಉಗ್ರವಾದ ಅಪಮಾನವನ್ನು ಕತ್ತೆಯ ಮೆರವಣಿಗೆಯ ಮೂಲಕ ಮಾಡುತ್ತಾರೆ. ಕುದುರೆಯ ಮೆರವಣಿಗೆ ಘನತೆಯ ಸಂಕೇತವಾಗುತ್ತದೆ. ಕತ್ತೆಯು ಕಿರುಚುವಾಗ ಚಿಕ್ಕ ಹುಡುಗರು ಬೆತ್ತಲೆಯಾಗಿದ್ದರೆ ಗಂಡು ಕತ್ತೆಯ ಜನನಾಂಗದ ಹಾಗೆಯೇ ಇವರಿಗೂ ಉದ್ದವಾಗುತ್ತದೆಂದು ನಂಬಿಕೆ. ಇದು ಚೆಡ್ಡಿ ಹಾಕದ ಹುಡುಗರನ್ನು ಹೆದರಿಸಲು ಮಾಡಿದ ತಂತ್ರವೂ ಇರಬಹುದು.

**ಪಕ್ಷಿಗಳು ಗಿಣಿ - ಗೊರವಂಕ :** ಅನೋನ್ಯವಾದ ದಾಂಪತ್ಯ ಸಂಬಂಧವನ್ನು ಗಿಣಿ-ಗೊರವಂಕಗಳಿಗೆ ಹೋಲಿಸುತ್ತಾರೆ. ಆದರೆ ಗಿಣಿ-ಗೊರವಂಕಗಳು ಪ್ರತ್ಯೇಕ ಜಾತಿಯ ಪಕ್ಷಿಗಳು. ಇವು ಜೊತೆಯಲ್ಲಿಯೂ ಇರುವುದಿಲ್ಲ. ಕೆಲವು ಜಾತಿಯ ಗಿಳಿಗಳು ಗೊರವಂಕದ ಹಾಗೆ ಬೂದುಬಣ್ಣವನ್ನು ಹೊಂದಿದ್ದು ಕೆಂಪು

ಕೊಕ್ಕನ್ನು ಹೊಂದಿರುತ್ತವೆ. ಇವು ಅಪರೂಪವಾಗಿರುತ್ತವೆ. ಹಸಿರು ಬಣ್ಣದ ರೆಕ್ಕೆಗಳ ಕೆಂಪು ಕೊಕ್ಕಿನ ಗಿಳಿಗಳೇ ಹೆಚ್ಚು. ಈ ಎರಡು ಪ್ರಭೇದಗಳ ಗಿಳಿಗಳು ಜೊತೆಗಿರುವುದು ನೋಡುಗರಿಗೆ ಗಿಣಿ - ಗೊರವಂಕದ ಜೋಡಿಗೆ ನಿದರ್ಶನವಾಗಿರಬಹುದು. ಮುದ್ದು - ಮುದ್ದಾದ ಮಾತಿನ ಶೈಲಿಯನ್ನು ಗಿಣಿ ಭಾಷೆಯೆಂದು ಸಂಕೇತಿಸುತ್ತಾರೆ. ಮನನವಾಗದ ಕೇವಲ ಅನುಕರಣೆಯನ್ನು ಗಿಣಿಪಾಠ ಒಪ್ಪಿಸುವುದು ಎನ್ನುತ್ತಾರೆ. ಕಾರಣ ಗಿಳಿಯ ಸ್ವರವು ಬಹಳ ಮುದ್ದಾಗಿರುತ್ತದೆ. ಸಾಕು ಗಿಳಿಗೆ ಏನು ಹೇಳಿಕೊಟ್ಟರೂ ಅದನ್ನು ಹೇಳಲು ಪ್ರಯತ್ನಿಸುತ್ತದೆ. ಇಂಥ ಕಲೆಗಾರಿಕೆಯನ್ನು ಮನುಷ್ಯ ರಂಜನೆಗೋಸ್ಕರ ಮಾಡಿಕೊಂಡಿರುತ್ತಾನೆ. ಇದನ್ನೆ ಮುಂದುವರಿದು ಕೆಲವು ವೃತ್ತಿ ಕಲಾವಿದರು ಗಿಣಿಶಾಸ್ತ್ರವೆಂಬ ಭವಿಷ್ಯ ನೋಡುವ ಕಲೆಯನ್ನು ರೂಢಿಸಿಕೊಂಡಿದ್ದಾರೆ. ಗಿಣಿಶಾಸ್ತ್ರವನ್ನು ಜನರು ನಂಬುತ್ತಾರೆ. ಆದರೂ ಗಿಣಿಯನ್ನು ಕೊಲ್ಲಬಾರದು ಸಾಕಬಾರದು ಪಾಪ ಬರುತ್ತದೆ; ಪಂಜರದಲ್ಲಿ ಬಂಧಿಸಿದರೆ ಮುಂದಿನ ಜನ್ಮಕ್ಕೆ ಗಿಣಿಯಾಗಿ ಪಂಜರದಲ್ಲಿ ಬಂಧಿಯಾಗಬೇಕಾಗುತ್ತದೆ ಎಂದು ಹೆದರಿಸುವ ಮಾತುಗಳು ಕೇಳಿ ಬರುತ್ತವೆ. ಇದರಿಂದ ಗಿಣಿಗೆ ಇರುವ ನೈಸರ್ಗಿಕ ಸ್ವಾತಂತ್ರ್ಯವನ್ನು ಬೆಂಬಲಿಸಿದಂತಾಗುತ್ತದೆ.

**ಗೀಜುಗ :** ಗೀಜುಗ ಹಕ್ಕಿಯನ್ನು ಪಕ್ಷಿಗಳ ರಾಜನೆನ್ನುತ್ತಾರೆ. ಏಕೆಂದರೆ ಇದು ಪ್ರತಿರಾತ್ರಿಯೂ ತನ್ನ ಗೂಡಿನಲ್ಲಿ ಒಂದು ಮಿಂಚು ಹುಳುವನ್ನು ಬಂಧಿಸಿ ಅದರ ಬೆಳಕಿನಲ್ಲಿ ನಿದ್ರಿಸುತ್ತದೆಯಂತೆ. ಮುಂಜಾನೆ ಮೂಡುವ ಸಮಯಕ್ಕೆ ಬೆಳಕು ಹರಿದಿದ್ದು ಆಗ ಮಿಂಚು ಹುಳುವಿನ ಮಿಂಚಿನ ಗುಣವು ಗೌಣವಾಗಿರುತ್ತದೆ. ಅದು ಸಾಮಾನ್ಯ ಹುಳುವಿನಂತೆ ಇರುತ್ತದೆ. ಆಗ ಗೀಜುಗವು ಆ ಹುಳುವನ್ನು ಕುಕ್ಕಿ ತಿಂದು ಬಿಡುತ್ತದೆ. ಮತ್ತೆ ಸಂಜೆಯ ಸಮಯಕ್ಕೆ ಒಂದು ಮಿಂಚುಳ್ಳಿಯನ್ನು ತಂದಿಟ್ಟುಕೊಂಡಿರುತ್ತದೆ.

**ಮುತ್ತಿನಸರದಹಕ್ಕಿ (ಮುತ್ತ್ಯಾಲಗುವ್ವ) :** ಕಡುನೀಲಿ ಬಣ್ಣದ ಈ ಪುಟ್ಟ ಹಕ್ಕಿಯು ಸಾಮಾನ್ಯವಾಗಿ ನೀರು ಹರಿಯುವ ಪರಿಸರದಲ್ಲಿ ಕಂಡುಬರುತ್ತದೆ. ಇದರ ಕೊರಳಿಗೆ ಮುತ್ತಿನ ಹಾರವನ್ನು ಧರಿಸಿದೆಯೇನೋ ಎನ್ನುವ ವಿನ್ಯಾಸವಿರುತ್ತದೆ. ಟೀಟಿ-ಟೀಟಿ, ಟೀಟಿ-ಟೀಟಿ, ಟೀಟಿ-ಟೀಟೀಟಿ ಎಂದು ದನಿ ಮಾಡುತ್ತದೆ (ಕೂಗುತ್ತದೆ). ಇದರ ಕೊರಳಿನ ಸುತ್ತಲೂ ಇರುವ ವಿನ್ಯಾಸ ಹಾಗೂ ಹೊರಡಿಸುವ ಧ್ವನಿ ಜನಪದರ ಕಥೆಗೆ ಕಾರಣವಾಗಿದೆ.

**ಐತಿಹ್ಯ :** ಒಂದು ದಿನ ಮುತ್ತಿನ ವ್ಯಾಪಾರಿಯಾದ ಮುತ್ಯಾಲ ಶೆಟ್ಟಿಯು ವ್ಯಾಪಾರಕ್ಕೆಂದು ಹೊರಬಿದ್ದ. ಆಯಾಸವಾದ್ದರಿಂದ ನದಿಯ ಮರಳಿನ ಮೇಲೆ ಆವರಿಸಿದ್ದ ಮರದ ನೆರಳಿನಲ್ಲೆ ಮಲಗಿ ನಿದ್ರಿಸಿದ. ಮೇಲಿನ ಬೆಟ್ಟದಲ್ಲಿ ಮಳೆ ಆಯ್ತು. ಈ ಕಡೆ ನದಿ ಹರಿತಾ ಬಂತು. ಶೆಟ್ಟಿಗೆ ಎಚ್ಚರ ಇಲ್ಲ. ಮೈ ಮರೆತು ಮಲಗಿದ್ದಾನೆ. ಆಗ ಈ ಹಕ್ಕಿ ಮುತ್ಯಾಲ ಶೆಟ್ಟಿ ....... ಮುತ್ಯಾಲ ಶೆಟ್ಟಿ ......

ನದಿ ಬರ್‍ತಿದೆ (ಟೀಟೀ ಟೀಟಿ, ಟೀಟಿ ಟೀಟಿ, ಟೀಟಿ ಟೀಟೀಟಿ) ಎಂದು ಹೇಳ್ತಾ ಇತ್ತು. ಎಚ್ಚರ ಆಗಿ ನೋಡ್ತಾನೆ, ನದಿಯ ನೀರು ಸಮೀಪಿಸಿ ಬಿಟ್ಟಿದೆ. ಎದ್ದು ದಡಕ್ಕೆ ಓಡಿದ. ತನ್ನ ಪ್ರಾಣ ಉಳಿಸಿದ ಆ ಹಕ್ಕಿಗೆ ಪ್ರೀತಿಯಿಂದ ತನ್ನ ಕೊರಳಲ್ಲಿ ಇದ್ದ ಮುತ್ತಿನ ಸರವನ್ನು ಹಾಕಿದ. ಅಂದಿನಿಂದ ಅದು ಮುತ್ಯಾಲ ಹಕ್ಕಿ ಆಯ್ತು.

ಈ ಕತೆ (ಐತಿಹ್ಯ) ಉತ್ತರ ಪಿನಾಕಿನಿ ನದಿಯ ದಡದಲ್ಲಿ ಕೆಲಸ ಮಾಡುತ್ತಿದ್ದ ಅಜ್ಜಿಯೊಬ್ಬರು ಹೇಳಿದ್ದು. ಈ ನದಿಯು ಮಳೆಗಾಲದಲ್ಲಿ ಮಾತ್ರ ಹರಿಯುತ್ತದೆ. ನಂದಿಬೆಟ್ಟ ಪರಿಸರದಲ್ಲಿ ಮಳೆಯಾದರೆ ಜಿಲ್ಲೆಯ ನದಿಗಳಲ್ಲಿ ತುಂಬಿ ಹರಿಯುವಷ್ಟು ನೀರು - ಮರಳು ಇರುತ್ತದೆ. ಉಳಿದಂತೆ ಬತ್ತಿದ ನದಿಯು ಮರಗಳ ನೆರಳಿನಲ್ಲಿ - ಮಲಗುವವರಿಗೆ ದನಕರುಗಳಿಗೆ ಆಶ್ರಯ ಕೊಡುತ್ತದೆ. ಹುಲ್ಲು, ಸೌದೆ, ಒಗೆದ ಬಟ್ಟೆ, ಮೆಣಸಿನಕಾಯಿ, ಮುಸುಕಿನ ಜೋಳದ ತೆನೆ ಇತ್ಯಾದಿಗಳನ್ನು ಒಣಗಿಸುತ್ತಾರೆ. ನದಿಯ ಮೇಲಿನ ಪ್ರದೇಶದಲ್ಲಿ ಚೆನ್ನಾಗಿ ಮಳೆಯಾದರೆ, ಆಕಸ್ಮಿಕವಾಗಿ ತಕ್ಷಣವೇ ಪ್ರವಾಹ ಬಂದು ಗಾಬರಿಗೊಳಿಸುವುದುಂಟು. ಈ ಮುಂಚೆ ನದಿಯಲ್ಲಿ ಹೇರಳವಾಗಿ ಮರಳು ಸಂಗ್ರಹವಾಗಿ ಇದ್ದದ್ದರಿಂದ ಪ್ರವಾಹ ಬಂದರೂ ಜೀವಹಾನಿ ಸಂಭವಿಸುತ್ತಿರಲಿಲ್ಲ. ಈಗ ಮರಳಿನ ಸಾಗಾಣಿಕೆಯಾಗಿ ಪರಿಸ್ಥಿತಿ ವ್ಯತಿರಿಕ್ತವಾಗಿದೆ. ಮೇಲಿನ ಕಥೆ ಐತಿಹ್ಯದಲ್ಲಿ ನದಿ-ಪ್ರವಾಹ ಆಶ್ರಯ ಹಾಗೂ ಪಕ್ಷಿಯ ಸಂಬಂಧಗಳು ಎದ್ದು ಕಾಣುತ್ತವೆ.

**ಟಿಟ್ಟಿಬ :** ಈ ಹಕ್ಕಿಯು ಊರಿನ ಪರಿಸರದಲ್ಲಿ ಇರುವುದಿಲ್ಲ. ಕಾಡು ಅಥವಾ ಹೊಲ ಗದ್ದೆಗಳ ಪರಿಸರದಲ್ಲಿ ಇರುತ್ತದೆ. ರಾತ್ರಿಯ ವೇಳೆ ಟೀ - ಟಿಟ್, ಟೀ ಟಿಟ್ ಎಂದು ಕೂಗುತ್ತಾ ಯಾವುದೋ ಒಂದು ದಿಕ್ಕಿಗೆ ಹಾರುತ್ತಾ ಪ್ರಯಾಣ ಬೆಳೆಸುತ್ತಿರುತ್ತದೆ. ಈ ರೀತಿ ಕೂಗುತ್ತಾ ಹೋಗುವಾಗ ಊರನ್ನು ಪ್ರವೇಶಿಸಿದರೆ, ಮೂರು ದಿನಗಳಲ್ಲಿ ಯಾರಾದರೂ ಊರಿನಲ್ಲಿ ಸಾಯುತ್ತಾರೆಂದು ನಂಬುತ್ತಾರೆ. ಗ್ರಾಮೀಣ ಪರಿಸರದಲ್ಲಿ ಕೃಷಿಕರು, ಕೂಲಿಕಾರರು. ಪಶುಪಾಲಕರು ಹೆಚ್ಚಾಗಿರುತ್ತಾರೆ. ಹಗಲಿಡೀ ಹೊಲ-ಗದ್ದೆಗಳಲ್ಲಿ ದುಡಿದು ಮನೆಗೆ ಬರುತ್ತಾರೆ. ರಾತ್ರಿ ಬೇಗ ಊಟ ಮುಗಿಸಿ ಮಲಗಿ ನಿದ್ರಿಸುತ್ತಿರುತ್ತಾರೆ. ಆ ವೇಳೆಯಲ್ಲಿ ಟಿಟ್ಟಿಬ ಮಾಡುವ ಶಬ್ದ ಹೊರಟ ದಿಕ್ಕು ಎಲ್ಲವೂ ಸಾವಿನ ನಂಬಿಕೆಯನ್ನು ಪುಷ್ಟಿಗೊಳಿಸುತ್ತವೆ. ಆದರೂ ಯಾರೂ ಆ ಸದ್ದಿನ ಬಗ್ಗೆ ಪ್ರಸ್ತಾಪ ಮಾಡಬಾರದು. ೨-೩ ದಿನಗಳಲ್ಲಿ ಸಾವು ಸಂಭವಿಸಿದರೆ ಆಗ ಮಾತ್ರ ಟಿಟ್ಟಿಬ ಸಾರಿದ ಶಕುನ ಸತ್ಯವಾಯಿತು ಎಂದು ಮಾತನಾಡಿಕೊಳ್ಳುತ್ತಾರೆ.

ಮುಂದೆ ಬರಲಿರುವ ಸಾವಿನ ವಾಸನೆಯು ಟಿಟ್ಟಿಬಕ್ಕೆ ಗೊತ್ತಾಗುತ್ತದೆ. ಅದನ್ನು ರಭಸವಾಗಿ ಸಾರಿಕೊಂಡು ಹೋಗುತ್ತದೆ ಎಂಬ ನಂಬಿಕೆ ಇರುವುದಲ್ಲದೆ, ಸಾಕು ನಾಯಿಗಳಿಗೂ ಈ ಗುಣ ಲಭಿಸಲಿ ಎಂದು ಟಿಟ್ಟಿಬದ ಮೊಟ್ಟೆಗಳನ್ನು ಹಾಕುತ್ತಾರೆ. ರಾತ್ರಿಯ ವೇಳೆ ನಾಯಿಗಳು ಊಳಿಟ್ಟರೂ ಸಾವಿನ ಸಂಭವವೆಂಬ ನಂಬಿಕೆಯಿದೆ.

**ಕಾಗೆ :** ಪಕ್ಷಿಗಳಲ್ಲಿ ಮನುಷ್ಯನಿಗೆ ಚಿರಪರಿಚಿತವಾದದ್ದು ಕಾಗೆ. ಕಾಡು-ನಾಡುಗಳ ತಾರತಮ್ಯವಿಲ್ಲದೆ ಎಲ್ಲ ಕಡೆ ಕಂಡುಬರುವ ಕಾಗೆ ಜನಪದರ ಬದುಕಿಗೆ ಹಲವು ಆಯಾಮಗಳ ನಂಬಿಕೆಗಳ ಆಗರವಾಗುತ್ತದೆ. ಕಾಗೆ ಮುಟ್ಟಿದರೆ ಅನಿಷ್ಟ, ಮೈಲಿಗೆ, ಮನೆಗೆ ನುಗ್ಗಿದರೆ ಕೇಡು ಆದ್ದರಿಂದ ಮೂರು ತಿಂಗಳು ಆ ಮನೆಯಲ್ಲಿ ಯಾರೂ ವಾಸಿಸಬಾರದು, ಬೆಳಿಗ್ಗೆ ಕಾಗೆ ಕೂಗಿದರೆ ನೆಂಟರು ಬರ್ತಾರೆ, ಮಧ್ಯಾಹ್ನ ಕಾಗೆ ಕೂಗಿದರೆ ಸಾವಿನ ಸುದ್ದಿ ಬರುತ್ತದೆ. ಹೀಗೆ ಹಲವು ನಂಬಿಕೆಗಳಿವೆ. ಸಾವಿನ ಸಂದರ್ಭದ ಆಚರಣೆಗಳಲ್ಲಿ ಕಾಗೆಗೆ ಪ್ರಾಶಸ್ತ್ಯವಿದೆ. ಶವಸಂಸ್ಕಾರಕ್ಕೆ ಹಾಗೂ ತಿಥಿಗಳಂದು ಸತ್ತವರಿಗೆ ಹಾಕುವ ಕೂಳು ಅಥವಾ ಪಿಂಡವನ್ನು ಕಾಗೆ ಮುಟ್ಟಲೇಬೇಕು. ಇಲ್ಲದಿದ್ದರೆ ಸತ್ತ ವ್ಯಕ್ತಿಗೆ ಸ್ವರ್ಗವಿಲ್ಲವೆಂಬ ನಂಬಿಕೆಯಿದೆ. ವ್ಯಕ್ತಿಯು ಬದುಕಿದ್ದಾಗ ಸ್ವಲ್ಪವಾದರೂ ದಾನ ಮಾಡಬೇಕು. ಕೊನೆಗೆ ತಾನು ತಿಂದ ತಟ್ಟೆಯಲ್ಲಿ ಚೆಲ್ಲಿದ ನಾಲ್ಕೈದು ಅಗಳಿನಷ್ಟು ಆಹಾರವನ್ನು ಕಾಗೆ ಅಥವಾ ನಾಯಿ ತಿಂದಿರಬೇಕು. ಇಲ್ಲದಿದ್ದರೆ ಅಂಥ ವ್ಯಕ್ತಿಯ ಶವಸಂಸ್ಕಾರದ ಕೂಳನ್ನು ಕಾಗೆಗಳು ತಿನ್ನುವುದಿಲ್ಲ. ಅಂಥವರು ಪಾಪಿಗಳಲ್ಲಿ ಅತಿನಿಕೃಷ್ಟರೆಂದು ಹೇಳುತ್ತಾರೆ.

ಕಾಗೆಯು ಕೂಗುವುದನ್ನು ಸಾಮಾನ್ಯವಾಗಿ 'ಕಾಗೆ ಬಡಕೊಳ್ಳುವುದು' ಎನ್ನುತ್ತಾರೆ. ಹೇಳಿದ್ದೇ ಹೇಳಿ ಬೇಸರಿಸುವ ವ್ಯಕ್ತಿಗಳನ್ನು ಸದಾ ಕಾಗೆ ಬಡಕೊಂಡ ಹಾಗೆ ಬಡಕೊಳ್ತಿರ್‍ತಾನೆ/ಳೆ ಎಂದು ಸಂಕೇತಿಸುತ್ತಾರೆ. ಕಾಗೆಯು ಯಾರನ್ನಾದರೂ ಮುಟ್ಟಿದರೆ ಅದು ಸೂತಕವಷ್ಟೇ ಅಲ್ಲ, ಸಾವಿನ ಸಂಕೇತವೆಂದು ನಂಬಿಕೆಯಿದೆ. ಆದ್ದರಿಂದ ಕಾಗೆ ಮುಟ್ಟಿದ ವ್ಯಕ್ತಿಯ ಸಾವಿನ ಸುದ್ದಿಯನ್ನು ಹೇಳಿ ಕಳುಹಿಸುವ ಅನುಕರಣೆ ಮಾಡುತ್ತಾರೆ. ಮೂರು ಊರುಗಳ ಬಂಧುಗಳಿಗೆ ಸಾವಿನ ಸುದ್ದಿಯನ್ನು ನೀಡುತ್ತಾರೆ. ಸಾಮಾನ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ಸಾವಿನ ಸುದ್ದಿಯನ್ನು ಹೇಳುವವನು ನೇರವಾಗಿ ಮುಂಬಾಗಿಲಿಗೆ ಬಂದು ಹೇಳುವುದಿಲ್ಲ. ಒಂದು ಪಕ್ಕಕ್ಕೆ ಹೋಗಿ ನಿಲ್ಲುತ್ತಾನೆ. ಮನೆಯ ಹಿರಿಯ ವ್ಯಕ್ತಿಗಳಲ್ಲಿ ಯಾರಾದರೂ ಒಬ್ಬರನ್ನು ತನ್ನ ಬಳಿಗೆ ಬರುವಂತೆ ಹೇಳಿ ಕಳುಹಿಸುತ್ತಾನೆ. ಹಾಗೆ ಬಂದ ವ್ಯಕ್ತಿಗೆ ಸಾವಿನ ಸುದ್ದಿಯನ್ನು, ತಿಥಿಯ ದಿನವನ್ನು ಹೇಳಿ ಕುಳಿತುಕೊಳ್ಳುತ್ತಾನೆ. ಮನೆಯಲ್ಲಿನ ಹಿರಿಯ ಹೆಂಗಸರು ಯಾರಾದರೂ ಧಾನ್ಯವನ್ನು ಮೊರದಲ್ಲಿ ತುಂಬಿಸಿ ತಂದು ಅವನ ಚೀಲಕ್ಕೆ ಸುರಿಯುತ್ತಾರೆ. ಆಗ ಅವನು ಏನೂ ಮಾತನಾಡದೆ ಹೊರಟು ಹೋಗುತ್ತಾನೆ. ಅವನು ಮತ್ತೆ ಬರುತ್ತೇನೆ ಹೋಗಿಬರುತ್ತೇನೆ ಎಂಬುದಾಗಿ ಹೇಳಲೇಬಾರದು. ಆದರೆ ಕಾಗೆ ಮುಟ್ಟಿದ್ದರ ಪರಿಹಾರಕ್ಕೆಂದು ಸಾವಿನ ಸುದ್ದಿಯನ್ನು ತಂದವನು ಹಿರಿಯರಿಗೆ ಇಂಥ ವ್ಯಕ್ತಿಯು ಸತ್ತನೆಂದು ನಿಂತ ನೆಲೆಯಲ್ಲಿ ಹೇಳಿ ಕುಳಿತುಕೊಳ್ಳದೆ ಹಿಂತಿರುಗುತ್ತಾನೆ. ಇದರಿಂದ ಸಂಬಂಧಿಕರು ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುತ್ತಾರೆ. ಕಾಗೆ ಮುಟ್ಟಿದ ವ್ಯಕ್ತಿಯನ್ನು ಮೂರು ವಾರಗಳ ಒಳಗೆ ಭೇಟಿ ಮಾಡಿ ಮಾತನಾಡಿಸಿ ಬರುತ್ತಾರೆ.

ಈ ಭೇಟಿಯು ಸಾಮಾನ್ಯವಾಗಿರುತ್ತದೆ. ಸಾವಿನ ಸುದ್ದಿ ತಲುಪಿದ್ದಾಗಲಿ ಕಾಗೆ ಮುಟ್ಟಿದ್ದಾಗಲಿ ಪ್ರಸ್ತಾಪಿಸುವಂತಿಲ್ಲ. ಹೀಗೆ ಕಾಗೆ ಮುಟ್ಟಿದ್ದರ ಕೇಡು ಪರಿಹಾರವಾಗುತ್ತದೆ.

ಕಾಗೆಗಳು ಆಹಾರದ ಸಣ್ಣ ಚೂರೊಂದನ್ನು ಕಂಡರೂ ಆ ಸಂತೋಷವನ್ನು ತಮ್ಮ ಸಮೂಹದೊಂದಿಗೆ ದನಿಗೈದು ಹಂಚಿಕೊಳ್ಳುತ್ತವೆ. ಗಾಬರಿ ಮತ್ತು ಅಪಾಯದ ಸಂದರ್ಭಗಳಲ್ಲೂ ಸಾಮೂಹಿಕವಾಗಿ ಕೂಗುತ್ತವೆ. ಸೃಷ್ಟಿ ನಿಯಮದಲ್ಲಿ ಕೋಗಿಲೆಯ ಮೊಟ್ಟೆಗಳು ಕಾಗೆಯ ಕಾವಿನಲ್ಲಿ ಮರಿಗಳಾಗಿ ಕಾಗೆಮರಿಗಳೊಂದಿಗೆ ಬೆಳೆದು ಪ್ರತ್ಯೇಕಗೊಳ್ಳುವವರೆಗೂ ಕಾಗೆಯು ತಾರತಮ್ಯವಿಲ್ಲದೆ ಸಾಕುತ್ತದೆ. ಇದನ್ನು ಕಾಗೆಯ ದಡ್ಡತನ ಎಂದು ಹೇಸುತ್ತಾರೆ. ಕಾಗೆಯ ಕಾವಿನಲ್ಲಿ ಬೆಳೆದಿದ್ದರಿಂದಲೆ ಕೋಗಿಲೆ ಸಾಯುವವರೆಗೂ ಚಿಕ್ಕವ್ವಾ ....... ಚಿಕ್ಕವ್ವಾ ಎಂದು ಕೂಗುತ್ತದೆಂದು ಐತಿಹ್ಯ.

**ಗೂಬೆ :** ಗೂಬೆಯು ರಾತ್ರಿಯ ವೇಳೆ ಚಲನವಲನಗಳನ್ನು ಹೊಂದಿದ್ದು ಹಗಲಿನಲ್ಲಿ ಮರ ಗಿಡಗಳ ಕೊಂಬೆ-ರೆಂಬೆಗಳಲ್ಲಿ ಕುಳಿತು ನೋಡುತ್ತಿರುತ್ತದೆ. ಆದರೆ ರಾತ್ರಿಯ ಸಮಯದಲ್ಲಿ ಮಾತ್ರ ಇದಕ್ಕೆ ದೃಷ್ಟಿ ಗೋಚರಿಸಬಹುದು. ಆಗ ಆಹಾರಕ್ಕಾಗಿ ಹಾರಾಡುತ್ತಾ ಹುಳು ಹುಪ್ಪಟೆಗಳಿಂದ ಹಿಡಿದು ಸಿಗುವಂಥ ಸಣ್ಣ ಪುಟ್ಟ ಪ್ರಾಣಿ-ಪಕ್ಷಿ, ಜೀವಜಂತುಗಳನ್ನು ಭಕ್ಷಿಸುತ್ತದೆ. ಇದರ ಕಣ್ಣುಗುಡ್ಡೆಗಳು ದೊಡ್ಡವಾಗಿ ವಿಕಾರವಾಗಿ ಇರುವುದಲ್ಲದೆ, ಗೂಬೆಯು ದೃಷ್ಟಿ ತಿರುಗಿಸುವಾಗ ಭಯಂಕರವೆನಿಸುತ್ತವೆ. ಅಲ್ಲದೆ ಇದು ಕೂಗುವ ಧ್ವನಿಯು ವಿಚಿತ್ರವಾಗಿದ್ದು ರಾತ್ರಿಯ ಪ್ರಶಾಂತ ವಾತಾವರಣದಲ್ಲಿ ಹೆದರಿಕೆಯಾಗುತ್ತದೆ. ಗೂಬೆಯು ರಾತ್ರಿಯ ವೇಳೆ ಬೇಟೆಯಾಡುವುದರಿಂದ ಕೆಲವೊಮ್ಮೆ ಓಡಾಡುವವರಿಗೆ ರಾಚುವುದೂ ಉಂಟು. ಗೂಬೆ ಮುಟ್ಟಿದರೆ ಅಪಶಕುನವೆಂಬ ನಂಬಿಕೆಯಿದೆ. ಹಾಗೆ ಗೂಬೆಯು ಕೂಗಿದರೆ ಅಪಶಕುನವೆಂದು ಹೇಳುತ್ತಾರೆ. ರಾತ್ರಿಯ ಓಡಾಟದಲ್ಲಿ ಗೂಬೆಯು ಮನೆಗಳ ಮೇಲೆ ಕುಳಿತರೆ ಆ ಮನೆಯು ವೃದ್ಧಿಯಾಗುವುದಿಲ್ಲ. ಅದು ಮನೆಯ ಮೇಲೆ ಕೆಂಪಗೆ ಮಲವಿಸರ್ಜನೆ ಮಾಡಿದ್ದರೆ ಆ ಮನೆಯು ಬೆಂಕಿಯಂತೆ ಉರಿದು ಹೋಗುತ್ತದೆ. ಬೆಳ್ಳಗೆ ಮಾಡಿದ್ದರೆ ಹಾಲಿನಂತೆ ಸಮೃದ್ಧವಾಗುತ್ತದೆ - ಇತ್ಯಾದಿ ನಂಬಿಕೆಗಳಿವೆ. ಗೂಬೆಗಳನ್ನು ಯಾರೂ ಕೊಲ್ಲುವುದಿಲ್ಲ. ಕೊಂದರೆ ಕಣ್ಣರೆಪ್ಪೆಗಳಲ್ಲಿ ಕುರುಗಳೇಳುತ್ತವೆ (ಗುಳ್ಳೆಗಳಾಗುತ್ತವೆ) ಎಂದು ನಂಬಿಕೆ. ಪರಮ ಸೋಮಾರಿ ಅಥವಾ ನಿಷ್ಕ್ರಿಯ ವ್ಯಕ್ತಿ ಎಂಬುದನ್ನು ಗೂಬೆ ಎಂಬ ಬೈಗುಳದಲ್ಲಿ ಸಂಕೇತಿಸುತ್ತಾರೆ.

ಹೀಗೆ ಜನಪದರು ಪರಿಸರದ ಜೀವವೈವಿಧ್ಯದ ಬಗ್ಗೆ ಕುತೂಹಲ ಹಾಗೂ ಕಾಳಜಿಗಳನ್ನು ಉಳಿಸಿಕೊಂಡಿದ್ದಾರೆ. ಮಾಂಸಕ್ಕಾಗಿ ಕೆಲವು ಪ್ರಾಣಿಗಳನ್ನು ಕೊಲ್ಲಬಹುದು. ಅಲ್ಲದೆ ಕೆಲವು ಜೀವಜಂತುಗಳಿಂದ ತಮಗೆ ಅಪಾಯವೆಂದು ಸಾಯಿಸಬಹುದು. ಹೀಗೆ ಬೇಟೆ ಮತ್ತು ರಕ್ಷಣೆಯು

ದೃಷ್ಟಿಕೋನಗಳನ್ನು ಹೊರತುಪಡಿಸಿದರೆ ಲೋಭಕ್ಕಾಗಿಯೋ ಅಥವಾ ಮೋಜಿಗಾಗಿಯೋ ಜೀವಿಗಳನ್ನು ನಾಶ ಮಾಡುವುದು ಅತಿ ವಿರಳ. ಹಾಗೆ ಮಾಡದಿರಲಿ ಎಂದೇ ಮಾನವ ಸಮಾಜದಲ್ಲಿ ಪಶು-ಪಕ್ಷಿ ಜಲಚರ ಜೀವಿಗಳು ಅಥವಾ ಸಂಸ್ಕೃತಗಳಲ್ಲಿ ಯಾವುದಾದರೂ ಒಂದನ್ನು ಆಯಾ ಸಮೂಹ ಇಲ್ಲವೇ ಕುಟುಂಬ ಕುಲದೇವತೆಯನ್ನಾಗಿಕೊಂಡಿರುತ್ತದೆ. ಹುಲಿ ಮುಂತಾದ ಪ್ರಾಣಿಗಳ ಬಗೆಗಿನ ಭಯವು ಅವುಗಳನ್ನು ಕರ್ನಾಟಕದ ಕೆಲವೆಡೆ ಕುಲದೇವತೆಯಾಗಿ ನಂಬಲು ಮತ್ತು ಪೂಜಿಸಲು ಕಾರಣ.[೧೬] ಕೋಲಾರ ಜಿಲ್ಲೆಯ ಪರಿಸರವು ಬಯಲು ಸೀಮೆಯಾಗಿದ್ದು ಕಾಡು ಕಡಿಮೆ ಇದೆ. ಇಲ್ಲಿ ಕಾಡು ನಾಡು ಎನ್ನುವುದಕ್ಕಿಂತ ಇದು ಪ್ರಕೃತಿ ಸಂಸ್ಕೃತಿಗಳ ಸಾಮರಸ್ಯವೆಂದರೆ ಹೊಂದಾಣಿಕೆಯಾದೀತು.

**ಟಿಪ್ಪಣಿಗಳು**

೧. ಮರಕೋತಿಯ ಆಟವನ್ನು ಹೋಲುವ ಆಟ. ಮರಳಿನಲ್ಲಿ ಹೂತಿರುವ ಕೈಕಾಲುಗಳನ್ನು ಬಿಡಿಸಿಕೊಂಡು ಮರಗಳ ಮೇಲೆ ಅಡಗಿರುವವರನ್ನು ಹಿಡಿದು ಮುಟ್ಟಬೇಕು.

೨. ದಾಸೇಗೌಡ ಜಿ.ವಿ. ೧೯೭೮, ಪು-೧೨-೧೩

೩. ತೆಲುಗು "ಒರ್ರಿ ಅನ್ನಮು ತಿನಿ ಕೊರ್ರ ಅನ್ನಮು ಉಂಚುತಾರು" ಎಂಬ ಗಾದೆಯಾಗಿದೆ.

೪. ಸುಮಿತ್ರ ಎಂ. ೨೦೦೨, ಪು.೧೯

೫. ಅಂಬಳಿಕೆ ಹಿರಿಯಣ್ಣ, ಲಕ್ಕಪ್ಪಗೌಡ ಎಚ್.ಜೆ., (ಸಂ) ಸಂಪುಟ ೨, ೧೯೯೮, ಪು.೨೬೫

೬. ಅದೇ, ಪು.೨೭೩

೭. ಅದೇ, ಪು.೨೬೮

೮. ಮುಳುಬಾಗಿಲಿನಲ್ಲಿ ಸಂಗ್ರಹಿಸಿದ ಐತಿಹ್ಯ

೯. ಅಂಬಳಿಕೆ ಹಿರಿಯಣ್ಣ, ಲಕ್ಕಪ್ಪಗೌಡ ಎಚ್.ಜೆ., (ಸಂ) ಸಂಪುಟ ೨, ೧೯೯೮, ಪು.೨೬೫

೧೦. ಅದೇ, ಪು.೨೬೬

೧೧. ಗಣೇಶ ಮೊಗಳ್ಳಿ, ರಹಮತ್ ತರೀಕೆರೆ, (ಸಂ) ೨೦೦೦, ಪು.೩೮೯

೧೨. ಪುರುಷೋತ್ತಮ ಬಿಳಿಮಲೆ, ೧೯೯೭, ಪು.೧೧೮

೧೩. ವಿವೇಕ ರೈ, ೧೯೯೫, ಪು.೯

೧೪. ಜವರೇಗೌಡ ದೇ., ೧೯೯೮, ಪು.೪೩

೧೫. ಕೋಲಾರ ಪರಿಸರದಲ್ಲಿ ಹಿಂದೂ-ಮುಸ್ಲಿಂ ಜನಪದ ಸಮುದಾಯಗಳಲ್ಲಿ ಕಂಡುಬರುವ ಈ ನಿಲುವು ತುಮಕೂರಿನ ಚಿಕ್ಕನಾಯಕನಹಳ್ಳಿಯ ಕಡೆ ಬೇಡರು ಒಕ್ಕಲಿಗರಲ್ಲಿದೆ. "ಬೇಡರು ಸಾಯಲಿ ಓತಿಯು ಒಕ್ಕಲಿಗರು ಬದುಕಲಿ" ಎನ್ನುತ್ತದೆಂಬ ನಂಬಿಕೆ ಇದೆ. ಇದನ್ನು ವಿವರಿಸಿದವರು ಡಾ.ಸಿದ್ದಗಂಗಮ್ಮ, ಚಿಕ್ಕನಾಯಕನಹಳ್ಳಿ. ಮತ್ತೆ ಕೆಲವೆಡೆಗಳಲ್ಲಿ ಹುಡುಗರು ಸಾಯಲಿ ಹುಡಿಗಿಯರು ಬದುಕಲ ಎನ್ನುತ್ತದೆಂಬ ನಂಬಿಕೆಯೂ ಇದೆ.

೧೬. ವಿವೇಕ ರೈ, ೧೯೯೫, ಪು.೯

# ಅಧ್ಯಾಯ ೭ .

# ಐತಿಹ್ಯಗಳ ವಿವಿಧ ಆಯಾಮಗಳೊಂದಿಗೆ ಜಿಲ್ಲೆಯ ಸಾಂಸ್ಕೃತಿಕತೆ

## ಭೌಗೋಳಿಕತೆ ಮತ್ತು ಸಾಂಸ್ಕೃತಿಕ ಚರಿತ್ರೆ

ಕೋಲಾರ ಜಿಲ್ಲೆ, ಚಿನ್ನದ ಬೀಡಿದು ನಮ್ಮಯ ನಾಡು ಎಂಬ ಕರ್ನಾಟಕದ ಹೆಗ್ಗಳಿಕೆಯ ಹೆಗ್ಗುರುತು. ಏಕೆಂದರೆ ಕರ್ನಾಟಕದ ೨೭ ಜಿಲ್ಲೆಗಳಲ್ಲಿ ಒಂದಾದ ಕೋಲಾರ ಜಿಲ್ಲೆಯು ಚಿನ್ನದ ನಾಡೆಂಬ ಕೀರ್ತಿಗೆ ಪಾತ್ರವಾಗಿದೆ. ಜಿಲ್ಲೆಯ ವಿಸ್ತೀರ್ಣ ೧೯೮೨೨೩೬.೫ ಚದರ ಕಿಲೋಮೀಟರ್‌ಗಳು ಅಥವಾ ೩೧೭೫.೧೮ ಚದರ ಮೈಲಿಗಳು. ಕರ್ನಾಟಕದ ಜಿಲ್ಲಾವಾರು ವಿಸ್ತೀರ್ಣದಲ್ಲಿ ೧೩ನೆಯ ಸ್ಥಾನವನ್ನು ಪಡೆದಿದೆಯಲ್ಲದೆ ರಾಜ್ಯದ ೧/೨೩ ಭಾಗದ ಭೂ ಪ್ರದೇಶವನ್ನು ಹೊಂದಿದೆ. ಅಲ್ಲದೆ, ೧೨.೪೬ ಮತ್ತು ೧೩.೮೫ ಡಿಗ್ರಿಗಳ ಉತ್ತರ ಅಕ್ಷಾಂಶದ ಮಧ್ಯದಲ್ಲಿಯೂ ೭೭.೨೧ ಮತ್ತು ೭೮.೨೫ ಡಿಗ್ರಿಗಳ ಪೂರ್ವ ರೇಖಾಂಶಗಳ ಮಧ್ಯದಲ್ಲಿಯೂ ಇದೆ. ಉತ್ತರ-ದಕ್ಷಿಣವಾಗಿ ಸು.೮೫ ಮೈಲಿಗಳು ಅಂದರೆ, ೧೩೭ ಕಿ.ಮೀ. ಗಳಷ್ಟಿದೆ. ಪೂರ್ವ-ಪಶ್ಚಿಮವಾಗಿಯೂ ಸರಿಸುಮಾರು ಅಷ್ಟೇ ವ್ಯಾಪ್ತಿಯನ್ನು ಹೊಂದಿದೆ. ಜಿಲ್ಲೆಯ ಉತ್ತರ ಮತ್ತು ಪೂರ್ವ ದಿಕ್ಕುಗಳಲ್ಲಿ ಆಂಧ್ರಪ್ರದೇಶದ ಚಿತ್ತೂರು ಮತ್ತು ಅನಂತಪುರ ಜಿಲ್ಲೆಗಳಿವೆ. ದಕ್ಷಿಣಕ್ಕೆ ತಮಿಳುನಾಡಿನ ಉತ್ತರ ಅರ್ಕಾಟ್ ಹಾಗೂ ಧರ್ಮಪುರಿ ಜಿಲ್ಲೆಗಳ ವ್ಯಾಪ್ತಿ ಇದೆ. ಜಿಲ್ಲೆಯ ಪಶ್ಚಿಮ ಭಾಗಕ್ಕೆ ರಾಜ್ಯದ ಇತರೆ ಜಿಲ್ಲೆಗಳಾದ ಬೆಂಗಳೂರು ಹಾಗೂ ತುಮಕೂರು ಜಿಲ್ಲೆಗಳು ಸುತ್ತುವರಿದಿವೆ. ಜಿಲ್ಲೆಯಲ್ಲಿ ೧೧ ತಾಲೂಕುಗಳಿದ್ದು ಕೋಲಾರ ಹಾಗೂ ಚಿಕ್ಕಬಳ್ಳಾಪುರದ ವಿಭಾಗಗಳಿಗೆ ಹಂಚಿಕೆಯಾಗಿದೆ. ಬಾಗೇಪಲ್ಲಿ, ಗುಡಿಬಂಡೆ, ಗೌರೀಬಿದನೂರು, ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ ತಾಲೂಕುಗಳು (೬) ಚಿಕ್ಕಬಳ್ಳಾಪುರ ವಿಭಾಗಕ್ಕೆ: ಮಾಲೂರು, ಮುಳಬಾಗಿಲು, ಕೋಲಾರ, ಶ್ರೀನಿವಾಸಪುರ, ಬಂಗಾರಪೇಟೆ ತಾಲೂಕುಗಳು (೫) ಕೋಲಾರ ವಿಭಾಗಕ್ಕೆ ಸೇರುತ್ತವೆ. ಇದರಲ್ಲಿ ೫೩ ಹೋಬಳಿಗಳು, ೩೩೨೧ ಗ್ರಾಮಗಳು ಇದ್ದು ಇವುಗಳಲ್ಲಿ ಜನವಸತಿ ಇರುವ ಗ್ರಾಮಗಳು ೨೮೮೩. ಜನವಸತಿ ಇಲ್ಲದ ಗ್ರಾಮಗಳು ೪೩೨ ಎಂದು ೨೦೦೧ರ ಜನಗಣತಿಯಲ್ಲಿ ತಿಳಿದುಬರುತ್ತದೆ. ಜಿಲ್ಲೆಯ ಜನಸಂಖ್ಯೆ ೧೮,೯೩,೭೭೧ (ಗ್ರಾಮೀಣ), ೬,೨೪,೬೩೫ (ನಗರ) ಒಟ್ಟು ೨೫,೨೩,೪೦೬; ಇದರಲ್ಲಿ ಗಂಡಸರು ೧೨,೮೧,೧೫೩, ಹೆಂಗಸರು ೧೨,೪೨,೨೫೩ ಎಂದು ತಿಳಿದುಬಂದಿದೆ.

ಜಿಲ್ಲೆಯ ಸಾಕ್ಷರತೆ ಪ್ರಮಾಣ ಪ್ರತಿಶತ ಒಟ್ಟು ೬೩.೧೪; ಗಂಡಸರು ೭೩.೧೪, ಹೆಂಗಸರು ೫೨.೮೧ ಆಗಿರುತ್ತಾರೆ.

ಕೋಲಾರಕ್ಕೆ ಸಂಬಂಧಿಸಿದ ಲಿಖಿತ ರಾಜಕೀಯ ಚರಿತ್ರೆಯು ಬಾಣರ ಆಡಳಿತದಿಂದ ಆರಂಭಗೊಳ್ಳುತ್ತದೆ. ಇವರ ರಾಜ್ಯವನ್ನು "ಆಂಧ್ರಮಂಡಲ"ವೆಂದು ಕರೆಯಲಾಗುತ್ತಿತ್ತೆಂದೂ ತಿಳಿದು ಬರುತ್ತದೆ. ಪೂರ್ವಭಾಗದಿಂದ ಕೋಲಾರ ಪ್ರದೇಶವನ್ನು ಒಳಗೊಂಡಂತೆ ಬಾಣರು ರಾಜ್ಯ ವಿಸ್ತಾರ ಮಾಡಿ ಸಂಸ್ಕೃತಿಯನ್ನು ರೂಪಿಸಿದ್ದರು. ನಂತರ ಗಂಗ ಅರಸರು (ಕ್ರಿ.ಶ. ಸು.೪ನೇ ಶತಮಾನ) ಕೋಲಾರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡರು. ರಾಷ್ಟ್ರಕೂಟರು ಗಂಗರನ್ನು ಸೋಲಿಸಿ ತಮ್ಮ ಆಡಳಿತವನ್ನು ಸ್ಥಾಪಿಸಿದರು. ಚಾಲುಕ್ಯರು-ರಾಷ್ಟ್ರಕೂಟರನ್ನೂ, ರಾಷ್ಟ್ರಕೂಟರ ಸಾಮಂತರನ್ನು-ಪಲ್ಲವರನ್ನು ಸೋಲಿಸುವ ಕೆಲವು ಕಾಲ ಆಡಳಿತ ನಡೆಸಿದ್ದಾರೆ. ಅಲ್ಲದೆ ವೈಡುಂಬರು-ನೊಳಬಂರು ತಮ್ಮ ಪ್ರಭುತ್ವದ ಹಕ್ಕನ್ನು ಸಾಧಿಸಿದ್ದಾರೆ. ಸು.೧೧ನೇ ಶತಮಾನದ ಹೊತ್ತಿಗೆ ತಮಿಳುನಾಡಿನ ಚೋಳರು ಪ್ರಬಲರಾಗಿ ಎಲ್ಲ ಸಣ್ಣ ಪುಟ್ಟ ರಾಜರನ್ನು ಸೋಲಿಸುವ ಮೂಲಕ ಕೋಲಾರವನ್ನು ಪಡೆದರು.[೧]

೧೨ನೆಯ ಶತಮಾನದಲ್ಲಿ ಹೊಯ್ಸಳರು ಚೋಳರನ್ನು ಸೋಲಿಸಿದರು. ವಿಷ್ಣುವರ್ಧನನು ವೆಲ್ಲೂರಿನವರೆಗೂ ರಾಜ್ಯ ವಿಸ್ತರಿಸಿದ್ದನೆಂಬುದು ಚರಿತ್ರೆಯಿಂದ ತಿಳಿದುಬರುವ ಸಂಗತಿ. ೧೪ನೆಯ ಶತಮಾನದ ನಂತರ ವಿಜಯನಗರದ ಅರಸರು ತಮ್ಮ ಸಾಮ್ರಾಜ್ಯ ವಿಸ್ತರಣೆಯಲ್ಲಿ ಮುಳಬಾಗಿಲನ್ನು ದಕ್ಷಿಣದ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ನಂತರ ವಿಜಯನಗರದ ಅರಸರ ಅಧೀನವಲ್ಲಿದ್ದ ಸಾಮಂತರು ಪಾಳೆಯಗಾರರು ಪ್ರಬಲಗೊಳ್ಳುತ್ತಿರುವಾಗಲೇ ಬಿಜಾಪುರದ ಆದಿಲ್‌ಷಾಹಿಗಳು, ಮೊಗಲರು ಸಾಮಂತರ ಪ್ರಬಲತೆಯನ್ನು ಮುರಿದರು. ೧೮ನೆಯ ಶತಮಾನದಲ್ಲಿ ಮರಾಠರು ಆಡಳಿತಕ್ಕೆ ಬಂದಿದ್ದಲ್ಲದೆ, ಕೋಲಾರ ಪ್ರದೇಶದ ಮೇಲೂ ಪ್ರಭಾವ ಬೀರಿದರು. ೧೯ನೆಯ ಶತಮಾನದಲ್ಲಿ ಬ್ರಿಟೀಷರು ಹೈದರ್‌ಆಲಿ ಮತ್ತು ಟಿಪ್ಪೂಸುಲ್ತಾನನ ವಿರುದ್ಧ ಸ್ಥಳೀಯರನ್ನು ಸೆಣೆಸುವಂತೆ ಮಾಡಿದರು. ೩ನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ (೧೭೯೧) ಕಾರ್ನ್‌ವಾಲೀಸ್ ಕೋಲಾರವನ್ನು ಗೆದ್ದನು. ೧೭೯೨ರಲ್ಲಿ ನಡೆದ ಶ್ರೀರಂಗಪಟ್ಟಣದ ಒಪ್ಪಂದದಂತೆ ಕೋಲಾರ ಮೈಸೂರು ರಾಜ್ಯದ ಒಂದು ಭಾಗವಾಯಿತು.[೨] ೧೯೪೭ರವರೆಗೂ ಬ್ರಿಟೀಷ್ ಆಡಳಿತದ ಭಾಗವಾಗಿ ಮುಂದುವರೆದರೂ ಬ್ರಿಟೀಷರೊಂದಿಗೆ ಮೈಸೂರು ಅರಸರು ಒಪ್ಪಂದ ಮಾಡಿಕೊಂಡು ಆಡಳಿತ ನಡೆಸಿದ್ದನ್ನು ನೆನೆಯಬಹುದು. ಕೋಲಾರ ಪ್ರದೇಶವೂ ಮೈಸೂರು ಅರಸರ ಆಡಳಿತಕ್ಕೆ ಸೇರಿದ್ದರಿಂದ ಇಲ್ಲಿನ ಸ್ವಾತಂತ್ರ್ಯ ಹೋರಾಟಗಳ ಸ್ವರೂಪಕ್ಕೆ ವಿಶಿಷ್ಟತೆಯಿರುವುದು ಗಮನಾರ್ಹ.

೧೯೨೦ರ ನಂತರ ಜಿಲ್ಲೆಯಲ್ಲಿ ಸ್ವತಂತ್ರ ಹೋರಾಟಗಳು ಕಂಡುಬರುತ್ತವೆ. ಇದಕ್ಕೆ ಕಾರಣ ಮಹಾತ್ಮ ಗಾಂಧೀಜಿಯವರು ೧೯೧೫ರಲ್ಲಿ ನಂದಿ ಗಿರಿಧಾಮಕ್ಕೆ ಭೇಟಿಯಿತ್ತು,[೩] ಜಿಲ್ಲೆಯಾದ್ಯಂತ ಪ್ರವಾಸ ಕೈಗೊಂಡರು. ಆಗ ಮಾಡಿದ ಖಾದಿ ಪ್ರಚಾರ ಹಾಗೂ ನೀಡಿದ ಸ್ವರಾಜ್ಯದ ಕಲ್ಪನೆಗಳು, ಹರಿಜನೋದ್ಧಾರ ಕಾರ್ಯಕ್ರಮಗಳು ಇತ್ಯಾದಿ ದಲಿತರ ಪರವಾಗಿದ್ದವು. ೧೯೩೬ ಅಥವಾ ೧೯೩೭ರಲ್ಲಿ ವಿದುರಾಶ್ವತ್ಥದ ಧ್ವಜ ಸತ್ಯಾಗ್ರಹದಲ್ಲಿ ನಡೆದ ಗೋಲೀಬಾರ್ ಘಟನೆಯು ಎರಡನೇ ಜಲಿಯನ್ ವಾಲಾಬಾಗ್ ಹತ್ಯಾಖಾಂಡವೆನಿಸಿಕೊಂಡಿತು. ನಂತರ ಜಿಲ್ಲೆಯಲ್ಲಿ ನಡೆದ "ಕೆ.ಜಿ.ಎಫ್.ನ ಚಿನ್ನದಗಣಿ ಸತ್ಯಾಗ್ರಹ, ಶಿಡ್ಲಘಟ್ಟದಲ್ಲಿ ನಡೆದ ಧ್ವಜಸತ್ಯಾಗ್ರಹ, ಕ್ವಿಟ್ ಇಂಡಿಯಾ ಚಳುವಳಿ ಹಾಗೂ ಮೈಸೂರು ಚಳುವಳಿಗಳು ಕೋಲಾರ ಸ್ವಾತಂತ್ರ್ಯ ಹೋರಾಟ ಘಟ್ಟದ ಚರಿತ್ರೆಗೆ ಒದಗಿದಂತಾಗಿದೆ. ಸಾವಿರಾರು ಜನ ಜೈಲುವಾಸ, ಪ್ರಾಣಾರ್ಪಣೆ ನೀಡಿದ, ಆಸ್ತಿಪಾಸ್ತಿಗಳ ಜಪ್ತಿ ಮುಂತಾದ ಘಟನೆಗಳಿಂದ ಚರಿತ್ರೆ ವಿಸ್ತಾರಗೊಂಡಿದೆ.[೪]

ಕೋಲಾರ ತಾಲ್ಲೂಕಿನ ನಾಗಲಾಪುರದಲ್ಲಿ ರೇಣುಕ ಶಾಖೆಯ ವೀರಶೈವ ಮಠವೂ, ಮುಳಬಾಗಿಲು ಹೋಬಳಿಗೆ ಸೇರಿದ ವಿರೂಪಾಕ್ಷಪುರದ ಪ್ರಸನ್ನ ನಿರೂಪಾಕ್ಷಸ್ವಾಮಿ ದೇವಾಲಯವೂ, ನಂದಿಯಬೆಟ್ಟದ ಪೂರ್ವ ಇಳಿಜಾರಿನಲ್ಲಿರುವ ಉತ್ತರ ಗುಹೆಯ ಪುರಾತನ ಶಾಸನ (ನಂ.೩೫) ಇಡಗೂರಿನ ಭೀಮೇಶ್ವರ ದೇವಾಲಯ ಮತ್ತು ಭೀಮೇಶ್ವರ ಬೆಟ್ಟದ ಭೀಮೇಶ್ವರಲಿಂಗವೂ, ಗೂಳೂರಿನ ಶ್ರೀಶೈಲ ಪೀಠ ಪರಂಪರೆಯ ಮಠಗಳೂ ಇಲ್ಲಿ ವೀರಶೈವಧರ್ಮ ಗಟ್ಟಿಯಾಗಿ ತಳವೂರಿದ್ದನ್ನು ಸೂಚಿಸುತ್ತವೆ. ಬಾಗೇಪಲ್ಲಿ ತಾಲ್ಲೂಕಿನ ಗಡದಂನ ವೆಂಕಟರಮಣಸ್ವಾಮಿ ದೇವಾಲಯ, ಆವುಲಕೊಂಡದ ನರಸಿಂಹಸ್ವಾಮಿ ದೇವಾಲಯ, ಶಿಡ್ಲಘಟ್ಟ ತಾಲ್ಲೂಕಿನ ತಲಕಾಯಲಕೊಂಡದ ವೆಂಕಟರಮಣಸ್ವಾಮಿ ದೇವಾಲಯಗಳು ಪಂಚರಾತ್ರಾಗಮ ಸಂಪ್ರದಾಯದ ವೈಷ್ಣವ ಕ್ಷೇತ್ರಗಳಾಗಿವೆ. ಮಾಲೂರಿನಲ್ಲಿರುವ ವೆಂಕಟರಮಣಸ್ವಾಮಿ, ಬಂಗಾರುತಿರುಪತಿಯಲ್ಲಿರುವ ವೆಂಕಟರಮಣಸ್ವಾಮಿ ದೇವಾಲಯಗಳು ವೈಖಾನ ಸಂಪ್ರದಾಯದ ವೈಷ್ಣವ ಕ್ಷೇತ್ರಗಳಾಗಿವೆ. ಚಿಕ್ಕತಿರುಪತಿಯಲ್ಲಿರುವ ಭವ್ಯವಾದ ಶ್ರೀನಿವಾಸ ದೇವಾಲಯ ಬಡವರ ತಿರುಪತಿ ಎಂದು ಪ್ರಸಿದ್ಧವಾಗಿದೆ. ತಿರುಪತಿ ತಿಮ್ಮಪ್ಪನ ಸೇವೆಯಿಂದ ದೊರಕುವ ಫಲಗಳೆಲ್ಲವೂ ಈತನ ಸೇವೆಯಿಂದಲೂ ದೊರೆಯುವವೆಂಬ ನಂಬಿಕೆಯಿದೆ. ಅವನಿ ವೈಷ್ಣವ, ಶೈವ, ವೀರಶೈವಗಳ ಸಂಗಮವಾಗಿದೆ. ಇಲ್ಲೊಂದು ಅದ್ವೈತ ಮಠವಿದೆ. ಮಾಧ್ವ ಸಂಪ್ರದಾಯದ ಶ್ರೀಪಾದರಾಯರ ಮಠವೂ ಮುಳಬಾಗಿಲು ಸಮೀಪದಲ್ಲೇ ಇದೆ. ಅಂದರೆ ವೈಷ್ಣವಧರ್ಮಕ್ಕೂ ಈ ಜಿಲ್ಲೆಯಲ್ಲಿ ಸಾಕಷ್ಟು ಪ್ರೋತ್ಸಾಹವಿತ್ತೆಂಬುದು ಇದರಿಂದ ಗೊತ್ತಾಗುತ್ತದೆ. ಈ ಹಿನ್ನೆಲೆಗಳಲ್ಲಿ ಸ್ಥಳಪುರಾಣಗಳು ಜಿಲ್ಲೆಯಲ್ಲಿ ಮಹತ್ವ ಪಡೆದಿರುತ್ತವೆ.

## ಭಾಷಿಕ ವಲಯ

ಯಾವುದೇ ಭಾಷೆ ಅನ್ಯಭಾಷೆಯ ಸಂಪರ್ಕವಿಲ್ಲದೆ ಸ್ವತಂತ್ರವಾಗಿ ಉಳಿಯಲಾರದು. ಹಲವು ಕಾರಣಗಳಿಗಾಗಿ ಒಂದು ಭಾಷೆ ಮತ್ತೊಂದು ಭಾಷೆಯ ಅಥವಾ ಹಲವು ಭಾಷೆಗಳ ಪ್ರಭಾವ-ಪ್ರೇರಣೆಗಳಿಗೆ ಒಳಗಾಗಿರುತ್ತದೆ. ಆಡಳಿತಾತ್ಮಕವಾಗಿ ಆಳುವ ವರ್ಗದ ಭಾಷೆ ಸ್ಥಳೀಯ ವಲಯದಲ್ಲಿ ಪ್ರಭಾವ ಬೀರುತ್ತದೆ. ಗಡಿಪ್ರದೇಶಗಳಲ್ಲಿನ ಜನರು ಸ್ಥಳೀಯ ಭಾಷೆ, ಆಡಳಿತ ಭಾಷೆಗಳನ್ನು ದ್ವಿಭಾಷೆ ಅಥವಾ ಬಹುಭಾಷೆಯ ಪ್ರದೇಶಗಳಾಗಿರುತ್ತವೆ. ಕನ್ನಡದ ಮೇಲಾದ ಅನ್ಯಭಾಷೆಯ ಪ್ರಭಾವಗಳಲ್ಲಿ ತೆಲುಗಿನ ಪ್ರಭಾವವೂ ಪ್ರಮುಖವಾದುದು. ಕರ್ನಾಟಕ-ಆಂಧ್ರ ಗಡಿಪ್ರದೇಶದ ಜಿಲ್ಲೆಗಳಲ್ಲಿ ಇದು ದಟ್ಟವಾಗಿ ವ್ಯಾಪಿಸಿದೆ. ಕೋಲಾರ ಜಿಲ್ಲೆಯ ಬಹುಭಾಗವು ನೆರೆಯ ಆಂಧ್ರಪ್ರದೇಶದ ಗಡಿಭಾಗಕ್ಕೆ ಹೊಂದಿಕೊಂಡಿರುವುದರಿಂದ ತೆಲುಗು ಭಾಷೆಯ ಸಂಪರ್ಕ ಸಹಜವೆಂಬಂತೆ ಏರ್ಪಟ್ಟಿದೆ. "ಆಂಧ್ರ ಕರ್ನಾಟಕದ ಗಡಿಪ್ರದೇಶದಲ್ಲಿ ಕನ್ನಡ-ತೆಲುಗು ಎರಡು ಭಾಷೆಗಳು ಹಾಗೂ ರಾಜಕೀಯ ಗಡಿಗಳನ್ನಾಧರಿಸಿದ ಎರಡು ಭೌಗೋಳಿಕ ಪರಿಸರಗಳು ಕನ್ನಡ-ತೆಲುಗು ಭಾಷೆಯ ದ್ವಿಸಂಸ್ಕೃತಿಯ ವೈಲಕ್ಷಣಗಳನ್ನು ಪಡೆದುಕೊಂಡಿರುತ್ತವೆ."

ಗಡಿಪ್ರದೇಶದಲ್ಲಿ ವಾಸಿಸುವ ಜನತೆಯು ಪರಸ್ಪರ ಕೊಡುಕೊಳೆಯಿಂದಾಗಿ ಸಾಂಸ್ಕೃತಿಕ ಪ್ರೇರಣೆಗಳಾಗುವುದು ಸಹಜ. ಜನಜೀವನದ ಶೈಲಿ, ಆಚರಣೆಗಳು, ಭಾಷೆ, ವ್ಯವಹಾರ ವಾಸ್ತು ಮುಂತಾದ ವಲಯಗಳಲ್ಲಿ ಎರಡು ಗಡಿಗಳಲ್ಲಿ ಗಾಢಸಂಬಂಧವಿರುತ್ತದೆ. ದೇಶೀಯ ನೆಲೆಯಲ್ಲಿ ಗಡಿ ಬಾಂಧವ್ಯವು ಭೌಗೋಳಿಕ ಸಾಮಿಪ್ಯದಿಂದಾಗಿ ತನ್ನ ಸಂಬಂಧವನ್ನು ಬೆಸೆದುಕೊಳ್ಳುತ್ತದೆ. ಭಾಷಿಕ. ಸಾಮಾಜಿಕ, ಚಾರಿತ್ರಿಕ, ಸಾಂಸ್ಕೃತಿಕ ಸಂಗತಿಗಳಿಂದ ಸಾಮ್ಯತೆಗೆ ಸಮೀಪವಾಗುತ್ತದೆ. ಗಡಿಭಾಗಗಳಲ್ಲಿ ಪರಸ್ಪರ ವ್ಯಾಪಾರ ವಾಣಿಜ್ಯಗಳ ಕೊಡುಕೊಳುಗೆ ಇರುತ್ತದೆ. ಆಂಧ್ರದ ಪಟ್ಟಣ ನಗರಗಳಿಗೆ ಕರ್ನಾಟಕದ ಗಡಿಪ್ರಾಂತ್ಯದ ಜನರು ಹೋಗುವಂತೆಯೇ ಅಲ್ಲಿಂದ ಇಲ್ಲಿಗೂ ಅಂಥವೇ ವ್ಯಾವಹಾರಿಕ ಸಂಬಂಧಗಳು ನಿರ್ಮಾಣಗೊಳ್ಳುತ್ತವೆ. ಮತ್ತೆ ಎರಡೂ ಕಡೆಗಳಿಂದ ವಲಸೆಗಳು ನೆಲೆಗಳನ್ನು ನೀಡಿರುತ್ತವೆ, ವೈವಾಹಿಕ ಸಂಬಂಧಗಳು ಏರ್ಪಟ್ಟಿರುತ್ತವೆ. ಹೀಗೆ ದೈವ, ಹಬ್ಬ, ಆಚರಣೆಗಳಲ್ಲಿ ಆಂಧ್ರ-ಕರ್ನಾಟಕದ ಗಡಿ ಸಮುದಾಯಗಳಲ್ಲಿ ಏಕತೆ ಕಂಡುಬರುತ್ತದೆ.

## ತೆಲುಗು-ತಮಿಳಿನ ಪ್ರಭಾವದೊಂದಿಗೆ ಜಿಲ್ಲೆಯ ಐತಿಹ್ಯಗಳು

ಯಾವುದೇ ಜೀವಂತಭಾಷೆ ಇತರೆ ಭಾಷೆಗಳಿಂದ ತನಗೆ ಒಗ್ಗುವ ಶಬ್ದಗಳನ್ನು ಸದಾ ಸ್ವೀಕರಿಸುತ್ತಿರುತ್ತದೆ. ಅಲ್ಲದೆ ಭಾಷೆಯೊಂದಿಗೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳೂ

ಪ್ರಸರಣಗೊಳ್ಳುತ್ತಿರುತ್ತವೆ. ಇಂಥ ಹೊಣೆಗಾರಿಕೆಯನ್ನು ದೇಶದಲ್ಲಿನ ರಾಜ್ಯಗಳ ಗಡಿಪ್ರಾಂತ್ಯಗಳು ನಿರ್ವಹಿಸುತ್ತವೆ. ಈ ಮೂಲಕ ರಾಷ್ಟ್ರೀಯತೆಯನ್ನು ಪುಷ್ಟಿಗೊಳಿಸುವ ಮನೋಧರ್ಮ ಮೂಡುತ್ತಿರುತ್ತದೆ. ರಾಜಕೀಯ ಲಾಭಿಗಳ ನಡುವೆಯೂ ಇಂಥ ಪ್ರಾಂತ್ಯಗಳು ತಮ್ಮ ರಾಯಭಾರತ್ವವನ್ನು ಸಮರ್ಥವಾಗಿ ನಿರ್ವಹಿಸುತ್ತಾ ಭಾಷಾ ಬಾಂಧವ್ಯವನ್ನು ಕಟ್ಟಿಕೊಡುತ್ತವೆ. ಸ್ವಾತಂತ್ರ್ಯೋತ್ತರವಾಗಿ ಭಾರತದ ಭಾಷಾವಾರು ಪ್ರಾಂತ್ಯ ವಿಂಗಡಣೆಯಾಯಿತು. ಮೇಲ್ನೋಟಕ್ಕೆ ಇದು ಭಾಷಿಕ ನೆಲೆಗಳ ವಿಂಗಡಣೆ ಎಂದೆನಿಸಿದರೂ ಆಡಳಿತಾತ್ಮಕ ಹಾಗೂ ರಾಜಕೀಯ ತತ್ವಗಳಿಗೆ ಒಳಪಟ್ಟಿದೆ. ಆದರೆ ಇಂಥಲ್ಲಿನ ಭಾಷಾ ಬಾಂಧವ್ಯವನ್ನು ಕಡೆಗಣಿಸುವಂತಿಲ್ಲ. ಆಯಾ ಪ್ರಾಂತೀಯ ಭಾಷೆಗೆ ಪ್ರಾಧಾನ್ಯತೆ ಲಭಿಸಿದೆಯಾದರೂ ಬೆಳಗಾವಿ, ಕಾಸರಗೋಡು ಮತ್ತು ಹೊಸೂರುಗಳ ಪರಿಸ್ಥಿತಿ ಬೇರೆಯದೇ ಆಗಿದೆ. ಆದರೆ, ಕನ್ನಡ ಮತ್ತು ತೆಲುಗು ಭಾಷೆಗಳ ನಡುವೆ ಸಾಮರಸ್ಯದ ಸಮನ್ವಯತೆಯಿದೆಯೇ ಹೊರತು ಸಂಘರ್ಷದ ಅಲೆಗಳು ಏಳುವುದಿಲ್ಲ. ಇವೆರಡು ರಾಜ್ಯಗಳ ಗಡಿಭಾಗಗಳಲ್ಲಿ ಭಾಷಿಕ ಹಿನ್ನೆಲೆಯಲ್ಲಿ ಹೊಂದಾಣಿಕೆಯಿರುವುದು ಕಂಡುಬರುತ್ತದೆ. ಇಂಥಲ್ಲಿ ತೆಲುಗಿನ ಪ್ರಭಾವ ಹೇರಳವಾಗಿದೆಯಾದರೂ ಅದು ಮೌಖಿಕ ಪರಂಪರೆಯಲ್ಲಿ ದ್ವಿಭಾಷಿಕ ಸತ್ವ ಮತ್ತು ಸೊಗಡುಗಳಿಂದ ಸಮ್ಮಿಶ್ರಗೊಂಡದ್ದಾಗಿರುತ್ತದೆ.

ಕರ್ನಾಟಕದ ರಾಜಪರಂಪರೆಯಲ್ಲಿ ವಿಜಯನಗರದ ಅರಸರ ಕಾಲದಿಂದ ಮೈಸೂರು ಅರಸರವರೆಗೆ ತೆಲುಗು ಭಾಷೆ ಮತ್ತು ಸಾಹಿತ್ಯ ಕನ್ನಡದೊಂದಿಗೆ ವಿಜೃಂಭಿಸಿದೆ. ಆದರೆ ಭಾಷಿಕ ಪೈಪೋಟಿಯಂಥ ಏರುಪೇರುಗಳು ತಲೆದೋರಿಲ್ಲ. ಬದಲಾಗಿ ಭಾಷಿಕ ಕೊಳು-ಕೊಡುಗೆಗಳು ಹೇರಳವಾಗಿ ಕಂಡುಬರುತ್ತವೆ. ಇಲ್ಲಿ ಯಾವ ಭಾಷೆಯೂ ಆಕ್ರಮಣಶೀಲವಲ್ಲ. ಶೈಕ್ಷಣಿಕ ಭಾಷೆ ಕನ್ನಡ, ವ್ಯಾವಹಾರಿಕ ಭಾಷೆ ತೆಲುಗು. ಇವೆರಡು ಪ್ರಭಾವಗಳಲ್ಲಿ ತೆಲುಗು ಕನ್ನಡವನ್ನು ತನ್ನ ಹಿಡಿತದಲ್ಲಿರಿಸಿಕೊಂಡಿದೆ ಎಂದೆನಿಸಿದರೂ ಸಮಾನ ಸ್ಥಾನದಲ್ಲಿ ಕನ್ನಡವು ಪರಿಗಣಿತವಾಗುತ್ತದೆ. ಇಲ್ಲಿನ ಬಹುಪಾಲು ಜನರ ಮಾತೃಭಾಷೆ ತೆಲುಗು ಆದರೂ ಕಛೇರಿ ವಲಯದ ಆಡಳಿತದ ಭಾಷೆಯಾಗಿ ಲಿಖಿತ ಭಾಷೆಯಾಗಿ ಕನ್ನಡವು ಅಧಿಕೃತತೆಯನ್ನು ಪಡೆಯುತ್ತದೆ. ತೆಲುಗು ಭಾಷೆಯನ್ನು ಕನ್ನಡ ಲಿಪಿಯ ಮೂಲಕ ಸೆರೆಹಿಡಿಯುವ ಸಾಹಸ ಇಲ್ಲಿನ ಜನಸಾಮಾನ್ಯರದು. ಲಗ್ನಪತ್ರಿಕೆಗಳು, ಭಿತ್ತಿಪತ್ರಗಳು, ಜಾತಕಪತ್ರಗಳು, ವೈಯಕ್ತಿಕಪತ್ರಗಳು ಮುಂತಾದವುಗಳಲ್ಲಿ ಈ ಭಾಷಾ ವೈವಿಧ್ಯ ಕಂಡುಬರುತ್ತದೆ.

ಕರ್ನಾಟಕ ಏಕೀಕರಣ ಘಟ್ಟದ ಅವಧಿಯಲ್ಲಿ ಕೋಲಾರ ಪ್ರದೇಶಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಸಮಸ್ಯೆಗಳು ಕಂಡುಬರುವುದಿಲ್ಲ. ಏಕೆಂದರೆ ಅದು ಹಿಂದಿನಿಂದಲೂ ಮೈಸೂರು ರಾಜ್ಯಕ್ಕೆ ಸೇರಿಕೊಂಡು ಅದರ ಆಡಳಿತ ಹಾಗೂ ಅಭಿವೃದ್ಧಿ ಕಾರ್ಯಗಳು ಅದರೊಂದಿಗೆ ಮೈಗೂಡಿಸಿಕೊಂಡು ಬಂದಿದೆ. ಅಲ್ಲದೆ

ಈ ಕುರಿತಾಗಿ ನೆರೆಯ ಆಂಧ್ರಪ್ರದೇಶ ಹಾಗೂ ತಮಿಳುನಾಡು ಪ್ರದೇಶಗಳು ತಕರಾರುವೆತ್ತಿದ್ದರು. ಅದೆಲ್ಲ ಅಲ್ಲವಾಗಿ ನಿರ್ಲಿಪ್ತತೆಯಲ್ಲಿ ಮುಕ್ತಾಯಗೊಂಡಿದೆ. ಆದರೂ ಆ ರಾಜ್ಯಗಳ ಸಂಸ್ಕೃತಿ, ಪ್ರಭಾವ ಹಾಗೂ ಆಕ್ರಮಣತೆಗಳು ಅಲ್ಲಗಳೆಯುವಂತಿಲ್ಲ. ಅವು ಇಂದಿಗೂ ಸಮಸ್ಯೆಯಾಗಿ ಉಳಿದಿವೆ.[೬] ಇತ್ತೀಚೆಗೆ ಗಡಿನಾಡು ಅಧ್ಯಯನ ಆಯೋಗ ರಚನೆಗೊಂಡು ಈ ಕುರಿತಾಗಿ ಕಾಳಜಿ ವಹಿಸಿದೆ. ಜಿಲ್ಲೆಯ ೯ ತಾಲೂಕುಗಳನ್ನು ಗಡಿನಾಡು ಪ್ರದೇಶಗಳೆಂದು ಗುರುತಿಸಿದೆ.

ಪ್ರಸ್ತುತ ಸಂದರ್ಭದ ರಾಜಕೀಯ ಹಿನ್ನೆಲೆಯಲ್ಲಿ ಕರ್ನಾಟಕದ ರಾಜಕೀಯವು ಜಿಲ್ಲೆಯಲ್ಲಿ ಆವರಿಸಿರುತ್ತದೆ. ಆಂಧ್ರಪ್ರದೇಶದ ರಾಜಕೀಯದ ಬಗ್ಗೆ ಇಲ್ಲಿನ ಜನ ಸ್ಪಂದಿಸುತ್ತಾರಾದರೂ ಪ್ರಭಾವಕ್ಕೆ ಒಳಗಾಗಿಲ್ಲ. ತಮಿಳುನಾಡಿನ ರಾಜಕೀಯ ಕೆಲವೊಮ್ಮೆ ಕೆ.ಜಿ.ಎಫ್. ಅನ್ನು ಪ್ರಭಾವಗೊಳಿಸುತ್ತದೆ. ಹಾಗೆಯೇ ತೆಲುಗು ಸಿನಿಮಾಗಳ ಪ್ರಭಾವ ದಟ್ಟವಾಗಿದೆ. ಕನ್ನಡ ಸಾಹಿತ್ಯ ಮತ್ತು ಭಾಷೆಗೆ ಜಿಲ್ಲೆಯಲ್ಲಿ ಪ್ರಥಮ ಆದ್ಯತೆ ಇದೆ. ಇಲ್ಲಿನ ಸಾಹಿತಿಗಳು ಕವಿಗಳು ಬಹುಭಾಷಾ ಪಾರಂಗತರೆಂಬುದನ್ನು ಲಿಖಿತ ಪರಂಪರೆಯಿಂದ ತಿಳಿಯಬಹುದು. ಚಿಂತಾಮಣಿ ತಾಲೂಕಿನ ಕರುಬೂರಿನ ಕಬ್ಬರನಾಗಮಯ್ಯ (ಕ್ರಿ.ಶ. ೯೩೧)ನಿಂದ ಇಡಗೂರು ರುದ್ರಕವಿ ಎಂಬ ಯಕ್ಷಗಾನ ಕವಿಯವರೆಗೂ (೧೯ನೇ ಶತಮಾನದ ಪೂರ್ವಾರ್ಧ) ಪ್ರಾಚೀನ ಕವಿಪರಂಪರೆಯ ಕುರುಹುಗಳಿವೆ. ಕುಮದೇಂದು (೧೨೭೫) ಈ ಜಿಲ್ಲೆಯ ಆದಿಕವಿ. 'ಮಧುರಾ ವಿಜಯಂ' ಎಂಬ ಸಂಸ್ಕೃತ ಕಾವ್ಯದ ಮೂಲಕ ಅಲ್ಲಿನ ಚರಿತ್ರೆಯನ್ನು ದಾಖಲಿಸಿದ ಕವಿಯಿತ್ರಿ ಗಂಗಾದೇವಿ ಜಿಲ್ಲೆಯ ಮುಳಬಾಗಿಲಿನವಳು. ಜಿಲ್ಲೆಯ ಮತ್ತೊಬ್ಬ ಪ್ರಸಿದ್ಧ ಕವಿ ಲಕ್ಕಣ ದಂಡೇಶನು ಆಡಳಿತಗಾರನಾಗಿ, ಮುಳಬಾಗಿಲ ಬಳಿ ವಿರೂಪಾಕ್ಷಪುರ ದೇವಾಲಯ ಹಾಗೂ ಮನ್ಮತಕುಂಡ, ಕೆರೆಗಳನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಮಮ್ಮಿನ, ನಂದಿ ಮತ್ತು ಘಂಟ ಕವಿಗಳು ತೆಲುಗಿನಲ್ಲಿ ಕಾವ್ಯ ಬರೆದ ಜಿಲ್ಲೆಯ ಪ್ರತಿಭೆಗಳು.

ದಾಸಪಂಥದ ಶ್ರೀಪಾದರಾಜರು ಮುಳುಬಾಗಿಲಿನವರು. ಗೋವಿಂದಕವಿ (೧೫೬೦), ವೀಪೂರಿ ವೆಂಕಟಾಚಾರ್ಯ (೧೫೯೦), ಪಾಯಣ್ಣವ್ರತಿ (೧೬೦೦), ಮುಮ್ಮಡಿ ತಮ್ಮಭೂಪಾಲ ಪುಲ್ಲಕವಿ (೧೮೦೦), ಚಂದ್ರಕವಿ (೧೮೪೯) ಮೊದಲಾದವರಲ್ಲದೆ, ಯಕ್ಷಗಾನ ಕವಿಗಳಾದ ನಂದಿನಾಥ (೧೬೨೦), ಕಾಶೀರಾಮ (೧೭೫೦), ಬಾಡಾಲ ಸುಬ್ರಹ್ಮಣ್ಯ (೧೮೩೦) ಇಡಗೂರು ರುದ್ರಕವಿ (೧೯ನೇ ಶತಮಾನ ಪೂರ್ವಾರ್ಧ) ಮೊದಲಾದವರು ಜಿಲ್ಲೆಯ ಕವಿಗಳಾಗಿದ್ದು ಇವರಲ್ಲಿ ಕೆಲವರು ರಾಜಾಶ್ರಯದಲ್ಲಿ ಮತ್ತೆ ಕೆಲವರು ಧಾರ್ಮಿಕ ಪೀಠಗಳ ಆಶ್ರಯದಲ್ಲಿ ಸಾಹಿತ್ಯ ರಚನೆಯನ್ನು ಮಾಡಿದ್ದಾರೆ. ತಾಡಿಗೊಳ್ಳ ಕದಿರೀಪತಿ, ಬುಜ್ಜಾಲ ಗೋಪಾಲಯ್ಯ, ಕೋಡೂರಿ ವೆಂಕಟಾಚಲಂ ಕೃಷ್ಣ ಮೊದಲಾದವರು ಕನ್ನಡ,

ತೆಲುಗು, ತಮಿಳು ಭಾಷೆಗಳಲ್ಲಿ ಕಾವ್ಯರಚನೆ ಮಾಡಿದ ಜಿಲ್ಲೆಯ ಪ್ರತಿಭೆಗಳಾಗಿದ್ದಾರೆ. ಆಧುನಿಕ ಸಾಹಿತಿಗಳ ವಲಯದಲ್ಲಿ ಡಿ.ವಿ.ಗುಂಡಪ್ಪ, ಎಲ್.ಬಸವರಾಜು, ನಂಜುಂಡುರಾಧ್ಯ, ಬಿ.ಆರ್.ಲಕ್ಷ್ಮಣರಾವ್ ಮೊದಲಾದವರಲ್ಲದೆ ಕನ್ನಡದ ಪ್ರಥಮ ಜ್ಞಾನಪೀಠ ವಿಜೇತ ಸಾಹಿತಿ ಮಾಸ್ತಿ ವೆಂಕಟೇಶ ಐಯ್ಯಂಗಾರರು ಕೋಲಾರ ಜಿಲ್ಲೆಯವರೆಂಬುದು ಘನತೆಯ ಅಂಶ, ಅಲ್ಲದೆ ಜಿಲ್ಲೆಯಲ್ಲಿ ಹೇರಳವಾಗಿ ದೊರೆಯುವ ಜನಪದ ಸಾಹಿತ್ಯ ದ್ವಿಭಾಷಿಕ-ತ್ರಿಭಾಷಿಕ ಸಂಸ್ಕೃತಿಗಳ ಸೊಗಡಿನೊಂದಿಗೆ ಸಂಪದ್ಭರಿತವಾಗಿದೆ. ಆದರೆ, ಕೋಲಾರ ಜಿಲ್ಲೆಯ ಜನಪದ ಸಾಹಿತ್ಯದ ಬಗ್ಗೆ ನಡೆದ ಅಧ್ಯಯನ-ಸಂಶೋಧನೆಗಳು ಕಡಿಮೆಯೆಂದೇ ಹೇಳಬೇಕು. ಅಕ್ಷರಸ್ಥ ವಲಯದ ಆಧಾರರಹಿತ ತಿಳುವಳಿಕೆಯೆಂದು ಶಿಷ್ಟ ವಲಯದಲ್ಲಿ ಅವಹೇಳನವಿದೆ.

ಕೆರೆ-ಕುಂಟೆ-ಬಾವಿಗಳಿಗೆ ಸಂಬಂಧಿಸಿದಂತೆ ಜಿಲ್ಲೆಯ ಐತಿಹ್ಯಗಳ ವಿವಿಧ ಆಯಾಮಗಳನ್ನು ಸಂಬಂಧಿಸಿದ ಅಧ್ಯಾಯಗಳಲ್ಲಿ ವಿಶ್ಲೇಷಿಸಲಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಜಲಸಂಪನ್ಮೂಲದ ಪರಿಸ್ಥಿತಿ ವಿಕೋಪದ ಸ್ಥಿತಿಯಲ್ಲಿದೆ. ಕೋಲಾರ ಜಿಲ್ಲೆಯಲ್ಲಿ ಕೈಗಾರಿಕೆಗಳು ಕಡಿಮೆ. ಇಲ್ಲಿನ ಜನ ಹೆಚ್ಚು ಕೃಷಿಯನ್ನು ಅವಲಂಬಿಸಿದ್ದಾರೆ. ಕೃಷಿಯ ನೀರಾವರಿ ಸೌಲಭ್ಯಗಳಿಗೆ ಒದಗಿ ಬರುವಂಥ ಜೀವನದಿಗಳ ಕೊರತೆ ಕೋಲಾರ ಜಿಲ್ಲೆಯ ಪಾಲಿಗೆ ಶಾಪದಂತೆ ಪರಿಣಮಿಸಿದೆ. ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುತ್ತಿದ್ದ ನದಿ-ಹಳ್ಳಗಳಲ್ಲಿನ ಮರುಳನ್ನು ಪ್ರಬಲರಾದ ಸ್ಥಳೀಯರು ಮಾರಾಟ ಮಾಡಿಕೊಂಡ ಹಿನ್ನೆಲೆಯಲ್ಲಿ ನದಿಗಳ ನೀರು ಜಲವಾಗಿ ಹಿಂಗುತ್ತಿಲ್ಲ. ಸುಮಾರು ೧೯೮೦ರಿಂದ ಈಚೆಗೆ ಮರುಳು ಸಾಗಾಣಿಕೆಯ ದಾಂಧಲೆ ಹೆಚ್ಚುತ್ತಲೇ ಹೋದಂತೆ ನೀರಾವರಿ ಪಂಪ್‌ಸೆಟ್ ಬಾವಿಗಳೂ ಸೇರಿದಂತೆ ಊರಿನಲ್ಲಿ ಕುಡಿಯುವ ನೀರಿನ ಬಾವಿಗಳೂ ಬತ್ತಿಹೋಗಿವೆ. ನದಿಗಂಗಮ್ಮ, ಬಾವಿಗಂಗಮ್ಮ ಎಂದು ಪೂಜಿಸಿ ಮಾಡುತ್ತಿದ್ದ ಆಚರಣೆಗಳು ಮರೆಯಾಗಿ ಬೋರ್‌ವೆಲ್‌ಗಳ ಪೂಜೆ ಜಾರಿಯಲ್ಲಿದೆ. ಅತಿ ಆಳದವರೆಗೂ ಭೂಮಿಯನ್ನು ಕೊರೆದರೂ ಇತ್ತೀಚೆಗೆ ಅಂತರ್‌ಜಲ ದೊರೆಯುವುದು ದುಸ್ತರವಾಗುತ್ತಿದೆ.

ಕೆರೆಗಳ ಜಿಲ್ಲೆ ಎಂದೇ ಪ್ರಸಿದ್ಧವಾಗಿ ಹೊಲ-ಗದ್ದೆಗಳಿಗೆ ಕೆರೆ ನೀರನ್ನು ಒದಗಿಸುವ ಕಾಲ ಇತ್ತೀಚೆಗೆ ಕಣ್ಮರೆಯಾಗುತ್ತಿದೆ. ಸರಿಯಾಗಿ ಮಳೆ ಬಾರದೆ ಇರುವುದರಿಂದ ಕೆರೆಗಳು ತುಂಬಿ ಕೋಡಿ ಹರಿಯುವುದು ಕಡಿಮೆಯಾಗುತ್ತಿದೆ. ಅಷ್ಟೋ-ಇಷ್ಟೋ ಬಂದು ಕೆರೆಯಲ್ಲಿ ಶೇಖರವಾದ ನೀರಿನಿಂದ ಬತ್ತದ ಬೆಳೆಯನ್ನು ನೆಡುವ ಸಾಧ್ಯತೆಗಳೇ ಇಲ್ಲವಾದವು. ಖುಷ್ಕಿ ಬೆಳೆಗಳಿಗೆ ಅಲ್ಪಸ್ವಲ್ಪ ನೀರನ್ನು ಬಳಸಿಕೊಳ್ಳುತ್ತಿದ್ದರು. ಇತ್ತೀಚೆಗೆ ಅಂತರ್‌ಜಲದ ಮಟ್ಟವನ್ನು ಅಭಿವೃದ್ಧಿಪಡಿಸುವ ಸರ್ಕಾರದ ಯೋಜನೆಯಡಿಯಲ್ಲಿ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಕೆರೆಯ ನೀರನ್ನು ವ್ಯವಸಾಯಕ್ಕೆ ಬಳಸಬಾರದೆಂದು ಆದೇಶವಾಗಿದೆ. ಕೆಲವು ರೈತರು ಕಳ್ಳತನದಲ್ಲಿ ತೂಬುಗಳನ್ನು ಹೊಡೆದು ನೀರನ್ನು ಬಳಸಿಕೊಳ್ಳುವ

ಯತ್ನದಲ್ಲಿದ್ದಾರೆ. ಇಂಥ ಸಾಹಸಗಳಿಂದ ಕೆರೆಯಲ್ಲಿಯೂ ನೀರು ಹಿಂಗದೆ, ಎಲ್ಲರಿಗೂ ಹಂಚಿಕೆಯೂ ಆಗದೆ ಪ್ರಭಾವಶಾಲಿಗಳಿಗೆ ಬಳಕೆಯಾಗುವ ಸಾಧ್ಯತೆಗಳೆ ಕಂಡುಬರುತ್ತಿವೆ. ಜಿಲ್ಲೆಯ ಅಸಂಘಟಿತ ವಲಯದಲ್ಲಿ ಗುಡಿಕೈಗಾರಿಕೆಗಳು ಹೆಚ್ಚಾಗಿದ್ದು ಕಾರ್ಮಿಕರಿಗೆ ಸ್ವಲ್ಪಮಟ್ಟಿಗೆ ಉದ್ಯೋಗಗಳು ಲಭ್ಯವಾಗಿವೆಯಾದರೂ ಆರ್ಥಿಕ ಸಮಸ್ಯೆಗಳಲ್ಲಿ ಮೊದಲಿನಿಂದಲೂ ಒದ್ದಾಡುತ್ತಲೇ ಇದ್ದಾರೆ.

ಕೋಲಾರದ ಅಂತರಗಂಗೆ ಶತಶೃಂಗ ಪರ್ವತ ಶ್ರೇಣಿ ಹೊಂದೊಮ್ಮೆ ದಟ್ಟ ಅರಣ್ಯಗಳಿಂದ ಕೂಡಿತ್ತು. ಸಮುದ್ರ ಮಟ್ಟದಿಂದ ನಾಲ್ಕುಸಾವಿರದ ಮುನ್ನೂರು ಅಡಿ ಎತ್ತರದಲ್ಲಿರುವ ಬೆಟ್ಟದ ಸಮತಟ್ಟಾದ ಪ್ರದೇಶದಲ್ಲಿ ಕೆರೆಯಿದ್ದು, ಫಲವತ್ತಾದ ಮಣ್ಣಿನಿಂದ ಕೂಡಿದ ಕೃಷಿಯೋಗ್ಯ ಭೂಮಿಯಿದೆ. ತಳಭಾಗದಲ್ಲಿ ತಿರುಗಣಿ ಚಕ್ರಭೂಮಿ ಬೆಟ್ಟದ ಮೇಲೆ ಜೀವಂತವಾಗಿದೆ. ಬೆಟ್ಟದಲ್ಲಿ ಕಂಡುಬರುವ ವೃಕ್ಷ ರಾಶಿಯ ದಟ್ಟಬೇರುಗಳ ವಿಪುಲ ಜಾಲ ನೀರನ್ನು ಅಂತರ್‌ಜಲಕ್ಕೆ ಸೇರಿಸುವ ಸಮರ್ಥ ಮಾಧ್ಯಮವಾಗಿದೆ. ಅಂತರಗಂಗೆಯ ಬಸವನ ಬಾಯಿಂದ ಬರುವ ನೀರು ಅಂತರ್‌ಜಲದ ಯಾವುದೋ ಸೆಲೆಯಾಗಿರುವ ಸಾಧ್ಯತೆ ಇದೆ. ಮಳೆಗಾಲದಲ್ಲಿ ರಭಸವಾಗಿ ಸುರಿದು ಬೇಸಿಗೆಯಲ್ಲಿ ಕ್ಷೀಣವಾಗುತ್ತದೆ. ಬರಗಾಲ, ಕ್ಷಾಮ ಆವರಿಸಿದಾಗಲೂ ಬಸವ ಬಾಯಿಂದ ಒಸರುವ ನೀರು ನಿಂತಿರಲಿಲ್ಲ. ಈಗ ಆಧುನಿಕ ಅನುಕೂಲತೆಗಳಿಗೆ ಅನುಗುಣವಾಗಿ ರಸ್ತೆ-ಕಟ್ಟಡಗಳ ನಿರ್ಮಾಣದಿಂದ ವೃಕ್ಷ ಸಂಪತ್ತು ಕಡಿಮೆಯಾಗುತ್ತಿದ್ದು, ಮುಂದೊಮ್ಮೆ ಒಂದಲ್ಲ ಒಂದು ದಿನ ಈ ನೀರಿನ ಸೆಲೆ ನಿಲ್ಲಲೂಬಹುದು.

### ಜಿಲ್ಲೆಯ ಮಾಸ್ತಿಕಲ್ಲು-ವೀರಗಲ್ಲು-ಶಾಸನ

ಮಾನವನಿಗೆ ನೆರವಾಗುತ್ತಿದ್ದ ಪ್ರಾಣಿಗಳ ಬಗ್ಗೆಯೂ ವೀರಗಲ್ಲುಗಳಿವೆ. ನಾಯಿಯ ಸ್ಮಾರಕ ಶಿಲೆ ಮುಳಬಾಗಿಲು ತಾಲ್ಲೂಕಿನ ವೇದಲವೇಣಿಯಲ್ಲಿದೆ. ೭೫ ಹಂದಿಗಳನ್ನು ಕೊಂದ ಧಳಗ, ೨೬ ಹಂದಿಗಳನ್ನು ಕೊಂದ ಲೋಗ ಎಂಬ ನಾಯಿಗಳು ಹಂದಿ ಬೇಟೆಯಲ್ಲಿ ಮಡಿದ ವಿಷಯವನ್ನು ತಿಳಿಸುವ ಶಾಸನವೂ ಇಲ್ಲಿದೆ. ನಗರಗೆರೆಯ ವೀರನಗುಡಿಯಲ್ಲಿ ಕಂಚಿನ ಕುದುರೆಯೊಂದಿದೆ. ಚಿಂತಾಮಣಿ ತಾಲ್ಲೂಕಿನ ತಳಗವಾರದಲ್ಲಿ ಕುದುರೆ ಸ್ಮಾರಕಶಿಲೆ ಇರಬಹುದೆಂಬ ಶಿಲ್ಪವೂ ಇದೆ. ಧಾರ್ಮಿಕ ಸಾಮಾಜಿಕ ಕಾರಣಗಳಿಗಾಗಿ ಆತ್ಮಬಲಿ ನೀಡಿದವರ ವಿವರ : ಗೌರೀಬಿದನೂರು ತಾ.ನಲ್ಲಿ ಯುದ್ಧಕ್ಕೆ ಹೊರಡುವ ಮುನ್ನ ವೀರನೊಬ್ಬನು ತನ್ನ ತಲೆಯನ್ನು ಕತ್ತರಿಸಿಕೊಂಡಿದ್ದನೆಂದು ಹೇಳಲಾಗಿರುವ ಸ್ಮಾರಕ ಶಿಲೆ ಇದೆ. ಇದನ್ನೇ ಸಾಬೀತು ಮಾಡುತ್ತದೆ. ಕೋಲಾರ ಜಿಲ್ಲೆಯಲ್ಲಿ ವೀರಗಲ್ಲುಗಳಿರುವ ಸ್ಥಳಗಳನ್ನು 'ವೀರಗಾರರನೆತ್ತು'[1] ಅಥವಾ 'ಬೂದಿನೆತ್ತು'[2] ಎಂದು ಕರೆಯುತ್ತಾರೆ. ಚಿಂತಾಮಣಿ ತಾಲ್ಲೂಕಿನ ಸಂತೇಕಲ್ಲಹಳ್ಳಿಯ ಬಳಿ ಇವೆ. ಜಿಲ್ಲೆಯಲ್ಲಿ ಭಾರತಾಲ ಪನ್ನಮು ಎಂಬ ಆಚರಣೆ ಇದೆ. ಯುದ್ಧದಿಂದ ಹಿಂದಿರುಗಿ ಬಂದ

ವೀರನನ್ನು ಸ್ವಾಗತಿಸುವ ದಿನವದು. ಊರ ಮುಂದಿನ ಗಂಗಮ್ಮನ ಗುಡಿಯ ಮುಂದೆ ಹೊಸ ಮಡಿಕೆಯಲ್ಲಿ ಕುಡಿಯಲು ನೀರು ಹರಿದ ದೇಹದ ಭಾಗವನ್ನು ಒಲಿಯಲು ಸೂಜಿ ಮತ್ತು ದಾರಗಳನ್ನು ಇಟ್ಟಿರುತ್ತಾರೆ.

ಮದುವೆಯಾಗದೇ ಬ್ರಹ್ಮಚಾರಿಯಾಗಿ ಉಳಿದ ಗಂಡಸನ್ನು 'ಈರಗಾರ'ನೆಂದು ಛೇಡಿಸುತ್ತಾರೆ. ರಾಜರ ಕಾಲದಲ್ಲಿ ಯುದ್ಧದಲ್ಲಿ ಸತ್ತ ಯೋಧನನ್ನು ಈರಗಾರ ಎಂದು ಕರೆಯುತ್ತಿದ್ದರು. ಸಾಮಾನ್ಯವಾಗಿ ಸೈನಿಕರಿಗೆ ಮದುವೆ ಇರುತ್ತಿರಲಿಲ್ಲ. ಇಂಥ ನೆನಪೊಂದು ಈಗ ಛೇಡಿಸುವ ಮಾತಾಗಿ ಉಳಿದಿರುವುದು ವಿಶೇಷ. ಕೆಲವು ವೀರಗಲ್ಲುಗಳನ್ನು ಅವುಗಳನ್ನು ಕುರಿತಂತೆ ಇರುವ ಐತಿಹ್ಯಗಳ ಹಿನ್ನೆಲೆಯಲ್ಲಿ ಪರಿಶೀಲಿಸಬೇಕಾಗುತ್ತದೆ. ಐತಿಹ್ಯಗಳು ಕೆಲವೊಮ್ಮೆ ನಮ್ಮನ್ನು ದಾರಿತಪ್ಪಿಸುವ ಪ್ರಯತ್ನ ಮಾಡುತ್ತವೆ ಎಂಬುದು ನಿಜವಾದರೂ ಕೋಡೀರ್ಲಪ್ಪನ ಆರಾಧನಾ ಸಂಪ್ರದಾಯದ ಅಧ್ಯಯನ ನಮ್ಮನ್ನು ಎಚ್ಚರಿಸುತ್ತದೆ. ಐತಿಹ್ಯಗಳೆಲ್ಲವೂ ತ್ಯಾಜ್ಯವೆಂದು ಹೇಳಬರುವುದಿಲ್ಲ. ದೊರೆಯುವ ಐತಿಹ್ಯ ಮತ್ತು ವೀರಗಲ್ಲಿನ ಶಿಲ್ಪದ ಸಾಮ್ಯತೆಯ ಹಿನ್ನೆಲೆಯಲ್ಲಿ ವಿಚಾರ ಮಾಡಬೇಕಾಗುತ್ತದೆ.[೮] ಕೆಲವೊಮ್ಮೆ ಐತಿಹ್ಯಗಳಲ್ಲಿ ಪಾಠಾಂತರಗಳಾದಾಗ ಭಿನ್ನ ನಿಲುವುಗಳು ಏರ್ಪಡುತ್ತವೆ. ನಿರೂಪಕರು ಭಿನ್ನವಾದಂತೆ ಭಿನ್ನಜ್ಞಾನದ ನೆಲೆಗಳು ಲಭಿಸುತ್ತವೆ. ಇದಕ್ಕೆ ವಿವಿಧ ಕಾಲಘಟ್ಟಗಳಲ್ಲಿ ಮಾಹಿತಿ ಸಂಗ್ರಹಿಸುವುದೂ ಕಾರಣವಾಗುತ್ತದೆ. ಇದಕ್ಕೆ ನಿದರ್ಶನವಾಗಿ ಈ ಕೆಳಗಿನ ಉಲ್ಲೇಖಗಳನ್ನು ಗಮನಿಸಬಹುದು. ವೀರಮತಿಮಮ್ಮಕ್ಷೇತ್ರ ಮತ್ತು ಕಣಿವೆಗೆ ಸಂಬಂಧಿಸಿದ ಮತ್ತೊಂದು ಐತಿಹ್ಯ ಹೀಗಿದೆ : "ಹಿಂದೆ ಅವತಿನಾಡಿನ ನಾಡಗೌಡರು ಈ ಕಣಿವೆಯಲ್ಲಿ ಕೆಲಕಾಲ ನೆಲೆಸಿದ್ದರು. ಈ ಮನೆತನದಲ್ಲೆಲ್ಲಾ ಅತ್ಯಂತ ರೂಪವತಿಯಾದ ತಿಮ್ಮಮ್ಮನನ್ನು ಮೋಹಿಸಿ ಹುಡುಕಿಕೊಂಡು ಬಂದ ಮಧುರೆಯ ನಾಯಕನನ್ನು ಈ ಗೌಡ ಮನೆತನದವರು ಎದುರಿಸಿ ಯುದ್ಧ ಮಾಡಿದರು. ತಿಮ್ಮಮ್ಮನೂ ಸಹ ಯೋಧನಂತೆ ಯುದ್ಧ ಮಾಡಿ ಮಾನರಕ್ಷಣೆ ಮಾಡಿಕೊಂಡು ನಾಯಕನಿಗೆ ವಶವಾಗದೆ ಅಗ್ನಿಪ್ರವೇಶ ಮಾಡಿದಳು. ಅಂದಿನಿಂದ ಆಕೆಗೆ ವೀರತಿಮ್ಮಮ್ಮನೆಂದೂ, ಆ ಕಣಿವೆಗೆ ವೀರತಿಮ್ಮಮ್ಮನ ಕಣಿವೆ ಎಂದೂ ಹೆಸರು ಬಂತು."

ಹಾಗೆಯೇ ನಗರಗೆರೆಯ ಕೋಡೀರ್ಲಪ್ಪನ ವ್ಯಕ್ತಿಐತಿಹ್ಯ ಮತ್ತೊಂದು ಹೀಗಿದೆ: "ರಾಜಲಾ ದ್ಯಾವರಕೊಂಡ ಎಂಬ ರಾಜ್ಯದ ಅರಸರ ಮನೆಯಲ್ಲಿ ಸೈನಿಕನಾಗಿ ಕೆಲಸಕ್ಕೆ ಸೇರಿದ್ದ ಈತ ಆ ರಾಜನ ಮಗಳನ್ನು ಮೋಹಿಸಿ ಅಪಹರಿಸಿಕೊಂಡು ಬಂದು ಬೆಟ್ಟವೊಂದರಲ್ಲಿ ಅಡಗಿಕೊಂಡ. ಹೆಣ್ಣಿನ ಕಡೆಯವರು ಅಟ್ಟಿಸಿಕೊಂಡು ಬಂದಾಗ ಅಲ್ಲಿಂದ ತಪ್ಪಿಸಿಕೊಂಡು ಬಂದು ನಗರಗೆರೆಯ ಬೆಟ್ಟಗುಡ್ಡಗಳಲ್ಲಿ ಅವಿತುಕೊಂಡ, ಶತ್ರುಗಳ ಕಾಟವೆಲ್ಲ ನಿಂತಮೇಲೆ ನಗರಗೆರೆಯಲ್ಲೇ ನೆಲೆನಿಂತ. ಮತ್ತೆ ಕೆಲವಾರು ವರ್ಷಗಳ ನಂತರ

ಆ ಮಾರ್ಗವಾಗಿ ಎಲ್ಲಿಗೋ ಪ್ರಯಾಣ ಮಾಡುತ್ತಿದ್ದ ಒಕ್ಕಲಿಗರ ಸಂಸಾರ, ಬಂಡಿಯ ಅಚ್ಚು ಮುರಿದುದರಿಂದ ಅವರು ಅಲ್ಲಿಯೇ ತಂಗಬೇಕಾಯಿತು. ಅವರಿಗಿದ್ದ ಲಕ್ಷಣವಾದ ಮಗಳ ಜೊತೆ ಕೋಡೀರ್ಲಪ್ಪ ಅನೈತಿಕ ಸಂಬಂಧ ಬೆಳೆಸಿದ. ಈ ವಿಷಯ ಮನೆಯವರಿಗೆ ತಿಳಿಯುವ ವೇಳೆಗೆ ಆ ಒಕ್ಕಲಿಗ ಸಂಸಾರದವರು ಇವನ ಹಂಗಿನಲ್ಲಿದ್ದರು. ಹೀಗಾಗಿ ಕೋಡಿರ್ಲಪ್ಪನ ಮೇಲೆ ಕೈ ಎತ್ತುವ ಸಾಹಸ ಮಾಡಲಿಲ್ಲ. ಮುಂದೆ ಕೋಡೀರ್ಲಪ್ಪ ನಗರಗೆರೆ ಸಂಸ್ಥಾನವನ್ನು ಕಟ್ಟಿ, ಯಾವುದೋ ಕಾರಣಕ್ಕೆ ವೈಷಮ್ಯ ಕಟ್ಟಿಕೊಂಡು ರಾಜಲದ್ಯಾವರಕೊಂಡದವರ ಉಪಟಳದಿಂದ ನಗರಗೆರೆಯಿಂದ ದೂರ ಹೋಗಿದ್ದಾನೆ. ಊರಿನ ಜನರಿಗೆ ಈತನ ಹೆಣ್ಣುಗಳ ಸಹವಾಸದ ವಿಷಯ ಮರೆತು ಹೋಗಿ ನಗರಗೆರೆಯನ್ನು ಉಳಿಸಲು ಹೋರಾಡಿದ ಎಂಬ ಅಂಶ ಮುಖ್ಯವಾಗಿ ವೀರಗಲ್ಲಿನ ಮೂಲಕ ಆರಾಧ್ಯದೈವವಾದ."[೯] ಐತಿಹ್ಯಗಳು ಸಾಮಾನ್ಯ ಜನತೆಯ ಸಾಹಸ ಪ್ರವೃತ್ತಿಯನ್ನು ಎತ್ತಿಹಿಡಿಯುವಂತಹ ಘಟನೆಗಳಾಗಿರುತ್ತವೆ. ಈ ಮೂಲಕ ಆರಾಧನಾ ಸಂಪ್ರದಾಯ ಬೆಳೆಯುತ್ತದೆ. ಜನಪದ ಸಂಸ್ಕೃತಿಯಲ್ಲಿ ಊರಿಗಾಗಿ ಹೋರಾಡಿದವರ ಬಗ್ಗೆ, ಮಾನಪ್ರಾಣಗಳ ಸಂರಕ್ಷಣೆ ಮಾಡಿದವರ ಬಗ್ಗೆ ಗೌರವದಿಂದ ಹಾಡುಕಥೆಗಳನ್ನು ಕಟ್ಟಿ ಅವರನ್ನು ಸಾಂಸ್ಕೃತಿಕ ವೀರರನ್ನಾಗಿ ಮಾಡುವ ಪರಿಪಾಠವಿದೆ. ಆದ್ದರಿಂದ ಇಂಥವರು ಸಾಂಸ್ಕೃತಿಕ ವೀರರಾಗಿ ಹಾಗೂ ದೇವತೆಗಳಾಗಿ ಪರಿವರ್ತಿತರಾಗುತ್ತಾರೆ.

### ಆರಾಧನೆ-ಆಚರಣೆ

ಕೋಲಾರ ಜಿಲ್ಲೆಯಲ್ಲಿ ಗ್ರಾಮದೇವತೆಗಳಿಗೆ ನೀಡುವ ಬಲಿಯನ್ನು ರಣಬಲಿಯೆನ್ನುತ್ತಾರೆ. ಇವರ ಮೂಲ ಯುದ್ಧದಲ್ಲಿ ಗೆದ್ದ ರಾಜರು ಸೆರೆಸಿಕ್ಕ ಅರಸರ ತಲೆಗಳನ್ನು ಗಾಣದಲ್ಲಿ ರುಬ್ಬಿ ರಕ್ತ ತೆಗೆದು ಅನ್ನಕ್ಕೆ ಬೆರೆಸಿ ರಾತ್ರಿ ಭೂತ-ಪ್ರೇತಗಳು ಮತ್ತು ಪಿಶಾಚಿಗಳಿಗೆ ರೆಡ್ಡಿ ರಾಜರು ಫಲ ನೀಡುತ್ತಿದ್ದರ ಪಳಯುಳಿಕೆ. ವಿಜಯನಗರ ಕಾಲದಲ್ಲಿ ಕ್ಷುದ್ರ ದೇವತೆಗಳಿಗೆ ನೀಡುತ್ತಿದ್ದ ಬಲಿಯನ್ನು ರಣಮಲ ಕುಡುಪು ಎಂದು ಆಂಧ್ರದೇಶದಲ್ಲಿ ಕರೆಯುತ್ತಿದ್ದರು. ಈ ಪ್ರಭಾವವೂ ಕೋಲಾರ ಜಿಲ್ಲೆಗಿದೆ ಎಂದು ತಿಳಿದುಬರುತ್ತದೆ[೧೦] ಆದರೆ ಜನಪದ ವಲಯದಲ್ಲಿ ಗ್ರಾಮದೇವತೆಗಳ ದೈವ್ವಗಳ ಅಸ್ತಿತ್ವ ಸಂಕೀರ್ಣಗೊಳ್ಳದೆ ಸಹಜವಾದ ಮಾನವ ಸಾಮರ್ಥ್ಯದ ಸಂಕೇತವಾಗಿದೆ. ಉದಾ: ಚಿಕ್ಕಬಳ್ಳಾಪುರ ತಾಲ್ಲೂಕಿನ ಗಂಗರೆ ಕಾಲುವೆ ಸಪ್ಪಲಮ್ಮ ದನಕರುಗಳನ್ನು ಸಪ್ಪೆ ರೋಗದಿಂದ ರಕ್ಷಿಸುವ ಈಕೆಯನ್ನು ದನಕಾಯುತ್ತಿದ್ದ ಹುಡುಗರು ಕೆರೆಯ ಮಣ್ಣಿನಿಂದ ಆಟದ ಗೊಂಬೆಯನ್ನಾಗಿ ತಯಾರಿಸಿಕೊಂಡಿದ್ದರು. ಇವರಲ್ಲಿದ್ದ ಅಕ್ಕಸಾಲಿಗರ ಹುಡುಗನೊಬ್ಬ ಆ ಗೊಂಬೆಗೆ ಜೀವ ನೀಡಿದ. ಬೇಡರ ಹುಡುಗನೊಬ್ಬ ಊರಿಗೆಲ್ಲ ಸುದ್ದಿ ತಿಳಿಸಿದ. ಅಗಸರ ಹುಡುಗ ಮಡಿಯಲ್ಲಿ ಊರಿಗೆ ಕರೆತಂದನೆಂಬ ಐತಿಹ್ಯವಿದೆ. ಇದು ಆಚರಣೆಗಳಲ್ಲಿ ಆಯಾಗಾರರ ಪಾಲ್ಗೊಳ್ಳುವಿಕೆ-

ಕರ್ತವ್ಯಗಳನ್ನು ಹೇಳುತ್ತದೆ. ಹಾಗೆಯೇ ದೈವ ಸಂಬಂಧಿ ಕಲ್ಪನೆಗಳು ಸಹ ಯಾವುದೋ ದುರಂತ ಸಾವಿನ ನೆನಪುಗಳಾಗಿ ಐತಿಹ್ಯಗಳಲ್ಲಿ ಅಡಗಿವೆ. ಗೌರೀಬಿದನೂರು ಸಮೀಪದ ಕಮಲಮ್ಮನ ಮೋರಿಯ ಐತಿಹ್ಯವು ಕಮಲಮ್ಮನೆಂಬ ವಿದುರಾಶ್ವತ್ಥದ ಯಾತ್ರಾರ್ಥಿಯನ್ನು ಮೋರಿಯ ಕೆಳಗೆ ಕೊಲೆಗೈದ ನೆನಪಿಗಾಗಿ ಆ ಹೆಸರಿನಿಂದ ಕರೆಯುತ್ತಾರೆ.

ತುಮಕೂರು ಜಿಲ್ಲೆಯ ಸಿದ್ಧರಬೆಟ್ಟ, ಪಾವಗಡದ ಶನಿಮಹಾತ್ಮ, ಗೊರವನಹಳ್ಳಿ ಲಕ್ಷ್ಮಿದೇವಿ, ಶಿವಗಂಗೆ, ಘಾಟಿ ಸುಬ್ರಹ್ಮಣ್ಯ, ಚಿತ್ರದುರ್ಗ ಜಿಲ್ಲೆಯ ನಾಯಕನಹಟ್ಟಿ ಇತ್ಯಾದಿ ಜಾತ್ರೆ ಆಚರಣೆಗಳಿಗೆ ಸ್ಪಂದಿಸುವ ಜಿಲ್ಲೆಯ ಜನಪದರು ಸಂಬಂಧಿಸಿದ ಐತಿಹ್ಯಗಳನ್ನು ಎಲ್ಲೆಯ ಮಿತಿಯಿಲ್ಲದೆ ತಮ್ಮವೆಂದು ಸ್ವೀಕರಿಸಿದ್ದಾರೆ. ಇಂಥದ್ದರಲ್ಲಿ ಗೊಂದಿಹಳ್ಳಿ (ಮಧುಗಿರಿ ತಾ.) ಆಂಜನೇಯನ ಆಚರಣೆ ಗಮನ ಸೆಳೆಯುತ್ತದೆ. ಗೊಂದಿಹಳ್ಳಿ ಆಂಜನೇಯನ ವೇಷಧಾರಿಯಾದ ಪೂಜಾರಿಯು ಊರಿಂದೂರಿಗೆ ಮೆರವಣಿಗೆ ಬರುತ್ತಾನೆ. ಮಳೆ-ಬೆಳೆಗಳ ಸ್ಥಿತಿಗತಿಗಳನ್ನು ವಿವರಿಸುತ್ತಾನೆ. ಈಗ ಆತನ ಭವಿಷ್ಯ ಸುಳ್ಳಾಗಲೂಬಹುದು. ಆದರೆ ಅದು ಜನಪದರ ಅಚಾತುರ್ಯದ ಫಲವೆಂದು ನಂಬಿ ಭಕ್ತಿಪೂರ್ವಕವಾಗಿಯೇ ಆರಾಧಿಸುತ್ತಾರೆ. ಗೊಂದಿಹಳ್ಳಿ ಆಂಜನೇಯನ ಭವಿಷ್ಯವಾಣಿಗೆ ಸಂಬಂಧಿಸಿದಂತೆ ಐತಿಹ್ಯವು ನೀಡುವ ಸಮರ್ಥನೆ ಹೀಗಿದೆ : ಒಮ್ಮೆ ಗೊಂದಿಹಳ್ಳಿ ಆಂಜನೇಯನ ಭಕ್ತನ ಮಗಳಿಗೆ ಅನಾರೋಗ್ಯವಾಗಿತ್ತು. ತಮ್ಮ ಮಗಳ ಆರೋಗ್ಯ ಸರಿಯಾದರೆ ಆ ಆಂಜನೇಯನಿಗೆ ಕೊಟ್ಟು ಮದುವೆ ಮಾಡುವುದಾಗಿ ಹರಕೆ ಹೊತ್ತರು. ಚೇತರಿಸಿಕೊಂಡ ಮಗಳನ್ನು ಮದುವೆ ಮಾಡಿಸಿದರು. ಹೀಗೆ ಆಂಜನೇಯನು ಸಂಸಾರಿಯಾದದ್ದರಿಂದ ಭವಿಷ್ಯವಾಣಿಯಲ್ಲಿ ಆಗಾಗ ಲೋಪ ಕಂಡುಬರುತ್ತದೆಯೆಂದು ಸಹಜವಾಗಿ ಪರಿಗಣಿಸುತ್ತಾರೆ. ಹೀಗೆ ನಂಬಿಕೆ-ಐತಿಹ್ಯಗಳೊಂದಿಗೆ ಅನನ್ಯತೆ ಉಳಿದಿದೆ.

ಮೊರಸು ಒಕ್ಕಲಿಗರು ತಮ್ಮ ಕುಲದೈವಕ್ಕೆ ಕಿರುಬೆರಳನ್ನು ನೀಡುವುದರ ಬಗ್ಗೆ ಐತಿಹ್ಯಗಳಿವೆ. ಇದರ ಹಿನ್ನೆಲೆಗೆ ಸಂಬಂಧಿಸಿದಂತೆ ಕರ್ನಾಟಕ-ಆಂಧ್ರ-ತಮಿಳುನಾಡುಗಳಲ್ಲಿ ವೇಳೆಮಳಿ (ಆತ್ಮಬಲಿ) ಪದ್ಧತಿಯು ಇದ್ದಿತು. ರಾಜನಿಗೆ ಆಪ್ತರಾಗಿ ವೇಳೆವಾಳಿಯಾಗುವವರು ರಾಜನು ತಿಂದ ಶಾಸ್ತ್ರ ಮಾಡಿ ಉಳಿಸಿದ ಅನ್ನವನ್ನು ಒಮ್ಮೆ ತಿಂದು ಆ ಋಣವನ್ನು ತೀರಿಸುತ್ತಿದ್ದರು. ಊಟದ ನಂತರ ರಾಜನು ವೀಳೆಯನ್ನು ಅವರ ಮುಂದೆ ಮುಂದಿಡುತ್ತಿದ್ದನು. ಆಗ ವೇಳೆವಾಳಿಯಾಗಲಿರುವವರು ತಮ್ಮ ಕಿರುಬೆರಳನ್ನು ಕತ್ತರಿಸಿ ರಾಜನ ಮುಂದೆ ಇಡುತ್ತಿದ್ದರು. ಅಂದಿನಿಂದ ರಾಜನನ್ನು ಎಲ್ಲ ವಿಷಯಗಳಲ್ಲಿಯೂ ರಕ್ಷಿಸುವುದು ಇವರ ಜವಾಬ್ದಾರಿಯಾಗಿರುತ್ತಿತ್ತು. ಏನನ್ನಾದರೂ ಇವರು ಪರೀಕ್ಷಿಸಿದ ನಂತರವೇ ರಾಜನು ಸ್ವೀಕರಿಸುತ್ತಿದ್ದ. ಹೀಗೆ ರಾಜನಿಗೆ ಸಂಬಂಧಿಸಿದ ಎಲ್ಲ ಮೇಲ್ವಿಚಾರಣೆ ಇವರದಾಗಿತ್ತು. ಅವನು

ಭೋಗಿಸಬೇಕಾದ ಸ್ತ್ರೀಯನ್ನು ಪರೀಕ್ಷಿಸುತ್ತಾರೆ. ಅವರು ಪರಿಶೀಲಿಸಿದ ಜಮಖಾನೆಯನ್ನು ರಾಜನ ನಡೆಗೆಗೆ ಹಾಸುವಂತಿಲ್ಲ.’’[೧೧]

ತಮಿಳುನಾಡಿನ ದೇವಾಲಯಗಳಲ್ಲಿ ವೇಳೈಕ್ಕಾರರು ದೇವರಿಗೆ ತಮ್ಮ ಕಿರುಬೆರಳನ್ನು ಸಮರ್ಪಿಸುತ್ತಿದ್ದರಂತೆ. ಕರ್ನಾಟಕದಲ್ಲಿ ಕಾಲಭೈರವನಿಗೆ ಕಿರುಬೆರಳು ಮತ್ತು ಉಂಗುರದ ಬೆರಳು ಕೊಡುವ ಸಂಪ್ರದಾಯವು ದಕ್ಷಿಣ ಕರ್ನಾಟಕದ ಮೊರಸು ಒಕ್ಕಲಿಗರಲ್ಲಿ ಪ್ರಚಲಿತದಲ್ಲಿದ್ದು ಈಗ ನಿಷೇಧಿತವಾಗಿದೆ. ಈಗ ಭಕ್ತರು ಬೆರಳು ಸುತ್ತ ಹೂಕಟ್ಟಿ ಆ ಹೂವನ್ನು ದೇವರಿಗೆ ಕತ್ತರಿಸಿಕೊಡುತ್ತಾರೆ. ಜಿಲ್ಲೆಯಲ್ಲಿ ಶಾಸನಗಳಿಗೆ ಸಂಬಂಧಿಸಿದಂತೆ ಜನಪದ ನಂಬಿಕೆಗಳು ಪ್ರಚಲಿತವಿದ್ದು ಬೇರೆಯದೇ ಆದ ನಿಲುವುಗಳನ್ನು ನೀಡುತ್ತದೆ. ಶಾಸನದ ಅಡಿಯಲ್ಲಿ ಏಳುಕೊಪ್ಪರಿಗೆ ನಿಧಿ ಇದೆಯೆಂದೂ ಅದರ ಸಂಬಂಧಿ ವಿವರಗಳು ಶಿಲಾಶಾಸನದಲ್ಲಿವೆಯೆಂದೂ ಹೇಳುತ್ತಾರೆ. ಶಾಸನದ ಭಾಷೆಯನ್ನು ಓದಲಾಗದು, ಓದಿದರೆ ಅಂಥವರ ತಲೆಸಾವಿರ ಹೋಳಾಗಿ ಹೋಗುವುದೆಂದೂ ಶಾಸನಗಳ ಬಗ್ಗೆ ಶಾಪವಿರುವುದಾಗಿ ನಂಬುತ್ತಾರೆ. ಗ್ರಾಮದ ಒಳಗೆ ಶಾಸನವಿದ್ದರೆ, ಆ ಗ್ರಾಮದ ನಾಶವನ್ನು ಕುರಿತು ಹೇಳುತ್ತದೆಂದೂ ಏಳು ಕೆರೆಗಳು ಒಡೆದುಹೋಗಿ ಏಳು ಊರುಗಳು ಹರಿದು ನಾಶವಾದರೆ ಈ ಊರು ನಾಶವಾಗುತ್ತದೆಂದು ಬರವಣಿಗೆ ಇದೆ ಎಂಬಿತ್ಯಾದಿ ಐತಿಹ್ಯಗಳು ಲಭಿಸುತ್ತವೆ. ಐತಿಹ್ಯಗಳಿಗೆ ಆಧಾರಗಳಾಗಿ ಒದಗುವ ಕುರುಹುಗಳ ಬಗ್ಗೆ ನಿರೂಪಕರು ಜನಪದರು ಮೌಖಿಕ ಪರಂಪರೆಯಲ್ಲಿ ಸ್ಮೃತಿಗಳನ್ನು ಉಳಿಸಿಕೊಂಡಂತೆ ಶಾಸನಗಳ ಬಗ್ಗೆ ವಿಸ್ಮೃತಿ ತಾಳಿರುವುದು ಕಂಡುಬರುತ್ತದೆ. ಬಹುಶಃ ಶಾಸನಗಳು ರಾಜ ಹಾಗೂ ಶಿಷ್ಟ ವಲಯದ ಸಂಬಂಧಗಳಿದ್ದಿರಬಹುದಾದ ಸಾಧ್ಯತೆಗಳಾಗಿವೆ.

ಉದಾ: ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ಯಾವ ಮಹಿಳೆಯೂ ಶಾಸ್ತ್ರಗಳಲ್ಲಿ ಪಾರಂಗತಳಾಗಿರಲಿಲ್ಲ. ಇದಕ್ಕೆ ಬಹುಶಃ ಒಂದೇ ಒಂದು ಅಪವಾದವೆಂದರೆ, ಸುಮಾರು ೯೦೦ರ ಶಾಸನವೊಂದರಲ್ಲಿ ಕಂಡುಬರುವ ಸಾಮನಿರ್ಮಡಿ ಎಂಬ ಹೆಸರಿನ ಮಹಿಳೆ ಸ್ವಸ್ತಿಶ್ರೀ ನಾಗಾರ್ಜುನಯ್ಯ ನಂದಿಂಗೆಯ ಬೀಯ ಮಗರ್ ಸಾಮಿನಿರ್ಮಡಿ ಸರ್ವಶಾಸ್ತ್ರ ಪ್ರಸಿದ್ಧಿ ಶ್ರೀ (EC10-X-Bp 65. C-900 AD ನಾಗಾರ್ಜುನಯ್ಯ ಮತ್ತು ನಂದಿಂಗೆಯಬ್ಬೆಯ ಮಗಳು ಸಾಮಿನಿರ್ಮಡಿಯು ಸರ್ವಶಾಸ್ತ್ರಗಳಲ್ಲಿ ಪ್ರಸಿದ್ಧಳು.) ಈ ಶಾಸನವು ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲೂಕಿನ ಕಾರುಬೆಲೆ ಗ್ರಾಮದ ರಕ್ತಕೊಡಗೆ ಇನಾಮತಿ ಹೊಲದಲ್ಲಿದೆ.[೨] ಆದರೆ ಐತಿಹ್ಯಗಳಲ್ಲಿ ಉಲ್ಲೇಖವಾದ ಮಹಿಳೆಯರು ದುಃಖಿತರು ಇಲ್ಲವೆ ಶೋಷಿತರಾಗಿದ್ದಾರೆ. ಮಕ್ಕಳಿಲ್ಲವೆಂಬ ಮೋಕ್ಷದ ಕೊರಗನ್ನು ಮರೆಯಲು ಕೆರೆ ಕಟ್ಟೆ ಬಾವಿಗಳನ್ನು ಕಟ್ಟಿಸಿದವರು ಕೆಲವರಾದರೆ ಮತ್ತೆ ಕೆಲವರು ಸಾಮಾಜಿಕ ಧಾರ್ಮಿಕ ಕಾರಣಗಳಿಗಾಗಿ

ಬಲಿಯಾಗಿದ್ದಾರೆ. ಕೆರೆಕೋಟೆಗಳು ಭದ್ರಗೊಳ್ಳಲೆಂದು ಬಲಿಯಾದವರು, ಯುದ್ಧದಲ್ಲಿ ಮಡಿದು ವೀರಸ್ವರ್ಗಕ್ಕೆ ಹೋಗುತ್ತಾನೆಂಬ ಗಂಡನ ಸಾವಿನೊಂದಿಗೆ ಚಿತೆಯೇರಿ ಆತ್ಮಾಹುತಿಯಾದವರು ಮಹಿಳೆಯರಾಗಿದ್ದಾರೆ. ಇಲ್ಲೆಲ್ಲ ಅವರ ಅಭಿಪ್ರಾಯಗಳಿಗೆ ಮಾನ್ಯತೆ ಇಲ್ಲದೆ ಸಾಮಾಜಿಕ ಬಲತ್ಕಾರಕ್ಕೆ ಬಲಿಯಾದವರೇ ಹೆಚ್ಚೆಂದು ಹೇಳಬೇಕು. ಹೀಗಿರುವಾಗ, "ಕನ್ನಡದಲ್ಲಿ ದೊರೆಯುವ ನೂರಾರು ಐತಿಹ್ಯಗಳಲ್ಲಿ ಸ್ತ್ರೀಯರೇ ಹೆಚ್ಚು ಶಕ್ತಿವಂತರಾಗಿರುವ ಅಂಶ ಎದ್ದು ಕಾಣುತ್ತದೆ. ಕರ್ನಾಟಕದಾದ್ಯಂತ ಕಂಡುಬರುವ ಮ್ಯಾಲಕೋಟೆಗಳ ಐತಿಹ್ಯಗಳಲ್ಲಿ ಗಂಡ ಎಸೆದ ಕಲ್ಲಿಗಿಂತ ಹೆಚ್ಚು ದೂರಕ್ಕೆ ಹೆಂಡತಿ ಎಸೆದ ಕಲ್ಲು ಬೀಳುತ್ತದೆ. ಹೆಣ್ಣಿನ ಬಲಿದಾನಕ್ಕೆ ಕೆರೆತುಂಬ ನೀರು ತರಿಸುವ ಶಕ್ತಿ ಇರುತ್ತದೆ"[೧೩] ಎಂಬ ನಂಬಿಕೆಗಳು ಗಮನಾರ್ಹವಾದವುಗಳು.

ಪ್ರಾದೇಶಿಕವಾಗಿ ಸಾಮಾಜಿಕವಾಗಿ ಎಲ್ಲ ಕಡೆಗಳಲ್ಲಿ ಇರುವಂತೆಯೇ ಕೋಲಾರ ಜಿಲ್ಲೆಯಲ್ಲಿಯೂ ದಲಿತರ ಶೋಷಣೆ ನಿರಂತರವಾಗಿ ನಡೆಯುತ್ತಿರುವ ದೌರ್ಜನ್ಯವಾಗಿದೆ. ಜಾತಿವರ್ಗಗಳ ಅಂತರ, ದುಡಿಮೆಯ ತಾರತಮ್ಯ, ಧಾರ್ಮಿಕ ಅವಹೇಳನ, ಸಾಮಾಜಿಕ ಸ್ಥಾನಮಾನಗಳ ಅಸಮತೋಲನ, ಮೂಲಭೂತ ಸೌಲಭ್ಯಗಳಿಂದ ವಂಚನೆ, ಲೈಂಗಿಕ ಕಿರುಕುಳ ಮುಂತಾದ ಕಾರಣಗಳಿಂದ ಜಿಲ್ಲೆಯ ದಲಿತರು ಶೋಷಣೆಗೆ ಒಳಗಾಗುತ್ತಿರುವ ಸುದ್ದಿಮಾಧ್ಯಮಗಳು ಸಮಾಚಾರ ಪತ್ರಿಕೆಗಳ ಅಗ್ರವಾರ್ತೆಯಾಗಿ ಬಿತ್ತರಗೊಳ್ಳುತ್ತಿರುವುದು ದಲಿತರ ಅಪಮಾನಕ್ಕೆ ಹಿಡಿದ ಕನ್ನಡಿಯಾಗಿದೆ. ಜಿಲ್ಲೆಯ ಬಹುಪಾಲು ದಲಿತರು ಅಸ್ಪೃಶ್ಯರು, ಬುಡಕಟ್ಟು ಮೂಲನಿವಾಸಿಗಳು, ಗಿರಿಜನರು ಮೊದಲಾದವರು. ಇವರು ನಾಡಸೀಮೆಯ ಜನರೊಂದಿಗೆ ಬದುಕುವ ಅವಕಾಶಗಳಿಂದ ವಂಚಿತರು. ಇಲ್ಲವೇ ಚತುರ್ವರ್ಣಗಳಿಂದ ಸ್ಪರ್ಶಕ್ಕೆ ಅನರ್ಹರೆಂದು ಕಡೆಗಣಿಸಲ್ಪಟ್ಟವರು. ಕರ್ನಾಟಕ-ಆಂಧ್ರಗಳಲ್ಲಿ ಹೊಲೆಯ, ಮಾಲ, ಮಾದಿಗರನ್ನು ದಲಿತರೆಂದು ಕರೆಯುತ್ತಾರೆ. ಇವರ ವೃತ್ತಿ ಕಸುಬುಗಳು ವಂಶಪಾರಂಪರ್ಯವಾಗಿ ಅನುಸರಿಸಿಕೊಂಡು ಬಂದಂಥವುಗಳಾಗಿವೆ. ಗ್ರಾಮಗಳ ಕಾವಲುಗಾರರಾಗಿ, ಗ್ರಾಮದ ನೈರ್ಮಲ್ಯೀಕರಣದ ಕೆಲಸಗಳಾದ ಸತ್ತ ದನ, ನಾಯಿ ಮುಂತಾದ ಪ್ರಾಣಿಗಳನ್ನು ಊರಾಚೆ ಊಳುವುದು ಮುಂತಾದ ಕೆಲಸಗಳನ್ನು ದಲಿತರು ಮಾಡುತ್ತಿದ್ದರು. ಅಲ್ಲದೆ ಶವಸಂಸ್ಕಾರದಂಥ ಆಚರಣೆಗಳಲ್ಲಿ ತೊಡಗಿಸಿಕೊಂಡು ಗುಣಿ ತೋಡುವುದು, ಸಂಸ್ಕಾರ ಮಾಡುವುದು ಮೇಲ್ಜಾತಿಯ ಆಚರಣೆಗಳಲ್ಲಿ ಮೈಲಿಗೆ ತೆಗೆಯುವುದು ಮೊದಲಾದ ಬಿಟ್ಟಿ ಚಾಕರಿಗಳನ್ನು ಮಾಡುತ್ತಾರೆ. ಇತ್ತೀಚೆಗೆ ಇವರಲ್ಲಿ ಕೆಲವರು ಹೊಲಗದ್ದೆಗಳಲ್ಲಿ ಕೃಷಿಕರಾಗಿ ಕೂಲಿಯಾಳುಗಳಾಗಿ ದುಡಿಯುತ್ತಿದ್ದಾರೆ. ಕೋಲಾರ ಪ್ರದೇಶದ ಚಿನ್ನದ ಗಣಿಗಾರಿಕೆಯಲ್ಲಿ ಬಹುಪಾಲು ಆದಿದ್ರಾವಿಡರು ತೊಡಗಿಸಿಕೊಂಡಿದ್ದಾರೆ.

ಸಾಮಾಜಿಕವಾಗಿ ದಲಿತರಿಗೆ ಸಂಬಂಧಿಸಿದಂತೆ ನಿಷೇಧಗಳಿರುತ್ತವೆ. ಅವುಗಳೆಂದರೆ ಅವರು ಅಸ್ಪೃಶ್ಯರು ಎಂಬ ನಿಲುವು. ಅವರನ್ನು ಮುಟ್ಟಿಸಿಕೊಳ್ಳಬಾರದು, ಬ್ರಾಹ್ಮಣರು ಅಸ್ಪೃಶ್ಯರು ಪರಸ್ಪರ ಎದುರಾಗಬಾರದು. ಹೊಲೆಯರ ಕೇರಿಗೆ ಬ್ರಾಹ್ಮಣರು, ಬ್ರಾಹ್ಮಣರ ಅಗ್ರಹಾರಗಳಿಗೆ ಹೊಲೆಯರೂ ಹೋಗಬಾರದು. ಊರಿನಲ್ಲಿ ಅಸ್ಪೃಶ್ಯರಿಗೆ ಮನೆ ಕಟ್ಟಲು ಸಾಮಾಜಿಕ ಒಪ್ಪಿಗೆ ಸಿಗುವುದಿಲ್ಲ. ಅವರು ಊರಾಚೆ ತಮ್ಮದೇ ಆದ ಪ್ರತ್ಯೇಕ ಕೇರಿಗಳಲ್ಲಿ ವಾಸಿಸಬೇಕು. ದೇವಾಲಯಗಳಿಗೆ ಪ್ರವೇಶವಿಲ್ಲ. ಕೆರೆ-ಕುಂಟೆ-ನದಿ-ಬಾವಿಗಳ ನೀರನ್ನು ಮುಟ್ಟಬಾರದು, ಚತುರ್ವರ್ಣಗಳ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಮನೆಗಳಿಗೆ ಪ್ರವೇಶಿಸಬಾರದು ಎಂಬ ನಿಲುವುಗಳಿವೆ. ಹಿಂದೂ ಧರ್ಮವೆಂದು ಕರೆಸಿಕೊಳ್ಳುವ ವೈದಿಕ ಧರ್ಮದ ಕಟ್ಟುಪಾಡುಗಳಿಂದ ತಲಾತಲಾಂತರವಾಗಿ ಶೋಷಣೆಗೆ ಗುರಿಯಾದ ದಲಿತರು ಸ್ವತಂತ್ರಾನಂತರದ ಸಾಮಾಜಿಕ ಪರಿವರ್ತನೆಗಳ ಪ್ರಭಾವದಿಂದ ತುಸು ಚೇತರಿಸಿಕೊಳ್ಳಲು ಯತ್ನಿಸುತ್ತಿದ್ದಾರೆಂದು ಮೇಲ್ನೋಟಕ್ಕೆ ತಿಳಿದುಬರುತ್ತದೆ. "ಮಾದಿಗಳನ್ನು ಮಲ್ಲಕ್ಕನೆಂದರೆ ಮತ್ತಷ್ಟು ಹಿಗ್ಗಿದಳು" ಎಂಬ ಗಾದೆ, "ಹೋರೀನ ನೀರಿಗೆ ಬಿಡಬಾರದು ಹೊಲೆಯನನ್ನ ಕೇರಿಗೆ ಬಿಡಬಾರದು" ಎಂಬ ಮತ್ತೊಂದು ಗಾದೆ ಈ ಪ್ರದೇಶದಲ್ಲಿ ಅಸ್ಪೃಶ್ಯರು ಅಥವಾ ದಲಿತರ ಅಸ್ತಿತ್ವವನ್ನು ಹೇಳುತ್ತದೆ.

ಗಾಂಧೀಜಿಯವರ ಹರಿಜನ ಕಲ್ಪನೆ ಮತ್ತು ಇದಕ್ಕಾಗಿ ಮಾಡಿದ ಹೋರಾಟ ಒಂದು ರೀತಿಯಲ್ಲಿ ದಲಿತರಲ್ಲಿ ಎಚ್ಚರಿಕೆಯ ಪ್ರಜ್ಞೆಯನ್ನು ಮೂಡಿಸಿತು. ಅಂಬೇಡ್ಕರ್-ಲೋಹಿಯಾ ಚಿಂತನೆಗಳು ವಿದ್ಯಾವಂತ ವರ್ಗದಲ್ಲಿ ದಲಿತಪರ ಸಂಘಟನೆಗಳೊಂದಿಗೆ ಸ್ವಲ್ಪಮಟ್ಟಿಗೆ ಕಣ್‌ತೆರೆಸುವ ಸಾಧನಗಳಾದವು. ಇವುಗಳ ಜೊತೆಗೆ ದಲಿತರಿಗೆ ಅನ್ಯಧರ್ಮಗಳ ಆಕರ್ಷಣೆ ಹಿಂದೂ ಧರ್ಮದ ಅಸ್ಪೃಶ್ಯತೆಯಿಂದ ಬಿಡಿಸಿಕೊಳ್ಳುವ ಆಸೆಯಾಗಿ ಕೆಲವರ ಪರಿವರ್ತನೆಗೆ ಕಾರಣವಾಗಿದೆ. ಮತ್ತೆ ಕೆಲವೆಡೆಗಳಲ್ಲಿ ಸವಲತ್ತುಗಳ ಆಮಿಷವೂ ಆಗಿದೆ. ಬಾಂಡಲಿಯಿಂದ ಬೆಂಕಿಗೆ ಹಾರಿದ ಗಾದೆಯಂತೆ ದಲಿತರ ಸಮಸ್ಯೆಯು ಉಪಶಮನದ ಮಾರ್ಗೋಪಾಯಗಳಿಂದ ಕಾಲದಿಂದ ಕಾಲಕ್ಕೆ ವಿವಿಧ ರೂಪಗಳನ್ನು ಪಡೆಯುತ್ತಿದೆಯೇ ಹೊರತು ಪರಿಹಾರ ಕಂಡುಬರುವುದಿಲ್ಲ. ಸನಾತನ ಧರ್ಮದೊಂದಿಗೆ ಉಳಿಸಿಕೊಂಡಿರುವ ದಲಿತ ಶೋಷಣೆ ದಲಿತೇತರರ ಆಚರಣೆಗಳಲ್ಲಿ ಬಿಂಬಿತವಾಗುತ್ತದೆ. ದಲಿತರು ನಿಷೇಧತೆಯನ್ನು ಮುರಿದು ಮುನ್ನುಗ್ಗಿದಾಗ ತಮಗೆ ಕೇಡುಂಟಾಯಿತು ಎಂಬ ನಂಬಿಕೆ ಐತಿಹ್ಯಗಳಲ್ಲಿ ಕಂಡುಬರುತ್ತದೆ. ದಲಿತರ ಪ್ರವೇಶದಿಂದ ಆಚರಣೆಗಳಲ್ಲಿ ತೊಡಕಾಗಿ ನಿಂತುಹೋದ ಘಟನೆಗಳನ್ನು ಕೆಲವು ಐತಿಹ್ಯಗಳು ಹೇಳುತ್ತವೆ.

ಕೆಲವು ಕೆರೆ, ಕೋಟೆ, ದೇವಾಲಯಗಳಲ್ಲಿ ಬಲಿಯಾದ ಬಸುರಿಯರು ಮಗುವನ್ನು ತೂಗಿ ಜೋಗುಳ ಹಾಡಿ ಸುಧಾರಿಸುತ್ತಿದ್ದರೆಂಬ ನಂಬಿಕೆ ಇದೆ. ನಂತರ ಅಸ್ಪೃಶ್ಯರ ಪ್ರವೇಶದಿಂದ ಅದು ನಿಂತಿದೆ

ಎಂಬ ನಂಬಿಕೆ ಐತಿಹ್ಯಗಳಲ್ಲಿ ವ್ಯಕ್ತವಾಗುತ್ತದೆ. ದಲಿತೇತರ ನಂಬಿಕೆಗಳಲ್ಲಿ ಅಸ್ಪೃಶ್ಯತೆಯನ್ನು ಮೀರಿದಾಗ ತಮಗೆ ಅನಿಷ್ಟವುಂಟಾಯಿತೆಂಬ ಅಂಶ ಪ್ರಕಟವಾಗುತ್ತದೆ. ಆದರೆ ದಲಿತೇತರರಿಂದ ತಮಗೆ ಉಂಟಾದ ನೋವು ಒದಗಿದ ಸಂಕಷ್ಟಗಳನ್ನು ಯಾವ ಐತಿಹ್ಯದಲ್ಲೂ ನೇರವಾಗಿ ದಲಿತರು ವ್ಯಕ್ತಪಡಿಸಿದ ನಿದರ್ಶನಗಳು ಸಿಗುವುದು ಅತಿ ವಿರಳ. ಏಕೆಂದರೆ ಅವರ ಅಭಿವ್ಯಕ್ತಿಯನ್ನೆ ಮೂಕಗೊಳಿಸುವ ಸಂಚಲನೆ ಮೇಲ್ ಜಾತಿಗಳಿಗಿರುವುದರಿಂದ ದಲಿತರು ಭಯಗ್ರಸ್ಥರಾಗಿದ್ದಾರೆ. ದಲಿತರ ವಲಯಗಳ ಸಮುದಾಯಗಳಲ್ಲಿ ತಮ್ಮ ಅಸ್ಥಿತ್ವಗಳಿಗಾಗಿ ನಡೆದ ಹೋರಾಟಗಳ ವಿವರಗಳು ದೊರೆಯುತ್ತವೆ. ಅವು ಅನಿವಾರ್ಯ ಕೂಡ. ಏಕೆಂದರೆ ಅಂಥ ಹೋರಾಟಗಳಿಂದ ಪ್ರಾಕೃತಿಕ ಸಂಪನ್ಮೂಲಗಳಲ್ಲಿ ಪರಸ್ಪರ ಹಂಚಿಕೆ ಮಾಡಿಕೊಂಡ ಆ ಮೂಲಕ ಸಂಬಂಧ-ಸಾಮರಸ್ಯಗಳನ್ನು ಬೆಳೆಸಿಕೊಂಡ ನಿಲುವುಗಳು ಸ್ಪಷ್ಟವಾಗಿವೆ. ಉದಾ : ಬೇಡರ ಬೊಮ್ಮಣ್ಣ ಮತ್ತು ಆದಿಜಾಂಬವರು ತಮ್ಮ ಅಸ್ಥಿತ್ವಗಳಿಗಾಗಿ ಹೊಡೆದಾಡಿದರೂ ಆ ಮೂಲಕ ಅನ್ಯೋನ್ಯ ಸಂಬಂಧದ ಬಾಂಧವ್ಯವನ್ನು ಉಳಿಸಿಕೊಂಡರೆಂಬ ಐತಿಹ್ಯ. ಹಾಗೆಯೇ ಮೇಲ್ಜಾತಿಯ ಆಕ್ರಮಣದಿಂದ ಬಿಡಿಸಿಕೊಳ್ಳಲೋಸುಗ ಹೊಲೆಯ-ಅಗಸ ಒಂದೇ ಎಲೆಯಲ್ಲಿ ಊಟ ಮಾಡಿದರೆಂಬ ಐತಿಹ್ಯ ಇತ್ಯಾದಿ ಮುಖ್ಯವಾಗುತ್ತವೆ.

ಜನಪದ ವಲಯಗಳು ತಮ್ಮ ಅಸ್ಥಿತ್ವದ ಮೂಲ ಬೆಳವಣಿಗೆ ಪರಿವರ್ತನೆಗಳಿಗೆ ಸಂಬಂಧಿಸಿದಂತೆ ಕಟ್ಟಿಕೊಡುವ ಐತಿಹ್ಯಗಳು ತಮ್ಮದೇ ಆದ ಮೂಲಪುರುಷ ಇಲ್ಲವೇ ಸ್ತ್ರೀ, ಸಾಂಸ್ಕೃತಿಕ ವ್ಯಕ್ತಿಗಳು ಮೊದಲಾದವರ ಮೂಲಕ ಸೃಷ್ಟಿಸಿಕೊಂಡಿರುವ ಪುರಾಣಗಳು ಸತ್ಯದ ಘಟನೆಗಳು ವಿಕಾಸ ಹೊಂದ್ದಿದರ ದ್ಯೋತಕಗಳಾಗಿವೆ. ಆದರೆ ಇಂಥವುಗಳನ್ನು ಕಾಲನಂತರ ಶಿಷ್ಟಪುರಾಣಗಳೊಂದಿಗೆ ಹೋಲಿಸಿ ಆ ಮೂಲಕ ಸಂಬಂಧ ಪಡೆಯಲು ಹಂಬಲಿಸಿದ್ದು ಶಿಷ್ಟದ ಪ್ರಭಾವದಿಂದಲೂ ಇರಬಹುದು. ಅಥವಾ ಶಿಷ್ಟ ಸಮುದಾಯದ ಆಕ್ರಮಣವನ್ನೂ ಹೇಳುತ್ತಿರಬಹುದು. ಇದು ಅಸ್ಪೃಶ್ಯ ಅಥವಾ ದಲಿತರಲ್ಲಿ ಮತ್ತೂ ಸ್ಪಷ್ಟವಾಗಿದೆ. ಉದಾ : ಹೊಲತಿಯರು ವಿಶ್ವಾಮಿತ್ರನ ಸಂತಾನವೆಂಬ ನಂಬಿಕೆ. ಇದು ಹರಿಶ್ಚಂದ್ರ ಪುರಾಣ/ ಕಥೆಯಲ್ಲಿ ಪಡೆಯುವ ತಿರುವುಗಳಿಂದ ಮತ್ತಷ್ಟು ಸ್ಪಷ್ಟವಾಗುತ್ತದೆ. ರೇಣುಕೆ-ಜಮದಗ್ನಿ-ಪರಶುರಾಮರ ಪುರಾಣಕಥೆ ಯಲ್ಲಮ್ಮ-ಮಾತಂಗಿಯೊಂದಿಗೆ ಪಡೆಯುವ ತಿರುವುಗಳು. ಅರುಂಧತಿ-ವಸಿಷ್ಠ ವಿವಾಹ ಸಂಬಂಧವನ್ನು ತಮ್ಮ ಮೂಲಕ ಗುರುತಿಸಿಕೊಳ್ಳುವ ಮಾದಿಗ ಸಮುದಾಯದ ಪುರಾಣ ಐತಿಹ್ಯಗಳು ಕೋಮಟಿ-ವೈಶ್ಯರವರೆಗೂ ತಮ್ಮ ಸಂಬಂಧದ ವ್ಯಾಪ್ತಿಯನ್ನು ವಿಸ್ತರಿಸುತ್ತವೆ. ಆದರೆ ಶಿಷ್ಟ ಸಮಾಜವು ಇಂಥದನ್ನು ಸಾರಾಸಗಟಾಗಿ ತಳ್ಳಿ ಹಾಕುತ್ತದೆ. ಆದ್ದರಿಂದ ಇವು ಜನಪದ ವಲಯದಲ್ಲಿ ಮಾತ್ರ ಗಟ್ಟಿಗೊಳ್ಳುತ್ತವೆ.

ಆದರೆ ಶಿಷ್ಟ ಪುರಾಣಗಳು ಪ್ರಸಿದ್ಧ ವ್ಯಕ್ತಿಗಳು ಕೆಲವರು ಮೂಲತಃ ಜನಪದ ಸಮುದಾಯಗಳಿಗೆ ಸೇರಿದವರೆಂಬುದು ಸ್ಪಷ್ಟವಾಗಿದ್ದಾಗಲೂ ಶಿಷ್ಟವು ಅದನ್ನು ಮುಚ್ಚಿ ಹಾಕಲು ಪಾಪ-ಪುಣ್ಯ-ಪುನರ್ ಜನ್ಮ ಇತ್ಯಾದಿ ನಂಬಿಕೆಗಳಲ್ಲಿ ಮುಚ್ಚಿ ಹಾಕುತ್ತದೆ. ಋಷಿಮೂಲ ದೇವಮೂಲವನ್ನು ಪ್ರಶ್ನಿಸಬಾರದೆಂಬ ಧಾರ್ಮಿಕ ಆದೇಶವನ್ನು ಕೆದಕಿ ನೋಡಿದಾಗ ನಿಜವಾದ ಸತ್ಯ ಬೆಳಕಿಗೆ ಬರುತ್ತದೆ. ಪುರಾಣಗಳು ಕಟ್ಟಿಕೊಡುವ ಋಷಿಗಳಲ್ಲಿ ಬಹುಪಾಲು ಕೆಳಸಮುದಾಯಗಳಿಗೆ ಸೇರಿದವರು ನಿರಂತರ ಪರಿಶ್ರಮದ ಮೂಲಕ ಶಿಷ್ಟ ವಲಯವನ್ನೂ ತಟ್ಟಿದವರು. ಜ್ಞಾನಿಗಳ ವಲಯವನ್ನು ಶಿಷ್ಟವು ತನ್ನ ಸ್ವತ್ತೆಂದುಕೊಂಡು ಅವರಿಗೆ ಪೂರ್ವಜನ್ಮದ ಪಾಪದ ಫಲವಾಗಿ ಶಾಪಗ್ರಸ್ತರಾಗಿ ಕೆಳಜಾತಿಗಳಲ್ಲಿ ಹುಟ್ಟಿದರೆಂದೂ ಪುನರ್‌ಜನ್ಮದಲ್ಲಿ ಋಷಿಯೋ ದೈವವೋ ಆದರೆಂದು ಶಿಷ್ಟ ಪುರಾಣಗಳು ತಿರುವುಗಳನ್ನು ನೀಡಿವೆ. ಉದಾ: ಬೇಡರ ಜಾತಿಯ ವಾಲ್ಮೀಕಿಯು ರಾಮಾಯಣ ಮಹಾಕಾವ್ಯವನ್ನು ರಚಿಸಿದ್ದು. ಇದು ರಾಮನ ಕಾಲದ ಚಾರಿತ್ರಿಕ ಕಾವ್ಯವೂ ಇರಬಹುದು. ಇದಕ್ಕೆ ಧಾರ್ಮಿಕ ಮಹತ್ವ ಹೆಚ್ಚಿದಂತೆಲ್ಲ ಪುರಾಣವಾಗಿ ಮಾರ್ಪಟ್ಟ ಸಾಧ್ಯತೆಗಳೂ ಇವೆ. ಈ ಹಿನ್ನೆಲೆಯಲ್ಲಿ ವಾಲ್ಮೀಕಿ ಮಹರ್ಷಿಯಾದದ್ದು, ಬ್ರಾಹ್ಮತ್ವವು ವಾಲ್ಮೀಕಿಯೊಂದಿಗೆ ಸಂಬಂಧ ಬೆಳೆಸಿಕೊಂಡದ್ದು ಇಲ್ಲಿ ಗಮನಾರ್ಹ. ಅದಕ್ಕನುಗುಣವಾಗಿ ವಾಲ್ಮೀಕಿಯ ಜಾತಿ ಹಿನ್ನೆಲೆಯನ್ನು ಮುಚ್ಚಿಹಾಕುವ ಪ್ರಯತ್ನವಾಗಿ ಪಾಪ ಪ್ರಾಯಶ್ಚಿತ್ತಕ್ಕಾಗಿ ಬ್ರಾಹ್ಮಣನು ಬೇಡ (ವಾಲ್ಮೀಕಿ)ನಾಗಿ ಹುಟ್ಟಿದನೆಂಬ ಕಥೆಯಲ್ಲಿ ಕಂಡುಬರುತ್ತದೆ.

ದಲಿತರ ಶೋಷಣೆಗೆ ಸಂಬಂಧಿಸಿದಂತೆ ಜಿಲ್ಲೆಯಲ್ಲಿ ಇತ್ತೀಚಿನ ವರ್ಷಗಳಲ್ಲಿ ಬೆಳಕಿಗೆ ಬಂದ ಹೋರಾಟದ ಘಟನೆಗಳೆಂದರೆ, ನಾಗಸಂದ್ರದ ಭೂಹೋರಾಟ (ಗೌರೀಬಿದನೂರು ತಾಲ್ಲೂಕು) ಮರನಪಲ್ಲಿ ದಲಿತ ಚಳುವಳಿ (ಕೋಲಾರ ತಾಲ್ಲೂಕು), ಕಂಬಾಲಪಲ್ಲಿಯ ದಲಿತ ದಹನದ ಹೋರಾಟ ಮುಂತಾದವುಗಳಾಗಿವೆ. ಇವು ಸ್ಥಳೀಯವಾದ ದಲಿತ ಶೋಷಣೆಯ ವಿರುದ್ಧ ನಡೆಸಿದ ಪ್ರತಿಭಟನಾತ್ಮಕ ಹೋರಾಟಗಳಾಗಿವೆ. ಜಾತಿ ವೈಷಮ್ಯ ಮತ್ತು ಅಸ್ಪೃಶ್ಯತೆಯ ಕಾರಣದಿಂದಾಗಿ ಜಿಲ್ಲೆಯ ದಲಿತರ ಮೇಲೆ ಹಲ್ಲೆ- ಶೋಷಣೆಗಳು ನಿರಂತರವಾಗಿದ್ದು ಇತ್ತೀಚೆಗಿನ ದಲಿತರು ಮತ್ತು ಸವರ್ಣೀಯರಲ್ಲಿ ನಡೆಯುವ ಸಂಘರ್ಷಗಳು ಗಮನಾರ್ಹವಾದವುಗಳು. ಕಂಬಾಹಳ್ಳಿಯಲ್ಲಿ ಅಸ್ಪೃಶ್ಯತೆ ಹಾಗೂ ಗುಂಪು ಘರ್ಷಣೆಗಳ ಕಾರಣಕ್ಕಾಗಿ ದಲಿತರ ಮನೆಗಳಿಗೆ ಬೆಂಕಿ ಹಚ್ಚಿದ್ದರಿಂದ ಕೆಲವು ದಲಿತರು ಸುಟ್ಟು ಕರಕಲಾದ ಘಟನೆ (೨೦೦೦ ಇಸ್ವಿಯಲ್ಲಿ) ನಡೆಯಿತು.

ಹೀಗೆ ಜಿಲ್ಲೆಯಲ್ಲಿ ದಲಿತ ಶೋಷಣೆಯ ವಿರುದ್ಧ ದಲಿತ ಸಂಘಟನೆಗಳು ಎಚ್ಚೆತ್ತು ಕಾರ್ಯನಿರ್ವಹಿಸುತ್ತಿವೆ. ಇಂತಹ ಪ್ರತಿಭಟನೆಗಳ ಸಂದರ್ಭದಲ್ಲಿ ಆಯಾ ಘಟನೆಯನ್ನು ಬಿಂಬಿಸುವ

ಆಶು ಕವಿತೆಗಳಾಗಿ ದಲಿತ ಹೋರಾಟದ ಗೀತೆಗಳು ಮೂಡುತ್ತವೆ. ಇವು ಮೌಖಿಕ ಪರಂಪರೆಯಲ್ಲಿ ದಲಿತರ ದುರಂತಗಳು ಪ್ರಾದೇಶಿಕವಾಗಿ ಘಟನಾ ಐತಿಹ್ಯಗಳಾಗಿ ಪ್ರಸರಣಗೊಳ್ಳುತ್ತವೆ. ಇವು ದಲಿತ ಸುಧಾರಣೆಯಲ್ಲಿ ದಾಪುಗಾಲುಗಳಾಗಿ ದಲಿತ ಸಂವೇದನೆಯ ತುಡಿತಗಳಾಗಿ ಕಂಡುಬರುತ್ತವೆ. ಮಾಲುಮೇಲ ಕುಮಾರನ ಐತಿಹ್ಯ, ಮೇದರಹೆಣ್ಣು ಮೊರಗಳನ್ನು ಮಾರಾಟ ಮಾಡಿದ ಐತಿಹ್ಯ ಹಾಗೂ ದಲಿತರ ಹೆಣ್ಣನ್ನು ಕತ್ತೆಕಿರುಬ ಹೊತ್ತೊಯ್ಯಿತೆಂಬ ಐತಿಹ್ಯಗಳಲ್ಲಿ ಜಿಲ್ಲೆಯ ಕೆಲವು ಭೂಮಾಲೀಕರು ದಲಿತರ ಮೇಲೆ ದೌರ್ಜನ್ಯವೆಸಗಿ ಕೊಂದಂಥ ಇಲ್ಲವೇ ತೇಜೋವಧೆ ಮಾಡಿದ ಅಥವಾ ಶೀಲ ಅಪಹರಿಸಿದ ಘಟನೆಗಳು ಅಡಗಿವೆ. ಚಿನ್ನ ದೊರೆಯುವ ನಾಡೆಂಬ ಜಿಲ್ಲೆಯ ಪ್ರಖ್ಯಾತಿಯ ಹಿಂದೆ ಬಂಡವಾಳಶಾಹಿಗಳು ಕೆಲವರ, ಹಲವು ಭೂಮಾಲೀಕರ ಶೋಷಣೆಯ ಅರಾಜಕತೆ ಅಡಗಿರಬಹುದೇ ಎಂಬುದು ಆಶಯವಾಗಿ ಉಳಿದಿದೆ. ಹೈದರ್‌ಆಲಿಯ ಜನ್ಮಭೂಮಿ ಕೋಲಾರ ಜಿಲ್ಲೆಯ ಬೂದಿಕೋಟೆಯಾಗಿತ್ತೆಂದು; ಕರ್ನಾಟಕದ ಮೊದಲ ಮುಖ್ಯಮಂತ್ರಿಯಾದ ಕೆ.ಸಿ.ರೆಡ್ಡಿಯವರು ಕೋಲಾರ ಜಿಲ್ಲೆಯವರೆಂದೂ; ಸರ್.ಎಂ. ವಿಶ್ವೇಶ್ವರಯ್ಯನವರಂಥ ಮೇಧಾವಿ, ಟಿ.ಎಂ.ವೆಂಕಟಾಚಲರಂಥ ಆದರ್ಶ ಲೋಕಾಯುಕ್ತರನ್ನೂ ಕೆಲವು ವಿಜ್ಞಾನಿಗಳನ್ನು ಬಾಹ್ಯಾಕಾಶ ತಜ್ಞರನ್ನು ಕೋಲಾರ ಜಿಲ್ಲೆ ನೀಡಿದೆಯಾದರೂ ಜನಸಾಮಾನ್ಯರ ಬದುಕಿನ ನೋವು-ನಲಿವುಗಳ ತುಡಿತಗಳನ್ನು ಜಿಲ್ಲೆಯ ಐತಿಹ್ಯಗಳು ಕಟ್ಟಿಕೊಡುತ್ತವೆ.

**ಟಿಪ್ಪಣಿಗಳು**

೧. ವೆಂಕಟೇಶ ಜಿ.ಎಂ. ಎಂ.ಫಿಲ್. ಪ್ರಬಂಧ, ೨೦೦೫, ಪು.೭

೨. ಕನ್ನಡ ವಿಶ್ವಕೋಶ, ಸಂ.೫, ೧೯೭೬, ಪು.೪೨೮

೩. ಗಾಂಧೀಜಿ ೧೯೧೫ರಲ್ಲಿ ನಂದಿಗಿರಿಧಾಮಕ್ಕೆ ಭೇಟಿಕೊಟ್ಟಿದ್ದರು. ೧೯೩೬ ಜಿಲ್ಲೆಯಾದ್ಯಂತ ಖಾದಿ ಪ್ರಚಾರದ ಪ್ರವಾಸ ಮಾಡಿದ್ದರು.

೪. ವೆಂಕಟೇಶ ಜಿ.ಎಂ. ಎಂ.ಫಿಲ್. ಪ್ರಬಂಧ, ೨೦೦೫, ಪು.೮

೫. ಜಾಜಿ ದೇವೇಂದ್ರಪ್ಪ, ೨೦೦೪, ಪು.೨೧೭, ೨೧೮

೬. ವೆಂಕಟೇಶ ಜಿ.ಎಂ. ಎಂ.ಫಿಲ್. ಪ್ರಬಂಧ, ೨೦೦೫, ಪು.೧೫೮,೧೫೯

೭. ವೆಂಕಟಮ್ಮ ೭೦ ವರ್ಷ, ಚಿಕ್ಕಕುರುಗೋಡು, ಗೌರೀಬಿದನೂರು ತಾ.

೮. ಶೇಷಶಾಸ್ತ್ರಿ, ೧೯೭೯, ಪು.೩೧

೯. ಸುರವರಮು ಪ್ರತಾಪರೆಡ್ಡಿ, ಆಂಧ್ರುಲ ಸಾಂಘಿಕ ಚರಿತ್ರಮು, ಪು.೩೭೮

೧೦. ರಂಗಾರೆಡ್ಡಿ ಕೆ., ೨೦೦೩, ಪು.

೧೧. ಚಿದಾನಂದಮೂರ್ತಿ, ೨೦೦೨, ಪು.೩೪೩

೧೨. ಚಿದಾನಂದಮೂರ್ತಿ, ೧೯೭೯, ಪು.೪೫೭

೧೩. ಪುರುಷೋತ್ತಮ ಬಿಳಿಮಲೆ, ೧೯೯೭, ಪು.೨೪೩

## ಅಧ್ಯಾಯ ೮

## ಸಮಾರೋಪ

'ಕೋಲಾರ ಜಿಲ್ಲೆಯ ಐತಿಹ್ಯಗಳ ಅಧ್ಯಯನ'ವನ್ನು ಸಂಶೋಧನೆಯ ವಿಧಿ-ವಿಧಾನಗಳ ಚೌಕಟ್ಟಿಗೆ ಬದ್ಧಗೊಳಿಸಿರುವುದರಿಂದ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಏನೆಂಬುದನ್ನು ಖಚಿತಪಡಿಸಲಾಗಿದೆ. ಮುಂದುವರಿದಂತೆ ಇದುವರೆಗೆ ಜಿಲ್ಲೆಯ ಬಗ್ಗೆ ನಡೆದ ಅಧ್ಯಯನಗಳನ್ನು ಪ್ರಸ್ತಾಪಿಸುವುದರೊಂದಿಗೆ, ಪ್ರಸ್ತುತ ಸಂಶೋಧನೆಗಾಗಿ ಅನುಸರಿಸುವ ಕ್ರಮಗಳನ್ನು ತಿಳಿಸಿರುತ್ತೇನೆ. ಇದೇ ಅಧ್ಯಾಯದಲ್ಲಿ ಐತಿಹ್ಯದ ಅರ್ಥ, ನಿರೂಪಣೆ, ಸ್ವರೂಪ ಮತ್ತು ಐತಿಹ್ಯಗಳ ವರ್ಗೀಕರಣ ಕುರಿತಂತೆ ವಿಶ್ಲೇಷಿಸಲಾಗಿದೆ. ಇಲ್ಲಿ ಪಾಶ್ಚಿಮಾತ್ಯ-ಭಾರತೀಯ ಹಾಗೂ ಕನ್ನಡದ ವಿದ್ವಾಂಸರ, ಸಂಶೋಧಕರ ಅಭಿಪ್ರಾಯಗಳನ್ನು ಅಧ್ಯಯನಗಳನ್ನು ಪರಿಗಣಿಸಿರುತ್ತೇನೆ. ಅಲ್ಲದೆ ಪ್ರಸ್ತುತ ಸಂಶೋಧನೆಯ ವರ್ಗೀಕರಣದ ವಿವರವನ್ನು ಸ್ಥೂಲವಾಗಿ ನೀಡಿರುತ್ತೇನೆ. ಕರ್ನಾಟಕದಲ್ಲಿನ ಐತಿಹ್ಯಗಳ ಅಧ್ಯಯನದ ಆರಂಭಿಕ ಹಿನ್ನೆಲೆಯೊಂದಿಗೆ, ಜನಪದ ಸಾಹಿತ್ಯ ಪ್ರಕಾರವಾಗಿ ನಡೆದ ಐತಿಹ್ಯಗಳ ಅಧ್ಯಯನದ ಸಮೀಕ್ಷೆಯನ್ನು ನೀಡಿರುತ್ತೇನೆ.

ಎರಡನೆಯ ಅಧ್ಯಾಯವು 'ಜಾನಪದ ಸ್ವರೂಪ ಮತ್ತು ಜನಪದರಲ್ಲಿ ಐತಿಹ್ಯಗಳ ಮಹತ್ವ' ಎಂಬುದಾಗಿದ್ದು, ಐತಿಹ್ಯದ ಲಕ್ಷಣ ಮತ್ತು ಗುಣಧರ್ಮ, ಐತಿಹ್ಯಗಳ ವೈಶಿಷ್ಟ್ಯಗಳು, ಆಶಯಗಳು, ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಐತಿಹ್ಯಗಳ ಅಧ್ಯಯನ ಎಂಬ ಶೀರ್ಷಿಕೆಗಳಿಂದ ಕೂಡಿದೆ. ಇದರಲ್ಲಿ ಜನಪದ ಕಥೆ, ಗೀತೆ, ಪುರಾಣಗಳೊಂದಿಗೆ ಐತಿಹ್ಯ ಬೆರೆತುಕೊಳ್ಳುವ ಹಾಗೂ ಬೇರೆಯಾಗುವ ಸಂದರ್ಭಗಳನ್ನು ಕುರಿತು ಚರ್ಚಿಸಲಾಗಿದೆ. ಕಥೆ ಮತ್ತು ಐತಿಹ್ಯಗಳನ್ನು ಐತಿಹ್ಯ ಪಡೆಯುವ ತಿರುವುಗಳನ್ನು (ಆಡುನುಡಿ, ಗಾದೆ ಮತ್ತು ಒಗಟುಗಳಲ್ಲಿನ ಐತಿಹ್ಯಗಳನ್ನು) ವಿಶ್ಲೇಷಿಸಲಾಗಿದೆ.

ಅಧ್ಯಾಯ ಮೂರರಲ್ಲಿ ನಂಬಿಕೆ, ಆಚರಣೆ ಮತ್ತು ಇತಿಹಾಸದೊಂದಿಗೆ ಐತಿಹ್ಯಗಳ ಅಸ್ತಿತ್ವ ಮಹತ್ವ ಹಾಗೂ ಪರಸ್ಪರ ಪ್ರಾಧಾನ್ಯತೆಗಳ ಕುರಿತು ಸಂಶೋಧಿಸಲಾಗಿದೆ. ಜಿಲ್ಲೆಯ ನಂಬಿಕೆ, ಆಚರಣೆಗಳಿಗೆ ಅಲ್ಲಿನ ಐತಿಹ್ಯಗಳು ಆಗರಗಳಾಗಿರುವ ಬಗೆಯನ್ನು ಬೆಳಕಿಗೆ ತರುವ ಪ್ರಯತ್ನ

ಮಾಡಲಾಗಿದೆ. ಲಿಖಿತ ಇತಿಹಾಸ ಮತ್ತು ಮೌಖಿಕ ಇತಿಹಾಸದ ಭಿನ್ನ ಪರಂಪರೆಗಳಲ್ಲಿ ಐತಿಹ್ಯದ ಪಾತ್ರವೇನೆಂಬುದನ್ನು ನಿದರ್ಶನಗಳೊಂದಿಗೆ ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಸ್ಥಳೈತಿಹ್ಯಗಳನ್ನು ಕುರಿತು ವಿವರಿಸಲಾಗಿದೆ. ಸ್ಥಳೈತಿಹ್ಯಗಳಲ್ಲಿ ಪವಾಡಗಳು ಸ್ಥಳೈತಿಹ್ಯಗಳಾಗಿ ಸ್ಥಳಪುರಾಣಗಳು, ಸ್ಥಳೈತಿಹ್ಯಗಳು-ಸ್ಥಳಪುರಾಣಗಳು, ಸ್ಥಳಪುರಾಣದೊಂದಿಗೆ ಆಚರಣೆ, ವಿಧಿ-ನಿಷೇಧಗಳು ಪಾಂಡವರ ಗುಡಿಗಳ ಕುರಿತ ಐತಿಹ್ಯಗಳು, ರಾಮಾಯಣ ಸಂಬಂಧಿ ಐತಿಹ್ಯಗಳು, ಸ್ಥಳನಾಮಗಳಲ್ಲಿ ಅರಸರ ನೆನಪುಗಳು ಐತಿಹ್ಯ-ಸ್ಥಳನಾಮಗಳ ಸಂಬಂಧ, ಸ್ಥಳಸಂಬಂಧಿ ಐತಿಹ್ಯಗಳು ಹಾಗೂ ನಂಬಿಕೆಗಳು, ಸ್ಥಳೈತಿಹ್ಯಗಳಲ್ಲಿ ಸ್ಥಳನಾಮಗಳು ಇವುಗಳಲ್ಲಿ ಅಡಗಿರುವ ಪೌರಾಣಿಕ ಅಂಶಗಳು, ಸ್ಥಳಪುರಾಣಗಳು-ದೇವಾಲಯಗಳು, ಕೆರೆ-ಕುಂಟೆ-ಬಾವಿಗಳಿಗೆ ಸಂಬಂಧಿಸಿದ ಐತಿಹ್ಯಗಳ ಕುರಿತ ಸಂಶೋಧನೆಯನ್ನು ಸಾದರಪಡಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ವ್ಯಕ್ತಿ ಹಾಗೂ ಸಮುದಾಯ ಸಂಬಂಧಿ ಐತಿಹ್ಯಗಳ ಪರಿಚಯವಿದೆ. ಜಿಲ್ಲೆಯ ಕೆಲವು ಸಮುದಾಯಗಳನ್ನು ಅವುಗಳ ಸಾಂಸ್ಕೃತಿಕ ವ್ಯಕ್ತಿಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಸಮುದಾಯಗಳ ಉಗಮ, ವಿಕಾಸ ಮತ್ತು ಅಸ್ತಿತ್ವಕ್ಕೆ ಸಂಬಂಧಿಸಿದ ಐತಿಹ್ಯಗಳನ್ನು ವೃತ್ತಿ ಆಚರಣೆ ನಂಬಿಕೆಗಳ ಮೂಲದೊಂದಿಗೆ ಸಾಂಸ್ಕೃತಿಕ ನಾಯಕ / ನಾಯಕಿಯರ ನೆನಪುಗಳೊಂದಿಗೆ ವಿಸ್ತೃತಪಡಿಸಿರುತ್ತೇನೆ.

ಆರನೆಯ ಅಧ್ಯಾಯದಲ್ಲಿ ಘಟನಾ ಪ್ರಧಾನ ಐತಿಹ್ಯಗಳ ವಿಶ್ಲೇಷಣೆ ಇದೆ. ಕೌಟುಂಬಿಕ ಐತಿಹ್ಯಗಳು ಗ್ರಾಮದೇವತೆಗಳ ಐತಿಹ್ಯಗಳು ಆಕಾಶ ಸಂಬಂಧಿ ಐತಿಹ್ಯಗಳು, ಸಾವು ಮತ್ತು ದೆವ್ವ ಸಂಬಂಧಿ ಐತಿಹ್ಯಗಳ, ಪಶು-ಪಕ್ಷಿ-ಪ್ರಾಣಿ ಸಂಬಂಧಿ ಐತಿಹ್ಯಗಳ ಕುರಿತು ಅಧ್ಯಾಯ ನಡೆಸಲಾಗಿದೆ.

ಅಧ್ಯಾಯ ಏಳರಲ್ಲಿ ಐತಿಹ್ಯಗಳ ವಿವಿಧ ಆಯಾಮಗಳೊಂದಿಗೆ ಜಿಲ್ಲೆಯ ಸಾಂಸ್ಕೃತಿಕತೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಮುಂದುವರೆದು ಉಪಸಂಹಾರ ಹಾಗೂ ಅನುಬಂಧದ ವಿವರಗಳನ್ನು ದಾಖಲಿಸಲಾಗಿದೆ.

**ಒಟ್ಟು ಅಧ್ಯಯನ ಅಥವಾ ಸಂಶೋಧನೆಯ ಫಲಿತಗಳು ಹೀಗಿವೆ :** ಕರ್ನಾಟಕದ ಅವಿಭಾಜ್ಯ ಅಂಗವಾದ ಕೋಲಾರ ಜಿಲ್ಲೆಯ ಆಂಧ್ರಪ್ರದೇಶ ಹಾಗೂ ತಮಿಳುನಾಡಿನ ಕೆಲವು ಭಾಗಗಳಿಗೆ ಹೊಂದಿಕೊಂಡು ತ್ರಿಭಾಷಿಕ ನೆಲೆಯ ಸಾಂಸ್ಕೃತಿಕ ಆಯಾಮಗಳಿಗೆ ಆಗರವಾಗಿರುವುದಲ್ಲದೆ ಹಿಂದಿ, ಇಂಗ್ಲೀಷ್, ಉರ್ದು ಹಾಗೂ ಮರಾಠಿ ಭಾಷಿಕರ ಸಂಸ್ಕೃತಿಗಳನ್ನು ಕನ್ನಡ ಪರಂಪರೆಯೊಂದಿಗೆ ಸಮನ್ವಯ ಮಾಡಿಕೊಂಡಿದೆ. ಈ ಪ್ರದೇಶದ ಐತಿಹ್ಯಗಳು-ಭಾಷೆ, ಇತಿಹಾಸ ಹಾಗೂ ಸಂಸ್ಕೃತಿಯ

ಹಿನ್ನೆಲೆಯಲ್ಲಿ ವಿಶಿಷ್ಟವಾದ ಜಾನಪದೀಯ ಸತ್ವವನ್ನು ಒಳಗೊಂಡಿದೆ. ಇಂಥ ಅಧ್ಯಯನವನ್ನು ಹೇಗೆ ಕೈಗೊಳ್ಳಬೇಕೆಂಬ ನಿಟ್ಟಿನಲ್ಲಿ ಮಾರ್ಗದರ್ಶಕರೊಂದಿಗೆ ಚರ್ಚಿಸಿ ಅವರ ಸಲಹೆ ಸೂಚನೆಗಳನ್ನು ಅನುಸರಿಸಿರುತ್ತೇನೆ.

ಜಾನಪದದ ಜ್ಞಾನಶಾಖೆಗಳಲ್ಲಿ ಒಂದಾದ ಐತಿಹ್ಯವು ಮೌಖಿಕ ಪರಂಪರೆಯಲ್ಲಿ ಪಡೆದ ಸ್ವರೂಪವೇನೆಂಬುದರ ಬಗ್ಗೆ ಕೃತಿಗಳಿಂದ ಪಡೆಯಲು ಗ್ರಂಥಗಳ ಪರಾಮರ್ಶನ ನಡೆಸಿರುತ್ತೇನೆ. ಐತಿಹ್ಯವು ಶಿಷ್ಟ ಸಾಹಿತ್ಯದ ಇತಿಹಾಸ ಅಥವಾ ಚರಿತ್ರೆಗಿಂತ ಹೇಗೆ ಭಿನ್ನ ಎಂಬುದರ ಬಗ್ಗೆ ಅಭ್ಯಾಸಿಸಿ ಇತಿಹಾಸ ಮತ್ತು ಐತಿಹ್ಯಗಳ ಸಾಮ್ಯತೆ-ಭಿನ್ನತೆಗಳ ಕುರಿತು ವಿಶ್ಲೇಷಿಸಿದ್ದೇನೆ. "ಹಿಂದೆ ಹೀಗೆ ನಡೆಯಿತು" ಎಂದು ಜನಪದರು ವಿವರಿಸುವ ಐತಿಹ್ಯಗಳಿಗೆ ಆಧಾರಗಳಾದ ಪ್ರಕೃತಿಯ ವಿಶಿಷ್ಟ್ಯಗಳು, ಪರಂಪರಾಗತವಾಗಿ ಮುಂದುವರೆದು ನೆನಪಿನ ಸಾಮರ್ಥ್ಯದ ಮೂಲಕ ಪ್ರವಹಿಸುವ ಜ್ಞಾನ ಸಾಮರ್ಥ್ಯದ ಕಾಲ್ಪನಿಕತೆ ಮತ್ತು ರಮ್ಯತೆಗಳಲ್ಲಿ ಅಡಗಿರುವ ವಾಸ್ತವತೆಗಳ ಸಾಮರಸ್ಯಗಳನ್ನು ಭೇದಿಸುವುದು ಹೇಗೆ ಎಂಬುದನ್ನು ಕುರಿತು ವ್ಯಾಸಂಗ ನಡೆಸಿದ್ದೇನೆ. ಐತಿಹಾಸಿಕ ಹಾಗೂ ಪೌರಾಣಿಕ ಘಟನೆಗಳ ಸಂಗತಿಗಳು ಜನಪದದಲ್ಲಿ ಐತಿಹ್ಯಗಳಾಗಿರುವುದನ್ನು ಮನಗಂಡಿರುತ್ತೇನೆ. ಜನಪದ ಕಥೆ-ದಂತಕಥೆ-ಪುರಾಣ ಐತಿಹ್ಯಗಳ ಬೆಳವಣಿಗೆಗಳ ಹೋಲಿಕೆ-ವ್ಯತ್ಯಾಸಗಳನ್ನು ಅವಲೋಕಿಸಿರುತ್ತೇನೆ.

ಇದುವರೆಗೆ ನಡೆದಿರುವ ಐತಿಹ್ಯಗಳ ಅಧ್ಯಯನಗಳನ್ನೂ ಅವುಗಳ ಸ್ವರೂಪವನ್ನೂ: ಕನ್ನಡದಲ್ಲಿ ಮುಂದುವರೆದ ಐತಿಹ್ಯಗಳ ಅಧ್ಯಯನದ ವ್ಯಾಪ್ತಿ ಸ್ವರೂಪಗಳನ್ನು ವಿಶ್ಲೇಷಿಸಿದ್ದೇನೆ. ಸ್ಥಳನಾಮಗಳು ಐತಿಹ್ಯಗಳ ಹಿನ್ನೆಲೆಯಲ್ಲಿ ಒದಗಿಸಬಹುದಾದ ಚಾರಿತ್ರಿಕ ಅಥವಾ ಪೌರಾಣಿಕ ಸಂಗತಿಗಳನ್ನು ಅವಲೋಕಿಸಿದ್ದೇನೆ. ಪ್ರಸ್ತುತ ನನ್ನ ಅಧ್ಯಯನಕ್ಕೆ ಆಗರವಾಗಿರುವ ಕೋಲಾರ ಜಿಲ್ಲೆಯ ಪರಿಚಯಕ್ಕಾಗಿ ಪರೋಕ್ಷ ಹಾಗೂ ಪ್ರತ್ಯಕ್ಷ ಆಕರ-ಪರಿಕರಗಳನ್ನು ಅಭ್ಯಾಸಿಸಿದ್ದೇನೆ. ಪರೋಕ್ಷ ಪರಿಕರಗಳೆಂದರೆ ವಾಙ್ಮಯ; ಸಾಹಿತ್ಯ-ಸಾಹಿತ್ಯೇತರ ಗ್ರಂಥಾಧಾರಗಳನ್ನು ಅವಲೋಕಿಸುವಿಕೆ. ಪ್ರತ್ಯಕ್ಷ ಆಕರಗಳೆಂದರೆ ಜಿಲ್ಲೆಯ ಸ್ಥಳಗಳು, ಆಚರಣೆಗಳು, ಹಬ್ಬ, ಜಾತ್ರೆ, ಉತ್ಸವಗಳನ್ನು ದರ್ಶಿಸುವುದು ಕೋಟೆ-ಕೊತ್ತಳ ದೇವಾಲಯ ಇತ್ಯಾದಿ ಮಾನ್ಯೂಮೆಂಟ್ಸ್‌ನ್ನೂ ಶಾಸನಗಳಂಥ ಕೆಲವು ದಾಖಲಾತಿ ಆಧಾರಗಳನ್ನೂ ಕ್ಷೇತ್ರಕಾರ್ಯ ಕೈಗೊಂಡು ದಾಖಲಿಸಿದೆ.

ಪ್ರಮುಖವಾಗಿ ಕರ್ನಾಟಕ ಆಂಧ್ರಪ್ರದೇಶದ ಗಡಿಭಾಗಗಳಾದ ಜಿಲ್ಲೆಯ ತಾಲ್ಲೂಕುಗಳಾದ ಬಾಗೇಪಲ್ಲಿ, ಗುಡಿಬಂಡೆ, ಗೌರೀಬಿದನೂರು, ಚಿಕ್ಕಬಳ್ಳಾಪುರ, ಚಿಂತಾಮಣಿ ತಾಲೂಕುಗಳಲ್ಲಿ ಕ್ಷೇತ್ರಕಾರ್ಯ

ಕೈಗೊಂಡು ತೆಲುಗು-ಕನ್ನಡ ಭಾಷಿಕ ಹಿನ್ನೆಲೆಗಳಲ್ಲಿ ಐತಿಹ್ಯಗಳನ್ನು ಸಂಗ್ರಹಿಸುವ ಕ್ಷೇತ್ರಕಾರ್ಯವನ್ನು ಯೋಜಿಸಿದ್ದೇನೆ. ಜಿಲ್ಲೆಯ ವ್ಯಾಪ್ತಿ-ವಿಸ್ತೀರ್ಣ; ಜನಸಂಖ್ಯೆ-ಜನಜೀವನ; ಶಿಕ್ಷಣ-ವೃತ್ತಿ-ಪ್ರವೃತ್ತಿಗಳು; ಕಲೆ-ಸಾಹಿತ್ಯ; ಹಬ್ಬ-ಆಚರಣೆಗಳು ಮುಂತಾದ ವಿವರಗಳನ್ನು ಸಂಬಂಧಿಸಿದ ಕಛೇರಿ-ಸಂಸ್ಥೆಗಳ ನೆರವಿನೊಂದಿಗೆ ಸಂಗ್ರಹಿಸಿರುತ್ತೇನೆ. ಅಧ್ಯಯನದ ದೃಷ್ಟಿಯಿಂದ ಜಿಲ್ಲೆಯ ಸ್ಥಳೀಯ ಪತ್ರಿಕಾಲಗಳಿಂದ ಪ್ರಕಟವಾದ ಮುಖ್ಯವಾದ ಬರಹಗಳನ್ನೂ ಪುಸ್ತಕಗಳನ್ನೂ ಲೇಖನಗಳನ್ನೂ ಸಂಗ್ರಹಿಸಿದ್ದೇನೆ. ಜಿಲ್ಲೆಯ ನಾಡು-ನುಡಿಗೆ ಸಂಬಂಧಿಸಿದ ಸ್ಮರಣಸಂಚಿಕೆಗಳನ್ನೂ ಸಂಪಾದನಾ ಗ್ರಂಥಗಳನ್ನು ಪಡೆದಿರುತ್ತೇನೆ. ಜನಸಾಮಾನ್ಯರನ್ನು ಭೇಟಿ ಮಾಡಿ ಮಾಹಿತಿ ಪಡೆಯುವುದಲ್ಲದೆ ಪರಿಣಿತ ಜನಪದ ತಜ್ಞರನ್ನು ಸಂದರ್ಶಿಸಿ; ಚರ್ಚಿಸಿ ಸಂಶೋಧನೆಗೆ ರೂಪುರೇಷೆಗಳನ್ನು ನೀಡಿರುತ್ತೇನೆ.

## ಅನುಬಂಧ

## ವಕ್ತೃಗಳ ವಿವರ

೧. ಚೊಕ್ಕರೆಡ್ಡಿ ತಂದೆ ನಾಗಪ್ಪ, ೭೦, ರೈತ, ಬೂರಗಮಾಕಲಹಳ್ಳಿ, ಚಿಂತಾಮಣಿ ತಾಲೂಕು

೨. ನಾರಾಯಣರೆಡ್ಡಿ ತಂದೆ ವೆಂಕಟರಾಮಿರೆಡ್ಡಿ, ೮೫, ಊರ್ರವಾಡಿ, ಚಿಂತಾಮಣಿ ತಾಲೂಕು

೩. ವೆಂಕಟರಮಣಾಚಾರಿ, ೬೮, ಅರ್ಚಕ, ಬೂರಗಮಾಕಲಹಳ್ಳಿ

೪. ಎಸ್.ಎನ್. ರಾವ್

೫. ಎ. ವಿಶ್ವನಾಥ ಶಾಸ್ತ್ರಿ ತಂದೆ ಬಿ. ವಿಶ್ವನಾಥ ಶಾಸ್ತ್ರಿ, ೭೨, ಶಾಸ್ತ್ರೀಸ್ ಹೋಟೆಲ್ ಮಾಲೀಕ

೬. ಬಿ. ಚೌಡಾರೆಡ್ಡಿ, ೮೦, ಊಲವಾವೆ

೭. ರಾಮಪ್ಪ ನಾಯ್ಡು, ೮೫, ಸ್ವತಂತ್ರ ಹೋರಾಟಗಾರ ರಾಯಲಸೀಮೆ

೮. ಚೌಡಾರೆಡ್ಡಿ ಎ. ೬೮, ಕಾಂಗ್ರೆಸ್ ರಾಜಕಾರಣಿ, ಚಿಂತಾಮಣಿ

೯. ಶ್ರೀನಿವಾಸಾಚಾರ್ಯ ತಂದೆ ವೆಂಕಟರಮಣಾಚಾರ್ಯ, ೫೮, ಊಲವಾಡಿ

೧೦. ಶ್ರೀನಿವಾಸಚಾರ್ಯ ತಂದೆ ಆದಿನಾರಾಯಣಪ್ಪ, ೪೫, ಕೊಡರವಾಡಿ

೧೧. ಲಕ್ಷ್ಮೀನಾರಾಯಣ, ೪೦, ಅರ್ಚಕ, ಬೂರಗಮಾಕಲಹಳ್ಳಿ

೧೨. ಲಕ್ಷ್ಮೀದೇವಮ್ಮ ಗಂಡ ರಾಮಪ್ಪ ೬೫, ಮಡಿಕೆರಿ

೧೩. ಅಪ್ಪಾಜಿ ರೆಡ್ಡಿ, ೭೦, ಕೆ.ಎಸ್. ಕಾಗತಿ

೧೪. ವಿಭಾಕರರೆಡ್ಡಿ, ೫೦, ಚಿಂತಾಮಣಿ

೧೫. ತೌಡುಲಪ್ಪಲ್ಲಿ ರಾಜಣ್ಣ, ೬೯, ರೈಸ್‌ಮಿಲ್, ಚಿಂತಾಮಣಿ

೧೬. ಡಿ.ಎನ್. ಚಿಕ್ಕವೆಂಕಟಪ್ಪ, ೮೫, ವೆಂಕಟೇಶ್ವರ ಬಸ್ ಮಾಲೀಕರು, ಚಿಂತಾಮಣಿ

೧೭. ಚಿಂತಲ ಪ್ರಭಾಕರರೆಡ್ಡಿ, ೭೦, ಡೈಮಂಡ್ ಟಾಕೀಸ್ ಮಾಲಿಕ

೧೯. ಶ್ರೀನಿವಾಸ್, ೫೫, ನಂದಿ ಡೈಮಂಡ್ ಅಗರಬತ್ತಿ ವರ್ತಕ, ಚಿಂತಾಮಣಿ

೨೦. ಲತಾ ಬಸವರಾಜ್, ೪೨, ರೇಷ್ಮೆ ಇಲಾಖೆ, ಚಿಂತಾಮಣಿ

೨೧. ಲಕ್ಷ್ಮಿದೇವಮ್ಮ ಗಂಡ ಲಕ್ಷ್ಮೀಪತಿರೆಡ್ಡಿ, ೪೦, ರೇಷ್ಮೆ ಇಲಾಖೆ

೨೨. ವೆಂಕಟಶಿವಾರೆಡ್ಡಿ, ೪೮, ಚಾಕಪಲ್ಲಿ, ಚಿಂತಾಮಣಿ ತಾಲೂಕು

೨೩. ಶ್ರೀಮತಿ ಲಕ್ಷ್ಮಿದೇವಮ್ಮ ಗಂಡ ಮಾದಕೆರೆ ರಾಮಪ್ಪ, ೪೦, ವಿದ್ಯಾ ಇಲಾಖೆ, ಚಿಂತಾಮಣಿ

೨೪. ಅಕ್ಕುಲಮ್ಮ ಗಂಡ ವೈದ್ಯಂ ವೆಂಕಟರೆಡ್ಡಿ, ೬೩, ಆವಲ ವಟ್ಟ, ಶ್ರೀನಿವಾಸಪುರ ತಾ.

೨೫. ಶಾಂತಮ್ಮ ಪುರುಷೋತ್ತಮರಾವ್, ೪೮, ಗ್ರಾನೈಟ್ ವ್ಯಾಪಾರಿ, ಸಂತೇಕಲ್ಲಹಳ್ಳಿ

೨೬. ಲಕ್ಷ್ಮಿ ತಂದೆ ಶ್ರೀಬಯಪ್ಪ, ೪೩, ಬಿಲ್ಲಾಂಪಹಳ್ಳಿ, ಚೇಳೂರು, ೪೩

೨೭. ಡಾಕ್ಟರ್ ರಾಜೀರೆಡ್ಡಿ, ೫೦, ಚೇಳೂರು

೨೮. ಪದ್ಮಾವತಮ್ಮ ಗಂಡ ಜಿ.ಎ. ನಾರಾಯಣಸ್ವಾಮಿ, ೬೫, ಆದರ್ಶ ಚಿತ್ರಮಂದಿರದ ಮಾಲಿಕರು, ಬೆಂಗಳೂರು

೨೯. ಅಶ್ವತ್ಥನಾರಾಯಣ ಶೆಟ್ಟಿ, ಮಾರುತಿ ಹೋಟೆಲ್ ಮಾಲಿಕರು, ಬೂರಗಮಾಕಲಹಳ್ಳಿ

೩೦. ವೆಂಕಟರಮಣಪ್ಪ ತಂ. ಮುಳಬಾಗಿಲು ಮುನಿವೆಂಕಟಪ್ಪ, ೬೦, ಕೊಂಡರಾಜನಹಳ್ಳಿ, ಕೋಲಾರ ತಾ.

೩೧. ಗಂಗಮ್ಮ ಸಂಜೀವಪ್ಪ, ವಯಸ್ಸು ೭೦, ವೀರಂಡಹಳ್ಳಿ, ಗೌರೀಬಿದನೂರು ತಾ.

೩೨. ಮುನಿಯಪ್ಪ ತಂ. ವೀರಪ್ಪ, ಹೊಸಕೋಟೆ

೩೩. ವೀರಮ್ಮ ಗಂಡ ವೆಂಕಟೇಶಪ್ಪ, ೫೪, ದಿಬ್ಬೂರು, ಚಿಂತಾಮಣಿ

೩೪. ಬಾಬಯ್ಯ ತಂದೆ ಚಿನ್ನಯಪ್ಪ, ಚಿಕ್ಕಬಳ್ಳಾಪುರ ತಾ.

೩೫. ಹುಸೇನಮ್ಮ ಗಂಡ ಪೀರೂಸಾಬ್, ೭೮, ಕುಡುಮಲಕುಂಟೆ, ಗೌರಿಬಿದನೂರು ತಾ.

೩೬. ಅರುಣಮ್ಮ, ೪೯, ಗಂಗಾಧರಪ್ಪ, ಗುಂಡ್ಲುಗುರ್ಕಿ, ಬಾಗೇಪಲ್ಲಿ, ತಾ.

೩೭. ಲಕ್ಷ್ಮಿಪತಿ, ೪೫, ಇನಮಿಂದೆಪಲ್ಲಿ

೩೮. ಅಕ್ಕಯ್ಯಮ್ಮ ಗಂಡ ವೆಂಕಟರಮಣಪ್ಪ, ೭೮, ನಗರಗೆರೆ

೩೯. ನಾರಾಯಣಮ್ಮ, ೪೫, ಕರಗದಮ್ಮನಹಳ್ಳಿ, ಗುಡಿಬಂಡೆ ತಾಲೂಕು

೪೦. ಕೃಷ್ಣಪ್ಪ, ೪೫, ತಿಗಳರು, ಮಾಲೂರು

೪೧. ವೆಂಕಟಮ್ಮ, ೮೦, ಮಾಲೂರು

೪೨. ಲಕ್ಷ್ಮೀಪತಿ, ೪೫, ಶಿಡ್ಲಘಟ್ಟ

೪೩. ಹನುಮಂತರೆಡ್ಡಿ, ೫೬, ಚಾಕಪಲ್ಲಿ

೪೪. ನ್ಯಾಮದ್‌ಬೀ ಗಂಡ ಬಾಬುಸಾಬ್, ಕುಡುಮಲಕುಂಟೆ, ಗೌರೀಬಿದನೂರು ತಾ.

# ಗ್ರಂಥಸೂಚಿ

೧. ಚಂದ್ರಶೇಖರ ಕಂಬಾರ, ೨೦೦೪, ದೇಶೀಯ ಚಿಂತನ ಅಂಕಿತ ಪ್ರಕಾಶನ ಬೆಂಗಳೂರು-೪

೨. ಚಿದಾನಂದಮೂರ್ತಿ ಎಂ., ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್‌ಹೌಸ್ ಬೆಂಗಳೂರು-೯

೩. ಲಕ್ಕಪ್ಪಗೌಡ ಪ್ರ.ಸಂ. ೧೯೯೮, ರಾಮಚಂದ್ರೇಗೌಡ ಹಿ.ಚಿ., ಕೃಷ್ಣಮೂರ್ತಿ ಹಾನೂರು ಸಹ ಸಂಪಾದಕರು, ಸುವರ್ಣ ಜಾನಪದ ಸಂ: ೧ ಮತ್ತು ೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೪. ಗೆಜೆಟಿಯರ್ ಆಫ್ ಇಂಡಿಯಾ, ೧೯೬೮, ಮೈಸೂರು ಸ್ಟೇಟ್, ಕೋಲಾರ ಜಿಲ್ಲೆ

೫. ವೆಂಕಟಕೃಷ್ಣಪ್ಪ ಮು. ೧೯೩೬, ಕೋಲಾರ ನಾಡು ಕತೆಗಳು, ಸತ್ಯಶೋಧನ ಪ್ರಕಟಣ ಮಂದಿರ, ಬೆಂಗಳೂರು

೬. ಪರಮಶಿವಯ್ಯ ಜಿ.ಶಂ., ೧೯೭೯, ದಕ್ಷಿಣ ಕರ್ನಾಟಕದ ಜನಪದ ಕಾವ್ಯಪ್ರಕಾರಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

೭. ಕ್ಯಾತನಹಳ್ಳಿ ರಾಮಣ್ಣ, ಪ್ಲೀಟರ್ ಸಂಗ್ರಹಿಸಿದ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ

೮. ಹಯವದನರಾವ್ ಸಿ., ೧೯೩೦, ಮೈಸೂರು ಗೆಜೆಟಿಯರ್, ೧೯೯೧, ಬೆಂಗಳೂರು ಮುದ್ರಣಾಲಯ, ಪು.೩೧

೯. ವೆಂಕಟಪ್ಪ ಬಿ., ೧೯೨೬, ಕನ್ನಡ ನಾಡಿನ ಕಥೆಗಳು, ಬೆಂಗಳೂರು ಮುದ್ರಣಾಲಯ

೧೦. ರಾಮಯ್ಯ ಕೋಟಗಾನಹಳ್ಳಿ, ೧೯೯೩, ಸಿಂದ್‌ಮಾದಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೧. ಲಕ್ಷ್ಮೀಪತಿ ಕೋಲಾರ, ೧೯೯೩, ಮಾಸ್ತೀಕರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೨. ಸಿದ್ಧಲಿಂಗಯ್ಯ, ೧೯೯೭, ಗ್ರಾಮದೇವತೆಗಳು, ಮೂಲಭಾರತಿ ಪ್ರಕಾಶನ, ಬೆಂಗಳೂರು

೧೩. ತಿಪ್ಪೇಸ್ವಾಮಿ ಜಿ.ಆರ್., ೧೯೯೬, ಕೋಲಾರಮ್ಮ, ಜಾನಪದ ಯಕ್ಷಗಾನ ಅಕಾಡೆಮಿ, ಬೆಂಗಳೂರು

೧೪. ನಾವಲಗಿ ಸಿ.ಕೆ., ೧೯೮೯, ಜಾನಪದ ಸ್ಪಂದನ, ಭಾರತ ಪ್ರಕಾಶನ, ಗೋಕಾಕ್

೧೫. ಜವರೇಗೌಡ ದೇ., ೨೦೦೧, ಜಾನಪದ ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೬. ತಿಪ್ಪೇರುದ್ರಸ್ವಾಮಿ ಎಚ್., ೧೯೭೪, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಮೈಸೂರು

೧೭. ಕಾಳೇಗೌಡ ನಾಗವಾರ, ೧೯೯೬, ಜಾನಪದ ಸಾಹಿತ್ಯ, ಯುಗಾದಿ ಪ್ರಕಾಶನ, ಬೆಂಗಳೂರು

೧೮. ಲಕ್ಕಪ್ಪಗೌಡ ಎಚ್.ಜೆ., ೧೯೯೭, ಜಾನಪದ ಕೈಪಿಡಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೯. ರಹಮತ್ ತರೀಕೆರೆ, ೧೯೯೮, ಕರ್ನಾಟಕದ ಸೂಫಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦. ರಹಮತ್ ತರೀಕೆರೆ, ೨೦೦೦, (ಸಂ) ಧರ್ಮ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ಪುರುಷೋತ್ತಮ ಬಿಳಿಮಲೆ, ೧೯೯೭, ಕೂಡುಕಟ್ಟು, ಆನಂದಕಂದ ಗ್ರಂಥಮಾಲೆ ಮಲ್ಲಾಡಿಹಳ್ಳಿ.

೨೨. ದೇವುಡು, ೧೯೬೬, ಕರ್ನಾಟಕ ಸಂಸ್ಕೃತಿ, ಶಾರದಾ ಪ್ರಕಾಶನಾಲಯ, ಬೆಂಗಳೂರು

೨೩. ತಿಪ್ಪೇರುದ್ರಸ್ವಾಮಿ ಎಚ್., ೧೯೬೮, ಕರ್ನಾಟಕದ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಪ್ರಕಾಶನ, ಮೈಸೂರು

೨೪. ಚಿದಾನಂದಮೂರ್ತಿ, ೧೯೬೬, ಸಂಶೋಧನಾ ತರಂಗ, ಸರಸ ಸಾಹಿತ್ಯ ಪ್ರಕಾಶನ, ಬೆಂಗಳೂರು

೨೫. ಮಾಸ್ತಿ ವೆಂಕಟೇಶ ಅಯ್ಯಂಗಾರ್, ೧೯೩೧, ಕರ್ನಾಟಕದ ಜನತೆಯ ಸಂಸ್ಕೃತಿ: ಜೀವನ ಕಾರ್ಯಾಲಯ, ಬೆಂಗಳೂರು

೨೬. ಮಾಸ್ತಿ ವೆಂಕಟೇಶ ಅಯ್ಯಂಗಾರ್, ೧೯೫೬, ಕರ್ನಾಟಕದ ಜನಪದ ಸಾಹಿತ್ಯ, ಜೀವನ ಕಾರ್ಯಾಲಯ, ಬೆಂಗಳೂರು

೨೭. ಮಾಸ್ತಿ ವೆಂಕಟೇಶ ಅಯ್ಯಂಗಾರ್, ೧೯೩೯, ವಿಮರ್ಶೆ-೧, ಜೀವನ ಕಾರ್ಯಾಲಯ, ಬೆಂಗಳೂರು

೨೮. ರಂಗಸ್ವಾಮಿ ಬಿ.ಎನ್., ೧೯೪೦, ಹಳ್ಳಿಯ ಪದಗಳು, ಸರಸ್ವತಿ ಪುಸ್ತಕ ಭಂಡಾರ, ಮಂಡ್ಯ

೨೯. ಆರ್. ರಾಜಪ್ಪ ದಳವಾಯಿ, ೧೯೯೩, ಹಕ್ಕಿಪಿಕ್ಕಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೩೦. ಆರ್. ರಾಜಪ್ಪ ದಳವಾಯಿ, ೧೯೯೩, ಅಡವಿ ಚೆಂಚರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ

೩೧. ಹಿ.ಚಿ. ಬೋರಲಿಂಗಯ್ಯ, (ಸಂ) ೧೯೯೬, ಕರ್ನಾಟಕ ಜನಪದ ಕಲೆಗಳ ಕೋಶ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೨. ಕಲಬುರ್ಗಿ ಎಂ.ಎಂ., ೧೯೯೧, ಇತಿಹಾಸಿಕ: ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೩೩. ಜೋಶಿ ಶಂಬಾ, ೧೯೪೭, ಎಡೆಗಳು ಹೇಳುವ ಕಂನಾಡ ಕಥೆ, ಮಾದವ ಬಲ್ಲಾಳ ಬಂಧುಗಳು, ಧಾರವಾಡ

೩೪. ಜೋಶಿ ಶಂಬಾ, ೧೯೬೦, ಹಾಲುಮತ ದರ್ಶನ, 'ಶೈವ ವೈಷ್ಣವ ಸಂಪ್ರದಾಯಗಳ ಹಿನ್ನೆಲೆ', ಬೆಳವಾಡಿ ಗವಿಸಿದ್ದಪ್ಪ ಸವದತ್ತಿ, ಬೆಳಗಾವಿ

೩೫. ತೋಂಟಾಪುರ ಎನ್.ಬಿ., ೧೯೯೨, ತೇಜೋಮಯ ಹಾಲುಮತ ಪುರಾಣ, ಶಿವಪದ್ಮ ಪ್ರಕಾಶನ, ಗಾಂಧಿನಗರ

೩೬. ಹನುಮಂತಯ್ಯ ವಿ.ಆರ್., ೧೯೨೬, ಭಾರತ ದೇಶದ ಕುರುಬರ ಚರಿತ್ರೆ

೩೭. ಶ್ರೀಕಂಠ ಕೂಡಿಗೆ, ೧೯೮೨, ಕೊಂಡಮಾಮ, ಐ.ಬಿ.ಎಚ್. ಬೆಂಗಳೂರು

೩೮. ಚಿದಾನಂದ ಮೂರ್ತಿ, ೨೦೦೪, ಜನ-ಜನಪದ-ಜಾನಪದ, ಸಂ. ೩, ಸಪ್ನ ಬುಕ್‌ಹೌಸ್, ಬೆಂಗಳೂರು

೩೯. ಡಾ.ಎಂ.ಎಸ್.ಸುಂಕಾಪುರ, (ಸಂ) ೧೯೮೦, ಜಾನಪದ ಸಾಹಿತ್ಯ ದರ್ಶನ ಭಾಗ ೬

೪೦. ಚಂದ್ರಶೇಖರ ಕಂಬಾರ, (ಸಂ) ೧೯೮೫, ಕನ್ನಡ ಜಾನಪದ ವಿಶ್ವಕೋಶ

೪೧. ಡಾ. ಹರಿಲಾಲ ಪವಾರ, ೧೯೯೫, ಕರ್ನಾಟಕದ ಹೆಳವರು : ಒಂದು ಜಾನಪದೀಯ ಅಧ್ಯಯನ

೪೨. ಹಿ.ಚಿ. ಬೋರಲಿಂಗಯ್ಯ, (ಸಂ) ೧೯೬೬, ಕರ್ನಾಟಕ ಜನಪದ ಕಲೆಗಳ ಕೋಶ

೪೩. ಪ್ರಹ್ಲಾದ ಬೆಟಗೇರಿ, ೧೯೯೩, ಅಡವಿ ಚಂಚರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೪. ಎಂ.ಎಂ. ಕಲಬುರ್ಗಿ, (ಸಂ) ೧೯೯೪, ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೫. ಹಂಪನಾ, ೧೯೯೭, ಚಂದ್ರಕೊಡೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೬. ನಾಯಕ ಹಾ.ಮಾ., ೧೯೯೭, ಜಾನಪದ ಸ್ವರೂಪ, ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು

೪೭. ಕುಪ್ಪುಸ್ವಾಮಿ ಬಿ., ೧೯೮೦, ಶ್ರದ್ಧೆ, ನಂಬಿಕೆ ಮತ್ತು ವೈಚಾರಿಕತೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ

೪೮. ಗೋವಿಂದರಾಜು ಟಿ., ೧೯೯೩, ಗೊಂಬೆರಾಮರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೪೯. ರಾಮಚಂದ್ರೇಗೌಡ ಎಚ್.ಎಸ್., ೧೯೯೦, ಗೊಂಬೆಯಾಟಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೫೦. ರಂಗಸ್ವಾಮಿ, ಬಿ.ಎನ್., ೧೯೪೦, ಹಳ್ಳಿಯ ಪದಗಳು, ಸರಸ್ವತಿ ಪುಸ್ತಕ ಭಂಡಾರ, ಮಂಡ್ಯ

೫೧. ಗೋಪಾಲಕೃಷ್ಣ ವಿ., ೧೯೮೭, ಸ್ಥಳನಾಮ ಅಧ್ಯಯನಗಳು, ವಿದ್ಯಾಗಿರಿ ಪ್ರಕಾಶನ, ಡಿ.ಪಾಳ್ಯ

೫೨. ಗೋಪಾಲಕೃಷ್ಣ ವಿ., ೧೯೮೯, ಕೋಲಾರ ಜಿಲ್ಲೆಯ ಸ್ಥಳನಾಮಗಳ ಸಮಾಜೋಭಾಷಿಕ ಅಧ್ಯಯನ, ಪಿ.ಎಚ್.ಡಿ. ಬೆಂಗಳೂರು ವಿಶ್ವವಿದ್ಯಾಲಯ

೫೩. ಸುಬ್ಬಣ್ಣರೈ, ೧೯೯೪, ದ.ಕ. ಜಿಲ್ಲೆಯ ಐತಿಹ್ಯಗಳು, ಮುಂಬೈ

೫೪. ದ್ವಾರಕಾನಾಥ್ ಸಿ.ಎಸ್., ೨೦೦೪, ಕೈವಾರದ ನಾರಾಯಣಪ್ಪ ಒಂದು ಅಧ್ಯಯನ, ಡಿ.ಲಿಟ್. ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೫. ದೇವೇಗೌಡ ಎನ್.ಕೆ., ೧೯೯೭, ಕೈವಾರ ಒಂದು ಅಧ್ಯಯನ. ಎಲಿಗೆನ್ಸ್, ಬೆಂಗಳೂರು

೫೬. ರಹಮತ್ ತರೀಕೆರೆ, ೨೦೦೧, ಕರ್ನಾಟಕದ ಸೂಫಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೭. ಲಕ್ಷ್ಮೀಪತಿ ಕೋಲಾರ, ೨೦೦೩, ಕಾಲುದಾರಿ, ಕನ್ನಡ ಸಂಘ ಕ್ರೈಸ್ಟ್ ಕಾಲೇಜ್, ಬೆಂಗಳೂರು

೫೮. ಬಾಜಿ ದೇವೇಂದ್ರಪ್ಪ, ೨೦೦೪, ಆಂಧ್ರ ಕರ್ನಾಟಕದ ಗಡಿಪ್ರದೇಶದ ಸ್ಥಳನಾಮಗಳು, ವಿಕಾಸ ಪ್ರಕಾಶನ, ಹೊಸಪೇಟೆ

೫೯. ಕರಿಬಸಪ್ಪ, ೨೦೦೪, ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಪಿ.ಎಚ್.ಡಿ. (ಅಪ್ರಕಟಿತ) ಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ

೬೦. ಶೇಷಾದ್ರಿ ಎಂ., ೧೯೬೫, ಎಫಿಗ್ರಫಿಯ ಕರ್ನಾಟಕ, ಸಂಪುಟ ೧೭, ಸಪ್ಲಿಮೆಂಟರಿ ಇನ್ಸ್‌ಕ್ರೀಪ್ಷನ್ ಇನ್ ದಿ ಕೋಲಾರ ಡಿಸ್ಟ್ರಿಕ್, ಗೌವರ್ನಮೆಂಟ್ ಟೆಕ್ಸ್ಟ್ ಬುಕ್ ಪ್ರೆಸ್, ಮೈಸೂರು

೬೧. ರೈಸ್ ಬಿ.ಎಲ್., ೧೯೬೫, ಎಫಿಗ್ರಫಿಯ ಕರ್ನಾಟಕ, ಸಂಪುಟ ೧೦, ಇನ್ಸ್‌ಕ್ರಿಪ್ಶನ್ ಇನ್ ದಿ ಕೋಲಾರ ಡಿಸ್ಟ್ರಿಕ್ಸ್ಟ್, ಮಂಗಳೂರು ಬಾಸೆಲ್‌ಮಿಷನ್ ಪ್ರೆಸ್

೬೨. ರಿಪೋರ್ಟ್ ಕಂಬಲಪಲ್ಲಿ ಇನ್‌ಸಿಡೆಂಟ್, ೨೩.೩.೨೦೦೦, ೨೦೦೦, ದಲಿತ ಸಂಘರ್ಷ ಸಮಿತಿ, ಚಿಂತಾಮಣಿ

೬೩. ಡಿಸೈಜನ್ಸ್ ಆರ್ಟ್ ವಿದುರಾಶ್ವತ್ಥ, ೧೯೩೮, ರಿಪೋರ್ಟ್ ಆಫ್ ದಿ ಎಂಕ್ವಯಿಲ್, ಬೆಂಗಳೂರು

೬೪. ಫೋಕಸ್ ರಿಕಾರ್ಡಿಂಗ್ ಕ್ಲಾಸರ್ ಅಥವಾ ರಿವೈವಲ್ ಆಫ್ ಕೆ.ಜಿ.ಎಫ್, ೧೯೯೭, ಮಿನರ್ಸ್ ಲಿಮಿಟೆಡ್, ರಿಪೋರ್ಟ್

೬೫. ಚಿದಾನಂದಮೂರ್ತಿ ಎಂ., ೧೯೭೭, 'ಗ್ರಾಮೀಣ', ಬೆಂಗಳೂರು, ಬಾಪ್ಕೋ ಪ್ರಕಾಶನ

೬೬. ಜವರೇಗೌಡ, ೧೯೭೬, 'ಜಾನಪದ ಅಧ್ಯಯನ', ಮೈಸೂರು, ಡಿ.ವಿ.ಕೆ. ಮೂರ್ತಿ

೬೭. ನರಸಿಂಹಾಚಾರ್ ಡಿ.ಎಲ್., (ಸಂ) ೧೯೭೦, 'ಕನ್ನಡ-ಕನ್ನಡ ನಿಘಂಟು' ಮೊದಲನೇ ಸಂಪುಟ, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು

೬೮. ಹಾ.ಮಾ. ನಾಯಕ, (ಪ್ರ.ಸಂ.) ೧೯೭೯, 'ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ', ಮೈಸೂರು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ

೬೯. ಪುರುಷೋತ್ತಮ ಬಿಳಿಮಲೆ, ೧೯೯೦, ಕರಾವಳಿ ಜಾನಪದ, ಮಂಗಳಗಂಗೋತ್ರಿ, ದಕ್ಷಿಣ ಕನ್ನಡ ಜಿಲ್ಲೆ

